ಅಧ್ಯಾತ್ಮಗ್ರಂಥಾವಳಿ

# ಜೀವಂತವೇದಾಂತ

ವೇದಾಂತವು ಜೀವಂತದರ್ಶನವೆಂಬುದನ್ನು

ಪ್ರತಿಪಾದಿಸುವ ಉಪದೇಶಗಳು

ಬರೆದವರು :

ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

ಕ್ರಮಾಂಕ ೧೨೮

ಪ್ರಕಾಶಕರು :

ಅಧ್ಯಾತ್ಮಪ್ರಕಾಶಕಾರ್ಯಾಲಯ

ಹೊಳೆನರಸೀಪುರ.

1993

# ಬಿನ್ನಹ

ಹೊಳೆನರಸೀಪುರದ ಅಧ್ಯಾತ್ಮಪ್ರಕಾಶಕಾರ್ಯಾಲಯದವರು ಶ್ರೀ ಶ್ರೀ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರು ಅನುಗ್ರಹಿಸಿರುವ ಶಂಕರ ವೇದಾಂತಗ್ರಂಥಗಳನ್ನೆಲ್ಲ ಪುನರ್ಮುದ್ರಣಯೋಜನೆಗೆ ಒಳಪಡಿಸಿ ಪ್ರತಿವರ್ಷವೂ ಯಥಾಶಕ್ತಿಯಾಗಿ ಗ್ರಂಥಪ್ರಕಟನಕಾರ್ಯವನ್ನು ಮುಂದುವರೆಸಿಕೊಂಡು ಬಂದಿರುತ್ತಾರೆ. ಸ್ಥಳ, ಸನ್ನಿವೇಶನಿಮಿತ್ತ ಕೇವಲ ಕನ್ನಡಗ್ರಂಥಗಳನ್ನು ಮಾತ್ರ ಈವರೆಗೂ ಪುನರ್ಮುದ್ರಿಸಲಾಗಿದೆ. ಈಚೆಗೆ ಓದುಗರ ಹಾಗೂ ಗ್ರಾಹಕರ ಸಂಖ್ಯೆ ಬೆಳೆಯುತ್ತಿರುವದರಿಂದ ಅನೇಕ ಗ್ರಂಥಗಳು ಮಾರಾಟವಾಗಿದ್ದು ಪುನರ್ ಮುದ್ರಣಕ್ಕಾಗಿ ಕಾದಿರುತ್ತವೆ. ಸಂಸ್ಥೆಯ ಆರ್ಥಿಕಸ್ಥಿತಿ, ಮಹಾಜನರ ಉದಾರ ಸಹಾಯ, ಗ್ರಂಥಗಳ ಜನಪ್ರಿಯತೆ–ಇವೇ ಮುಂತಾದ ಸನ್ನಿವೇಶಾನುಗುಣವಾಗಿ ಉಪಯುಕ್ತವಾದ ಗ್ರಂಥಗಳನ್ನು ಮತ್ತೆ ಪ್ರಕಟಿಸುತ್ತಿದೇವೆ. ಈ ಚೌಕಟ್ಟಿನಲ್ಲಿ 1964 ರಲ್ಲಿ ಮೊದಲನೆಯಬಾರಿಗೆ ಹೊರಬಂದಿದ್ದ ಈ ಗ್ರಂಥವನ್ನು ಈಗ ಪುನರ್ಮುದ್ರಿಸಿ ಹೊರತರಲಾಗಿದೆ. ಹಿಂದಿನ ಮುದ್ರಣದಲ್ಲಿ ದೇವನಾಗರಿಲಿಪಿಯಲ್ಲಿ ಅಚ್ಚಾಗಿದ್ದ ಶ್ರುತಿವಾಕ್ಯಗಳನ್ನು ಈಗ ಕನ್ನಡಲಿಪಿಗೆ ಪರಿವರ್ತಿಸಿರುವದನ್ನು ಬಿಟ್ಟರೆ ಗ್ರಂಥಶರೀರದಲ್ಲಿ ಮತ್ತೇನೂ ಬದಲಾವಣೆಯನ್ನು ಮಾಡಿರುವದಿಲ್ಲ.

ಈ ಗ್ರಂಥಪ್ರಕಟನೆಗೆ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಲಾಗಿದೆ :—

| | | ರೂ. ಪೈ. |
|---|---|---|
| ೧. | ಚೆನ್ನರಾಯಪಟ್ನ ತಾ॥ ಬಾಳಗಂಚಿ ಸುಬ್ರಾಯರು ಮತ್ತು ಧರ್ಮಪತ್ನಿ ಶೇಷಮ್ಮನವರ ನೆನಪಾಗಿ ಮಗ ಶ್ರೀ॥ ಬಿ. ಎಸ್. ಶಂಕರನಾರಾಯಣ, ಭದ್ರಾವತಿ. | ೧೦೦೧.೦೦ |
| ೨. | ಹೆಚ್. ಆರ್. ರಾಧಾಕೃಷ್ಣಗುಪ್ತರು, ಜ್ಯೂಯಲರ್ಸ್, ವಿಜಯಲಕ್ಷ್ಮಿ ರೋಡ್, ದಾವಣಗೆರೆ. | ೧೦೦೧–೦೦ |
| ೩. | ಶ್ರೀ ಎಸ್. ಜಿ. ಸುಂದರಸ್ವಾಮಿಯವರು, ಅಡ್ವೊಕೇಟ್ ಗಾಂಧಿನಗರ, ಬೆಂಗಳೂರು. | ೨೫೦–೦೦ |
| ೪. | ವೇ॥ ಮಾರ್ಕಂಡೇಯಾವಧಾನಿಗಳು, ಮತ್ತೂರು | ೨೧೧–೦೦ |
| | ಒಟ್ಟು ರೂ. | ೨,೪೬೩–೦೦ |

ವಾಚಕರು ಎಂದಿನಂತೆ ಈ ಗ್ರಂಥವನ್ನು ಬರಮಾಡಿಕೊಂಡು ಪ್ರೋತ್ಸಾಹಿಸಬೇಕಾಗಿ ಬೇಡಿದೆ.

ಇತಿ– ಸಜ್ಜನವಿಧೇಯ,

ತಾ॥ 1–7–1993 ಹೊಳೆನರಸೀಪುರ.

ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,
ಅಧ್ಯಾತ್ಮಗ್ರಂಥಾವಳಿಯ ಸಂಪಾದಕ.

# ಒಂದನೆಯ ಮುದ್ರಣದ ಮುನ್ನುಡಿ

ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು ಶುಭಕೃತ್ ಸಂವತ್ಸರದ ಚಾತುರ್ಮಾಸ್ಯದಲ್ಲಿ (1962) ಬೆಂಗಳೂರಿನಲ್ಲಿ ವಾಲ್ಮೀಕಿ ಆಂಜನೇಯ ದೇವಸ್ಥಾನದ ಸಭಾಂಗಣದಲ್ಲಿ ಮಾಡಿದ ಉಪದೇಶಗಳಿವು.

ಯಾವ ಹೆಚ್ಚಿನ ಸಿದ್ಧತೆಯೂ ಇಲ್ಲದೆ ಶ್ರೀಗಳವರು ಮಾಡಿದ ಈ ಭಾಷಣಗಳು ಅಲ್ಲಿ ಸೇರಿದ್ದ ಶ್ರೋತೃಗಳಿಗೆ ಮನ-ಆನಂದಕರವಾಗಿದ್ದವು. ವೇದಾಂತವು ಜೀವಂತದರ್ಶನವೆನ್ನುವುದಕ್ಕೆ ಗುರುತುಗಳೇನು ? -ಎಂಬ ವಿಷಯವನ್ನು ಕುರಿತು ಶ್ರೀಗಳು ಈ ಉಪದೇಶಮಾಲಿಕೆಯನ್ನು ಅನುಗ್ರಹಿಸಿರುತ್ತಾರೆ. ವೇದಾಂತದ ಸಿದ್ಧಾಂತ, ಸಾಧನ-ಎರಡೂ ಭಾಗಗಳು ಇದರಲ್ಲಿ ಸೇರಿವೆ. ಕೇವಲ ವಿದ್ವಾಂಸರನ್ನು ಮಾತ್ರ ಲಕ್ಷ್ಯದಲ್ಲಿಡದೆ ಸಾಮಾನ್ಯವಿದ್ಯಾಭ್ಯಾಸವುಳ್ಳ ಸ್ತ್ರೀಪುರುಷರಿಗೂ ಪ್ರಯೋಜನವಾಗುವಂತೆ ಸರಳಭಾಷೆಯಿಂದ ಮಾಡಿರುವ ಈ ಉಪದೇಶಗಳು ಅಚ್ಚಾದರೆ ಕರ್ಣಾಟಕದ ಮಹಾಜನರಿಗೆಲ್ಲ ಉಪಕಾರವಾದೀತೆಂದು ಹಲವರು ಸೂಚಿಸಿದಂತೆ ಆ ಕಾಲದಲ್ಲಿ ತೆಗೆದುಕೊಂಡಿದ್ದ ಟಿಪ್ಪಣಿಗಳ ಆಧಾರದಿಂದ ಇವುಗಳನ್ನು ಶ್ರೀಗಳವರು ಬರೆದುಕೊಟ್ಟಿರುತ್ತಾರೆ.

ಟಿಪ್ಪಣಿಗಳನ್ನು ಬರೆದುಕೊಂಡಿದ್ದ ಪಂಡಿತಪ್ರವರ ಬ್ರ॥ ಶ್ರೀ॥ ಹೆಚ್. ಅನಂತಮೂರ್ತಿಶಾಸ್ತ್ರಿಗಳವರೇ ಮುಂತಾದವರ ಉಪಕಾರವನ್ನು ನಾವು ಸ್ಮರಿಸುತ್ತೇವೆ. ಹುಬ್ಬಳ್ಳಿಯ ಚಾತುರ್ಮಾಸ್ಯದಲ್ಲಿ ಮಾಡಿದ 'ಶಂಕರಭಗವತ್ಪಾದರ ಸರ್ವಸಂಮತೋಪದೇಶಗಳು' ಎಂಬ ಉಪದೇಶಮಾಲಿಕೆಯಂತೆ ಇದೂ ವೇದಾಂತದಲ್ಲಿ ಆದರವುಳ್ಳ ಜಿಜ್ಞಾಸುಗಳಿಗೆಲ್ಲ ಪ್ರಯೋಜನಕಾರಿಯಾಗಲೆಂದು ನಮ್ಮ ಹಾರೈಕೆ.

ತಾ|| 1-7-1964 ಪ್ರಕಾಶಕರು.

# ವಿಷಯಗಳ ಪರಿವಿಡಿ

॥ ಓಂ ॥

# ಜೀವಂತವೇದಾಂತ

o—o—o—o

## ೧. ಜೀವಂತದರ್ಶನ

### (18—7—62)

ವೇದಾಂತವು ಜೀವಂತದರ್ಶನವೆ ?–ಎಂಬ ವಿಷಯವನ್ನು ಕುರಿತು ಈ ಚಾತುರ್ಮಾಸ್ಯದಲ್ಲಿ ನನ್ನ ಕೆಲವು ಅಭಿಪ್ರಾಯಗಳನ್ನು ತಿಳಿಸಬೇಕೆಂದಿರುತ್ತೇನೆ. ಆದ್ದರಿಂದ 'ಜೀವಂತದರ್ಶನವೆಂದರೇನು ? ಯಾವದಾದರೊಂದು ದರ್ಶನವು ಜೀವಂತವಾಗಿದೆಯೆ, ಇಲ್ಲವೆ ? ಎಂಬುದನ್ನು ಹೇಗೆ ನಿರ್ಣಯಿಸಬೇಕು' ?–ಎಂಬ ಪ್ರಶ್ನೆಗೆ ಮೊದಲು ನಾವು ಉತ್ತರವನ್ನು ಕಂಡುಕೊಳ್ಳಬೇಕಾಗಿರುತ್ತದೆ.

ಒಬ್ಬ ಮನುಷ್ಯನು ಜೀವಂತನಾಗಿರುತ್ತಾನೆ ಎಂಬುದನ್ನು ಅವನ ನಾಡಿಯು ಮಿಡಿಯುತ್ತಿರುವದು, ಉಸಿರು ಆಡುತ್ತಿರುವದು, ಹೃದಯವು ಬಡಿದುಕೊಳ್ಳುತ್ತಿರುವದು, ಕೈಕಾಲುಗಳು ಕೆಲಸಮಾಡುತ್ತಿರುವದು– ಮುಂತಾದ ಗುರುತುಗಳಿಂದ ಹೇಗೆ ಗೊತ್ತುಪಡಿಸುವೆವೋ, ಹಾಗೆಯೇ ಒಂದು ದರ್ಶನವು ಜೀವಂತವಾಗಿದೆ ಎಂಬುದನ್ನು ಗೊತ್ತುಮಾಡುವದಕ್ಕೂ ಕೆಲವು ಗುರುತುಗಳು ಬೇಕಾಗಿರುತ್ತವೆ. ಯಾವ ಗುರುತುಗಳಿದ್ದರೆ ದರ್ಶನವು ಬದುಕಿದೆಯೆನ್ನಬೇಕು ? ಯಾವ ಗುರುತುಗಳಿಲ್ಲದಿದ್ದರೆ ಅದು ಜೀವಂತದರ್ಶನವಲ್ಲವೆನ್ನಬೇಕು ?– ಎಂಬುದೇ ಪ್ರಶ್ನೆ.

ಮೊಟ್ಟಮೊದಲು ದರ್ಶನವೆಂದರೇನು ? ಸಾಂಖ್ಯ, ಯೋಗ– ಮುಂತಾದವುಗಳನ್ನು 'ದರ್ಶನ'ವೆಂದು ಕರೆಯುವದು ನಮ್ಮ ದೇಶದಲ್ಲಿ ವಾಡಿಕೆಯಯಗಿರುತ್ತದೆ. ಸಾಕ್ಷಾತ್ತಾಗಿ ತತ್ತ್ವವನ್ನು ಅನುಭವದಿಂದ ಅರಿತುಕೊಂಡು ತಮ್ಮ ಅಭಿಪ್ರಾಯವನ್ನು ತಿಳಿಸಿರುವ ಸಿದ್ಧಾಂತವನ್ನು ದರ್ಶನವೆನ್ನಬಹುದು. ಪೂರ್ವಾಪರ ವಿರೋಧವಿಲ್ಲದಂತೆ ಯುಕ್ತಿಗೆ ಹೊಂದಿಸಿ ಕ್ರಮಪಡಿಸಿ ಕಲ್ಪಿಸಿದ ಒಂದಾನೊಂದು ಅಭಿಪ್ರಾಯಗಳ ರಾಶಿಯನ್ನೂ ಒಂದರ್ಥದಲ್ಲಿ ದರ್ಶನವೆನ್ನಬಹುದು. ಈ ಅರ್ಥದಲ್ಲಿ ಪಾಶ್ಚಾತ್ಯರು ಫಿಲಾಸಫಿ ((Philosephy) ಎಂಬ ಮಾತಿನಿಂದ ಕರೆದಿರುವ ತತ್ತ್ವಶಾಸ್ತ್ರವಿಶೇಷಗಳೆಲ್ಲ ದರ್ಶನಗಳೇ ಆಗಿರುತ್ತವೆ. ಸಂಸ್ಕೃತದಲ್ಲಿ 'ಕಾಣಾದಾದಯಃ ಪಶ್ಯನ್ತಿ' (ಕಣಾದರ ಅನುಯಾಯಿಗಳೇ ಮುಂತಾದವರು ಹೀಗೆಂದು ಅಭಿಪ್ರಾಯಪಡುತ್ತಾರೆ) ಎಂದು ಮುಂತಾಗಿ ದರ್ಶನವೆಂಬ ಶಬ್ದವನ್ನು ಉಪ

ಯೋಗಿಸುತ್ತಾರೆ. ಆದ್ದರಿಂದ ಅನುಭವಕ್ಕೆ ಗೋಚರವಾಗಿರಲಿ, ಯುಕ್ತಿಗೆ ಮಾತ್ರ ಹೊಂದಿರಲಿ– ಎರಡನ್ನೂ ಇಲ್ಲಿ 'ದರ್ಶನ' ಎಂಬ ಹೆಸರಿನಿಂದ ಕರೆಯಬಹುದು.

ಒಂದು ದರ್ಶನವು 'ಜೀವಂತ'ವೆಂದು ನಾವು ಕರೆಯಬೇಕಾದರೆ ಅದು ಮನುಷ್ಯನಿಗಾಗಿ ಹುಟ್ಟಿರಬೇಕು. ಈ ಮಾತನ್ನು ಎಲ್ಲಾ ತತ್ತ್ವವಿಚಾರಕರೂ ಒಪ್ಪಿರುತ್ತಾರೆ. "ಶಾಸ್ತ್ರಂ ಹಿ ಅವಿಶೇಷಪ್ರವೃತ್ತಮಪಿ ಮನುಷ್ಯಾನೇವ ಅಧಿಕರೋತಿ ; ಶಕ್ತತ್ವಾತ್, ಅರ್ಥಿತ್ವಾತ್, ಅಪರ್ಯುದಸ್ತತ್ವಾತ್, ಉಪನಯನಾದಿಶಾಸ್ತ್ರಾಚ್ಚ– ಇತಿ ವರ್ಣಿತಮೇತತ್ ಅಧಿಕಾರಲಕ್ಷಣೇ" (ಸೂ. ಭಾ. ೧-೩-೨೫) ಎಂದು ಶಂಕರಾಚಾರ್ಯರು ಬರೆದಿರುತ್ತಾರೆ. ಶಾಸ್ತ್ರವೇನೋ ಸಾಮಾನ್ಯರೀತಿಯಿಂದ ತನ್ನ ಉಪದೇಶವನ್ನು ಹೇಳುತ್ತದೆಯಾದರೂ ಕೆಲಕೆಲವು ಗುರುತುಗಳಿಂದ ಅದು ಮನುಷ್ಯರನ್ನು ಕುರಿತೇ ಹೊರಟಿದೆ ಎಂದು ನಿಶ್ಚಯಿಸಬಹುದಾಗಿದೆ. ಹೇಗೆಂದರೆ ಮನುಷ್ಯನು ಶಾಸ್ತ್ರದಂತೆ ನಡೆಯಲು ಶಕ್ತನಾಗಿರುತ್ತಾನೆ; ಶಾಸ್ತ್ರದಲ್ಲಿ ಹೇಳಿರುವ ಫಲವನ್ನು ಪಡೆಯಬೇಕೆಂಬ ಆಶೆ ಅವನಿಗೆ ಇರುತ್ತದೆ ; ಇವನು ಶಾಸ್ತ್ರದಲ್ಲಿರುವ ಕರ್ಮವನ್ನು ಮಾಡಬಾರದು– ಎಂದೇನೂ ಅಲ್ಲಿ ಹೇಳಿಲ್ಲ ; ಉಪನಯನವೇ ಮುಂತಾದವುಗಳನ್ನು ಮಾಡಿಕೊಂಡು ಶಾಸ್ತ್ರವನ್ನು ಕಲಿಯಬೇಕು– ಎಂದೂ ಅಲ್ಲಿ ಹೇಳಿದೆ. ಈ ಎಲ್ಲಾ ಗುರುತುಗಳಿಂದ ಶಾಸ್ತ್ರವು ಮನುಷ್ಯನಿಗೇ ಎಂದು ಮೀಮಾಂಸಾದರ್ಶನದಲ್ಲಿ ನಿಶ್ಚಯಿಸಿರುತ್ತದೆ. ಇದು ಯುಕ್ತವೂ ಆಗಿರುತ್ತದೆ. ಏಕೆಂದರೆ ಹಸು, ಎಮ್ಮೆ, ಕುದುರೆ–ಮುಂತಾದವುಗಳಿಗೆ ದರ್ಶನವನ್ನು ಹೇಳಿಲ್ಲ ಎಂಬುದಕ್ಕೆ ಪ್ರಮಾಣವೇನೂ ಬೇಕಿಲ್ಲ. 'ಗೋಗಳು ತಪಸ್ಸುಮಾಡಿ ಕೋಡನ್ನು ಸಂಪಾದಿಸಿಕೊಂಡವು' ಎಂದು ಬ್ರಾಹ್ಮಣದಲ್ಲಿ ಒಂದು ಕಥೆಯಿದೆ. ಅದು ಅರ್ಥವಾದಮಾತ್ರವೇ. ನಿಜವಾಗಿ ಗೋಗಳೆಲ್ಲ ಒಂದು ಸಭೆ ಮಾಡಿಕೊಂಡು, ನಾವು ಕೋಡುಗಳನ್ನು ಪಡೆದು ಶ್ರೇಷ್ಠರಾಗಬೇಕು–ಎಂದು ಬಯಸಿದವು ಎಂದೇನೂ ಆ ವೇದವಾಕ್ಯಕ್ಕೆ ಅಭಿಪ್ರಾಯವಲ್ಲ. ಪಶುಗಳು ತಮಗೆ ಯಜಮಾನನು ಹುಲ್ಲುಹಾಕಲಿಲ್ಲವೆಂದೇನೂ ಅವನಲ್ಲಿ ದೂರುತರುವದಿಲ್ಲ ; ಅವುಗಳೆಲ್ಲವೂ ಒಟ್ಟುಸೇರಿ ತಮ್ಮ ಏಳಿಗೆಗಾಗಿ ವಿಚಾರವಿನಿಮಯಮಾಡುವದೂ ಇಲ್ಲ.

ಮನುಷ್ಯನಿಗಿಂತ ಮೇಲಿನ ಅಂತಸ್ತಿನ ದೇವತೆಗಳಿಗೂ ತತ್ತ್ವವಿಚಾರದಲ್ಲಿ ಅಧಿಕಾರವಿರಬಹುದು– ಎಂದು ಶಾರೀರಕಮೀಮಾಂಸೆಯಲ್ಲಿ ನಿರ್ಣಯಿಸಿರುವದು ನಿಜ; ಅದು ಇಲ್ಲವೆಂದು ಅಲ್ಲಗಳೆಯುವದು ನಮ್ಮಿಂದಾಗುವದಿಲ್ಲ ; ಏಕೆಂದರೆ ಸಾಮಾನ್ಯಜನರು ಯಾರೂ ದೇವತೆಗಳನ್ನು ಕಂಡಿಲ್ಲ. ಆದರೂ ದೊಡ್ಡವರ ಮಾತಿನಮೇಲಿನಿಂದ ದೇವತೆಗಳಿಗೂ ಅಧಿಕಾರವಿರುವದಕ್ಕೆ ಸಾಧ್ಯವಿದೆ ಎಂದು ನಂಬಬಹುದು. ಹಾಗೆ ನಂಬುವವನೂ ನಿರ್ಣಯಿಸುವವನೂ ಮನುಷ್ಯನೇ ಆಗಿರುತ್ತಾನಾದ್ದರಿಂದ ದರ್ಶನವು ಮುಖ್ಯವಾಗಿ ಮನುಷ್ಯನಿಗಾಗಿ ಹುಟ್ಟಿರಬೇಕು ಎಂಬ ಮಾತಿಗೆ ಎರಡಿಲ್ಲ.

ದರ್ಶನವು ಜೀವಂತವಾಗಿರಬೇಕಾದರೆ, ಅದು ಮನುಷ್ಯನಿಗಾಗಿ ಹುಟ್ಟಿದೆ ಎಂಬುದೊಂದು ಸಾಲದು ; ಅದು ಎಲ್ಲಾ ಮನುಷ್ಯರಿಗೂ ಅನ್ವಯಿಸುವಂತಿರಬೇಕು. ಎಲ್ಲಾ ದೇಶಗಳ ಎಲ್ಲಾ ಕಾಲಗಳ ಜನರಿಗೂ ಹೊಂದುವ ದರ್ಶನವೇ ಪೂರ್ಣಾರ್ಥದಲ್ಲಿ ಜೀವಂತದರ್ಶನ. ಯಾವ ದರ್ಶಳವು ಕೆಲವರಿಗೆ ಮಾತ್ರ, ಅಥವಾ ಕೆಲವು ದೇಶದವರಿಗೆ, ಕೆಲವು ಕಾಲದವರಿಗೆ ಮಾತ್ರ ಹೊಂದುವ ವಿಚಾರಗಳನ್ನೊಳಗೊಂಡಿರುವದೋ, ಅದು ಪೂರ್ಣವಾಗಿಯೂ ಜೀವಂತವಾಗಿರುವದಿಲ್ಲ. ಒಬ್ಬ ಮನುಷ್ಯನಿಗೆ ಶರೀರದ ಒಂದು ಭಾಗವು ಮಾತ್ರ ಕೆಲಸಕ್ಕೆ ಬರುವಂತಿದ್ದು ಮತ್ತೊಂದು ಭಾಗವು ಉಪಯೋಗಕ್ಕೆ ಬಾರದಂತೆ ಇದ್ದರೆ ಅವನು ಹೇಗೆ ಪೂರ್ಣ ಮಾನವನೆನಿಸಲಾರನೋ, ಹಾಗೆಯೇ ಸಾರ್ವತ್ರಿಕವಾಗಿ, ಎಲ್ಲಾ ದೇಶದ ಎಲ್ಲಾ ಕಾಲಗಳ ಜನರಿಗೂ, ಹೊಂದದೆ ಇರುವ ದರ್ಶನವು ನಿಜವಾದ ಅರ್ಥದಲ್ಲಿ ಜೀವಂತದರ್ಶನವೆನಿಸಲಾರದು; ಆ ದರ್ಶನಕ್ಕೆ ಏನೋ ಪಾರ್ಶ್ವವಾಯು ಬಂದಿದೆ ಎಂದು ಭಾವಿಸಬೇಕು.

ದರ್ಶನವು ಜೀವಂತವೆನಿಸುವದಕ್ಕೆ ಮನುಷ್ಯನ ಪೂರ್ಣಸ್ವಭಾವಕ್ಕೆ ಒಪ್ಪಾಗಿರಬೇಕು. ಮನುಷ್ಯನಲ್ಲಿ ನಿಸರ್ಗದಿಂದಲೇ ಕೆಲವು ಭಾವನೆಗಳಿರುತ್ತವೆ. ತರ್ಕಪ್ರಧಾನವಾದ ಜ್ಞಾನವೂ ಇದೆ ; ಅವನಲ್ಲಿ ಇಚ್ಛೆ, ದ್ವೇಷ, ಪ್ರೇಮ– ಮುಂತಾದ ವೇದನೆಗಳೂ ಇವೆ. ಅವನಿಗೆ ವೈಯುಕ್ತಿಕವಾದ ಕೆಲವು ಅಸಾಧಾರಣ ಅನುಭವಗಳೂ ಆಗುತ್ತಿರುತ್ತವೆ ; ಸಾರ್ವತ್ರಿಕಾನುಭವಕ್ಕೆ ಹೊಂದಿಸಿ ಸಂಪಾದಿಸಬಹುದಾದ ಜ್ಞಾನವೂ ಇದೆ. ಒಂದು ದರ್ಶನವು ಜೀವಂತವೆನಿಸಬಹುದಾದರೆ ಅವನ ಈ ಎಲ್ಲಾ ಭಾಗಗಳಿಗೂ ಹೊಂದುಗೆಯಾಗಿರಬೇಕು, ಇವೆಲ್ಲವನ್ನೂ ವಿಚಾರಕ್ಕೆ ತೆಗೆದುಕೊಂಡಿರಬೇಕು. ಯಾವದೋ ಒಂದು ದೃಷ್ಟಿಯಿಂದ ತತ್ತ್ವವಿಚಾರವನ್ನು ಮಾಡಿದ್ದು ಜೀವಂತವಾಗಿರಲಾರದು, ಅದು ಮಾನವನಿಗೆ ಪುರುಷಾರ್ಥವನ್ನು ಕಲ್ಪಿಸಿಕೊಡಲಾರದು. ಹಾರ್ಮೋನಿಯಂ ಬಾರಿಸುವದಕ್ಕೆ ಬರುತ್ತದೆ, ಚೆನ್ನಾಗಿ ಹಾಡುತ್ತಾಳೆ–ಎಂದು ಹುಡುಗಿಯನ್ನು ಮೆಚ್ಚಿ ಮದುವೆಮಾಡಿಕೊಂಡವನಿಗೆ ಕಿವಿಯೊಂದೇ ಇರುವದಿಲ್ಲವಷ್ಟೆ ? ಅವಳ ಹಾಡುಗಾರಿಕೆ ಅವನ ಕಿವಿಗೆ ಇಂಪಾಗಿ ಕಂಡರೂ ಆಮೇಲೆ ಅವನ ಇಚ್ಛೆಯೆಲ್ಲವನ್ನೂ ಪೂರ್ಣಮಾಡುವ ದಕ್ಷತೆ ಅವಳಲ್ಲಿಲ್ಲವೆಂದು ತೋರಿದರೆ ಆಶಾಭಂಗವಾಗುವದು ಸ್ವಾಭಾವಿಕವಲ್ಲವೆ ? ಅದರಂತೆ ಇಲ್ಲಿಯೂ ತಿಳಿಯಬೇಕು. ಇದು ತರ್ಕಪ್ರಧಾನವಾದ ಕಾಲ. ನಾವು ಎಲ್ಲಕ್ಕೂ ತರ್ಕವನ್ನು ಕೇಳುತ್ತೇವೆ. ಅದೇನೂ ತಪ್ಪಲ್ಲ, 'ಯುಕ್ತಿಯುಕ್ತಂ ವಚೋ ಗ್ರಾಹ್ಯಂ ಬಾಲಾದಪಿ ಶುಕಾದಪಿ | ಅನ್ಯತ್ ತೃಣಮಿವ ತ್ಯಾಜ್ಯಮಪ್ಯುಕ್ತಂ ಪದ್ಮಜನ್ಮನಾ' ಎಂದು ದೊಡ್ಡವರೂ ಹೇಳಿರುತ್ತಾರೆ. ಯುಕ್ತಿಗೆ ಹೊಂದಿರುವದನ್ನು ಒಬ್ಬ ಚಿಕ್ಕಹುಡುಗನು ಹೇಳಿರಲಿ, ಅಥವಾ ಒಂದು ಗಿಣಿ ಹೇಳಿರಲಿ,

ಅದನ್ನು ಗ್ರಹಿಸಬೇಕು ; ಹಾಗಿಲ್ಲದ್ದನ್ನು ಬ್ರಹ್ಮನೇ ಹೇಳಿದ್ದರೂ ಹುಲ್ಲುಕಡ್ಡಿಗೆ ಸಮಾನವೆಂದು ಬಿಟ್ಟುಬಿಡಬೇಕು. ಆದರೆ ಎಲ್ಲವನ್ನೂ ನಾವು ಯುಕ್ತಿಗೆ ಹೊಂದಿಸಿನೋಡಬೇಕೆಂದು ತಿಳಿಯುವದು ಮಾತ್ರ ತಪ್ಪು. ಜನರು ಮಗುವನ್ನು ಎತ್ತಿಕೊಂಡು ಮುತ್ತಿಡುವದು ಯುಕ್ತಿಗೆ ವಶರಾಗಿಯೆ ? ಅಲ್ಲ. ಅಲ್ಲಿ ಪ್ರೇಮವೇ ಅವರ ಪ್ರವೃತ್ತಿಗೆ ಕಾರಣ. ಸಲ್ಲಕ್ಷಣದಿಂದ ಕೂಡಿರುವ ಕಾವ್ಯದ ರಸವನು ಯಾರಾದರೂ ಯುಕ್ತಿಯಿಂದ ಸವಿಯುವದಕ್ಕೆ ಹೋಗುತ್ತಾರೆಯೆ ? ಇಲ್ಲ. ವಿಜ್ಞಾನಶಾಸ್ತ್ರದಲ್ಲಿ ಪ್ರೀತಿಯುಳ್ಳ ಗಂಡನು ತನ್ನ ಹೆಂಡತಿಯು ಅಳುತ್ತಿರುವಾಗ ಆಕೆಯ ಶೋಕದ ಪರಿಮಾಣವನ್ನು ಕಂಡುಹಿಡಿಯುವದಕ್ಕೆ ಕಣ್ಣೀರನ್ನು ಪರೀಕ್ಷೆಯಕೊಳವಿ (test tube)ಯಲ್ಲಿ ಹಾಕಿ ವಿಶ್ಲೇಷಣೆಮಾಡಿನೋಡುವದಕ್ಕೆ ಹೋಗುತ್ತಾನೆಯೆ ? ಇಲ್ಲ. ಆದ್ದರಿಂದ ಒಂದು ದರ್ಶನದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳೆಲ್ಲ ಯುಕ್ತಿಗೇ ಹೊಂದುಗೆಯಾಗಿರಬೇಕೆಂದು ನಿರೀಕ್ಷಿಸುವದು ತಪ್ಪು. ಅದು ಹೃದಯಕ್ಕೂ ಮೆಚ್ಚಾಗಿರಬೇಕು.

ದರ್ಶನವು ಜೀವಂತವಾಗಿರುವದಕ್ಕೆ ಮತ್ತೊಂದು ಅಂಶದ ಆವಶ್ಯಕತೆಯೂ ಇದೆ. ಅದು ವೈಯಕ್ತಿಕ ಅನುಭವಗಳನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಬೇಕು. ಕೆಲವರಿಗೆ ರೋಗದಿಂದ ಸನ್ನಿಹಿಡಿಯುತ್ತದೆ ; ಆಗ ಆಯಾ ರೋಗಿಗೆ ಮಾತ್ರ ಕೆಲವು ದೃಶ್ಯಗಳು ಕಾಣುತ್ತವೆ. ಮತ್ತೆ ಕೆಲವರಿಗೆ 'ನಿದ್ರಾಸಂಚಾರ' ಎಂಬ ವಿಶೇಷಾನುಭವವುಂಟಾಗುತ್ತದೆ; ಅವುಗಳಿಂದ ಅವರಿಗೆ ಸುಖ, ದುಃಖ, ಆಶ್ಚರ್ಯ –ಮುಂತಾದವುಗಳು ಉಂಟಾಗುತ್ತವೆ. ಅವುಗಳ ಮೂಲವೇನು ? ಅವುಗಳಿಂದ ನಿಶ್ಚಯಿಸಬೇಕಾದದ್ದೇನು ?–ಎಂಬುದನ್ನೂ ತತ್ತ್ವವಿಚಾರಕನು ತಿಳಿದಿರಬೇಕು. ಹಾಗಾದರೆ ಮಾತ್ರ ಆತನ ದರ್ಶನದಲ್ಲಿ ಎಲ್ಲರಿಗೂ ಆದರವುಂಟಾದೀತು. ಬೇರೆ ಬೇರೆಯ ಮತದವರು ಈಶ್ವರಪ್ರಾರ್ಥನೆ, ಸಾಕಾರೇಶ್ವರನ ದರ್ಶನ, ಯೋಗ ಸಮಾಧಿ–ಇವುಗಳನ್ನು ಬೇರೆಬೇರೆ ರೀತಿಯಿಂದ ಮಾಡಿ ಬೇರೆಬೇರೆಯ ಅನುಭವಗಳನ್ನು ಪಡೆದಿದೇವೆಂದು ಹೇಳುತ್ತಾರೆ. ಯುಕ್ತಿಗೆ ಹೊಂದುವದಿಲ್ಲವೆಂಬ ಕಾರಣದಿಂದ ಅವುಗಳನ್ನು ಕಡೆಗಣಿಸುವ ದರ್ಶನನವು ಎಲ್ಲರಿಗೂ ಅನ್ವಯಿಸಲಾರದು; ಆದ್ದರಿಂದ ಅದೂ ಜೀವಂತವೆನಿಸಲಾರದು.

ಜೀವಂತದರ್ಶನದಲ್ಲಿ ಅನೇಕರಿಗೆ ಸಮಾನವಾಗಿರುವ ಅನುಭವಗಳನ್ನೂ ಲೆಕ್ಕಕ್ಕೆ ಹಿಡಿಯಬೇಕು. ಬೇರೆಬೇರೆಯ ಭಾಷೆಗಳನ್ನಾಡುವವರಿಗೆ ಇಬ್ಬರಿಗೂ ಒಬ್ಬರಿಗೊಬ್ಬರ ಭಾಷೆಯು ಪರಿಚಯವಿಲ್ಲದೆ ಇರಬಹುದಾದರೂ ಅಭಿನಯದಿಂದಲೇ ಒಬ್ಬರಿಗೊಬ್ಬರ ಅಭಿಪ್ರಾಯವು ಗೊತ್ತಾಗುತ್ತದೆ. 'ಇವನಿಗೆ ಹಸಿವಾಗಿದೆ, ಮುಖವು ಬಾಡಿರುವದರಿಂದಲೂ ಹೊಟ್ಟೆಯನ್ನು ತೋರಿಸುವದರಿಂದಲೂ ಹಾಗೆಂದು ತಿಳಿಯಬೇಕಾಗಿದೆ' ಎಂದು ಬೇರೆಬೇರೆಯ ದೇಶದವರು ಪರಾಭಿಪ್ರಾಯವನ್ನು ನಿರ್ಣಯಿಸಿಕೊಳ್ಳುತ್ತಾರಲ್ಲವೆ ?

ದರ್ಶನವು ಬೇರೆಬೇರೆಯ ಕಾಲದವರ ಮತ್ತು ಬೇರೆಬೇರೆಯ ಪರಿಸ್ಥಿತಿಯವರ ಅಭಿಪ್ರಾಯಗಳನ್ನು ತೂಗಿ ನೋಡುವದಕ್ಕೆ ಸಿದ್ಧವಾಗಿರಬೇಕು. ಹಿಂದಿನ ಕಾಲದವರು ಕೆಲವರು ಶಾಸ್ತ್ರವಾಕ್ಯಕ್ಕೆ ಮಾತ್ರ ಬೆಲೆಯನ್ನು ಕೊಡುತ್ತಿದ್ದರು. ಈಗಲೂ ಕೆಲವರಾದರೂ ಅಂಥವರು ಇದಾರೆ. 'ಶಾಸ್ತ್ರವನ್ನು ನಾವು ಲೆಕ್ಕಕ್ಕೆ ತೆಗೆದುಕೊಳ್ಳುವದೇ ಇಲ್ಲ' ಎಂದು ಮುಖವನ್ನು ಅತ್ತ ತಿರುಗಿಸಿಕೊಳ್ಳುವದು ಸರಿಯಾದದ್ದಲ್ಲ: ಅದು ಎಲ್ಲರಿಗೂ ಒಪ್ಪುವ ದರ್ಶನವಾಗಲಾರದು. 'ಜೀವಂತದರ್ಶನ' ಎಂಬ ಹೆಸರು ಅದಕ್ಕೆ ಸಲ್ಲಲಾರದು. ಶ್ರೀರಾಮನಲ್ಲಿ ಭಕ್ತಿಯಿರುವವರು ಭಾರತವರ್ಷದಲ್ಲೆಲ್ಲ ಇರುತ್ತಾರೆ; ಆದರೆ ರಾಮಸೀತೆಯರ ಚಿತ್ರದಲ್ಲಿ ಕಾಣಬರುವ ಉಡುಪು, ಆಭರಣ– ಇವುಗಳೆಲ್ಲವೂ ಒಂದೇಬಗೆಯಾಗಿರುವದಿಲ್ಲ. ಹಿಂದಿನ ಕಾಲದ ಚಿತ್ರಗಳು ಈಗಿನವರಿಗೆ ಮೆಚ್ಚಾಗದೆ ಇರಬಹುದು; ಅವರ ಉಡುಪುಗಳೂ ನಡೆನುಡಿಗಳೂ ಈಗಿನವರಿಗೆ ಒಗ್ಗದೆ ಇರಬಹುದು. ಆದರೆ ದರ್ಶನವು ಈ ಭೇದಗಳನ್ನೆಲ್ಲ ಮನದಂದುಕೊಂಡು ಎಲ್ಲವನ್ನೂ ತೂಗಿನೋಡಿ ತತ್ತ್ವನಿರ್ಣಯವನ್ನು ಮಾಡುವದಾಗಿರಬೇಕು. ಈಗಿನ ಕಾಲಕ್ಕೆ 'ವಿಜ್ಞಾನಶಾಸ್ತ್ರ'ವು ಆರಾಧ್ಯದೇವತೆಯಾಗಿದೆ. ಅದು ಅನೇಕಶೋಧನೆಗಳನ್ನು ಮಾಡಿ ಜನರನ್ನು ಬೆರಗುಗೊಳಿಸಿರುತ್ತದೆ. ಆದ್ದರಿಂದ ದರ್ಶನವು ಜೀವಂತವಾಗಿರುವದಕ್ಕೆ ಆ ಶಾಸ್ತ್ರಕ್ಕೂ ಹೊಂದುಗೆಯಾಗಿದೆಯೆ? –ಎಂದು ನೋಡಬೇಕಾಗುತ್ತದೆ. ಅದರ ಗುಣದೋಷಗಳನ್ನೂ ಎಲ್ಲೆಕಟ್ಟುಗಳನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಜೀವಂತ ಎಂಬುದು ಜೀವನ್ ಎಂಬ ಸಂಸ್ಕೃತಕೃದಂತದ ರೂಪಾಂತರ. ಆ ಕೃದಂತವು ವರ್ತಮಾನಕಾಲವನ್ನು ಹೇಳುತ್ತದೆಯಾದರೂ ಈಗಿನಕಾಲಕ್ಕೆ ಬದುಕಿರುವ ದರ್ಶನವಾದರೆ ಸಾಲದು. ಈಗಿನಕಾಲದವರಾದ ನಮ್ಮಗಳ ದೃಷ್ಟಿಯೇ ಅತ್ಯುತ್ತಮವಾದದ್ದು, ಈ ದೃಷ್ಟಿಯಿಂದ ನೋಡಿ ಮಾಡಿಕೊಂಡ ತೀರ್ಮಾನವೇ ಕಟ್ಟಕಡೆಯಸಿದ್ಧಾಂತ; ಇದೊಂದೇ ತತ್ತ್ವನಿರ್ಧಾರಕ್ಕೆ ಮಾರ್ಗ– ಎಂಬ ದುರಭಿಮಾನವು ಜೀವಂತದರ್ಶನಕ್ಕೆ ಎಂದಿಗೂ ಇರತಕ್ಕದ್ದಲ್ಲ. ಇಲ್ಲಿ ವರ್ತಮಾನಕೃದಂತವು 'ಹಕ್ಕಿಗಳು ಹಾರುತ್ತವೆ' ಎಂಬಂತೆ ಎಲ್ಲಾ ದೇಶಗಳಿಗೂ ಎಲ್ಲಾ ಕಾಲಕ್ಕೂ ಹೊಂದುವ 'ನಿತ್ಯವರ್ತಮಾನ'ವಾಚಕವೆಂದು ಪರಿಗಣಿಸಬೇಕು. ಹೀಗಾದರೇ–ಎಲ್ಲಾ ಸಂಭಾವಿತದೃಷ್ಟಿಭೇದಗಳಿಗೂ ಅವಕಾಶವನ್ನು ಕೊಟ್ಟು ವಿಚಾರಮಾಡಿ ತನ್ನ ತೀರ್ಪನ್ನು ಕೊಡುವ ದರ್ಶನವಾದರೆ– ಮುಖ್ಯಾರ್ಥದಲ್ಲಿ 'ಜೀವಂತದರ್ಶನ' ವೆನಿಸೀತು. ಇಂಥ ದರ್ಶನವು ಯಾವಾಗಲಾದರೂ ಇರುವದು ಸಾಧ್ಯವೆ? ಎಂಬುದನ್ನು ನಾವು ಪರಿಶೀಲಿಸಬೇಕಾಗಿದೆ.

ಜೀವಂತದರ್ಶನವು ಮಾನವನ ಕರ್ತವ್ಯವೇನು ?– ಎಂಬುದನ್ನು ನಿರ್ಣಯಿಸಿ ಹೇಳಬಲ್ಲದ್ದಾಗಿರಬೇಕು. ಮಾನವನಿಗೆ ಕರ್ತವ್ಯವೊಂದು ಇದೆಯೆ ? ಇದ್ದರೆ ಯಾವ ವಿಷಯದಲ್ಲಿ? ಇಹಪ್ರಪಂಚದ ವಿಷಯಕ್ಕೊ, ಪರದ ವಿಷಯಕ್ಕೊ? ಈ ಲೋಕದ ಸುಖದುಃಖಗಳ ವಿಚಾರಮಾಡಿಕೊಂಡು ಕರ್ತವ್ಯವನ್ನು ನಿರ್ಣಯಿಸಬೇಕೊ, ಪರಲೋಕವನ್ನೊ ಲೆಕ್ಕಕ್ಕೆ ತೆಗೆದುಕೊಳ್ಳಬೇಕೊ ? ಸುಖಕ್ಕಾಗಿ ಕರ್ತವ್ಯವೊ, ಜ್ಞಾನಪ್ರಾಪ್ತಿಗೊ ? ಜ್ಞಾನದಿಂದಲೇ ಸುಖವು ಸಿಕ್ಕುತ್ತದೆಯೆ? ಪರಲೋಕವಿದೆಯೆ, ದೇವತೆಗಳಿದ್ದಾರೆಯೆ, ಈಶ್ವರನಿದ್ದಾನೆಯೆ? ಇದ್ದರೆ ಆ ವಿಷಯದಲ್ಲಿ ನಮ್ಮ ಕರ್ತವ್ಯವೇನು? ಇಲ್ಲಿ ನಾವು ಒಬ್ಬೊಬ್ಬರೂ ಒಂದೊಂದು ಸಮಾಜಕ್ಕೆ ಸೇರಿರುತ್ತೇವಷ್ಟೆ ? ಸಮಾಜದ ವಿಷಯದಲ್ಲಿ ನಮ್ಮ ಕರ್ತವ್ಯವೇನು ? ಸರಕಾರದ ವಿಷಯದಲ್ಲಿ ನಮ್ಮ ಕರ್ತವ್ಯವೇನು ? ತಂದೆತಾಯಿಗಳು, ಬಂಧುಬಳಗದವರು– ಮುಂತಾದವರ ವಿಷಯಕ್ಕೆ ಕರ್ತವ್ಯವೇನಿದೆ? ಲೋಕದಲ್ಲಿ ಮನುಷ್ಯರು ಮಾತ್ರವೇ ಇಲ್ಲ, ಇತರ ಪ್ರಾಣಿಗಳೂ ಇವೆ ; ಅವುಗಳ ವಿಷಯದಲ್ಲಿ ನಮ್ಮ ಕರ್ತವ್ಯವೇನು? 'ಅಹಿಂಸೆ'ಯನ್ನು ಎಷ್ಟರಮಟ್ಟಿಗೆ ಆಚರಿಸಬೇಕು ? ದುಷ್ಟಪ್ರಾಣಿಗಳ ವಿಷಯಕ್ಕೆ ನಾವು ಹೇಗೆ ನಡೆದುಕೊಳ್ಳಬೇಕು ? ಈ ಎಲ್ಲಾ ವಿಚಾರಗಳೂ ಜೀವಂತದರ್ಶನದಲ್ಲಿರಬೇಕು.

ಮನುಷ್ಯನು ಜೀವನಸೂತ್ರಕ್ಕೆ ಯಾವ ಆಧಾರವನ್ನು ಅನುಸರಿಸಬೇಕು ?– ಎಂಬುದನ್ನೂ ಜೀವಂತದರ್ಶನವು ತಿಳಿಸಿಕೊಡುವದಾಗಿರಬೇಕು. ಹೊರಗಿನ ಪ್ರಕೃತಿಯನ್ನು (Nature) ಮಾತ್ರ ನೋಡಿ ಕರ್ತವ್ಯವನ್ನು ತಿಳಿದುಕೊಳ್ಳಬೇಕೆ ? ಬಾಹ್ಯಪ್ರಪಂಚದಲ್ಲಿ ಇಲಿ, ಬೆಕ್ಕು; ಹಾವು, ಮುಂಗುಸಿ– ಮುಂತಾದವುಗಳನ್ನು ನೋಡಿ ನಿರ್ಣಯಿಸಬೇಕೊ ? ಹಸು ತನ್ನ ಕರುವನ್ನು ಪ್ರೀತಿಸುವಂತೆ ಅಥವಾ ನಾಯಿ ಮನುಷ್ಯನನ್ನು ಒಲಿಸಿಕೊಳ್ಳುವಂತೆ ನಮ್ಮ ಜೀವನಕ್ರಮವಿರಬೇಕೊ ? ಗುಂಪುಗುಂಪಾಗಿ ಸಂಚರಿಸುತ್ತ ಜೀವಿಸುವ ಪಶುಪಕ್ಷಿಮೃಗಾದಿಗಳನ್ನು ಅನುಕರಿಸುವದೊ ? ಅಥವಾ ಒಂದೊಂದೇ ಜೀವಿಸುವ ಪ್ರಾಣಿಗಳನ್ನು ಅನುಕರಿಸುವದೊ ? ಅಥವಾ ಪ್ರಕೃತಿಯನ್ನು ಕೈಬಿಟ್ಟು ಶಾಸ್ತ್ರವನ್ನು ಇಟ್ಟುಕೊಳ್ಳಬೇಕೊ ? ಶಾಸ್ತ್ರವಾದರೆ ಧರ್ಮನೀತಿಗಳ ಶಾಸ್ತ್ರವೊ, ತತ್ತ್ವಶಾಸ್ತ್ರವೊ ? ಯಾವದನ್ನು ಏಕೆ ಅನುಸರಿಸಿ ಜೀವನಸೂತ್ರವನ್ನೇರ್ಪಡಿಸಿಕೊಳ್ಳಬೇಕು ?

ಈವರೆಗೆ ಹೇಳಿರುವ ಹೆಗ್ಗುರುತುಗಳೆಲ್ಲವೂ ಇರುವದು ಪೂರ್ಣದರ್ಶನವಾಗುತ್ತದೆ. ವೇದಾಂತವು ಇಂಥ ಪೂರ್ಣದರ್ಶನವೆ ? ನಮ್ಮ ದೇಶದ ಈಗಿನ ಸ್ಥಿತಿಗೆ ಈ ಬಗೆಯ ದರ್ಶನವು ಅವಶ್ಯವಾಗಿದೆಯೆ ?– ಎಂಬುದನ್ನು ಈಗ ಆಲೋಚಿಸಿ ನೋಡಬೇಕಾಗಿದೆ.

---

# ೨. ನಮ್ಮ ದೇಶಕ್ಕೆ ಜೀವಂತದರ್ಶನದ ಆವಶ್ಯಕತೆ

( 19-7-62 )

ಜೀವಂತದರ್ಶನದ ಲಕ್ಷಣವನ್ನು ವಿವರಿಸಿದ್ದಾಯಿತು. ನಮ್ಮ ಈಗಿನ ಸ್ಥಿತಿಗೆ ಇಂಥ ದರ್ಶನದ ಆವಶ್ಯಕತೆಯಿದೆಯೆ ?– ಎಂಬುದನ್ನು ಕುರಿತು ಆಲೋಚಿಸೋಣ.

ಎಲ್ಲಿ ಮಳೆಯಿರುವದಿಲ್ಲವೋ ಅಲ್ಲಿ ಮೇಣಗಪಟನ ಅಂಗಿಯೇನೂ ಬೇಕಿರುವದಿಲ್ಲ. ಬಡವರಿಗೆ "ಐರಾವತವನ್ನು ಕೊಡುತ್ತೇನೆ" ಎಂದರೆ ಅವರು ಎಂದಿಗೂ ಅದನ್ನು ಬಯಸರು ; ಏಕೆಂದರೆ ಅವರಿಗೆ ಅದನ್ನು ಸಾಕಿಕೊಳ್ಳುವ ಶಕ್ತಿಯೇ ಇರುವದಿಲ್ಲ. ಜೀವಂತದರ್ಶನವೊಂದು ಇರಬಹುದು. ಅದರಲ್ಲಿ ಅನೇಕ ಉತ್ತಮವಾದ ಗುಣಗಳಿರಬಹುದು : ಆದರೆ ನಮ್ಮ ಸ್ಥಿತಿಯಲ್ಲಿ ಅದರ ಆವಶ್ಯಕತೆ ಇದೆಯೆ ? ರೋಗಿಯನ್ನು ನೋಡಿಯಲ್ಲವೆ, ಅವನಿಗೆ ತಕ್ಕ ಔಷಧಿಯನ್ನು ಕೊಡಬೇಕು ? ಆದ್ದರಿಂದ ಒಬ್ಬ ರೋಗಿಯು ವೈದ್ಯನಮುಂದೆ ವಿವರಿಸಿಕೊಳ್ಳುವಂತೆ, ಈಗಿನ ನಮ್ಮ ಸ್ಥಿತಿಯ ಗುಟ್ಟಿನ ವರದಿಯನ್ನು ಮಾಡಿಕೊಳ್ಳಬೇಕಾಗಿದೆ.

ನಮ್ಮ ಬಳಕೆಯಲ್ಲಿನ ದರ್ಶನಗಳೆಲ್ಲ ಬಲುಮಟ್ಟಿಗೆ ಈಗ ಅದರ್ಶನವಾಗಿರುತ್ತವೆ. ಆಸ್ತಿಕಷಡ್ದರ್ಶನಗಳು ಇವೆ–ಎನ್ನುತ್ತಿದೇವೆ. ಆದರೆ ಈ ಕಾಲದಲ್ಲಿ ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ತಿರುಗಾಡಿ ನೋಡಿದರೂ ಒಬ್ಬರಾದರೂ 'ಸಾಂಖ್ಯ'ದರ್ಶನದ ಅನುಯಾಯಿಗಳು ಕಾಣಬರುವದಿಲ್ಲ. ಪ್ರಕೃತಿ, ಪುರುಷ–ಎಂಬಿವೇ ಮುಂತಾದ ಶಬ್ದಗಳನ್ನು ಬಳಸುವವರು ಅಲ್ಲಲ್ಲಿರುತ್ತಾರೆ, ಅಷ್ಟೆ. ಹೀಗೆಯೇ ಪಾತಂಜಲ'ಯೋಗ'ದರ್ಶನದಿಂದ ಮೋಕ್ಷವಾಗುವದೆಂದು ನಂಬಿರುವವರೂ ಈಗ ಸಿಕ್ಕುವದಿಲ್ಲ ; ಗಡ್ಡಬಿಟ್ಟು ಯೋಗದಂಡವನ್ನು ಹಿಡಿದುಕೊಂಡಿರುವವರು ಅಲ್ಲಲ್ಲಿ ಕಾಣಬರುತ್ತಿರುವದೇನೋ ನಿಜ. ಆದರೆ ಪಾತಂಜಲ ದರ್ಶನವನ್ನೇ ಜೀವನಕ್ಕೆ ಆಧಾರವೆಂದು ಇಟ್ಟುಕೊಂಡಿರುವ ಯಾವ ಮತವೂ ಕಾಣಿಸುತ್ತಿಲ್ಲ. ನ್ಯಾಯದರ್ಶನಕ್ಕೆ ಅನ್ಯಾಯವಾಗಿರುತ್ತದೆ. ನವದ್ವೀಪದಲ್ಲಿ ಪ್ರಾರಂಭವಾದ ನವೀನನ್ಯಾಯದ ಕೆಲವು ಭಾಗಗಳನ್ನು ಅಭ್ಯಾಸಮಾಡಿರುವವರು ಕೆಲವರು ಸಿಕ್ಕಬಹುದು ; ಗದಾಧರಭಟ್ಟಾಚಾರ್ಯನ ವಾಕ್ಯಗಳನ್ನು ಒಪ್ಪಿಸುವವರೂ ಸಿಕ್ಕುತ್ತಾರೆ. ಆದರೆ ಮೂಲನ್ಯಾಯಸೂತ್ರಗಳನ್ನೂ ಅದರಮೇಲಿನ ಭಾಷ್ಯವನ್ನೂ ಓದಿರುವವರು ಬಹಳ ಕಡಿಮೆ. ವೈಶೇಷಿಕದರ್ಶನದ ವಿಚಾರವೂ ಅಷ್ಟೇ ; ಆ ದರ್ಶನವನ್ನು ಸೂತ್ರಭಾಷ್ಯಸಮೇತವಾಗಿ ಅಭ್ಯಾಸಮಾಡುವವರು ತೀರ ಕಡಿಮೆ. ವೈಶೇಷಿಕರು ಹೇಳುತ್ತಿದ್ದ 'ಅಂತ್ಯವಿಶೇಷಗಳು' ನಿಜವಾಗಿ ಇವೆ ಎಂದು ನಂಬುವವರು ಎಲ್ಲಿದ್ದಾರೊ ! ಪೂರ್ವಮೀಮಾಂಸಾಶಾಸ್ತ್ರವು ವೇದದ ಕರ್ಮಕಾಂಡದ ಅಭಿಪ್ರಾಯವನ್ನು ಕುರಿತು ವಿಚಾರಮಾಡುತ್ತದೆ. ಆದರೆ

ಕರ್ಮಕಾಂಡದಲ್ಲಿ ಹೇಳಿರುವ 'ಪಶ್ಯತಿ ಪುತ್ರಮ್, ಪಶ್ಯತಿ ಪೌತ್ರಮ್' ಪುತ್ರ ಪೌತ್ರಲಾಭಕ್ಕೆಂದು ಕರ್ಮಕಾಂಡದಲ್ಲಿ ಹೇಳಿರುವ ಕರ್ಮಗಳನ್ನು ಮಾಡುವವರು ಇಲ್ಲವೇ ಇಲ್ಲವೆಂದು ಹೇಳಬಹುದು. ಮೀಮಾಂಸಕರೆನಿಸಿಕೊಂಡಿರುವವ ರುಕೂಡ ನಿತ್ಯವಾದ ಅಗ್ನಿಹೋತ್ರಾದಿಗಳನ್ನು ಮಾಡುತ್ತಿಲ್ಲ. ಇನ್ನು ಉತ್ತರ ಮೀಮಾಂಸಾದರ್ಶನವೆಂಬ ಹೆಸರಿನ ವೇದಾಂತವು ಮಾತ್ರ ಉಳಿದುಕೊಂಡಿದೆ. ಆದರೆ ಆ ದರ್ಶನವನ್ನು ಅವಲಂಬಿಸಿಕೊಂಡಿರುವವರು ವೇದಾಂತವಾಕ್ಯಗಳಿಗೆ ಬೇರೆಬೇರೆಯ ತಾತ್ಪರ್ಯವನ್ನು ಹೇಳುತ್ತಿದಾರೆ.

ವೇದಾಂತದರ್ಶನದ ಎಷ್ಟೋ ಭಾಗಗಳು ಜೀವಂತವಾಗಿರುವದಿಲ್ಲ. ಮರದಲ್ಲಿ ಒಣಗಿಹೋಗಿರುವ ಕೊಂಬೆಗಳಂತಿರುವ ಬಹುಭಾಗಗಳು ಅದರಲ್ಲಿ ಕಾಣುತ್ತಿರು ವವು. ಸಾಂಖ್ಯವೈಶೇಷಿಕಾದಿದರ್ಶನಗಳ ಖಂಡನೆಗಳು ವೇದಾಂತದಲ್ಲಿ ಈಗ ಸಿಕ್ಕುತ್ತಿವೆ ; ಆದರೆ ಆ ದರ್ಶನಗಳನ್ನು ಅನುಸರಿಸುವವರೇ ಈಗ ಇಲ್ಲ. ಡಾನ್ ಕ್ವಿಕ್ಸಾಟ್ ಎಂಬಾತನು ತನ್ನಕಾಲದಲ್ಲಿ ಆಗಲೆ ನಶಿಸಿಹೋಗಿದ್ದ ಮಧ್ಯಯುಗದ ವೀರರ ವೇಷವನ್ನು ಧರಿಸಿಡನೆಂದು ಹಾಸ್ಯಮಾಡಿ ಸರ್ವಾಂಟಿಸ್ ಎಂಬಾತನು ಒಂದು ಕಥೆಯನ್ನು ಬರೆದಿರುತ್ತಾನೆ ; ಹಾಗೇ ಆಗಿದೆ, ಇಂದು ನಮ್ಮ ವೇದಾಂತಿ ಗಳ ಗತಿ ! ಬಂದೂಕಿನ ಉಪಯೋಗವು ಹಿಂದಕ್ಕೆ ಬಿಳುತ್ತಿದ್ದು ಆಟಂಬಾಂಬ್ ಮುಂತಾದ ನವೀನಾಸ್ತ್ರಗಳು ಬಳಕೆಗೆ ಬರುತ್ತಿರುವ ಈ ಕಾಲದಲ್ಲಿ ಯಕ್ಷಗಾನ ದವರು ಬಿಲ್ಲುಬಾಣಗಳನ್ನು ಹಿಡಿದ ವೀರರ ಚರಿತ್ರೆಯನ್ನು ತೋರಿಸುತ್ತಿರುವಂತೆ ಹಳೆಯ ಸಿದ್ಧಾಂತಗಳನ್ನು ಖಂಡಿಸುತ್ತಿರುವದೂ ಈಗ ಬದುಕಿರುವ ಪ್ರತಿವಾದ ಗಳನ್ನು ಕಣ್ಣೆತ್ತಿಯೂ ನೋಡದಿರುವದೂ ಈಗಿನ ವೇದಾಂತಿಗಳ ದುಃಸ್ಥಿತಿ! ತಮ್ಮ ತಮ್ಮ ವೇದಾಂತಭಾಷ್ಯಗಳು, ಪ್ರಕರಣಗಳು–ಇವುಗಳ ವಾಕ್ಯವನ್ನು ಇಟ್ಟು ಕೊಂಡು ವಾದಗಳಲ್ಲಿ ಕಚ್ಚಾಡುತ್ತಾ ಕಾಲವನ್ನು ಕಳೆಯುತ್ತಿರುವರು, ನಮ್ಮ ವೇದಾಂತಪಂಡಿತರು. ಇವರು ಪರಮಾದರದಿಂದ ಚರ್ಚೆಗೆ ಇಟ್ಟುಕೊಂಡಿರುವ ಕೆಲವು ವಾದಗಳು ಈಗ ಸಾಮಾನ್ಯಜನರ ದೃಷ್ಟಿಯಲ್ಲಿಕೂಡ ಹಾಸ್ಯಾಸ್ಪದವಾಗು ತ್ತಿವೆ. ಶುಕ್ತಿರಜತ, ರಜ್ಜುಸರ್ಪ– ಇಂಥ ಪ್ರಾತಿಭಾಸಿಕ ವಸ್ತುಗಳು ಹುಟ್ಟು ತ್ತವೆಯೆ, ಇಲ್ಲವೆ ?– ಎಂಬುದೊಂದು ಪ್ರಶ್ನೆ. ಒಂದು ಹಗ್ಗವನ್ನು ಒಬ್ಬನು ಹಾವೆಂದು ತಿಳಿದರೆ ಅಲ್ಲಿ ಒಂದು ಪ್ರಾತಿಭಾಸಿಕವಾದ ಹಾವು ಹುಟ್ಟಿಹೋಗಿರುವ ದಂತೆ ! ಆ ಹಾವಿಗೆ ಉಪಾದಾನಕಾರಣವು ಯಾವದು, ನಿಮಿತ್ತಕಾರಣವು ಯಾವದು ?– ಎಂದು ಚರ್ಚಿಸುತ್ತಿದ್ದಾರೆ, ಈ ವೀರವೇದಾಂತಿಗಳು ! 'ರಾಮ ರಾಯರನ್ನು ಭೀಮರಾಯರು ಎಂದು ತಪ್ಪಾಗಿ ತಿಳಿದುಕೊಂಡರೆ ಆ ಕಾಲದಲ್ಲಿ ನಿಜವಾಗಿಯೂ ಒಬ್ಬರು ಪ್ರಾತಿಭಾಷಿಕ ಭೀಮರಾಯರು ಅವರ ಮೈಮೇಲೆ

ಹುಟ್ಟಿ ಸತ್ತರೆ ?' ಎಂದು ಸಾಮಾನ್ಯಜನರೂ ಕುತೂಹಲದಿಂದ ಪ್ರಶ್ನೆಹಾಕಿ ಮುಗುಳುನಗೆಯನ್ನು ಪ್ರದರ್ಶಿಸುತ್ತಿದಾರೆ ! ಮುಮುಕ್ಷುಗಳಿಗೆ ಇಂಥ ವಿಚಾರಗಳನ್ನು ಮನಸ್ಸಿನಲ್ಲಿ ತುಂಬಿಸುವದಕ್ಕೆ ಹೋಗುತ್ತಿರುವ ದರ್ಶನವು "ಜೀವಂತದರ್ಶನ"ವೆನಿಸೀತೆ ? ಇದನ್ನು ನಾವು ಮನಮುಟ್ಟಿ ವಿಚಾರಮಾಡಬೇಕು.

ವೇದಾಂತಿಗಳ ಪಾಡು ಹೀಗಾಗಿದ್ದರೆ, ನಮ್ಮ ಕಾಲೇಜುಗಳೆಂಬ ವಿದ್ಯಾಶಾಲಿಗಳಲ್ಲಿರುವ 'ಫಿಲಾಸಫಿ ಪ್ರೊಫೆಸರು' (ತತ್ತ್ವಶಾಸ್ತ್ರಮಹೋಪಾಧ್ಯಾಯರು) ಗಳೆಂಬ ಆಧುನಿಕವಿದ್ವಾಂಸರ ಸ್ಥಿತಿಯೇನೂ ಹೆಚ್ಚು ಆಶಾಜನಕವಾಗಿರುವದಿಲ್ಲ. ಅವರು ಇತಿಹಾಸಜ್ಞರೇ ಹೊರತು ತತ್ತ್ವವಿಚಾರಕರಲ್ಲ. ಡೆ|| ಕಾರ್ಟೆ ಎಂಬವನು 'ನಾನು ವಿಚಾರಮಾಡುತ್ತಿದೇನೆ, ಆದ್ದರಿಂದ ಇರುತ್ತೇನೆ' (Cogito ergo sum) ಎಂದು ಆತ್ಮಸಿದ್ಧಿಯನ್ನು ಮಾಡಿದನು ; ಹೆಗಲ್ ಎಂಬವನು ಹಾಗೆಂದಿದಾನೆ, ಬರ್ಗ್ಸನ್ ಹೀಗೆಂದಿದಾನೆ- ಎಂದು ಆಯಾ ತತ್ತ್ವವಿಚಾರಕರ ಅಭಿಪ್ರಾಯಗಳನ್ನು ಅನುವಾದಮಾಡುವದು, ಅವರ ಮತದಲ್ಲಿ ದೋಷಗಳನ್ನು ತೋರಿಸುವದು—ಇಷ್ಟರಲ್ಲಿಯೇ ಸೀಮಿತವಾಗಿರುತ್ತದೆ, ಅವರ ಜ್ಞಾನ. ಕುಮಾರಿಲಭಟ್ಟರು "ಕಪಿಲೋ ಯದಿ ಸರ್ವಜ್ಞಃ ಕಣಾದೋ ನೇತಿ ಕಾ ಪ್ರಮಾ" ಕಪಿಲನು ಸರ್ವಜ್ಞನಾದರೆ ಕಣಾದನು ಅಲ್ಲವೆನ್ನುವದಕ್ಕೆ ಪ್ರಮಾಣವೇನು ?- ಎಂದು ಕೇಳಿರುವಂತೆ ಪಾಶ್ಚಾತ್ಯರಲ್ಲಿ ಇಂಥವನ ಸಿದ್ಧಾಂತವನ್ನೇ ಅನುಸರಿಸತಕ್ಕದ್ದೆಂಬುದನ್ನು ಹೇಗೆ ನಿಶ್ಚಯಿಸಬೇಕು ?- ಎಂಬ ಪ್ರಶ್ನೆಗೆ ಅವರಲ್ಲಿ ಉತ್ತರವಿಲ್ಲ. ವಿಜ್ಞಾನವಾದ (Idealism), ಬಾಹ್ಯಸತ್ಯಸ್ವವಾದ (realism), ಈಶ್ವರವಾದ (Theism), ನಾಸ್ತಿಕವಾದ (atheism)- ಎಂದು ಮುಂತಾಗಿ ಅಭಿಪ್ರಾಯಗಳ ವರ್ಗೀಕರಣಮಾಡಿದಮಾತ್ರದಿಂದಲೇ ಅವರಿಗೆ ತೃಪ್ತಿ. ಈ 'ಫಿಲಾಸಫಿ' ದರ್ಶನಗಳು ಹೊಸಹೊಸದಾಗಿ ಹುಟ್ಟುತ್ತಲೇಇರುತ್ತವೆ ; ಅವು ಹುಟ್ಟಿದಂತೆಲ್ಲ ಹಳೆಯದರ್ಶನಗಳನ್ನು ಕೇವಲ ಇತಿಹಾಸಕ್ಕೆ ಸೇರಿಸಿಕೊಳ್ಳಬೇಕಾಗುತ್ತದೆ. ಸಿಸಿಲಿಯ ನಗರದಲ್ಲಿ ಕ್ರಿ. ಶ. 1731ರಲ್ಲಿ ಒಂದು ಖನಿಯನ್ನು ಅಗೆಯುತ್ತಿರುವಲ್ಲಿ ಒಂದು ಮನುಷ್ಯದ ಅಸ್ಥಿಪಂಜರ ದೊರೆಯಿತಂತೆ. ಅದು ಅಖಂಡವಾಗಿದ್ದು ಅದರ ಎಲುಬುಗಳೆಲ್ಲ ಸರಿಯಾಗಿದ್ದವಂತೆ. ಆ ಹಂದರದ ಉದ್ದಳತೆ ೧೦೦ ಗಜ ಅದು ೨೦೦೦೦ ವರ್ಷಗಳ ಹಿಂದಿನದಾಗಿರಬಹುದು ಎಂದು ವೈಜ್ಞಾನಿಕರು ಕಲ್ಪಿಸಿದರಂತೆ. ಅದರ ಕೆಲವು ಎಲುಬುಗಳು ಈಗಲೂ ರೋಮ್‌ನಗರದ ಪದಾರ್ಥಸಂಗ್ರಹಾಲಯದಲ್ಲಿ ಇರುವವಂತೆ ! ಇದು ಅತ್ಯಂತ ಆಶ್ಚರ್ಯಕರವಾದ ಸಂಗತಿಯಲ್ಲವೆ ? ಹೀಗೆಯೇ ಹಲವು ದರ್ಶನಗಳ ಅಸ್ಥಿಪಂಜರವು ನಮಗೆ ಗ್ರಂಥಗಳಲ್ಲಿ ಕಾಣಬರಬಹುದು ; ಅವನ್ನು ಓದಿದರೆ ನಮಗೆ ಆಶ್ಚರ್ಯವೂ ಆಗಬಹುದು. ಆದರೆ ಅವುಗಳ ಪರಿಚಯದಿಂದ ನಮಗೆ ಯಾವ ಪುರುಷಾರ್ಥ

ವಾದೀತು? ಈಗ ನಮಗೆ ಪ್ರಾಚ್ಯದೇಶದ ಮತ್ತು ಪಾಶ್ಚಾತ್ಯದೇಶಗಳ ಇತಿಹಾಸ ದಿಂದ ಆಗುವ ಪ್ರಯೋಜನವೂ ಅಷ್ಟೇ.

ಈಗ ನಮ್ಮ ದೇಶದಲ್ಲಿ ಶಂಕರರಾಮಾನುಜಮಧ್ವವಲ್ಲಭಚೈತನ್ಯಾದಿಭಾಷ್ಯ-ಕಾರರುಗಳ ಅನುಯಾಯಿಗಳೆಂದುಕೊಂಡಿರುವವರು ಹಲವರು ಸಿಕ್ಕುತ್ತಾರೆ. ಆದರೆ ಅವರಿಗೆ ವೇದಾಂತದಲ್ಲಿ ಯಾವ ಆದರವೂ ಕಾಣುತ್ತಿಲ್ಲ. ವೇದಾಂತವನ್ನು ಸಾಮಾನ್ಯವಾಗಿ ಅಭ್ಯಾಸಮಾಡುವವರು "ಎಲ್ಲರೂ ಆಚಾರ್ಯರು, ಎಲ್ಲರೂ ಗೌರವಕ್ಕೆ ಪಾತ್ರರು"-ಎನ್ನುತ್ತಾ ಔದಾಸೀನ್ಯವನ್ನು ವಹಿಸಿರುತ್ತಾರೆ. ನಾವು ಈ ಮತಕ್ಕೆ ಸೇರಿದವರು, ಅವರು ಆ ಮತಕ್ಕೆ ಸೇರಿದವರು-ಎಂದುಕೊಂಡು ತೃಪ್ತ ರಾಗಿರುತ್ತಾರೆ. ಮತದವರೂ ಯಾವದೊಂದು ಪ್ರಕ್ರಿಯೆಯಲ್ಲಿಯೂ ಹೆಚ್ಚಿನ ಆದರವನ್ನು ತೋರಿಸುತ್ತಿಲ್ಲ, ಯಾವದೊಂದು ಸಿದ್ಧಾಂತವನ್ನೂ ಪ್ರಚಾರ ಮಾಡುವದಕ್ಕೆ ಬದ್ಧಕಂಕಣರಾಗಿರುವದಿಲ್ಲ. ಶಿಷ್ಯರಿಗೆ ತೀರ್ಥಪ್ರಸಾದಗಳನ್ನು ಹಂಚುವದು, ಕಾಣಿಕೆಗಳನ್ನು ಒಪ್ಪಿಸಿಕೊಳ್ಳುವದು- ಇಷ್ಟರಿಂದಲೇ ತೃಪ್ತರಾಗಿ ಪೆನ್ಷನ್‌ಪಾಳೆಯಗಾರರಂತೆ ಕಾಲಹರಣವನ್ನು ಮಾಡುವವರೇ ಹೆಚ್ಚು. ಸಾಮಾನ್ಯ ಜನರು 'ನಾವು ಸ್ಮಾರ್ತರು', 'ನಾವು ವೈಷ್ಣವರು', 'ನಾವು ಶ್ರೀವೈಷ್ಣವರು' -ಎಂದುಕೊಳ್ಳುತ್ತಾ ಶೈವವೈಷ್ಣವರ ಭೇದಗಳನ್ನು ನೆನಪಿಟ್ಟು ಹಿಂದೆ ಪರಸ್ಪರ ದ್ವೇಷಮಾಡುತ್ತಿದ್ದರು, ಈಗ ಅದನ್ನೂ ಮರೆತು ತೆಪ್ಪಗಾಗುತ್ತಿದಾರೆ. ಒಬ್ಬ ಶ್ರೀವೈಷ್ಣವಬ್ರಾಹ್ಮಣನು 'ವಿಶಿಷ್ಟಾದ್ವೈತದವೆಂದರೇನು ?' ಎಂಬ ಪ್ರಶ್ನೆಗೆ 'ವಿಶಿಷ್ಟವೂ (ಎಲ್ಲವೂ) ಅದ್ವೈತವೇ ಎಂಬುದು ವಿಶಿಷ್ಟಾದ್ವೈತ' ಎಂದು ನಿರ್ವಚನಮಾಡಿ ಉತ್ತರವನ್ನು ಕೊಟ್ಟದ್ದನ್ನು ನಾನು ಕೇಳಿರುತ್ತೇನೆ.

ಅವೈದಿಕಮತಗಳೂ ನಮ್ಮ ದೇಶದಲ್ಲಿವೆ. ಜೈನ, ಬೌದ್ಧ, ಸಿಕ್ಕರು, ಮುಸಲ್ಮಾನರು, ಕ್ರಿಸ್ತಿಯನರು-ಮುಂತಾದ ಎಲ್ಲಾ ಮತಪ್ರಭೇದಗಳೂ ಇಲ್ಲಿ ಕಾಣಬರುತ್ತವೆ. ಆದರೆ ಆ ಮತಗಳು ಈಗ ಯಾರಿಗೆ ಸಮ್ಮತವೋ ಹೇಳುವ ಹಾಗಿಲ್ಲ. ಮಹಮ್ಮದೀಯರಿಗೂ ಹಿಂದೂಗಳಿಗೂ ಮತದ ಹೆಸರಿನಲ್ಲಿ ಜಗಳ ವಾಗುತ್ತಿದೆ ; ಕ್ರಿಸ್ತಿಯನರು ಹೆಚ್ಚು ಹಿಂದುಗಳನ್ನು ತಮ್ಮ ಮತಕ್ಕೆ ತಿರುಗಿಸಿ ಕೊಂಡರೆ ತಮ್ಮ ಸಂಖ್ಯೆ ಹೆಚ್ಚೀತು ಎಂದು ಹವಣಿಸುವಂತಿದೆ. ಮತಗಳ ನಿಃಸಾರತೆಯನ್ನು ಕಂಡ ಸಾಮಾನ್ಯಜನರು ಈಗ ಮತವಿಚಾರವನ್ನೇ ಕೈಬಿಟ್ಟು ಬಿಟ್ಟಿರುತ್ತಾರೆ. ದೊಡ್ಡವರ ಗತಿ ಹೀಗಾಗಿದ್ದರೆ ತರುಣರ ವಿಷಯವನ್ನು ಹೇಳ ಬೇಕಾದದ್ದೇ ಇಲ್ಲ. ಅವರು ಮತವಿಚಾರಕ್ಕೆ ಉದಾಸೀನರಾಗಿರುತ್ತಾರೆಂಬುದಿಷ್ಟೇ ಅಲ್ಲ ; 'ಮತಗಳ ಕಾಲ ಆಗಿಹೋಯಿತು ; ಈಗ ಸಮಾಜ, ದೇವರಪೂಜೆ- ಎಂದು ಕಾಲವನ್ನು ಕಳೆದರೆ ನಮ್ಮ ಜನಜೀವನಕ್ಕೆ ಆಹಾರ ಸಿಕ್ಕುತ್ತದೆಯೆ ?' ಎಂದು ಪ್ರತ್ಯಕ್ಷವಾಗಿ ಕೇಳತೊಡಗಿರುತ್ತಾರೆ. ಯಾವ ಮತಕ್ಕೂ ಜೀವಕಳೆಯಿಲ್ಲ.

ಸದ್ಯಕ್ಕೆ ನಮ್ಮ ದೇಶದಲ್ಲಿ ಜನರಿಗೆ ಮಿಕ್ಕ ವಿಚಾರಗಳು ಯಾವವೂ ಬೇಕಾಗಿಲ್ಲ. ರಾಜಕೀಯವಿಚಾರ ಕಡೆಗೇ ಎಲ್ಲರ ದೃಷ್ಟಿಯೂ ತಿರುಗಿಬಿಟ್ಟಿದೆ. ಯಾರಿಗೂ ಯಾವ ಧರ್ಮನೀತಿಗಳೂ ಬೇಡವಾಗಿದೆ, ವರ್ಣಾಶ್ರಮಧರ್ಮವು ದಗ್ಧಪಟನ್ಯಾಯದಿಂದ ಎಲ್ಲಿಯೋ ಒಂದೊಂದು ಕಡೆ ಕಾಣಬರುತ್ತಿದೆ. ಅನಾಚಾರವನ್ನು ದೊಡ್ಡವರೂ ಈಗ ಒಪ್ಪಿಬಿಟ್ಟಿರುತ್ತಾರೆ. ಸರಕಾರದವರು ಮತಕ್ಕೆ ಯಾವ ಬೆಲೆಯನ್ನೂ ಕೊಡುತ್ತಿಲ್ಲ; ಈ ರಾಷ್ಟ್ರವು ಲೌಕಿಕವಾದ ಆಧಾರದಮೇಲೆ ಸರಕಾರವನ್ನೇರ್ಪಡಿಸಿಕೊಂಡಿದೆ ಎನ್ನುತ್ತಾರೆ. ಅಥವಾ ಮತವಿಷಯಕ್ಕೆ ಅವರು ವಿರುದ್ಧರೇ ಆಗಿರುತ್ತಾರೆನ್ನಬಹುದು. ಜಾತಿಧ್ವಂಸಕಶಾಸನಗಳು ಬರುತ್ತಿವೆ ಜಾತಿಯು ಹೋಗಬೇಕು, ಸಾಮಾಜಿಕವಾದರಿಯ ಜನಾಂಗವು ಏರ್ಪಡಬೇಕು. ಎಂಬುದು ಅವರ ಗುರಿ. ಜನರು ಉಪದೇಶಗಳಿಗೆ ಹೊರಗೆ ಹೂಗುಟ್ಟುತ್ತಾರೆ ; ಅಧರ್ಮದ ಒಲವು, ಸರಕಾರದ ದೂಷಣೆ, ರಾಜಕೀಯ ಪಂಗಡಗಳಲ್ಲಿ ಸೇರುವದು - ಇಂಥ ಪ್ರವೃತ್ತಿಗಳಲ್ಲಿ ನಿರತರಾಗುತ್ತಿದ್ದಾರೆ. ಕಾರಖಾನೆಗಳ ನಿರ್ಮಾಣವು ಇದನ್ನು ಮತ್ತಷ್ಟು ಬಲಪಡಿಸುತ್ತಿದೆ. ಸ್ಕೂಲುಗಳಲ್ಲಿ ಮಕ್ಕಳಿಗೆ ಧರ್ಮನೀತಿಗಳ ಬೋಧೆಯಿಲ್ಲ ; ಹುಡುಗರು ಗುರುಗಳಮೇಲೂ ತಂದೆತಾಯಿಗಳಮೇಲೂ ತಿರುಗಿ ಬೀಳುತ್ತಿದಾರೆ. ಮಕ್ಕಳ ಅವಿಧೇಯತೆಯನ್ನೂ ಉಚ್ಛೃಂಖಲಪ್ರವೃತ್ತಿಯನ್ನೂ ಹೇಗೆ ತಡೆಗಟ್ಟಬೇಕೆಂಬುದೂ ಒಂದು ಸಮಸ್ಯೆಯಾಗುತ್ತಿದೆ.

ಹೀಗಿದೆ, ನಮ್ಮ ದೇಶದ ಈಗಿನ ಶೋಚನೀಯಸ್ಥಿತಿ ! ಈಗ ನಮ್ಮ ಮನಃಸ್ಥಿತಿ ಕೆಟ್ಟಿದೆ, ಜನನೀತಿ ತಪ್ಪಿನಡೆಯುತ್ತಿದೆ ; ಜನಸಾಮಾನ್ಯಕ್ಕೆ ಬುದ್ಧಿಯಾಗಲಿ ಹೃದಯವಾಗಲಿ, ಸರಿಯಾಗಿ ವಿಕಸಿತವಾಗುತ್ತಿಲ್ಲ. ಕತ್ತಲೆಯಲ್ಲಿ ದಿಕ್ಕುಗೆಟ್ಟು ಅಲೆಯುತ್ತಿರುವ ನಮಗೆ ಏನಾದರೂ ಚಿಕಿತ್ಸೆ ಇದೆಯೆ?—ಎಂಬ ಪ್ರಶ್ನೆ ಏಳುತ್ತಿದೆ. ಇಂಥ ಕಾಲಕ್ಕೆ ಶೌಚಾಚಾರಗಳಲ್ಲಿ ಆಸಕ್ತಿ, ಧರ್ಮಪ್ರವೃತ್ತಿ, ವಿಚಾರಪರತೆ, ಸಮಾಜದ ಸುವ್ಯವಸ್ಥೆ, ಸರಕಾರಕ್ಕೂ ಪ್ರಜೆಗಳಿಗೂ ಶಾಂತಿಯುತವಾದ ಪರಸ್ಪರ ಸಹಕಾರದಲ್ಲಿ ಒಲವು, ದೇಶದ ಅಜ್ಞಾನದಾರಿದ್ರ್ಯಗಳ ಪರಿಹಾರ, ಶಾಸ್ತ್ರಶ್ರದ್ಧೆ, ಈಶ್ವರಭಕ್ತಿ, ಪರಮಪುರುಷಾರ್ಥ— ಈ ವಿಷಯಗಳಲ್ಲೆಲ್ಲ ನಿಶ್ಚಿತವಾದ ಕರ್ತವ್ಯವನ್ನು ಜನರಿಗೆ ಭದ್ರವಾದ ತಳಹದಿಯ ಮೇಲೆ, ಯುಕ್ತಿಯುಕ್ತವಾಗಿ ಅನುಭವಸಂಮತವಾಗಿ ತಿಳಿಯಪಡಿಸುವ ಜೀವಂತದರ್ಶನವೊಂದು ದೊರೆತರೆ ಎಂಥ ಅಲಭ್ಯಲಾಭವಾದೀತು !



# ೩. ವಿಜ್ಞಾನ ಯುಗ

( 20—7—62 )

ಜೀವಂತದರ್ಶನದ ಗುರುತುಗಳನ್ನು ತಿಳಿದುಕೊಂಡವ್ದಾಯಿತು. ಈಗಿನ ನಮ್ಮ ಪರಿಸ್ಥಿತಿಯಲ್ಲಿ ಜೀವಂತದರ್ಶನವೊಂದು ಅತ್ಯಂತ ಅವಶ್ಯವಾಗಿದೆ ಎಂಬು ದನ್ನೂ ಕಂಡುಕೊಂಡದ್ದಾಯಿತ . ಈಗ್ಗೆ ಎಲ್ಲಾ ಮತಗಳೂ ಭಾರತದೇಶದಲ್ಲಿರು ತ್ತವೆ. ಆದರೆ ಆ ಮತಗಳು ಜನರಮೇಲೆ ಯಾವ ಸತ್ಪರಿಣಾಮವನ್ನೂ ಮಾಡ ಲಾರದೆ ಇರುತ್ತವೆ. ಈಗಿನಕಾಲದ ನಮ್ಮ ಹುಡುಗರು 'ಅದೇಕೆ ?' ಎಂಬ ಪ್ರಶ್ನೆ ಯನ್ನು ಪ್ರತಿಯೊಂದಕ್ಕೂ ಹಾಕುತ್ತಿದಾರೆ. ಅವರ ಪ್ರಶ್ನೆಗೆ ಮತಗಳು ಉತ್ತರ ಕೊಡಲಾರದೆ ಇರುತ್ತವೆ. ತಂದೆತಾಯಿಗಳು ಯುಕ್ತಿಪ್ರಧಾನರಾದ ಮಕ್ಕಳನ್ನು ಕಂಡು 'ನಿಮಗೆ ತೋರಿದಂತೆ ಮಾಡಿರಿ !' ಎನ್ನುವದಕ್ಕೆ ಪ್ರಾರಂಭಿಸಿರುತ್ತಾರೆ. ಇದಕ್ಕೆಲ್ಲ ಕಾರಣವೇನೆಂದರೆ ಈಗ ಹೊಸಶಾಸ್ತ್ರವೊಂದು ತಲೆದೋರಿಕೊಂಡಿದೆ. ಅದೇ ಭೌತಿಕವಿಜ್ಞಾನಶಾಸ್ತ್ರ. ಆ ಶಾಸ್ತ್ರಕ್ಕೆ ಈಗ ವೇದ, ಆಗಮ, ಬೈಬಲ್, ಕೊರಾನ್-ಮುಂತಾದ ಮತಗ್ರಂಥಗಳೆಲ್ಲಕ್ಕಿಂತಲೂ ಹೆಚ್ಚಿನ ಪ್ರಾಮಾಣ್ಯವಿದೆ. ಆ ಶಾಸ್ತ್ರವು ತನ್ನ ಧ್ವಜವನ್ನು ಎತ್ತಿಹಿಡಿದಿದೆ. ತನ್ನ ಪ್ರಯೋಜನವನ್ನು ಜನರಿಗೆ ಕಾರ್ಯದಿಂದ ಮನಗಾಣಿಸುತ್ತಿದೆ ಈ ಶಾಸ್ತ್ರವು ನಮ್ಮ ಕಣ್ಣೆದುರಿಗೇ ಎಲ್ಲ ರನ್ನೂ ಹೇಗೆ ಬೆರಗುಮಾಡುತ್ತಿದೆ! ಅದು ಮುಂದುಮುಂದಕ್ಕೆ ಹೆಜ್ಜೆಯಿಟ್ಟಂತೆಲ್ಲ ಮತಗಳು ಹಿಂದುಹಿಂದಕ್ಕೆ ಸರಿಯುತ್ತಿವೆ. ಸೂರ್ಯೋದಯವಾದಮೇಲೆ ಕತ್ತಲೆ ಕಣ್ಮರೆಯಾಗುವಂತೆ ಆಗುತ್ತಿದೆ. ಈದಿನ ಸ್ವಲ್ಪ ಆ ಶಾಸ್ತ್ರದ ಮೆಚ್ಚಿಕೆ ಯ ನಗಾರಿಯನ್ನು ಬಾರಿಸಬೇಕಾಗಿದೆ.

ಭೌತಿಕವಿಜ್ಞಾನ (Science) ಎಬ ಶಬ್ದವು ಪಾಶ್ಚಾತ್ಯರಿಂದ ನಮ್ಮ ದೇಶಕ್ಕೆ ಬಂದಿತು. ನಮ್ಮಲ್ಲಿ ಯಾವ ವಿಜ್ಞಾನಶಾಸ್ತ್ರವೂ ಇರಲೇಇಲ್ಲವೆಂದು ಇದರ ಅಭಿಪ್ರಾಯವಲ್ಲ. 'ಹಿಂದುಗಳ ಉತ್ಕರ್ಷ' (Hindu Superiority) ಎಂಬ ಹೆಸರಿನ ಇಂಗ್ಲಿಷು ಪುಸ್ತಕದಲ್ಲಿ ನಮ್ಮ ಪೂರ್ವಜರ ಭೌತಿಕವಿಜ್ಞಾನದ ಹೆಚ್ಚುಗಾರಿಕೆಯನ್ನು ವಿಸ್ತರಿಸಿರುವದನ್ನು ಕಾಣಬಹುದು. ಆದರೂ ಅದು ಗತ ವೈಭವ. ನಮ್ಮ ಆ ವಿಜ್ಞಾನಶಾಸ್ತ್ರವು ಈಗಿನ ವಿಜ್ಞಾನಕ್ಕೆ ಹೋಲಿಸಿದರೆ ಬಹಳ ಕೆಳಕ್ಕೆ ಬೀಳುತ್ತದೆ. ಒಂದು ಹಳ್ಳಿಯಲ್ಲಿ 'ದೊಡ್ಡಮನೆಯವರು' ಎಂದು ಒಂದು ಕುಟುಂಬದವರನ್ನು ಕರೆಯುತ್ತಿದ್ದರು ; ಅದಕ್ಕಿಂತ ಈಗ ವೈಭವಯುಕ್ತವಾದ ಭವನಗಳನ್ನು ಕಟ್ಟಿಸಿಕೊಂಡವರೂ ಅಲ್ಲಿ ಇದಾರೆ. ಆದರೂ 'ದೊಡ್ಡಮನೆ' ಎಂಬ ಹೆಸರೇಕೋ ಉಳಿದುಕೊಂಡಿದೆ. ಇದರಂತೆಯೇ ಇದೆ, ನಮ್ಮ ಹಿಂದಿನ ವಿಜ್ಞಾನ ಶಾಸ್ತ್ರ. ಈಗಿನ ವಿಜ್ಞಾನಶಾಸ್ತ್ರವು ವಿಜ್ಞಾನಶಾಸ್ತ್ರಜ್ಞರನ್ನುಕೂಡ ಬೆರಗುಮಾಡಿದೆ ಹಿಂದಕ್ಕೆ ವಿಜ್ಞಾನಶಾಸ್ತ್ರದ ಬಲದಿಂದ ಕಂಡುಹಿಡಿದುಕೊಂಡಿದ್ದ ಬಂದೂಕು, ಆವಿಯ ಎಂಜಿನ್ನು-ಇವುಗಳ ಪ್ರಭಾವದಿಂದ ನಮ್ಮನ್ನು ಇಂಗ್ಲಿಷರು ಸೆರೆಹಿಡಿದರು

ಹಿಂದಿನ ಇಂಗ್ಲಿಷರ ಆಳ್ವಿಕೆಯು ಈಗ ಇಲ್ಲ; ನಾವು ಸ್ವತಂತ್ರರಾದೆವು ಎಂದ್ಕು ಕೊಂಡಿದ್ದೇವೆ. ಆದರೂ ಅವರ ದಾಸ್ಯದ ಹಚ್ಚೆಯು ಗುರುತು ನಮ್ಮಲ್ಲಿ ಕಾಣು ತ್ತಲೇ ಇವೆ. ಈಗಿನವರಾದ ನಮ್ಮಗಳ ವಿಚಾರವೆಲ್ಲ ಇಂಗ್ಲಿಷಿನವರದೇ. ನಮಗೆ ವಿಜ್ಞಾನಶಾಸ್ತ್ರಕ್ಕೆ ದಾಸರಾಗುವ ಸ್ವಾತಂತ್ರ್ಯವು ಬಂದಿರುತ್ತದೆ, ಅಷ್ಟೆ !

ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಭೌತಿಕವಿಜ್ಞಾನಶಾಸ್ತ್ರವೂ ದಿನದಿನವೂ ಹೊಸಹೊಸ ಶೋಧಗಳನ್ನು ಮಾಡುತ್ತಲೇ ಇದೆ ; ಆ ಶೋಧಗಳ ಉಪಯೋಗವು ನಿತ್ಯಜೀವನಕ್ಕೆ ಬೇಕಾಗಿರುತ್ತದೆ. ಉದಾಹರಣೆಗೆ ನಕ್ಷತ್ರವಿದ್ಯೆಯನ್ನು (Astronomy) ನೋಡಿ; ಆದರಲ್ಲಿ ಎಷ್ಟು ಬದಲಾವಣೆಗಳಾಗಿವೆ! ಸೂರ್ಯನು ಭೂಮಿಗೆ ಎಷ್ಟು ದೂರದಲ್ಲಿದ್ದಾನೆ ? ಅವನ ಬೆಳಕು ಭೂಮಿಗೆ ಬರುವದಕ್ಕೆ ಎಷ್ಟು ಹೊತ್ತಾಗುತ್ತದೆ? ಸೂರ್ಯನು ಭೂಮಿಯ ಸುತ್ತಲೂ ತಿರುಗುತ್ತಾನೆಯೊ, ಭೂಮಿಯೇ ಅವನ ಸುತ್ತಲೂ ತಿರುಗುತ್ತದೆಯೊ ? ಇತ್ಯಾದಿ, ಇತ್ಯಾದಿ. ಇಂಥ ಪ್ರಶ್ನೆಗಳಿಗೆ ಸ್ಕೂಲುಹುಡುಗರುಕೂಡ ಈಗ ಉತ್ತರವನ್ನು ಹೇಳಬಲ್ಲವರಾಗಿರು ತ್ತಾರೆ. ಕಾಲಮಾನವನ್ನು ಅಳೆಯುವದಕ್ಕೆ ಗಡಿಯಾರಗಳು ಹುಟ್ಟಿವೆ ; ರೇಡಿ ಯಮ್, ಥೋರಿಯಮ್, ಯುರೇನಿಯಮ್ ಗಡಿಯಾರಗಳು ಬಳಕೆಗೆ ಬಂದಿವೆ. ಎಷ್ಟೋ ದೀರ್ಘಕಾಲದವರೆಗೆ ತಾವೇ ನಡೆಯುತ್ತಿರುವ ಗಡಿಯಾರಗಳು, ಕತ್ತಲೆ ಯಲ್ಲಿಯೂ ಕಾಲವನ್ನು ಕಣ್ಣಿಗೆಕಟ್ಟಿದಹಾಗೆ ತಿಳಿಸುವ ಗಡಿಯಾರಗಳು, ಕಾಲಮಾನವನ್ನು ಕೇಳಿದಾಗ ಹೇಳುವ ಗಡಿಯಾರಗಳು- ಇವೆಲ್ಲ ಬಳಕೆಗೆ ಬಂದಿರುತ್ತವೆ. ಹೆಚ್ಚೇಕೆ ? ಮಣಿಕಟ್ಟಿನಲ್ಲಿ ಗಡಿಯಾರ (Wrist Watch) ವಿಲ್ಲದವರು ಈಗಿನ ಕಾಲದವರೇ ಅಲ್ಲವೆಂದಾಗಿಬಿಟ್ಟಿದೆ !

ಸೂಕ್ಷ್ಮಕ್ರಿಮಿಗಳ ಶೋಧವು ವೈದ್ಯವಿದ್ಯೆಯ ಕ್ರಮದಲ್ಲಿ ಕ್ರಾಂತಿಯನ್ನೇ ಎಬ್ಬಿಸಿಬಿಟ್ಟಿದೆ. ಒಂದೇ ಒಂದು ತೊಟ್ಟು ನೀರಿನಲ್ಲಿ ಮೂನ್ನೂರು ದಹಲಕ್ಷ ಮಲೇರಿಯ ಕ್ರಿಮಿಗಳಿರಬಹುದೆಂದು ಕಂಡುಹಿಡಿಯಲಾಗಿದೆ. ರಕ್ತದಲ್ಲಿ ಅಡಗಿರುವ ಅದ್ಭುತಗಳು ಯಾರನ್ನಾದರೂ ಬೆರಗುಮಾಡುವಂತಿವೆ. ಒಂದೊಂದು ರಕ್ತಕಣವೂ (Corpuscle) ಒಂದೊಂದು ನಿಮಿಷದಲ್ಲಿಯೂ ಹೃದಯದ ಮೂಲಕವಾಗಿ ಹರಿದು ಮೂರುನಾಲ್ಕು ವಾರಗಳೊಳಗಾಗಿ ನಾಡಿಗಳ ಮೂಲಕ ಗುಲ್ಮಕ್ಕೆ (Spleen) ಹೋಗಿ ಅಲ್ಲಿ ನಾಶವಾಗುತ್ತದೆಯಂತೆ! ಗುರುಜಲದಲ್ಲಿ (ಭಾರವಾದ ನೀರಿನಲ್ಲಿ) ಎಷ್ಟೋ ಪ್ರಾಣಿಗಳು ನಾಶವಾದರೂ ಸೂಕ್ಷ್ಮಕ್ರಿಮಿಗಳು ಕೆಲವು ಅಲ್ಲಿಯೇ ಜೀವಿಸಿಕೊಂಡಿರುವವಂತೆ !

ನಮ್ಮ ಭೂಮಿಯ ಸುತ್ತಲೂ ಒಂದಾನೊಂದು ಕಮಾನು ಇರುವದಂತೆ. ಅದರ ಬಹಿಃಪ್ರದೇಶದಲ್ಲಿ ವಿಶ್ವಕಿರಣಗಳು (Cosmic Rays) ಬಂದು ಒಂದೇಸಮನೆ ಬಡಿಯುತ್ತಿರುವವಂತೆ ! ವಾಯುಮಂಡಲವನ್ನು ಜಯಿಸಿ ವಿಮಾನ ಗಳು ಹಾರಾಡುತ್ತಿರುವದು, ಸಮುದ್ರದ ಆಳವನ್ನು ಕಂಡುಹಿಡಿದಿರುವದು, ದೂರ

ಧ್ವನಿವಾಹಕಯಂತ್ರಗಳು, ದೂರದಲ್ಲಿರುವದನ್ನು ಯಥಾವತ್ತಾಗಿ ತೋರಿಸುವ ದೂರವಸ್ತುದರ್ಶನಯಂತ್ರಗಳು, ಗೃಹಾಂತರಗಳನ್ನು ಸುಟ್ಟುವ ಸ್ಫಟಿಕಗಳು, ವಿದ್ಯುಚ್ಛಕ್ತಿಯ ಯಂತ್ರಗಳು, ವಿದ್ಯುದ್ದೀಪ-ಇವುಗಳಂತೂ ಎಲ್ಲರ ಮನೆಮಾತಾಗಿ ಬಿಟ್ಟಿವೆ;

ಮನಶ್ಶಾಸ್ತ್ರದಲ್ಲಿ ಆಗಿರುವ ಶೋಧಗಳು ವಿಚಿತ್ರವಾಗಿವೆ. ಮನಸ್ಸಿನ ಅಧೋವಿಜ್ಞಾನ (Sub-conscious)ದ ವಿಚಿತ್ರಗಳನ್ನು ಅಗಲೆ ಕಂಡುಹಿಡಿದು ಬಿಟ್ಟಿದ್ದಾರೆ ; ಮನುಷ್ಯನ ವ್ಯಕ್ತವಿಚಾರಭಾಗಕ್ಕಿಂತಲೂ ಅದಕ್ಕೆ ಈಗ ಹೆಚ್ಚಿನ ಸ್ಥಾನವು ಸಿಕ್ಕಿರುತ್ತದೆ. ಮನಸ್ಸಿನ ಈ ಭಾಗದಲ್ಲಿ ಒತ್ತಿಟ್ಟ ಇಚ್ಛೆಗಳೂ ಪ್ರೇಮ ರಾಗದ್ವೇಷಾದಿಗಳ ಹೋರಾಟವೂ ಅಡಗಿರುತ್ತವೆ- ಎಂದು ಗೊತ್ತಾಗಿದೆ ಮನೋ ವಿಶ್ಲೇಷಣೆಯಿಂದ ಸುಪ್ತರೋಗಗಳನ್ನು ನಿವಾರಿಸುವ ಪದ್ಧತಿಯು ಮುಂದುವರಿಯು ತ್ತಿದೆ. ಕೆಲವು ಗ್ರಂಥಿಗಳಲ್ಲಿರುವ ಅವ್ಯವಸ್ಥೆಯಿಂದ ಅನೀತಿಯು ಅಪರಾಧಗಳು ಆಗುತ್ತಿರುವವೆಂದೂ ಒಂದಾನೊಂದು ಗ್ರಂಥಿಗೆ ಅಯೊಡಿನ್ ಎಂಬ ವಸ್ತುವನ್ನು ಒದಗಿಸಿಕೊಡುವದರಿಂದ, ಮಂಕಾಗಿರುವ ಹುಡುಗನನ್ನು ಆರೋಗ್ಯಸ್ಥಿತಿಗೆ ತರಬಹುದೆಂದೂ, ತಪ್ಪುನಡತೆಗೆ ತಂದೆತಾಯಿಗಳ ಶುಕ್ಲಶೋಣಿತಗಳ ಸ್ವಭಾವವೇ ಕಾರಣವೆಂದೂ, ಗೊತ್ತಾಗಿದೆಯಂತೆ. ಕೆಲಕೆಲವು ರೋಗಗಳಿಗೆ ಇಂಥಿಂಥ ರಾಗ ವನ್ನು ಹಾಡಿ ಗುಣಪಡಿಸಬಹುದೆಂದು ಕೆಲವರು ಶೋಧಿಸಿರುತ್ತಾರೆ. ಮನುಷ್ಯ ನಿಗೆ ಸಂತೋಷದುಃಖದ ಸುದ್ದಿಗಳನ್ನು ಕೇಳಿದರೆ ಆಗುವ ಮನಸ್ಸಿನ ಉಬ್ಬರ ವಿಳಿತಗಳನ್ನು ಅಳೆಯುವ ಯಂತ್ರಗಳೂ ಹುಟ್ಟಿರುತ್ತವೆಯಂತೆ !

ಲೈಂಗಿಕವಿಚಾರದಲ್ಲಿಯೂ ಅನೇಕ ಶೋಧಗಳು ಆಗಿರುತ್ತವೆ. ಯಥೇಚ್ಛ ವಾದ ಪ್ರೇಮ, ಸಂತಾನನಿರೋಧ, ಜನನಶಕ್ತಿಯ ನಾಶನ- ಮುಂತಾದ ವಿಚಾರ ಗಳಲ್ಲಿ ಎಲ್ಲೆಲ್ಲಿಯೂ ಜನರು ಧಾರಾಳವಾಗಿ ಚರ್ಚಿಸುವದು ವಾಡಿಕೆಗೆ ಬಂದು ಬಿಟ್ಟಿದೆ.

ಮನುಷ್ಯರ ಭಾವಗಳು ಬಲವಾಗಿ ಎದ್ದಹಾಗೆಲ್ಲ ಅವುಗಳ ಉದ್ರೇಕದಿಂದ ಜನರಲ್ಲಿ ಅಂಟುರೋಗದಂತೆ ಅದೇ ಭಾವನೆಯು ಹೇಗೆ ಹಬ್ಬಿಕೊಳ್ಳುತ್ತಿರುವದೆಂಬು ದನ್ನು ವಿಜ್ಞಾನದೃಷ್ಟಿಯಿಂದ ಪರೀಕ್ಷೆಮಾಡುತ್ತಿದಾರೆ.

ಹೀಗೆ ಎಲ್ಲಾ ಬಗೆಯಿಂದಲೂ ಜನರಿಗೆ ನಿತ್ಯಜೀವನಕ್ಕೆ ಬೇಕಾಗುವ ಅನೇಕ ವಿಷಯಗಳನ್ನು ತಿಳಿಯಪಡಿಸುವ ವಿಜ್ಞಾನಶಾಸ್ತ್ರದ ಅಧಿದೇವತೆಯ ಆರಾಧಕರು ಈಗಎಲ್ಲೆಲ್ಲಿಯೂ ಹೆಚ್ಚುತ್ತಿದ್ದಾರೆ. ನಮ್ಮ ದೇಶದಲ್ಲಿ 'ಕಟ್ಟಿರಿ, ನಿಮ್ಮ ಭಾರತ ರಾಮಾಯಣಗಳನ್ನು ; ಬಿಚ್ಚಿರಿ, ವಿಜ್ಞಾನಶಾಸ್ತ್ರವನ್ನು !' ಎಂಬ ಕೂಗು ಎದ್ದು ಕೊಂಡಿದೆ.

ಈಗ ಜೀವಂತದರ್ಶನಕ್ಕೆ ಈ ವಿಜ್ಞಾನಶಾಸ್ತ್ರದ ಸಂಬಂಧವನ್ನು ನಿಶ್ಚಯಿಸುವ ಕೆಲಸವು ಒದಗಿದೆ. ಈ ವಿಜ್ಞಾನಶಾಸ್ತ್ರದಂತೆ ಧರ್ಮನೀತಿಗಳಿಗೆ ಎಡೆಯಿಲ್ಲ, ಈಶ್ವರ

ನಿಗೆ ಸ್ಥಾನವಿಲ್ಲ. ಮತಗಳಿಗೆ ಬುದ್ಧಿಯಿಲ್ಲವಾದರೆ ವಿಜ್ಞಾನಶಾಸ್ತ್ರಕ್ಕೆ ಹೃದಯ ವಿಲ್ಲ. ಇದರಲ್ಲಿ ಕಾವ್ಯರಸದ ವಿಚಾರವಾಗಲಿ, ಚಿತ್ರಶಿಲ್ಪಾದಿಗಳ ಸೌಂದರ್ಯದ ವಿಚಾರವಾಗಲಿ ತಿಳಿಯುವಂತಿಲ್ಲ ; ಮನುಷ್ಯರು ಒಬ್ಬರನ್ನೊಬ್ಬರು ಪ್ರೀತಿಸುವ ವಿಚಾರಕ್ಕೆ ಈ ಶಾಸ್ತ್ರದಲ್ಲಿ ಏನೂ ಹೇಳಿಲ್ಲ. ಭಯ, ಆಶ್ಚರ್ಯ– ಮುಂತಾದವು ಗಳ ಬಗ್ಗೆ ಈ ಶಾಸ್ತ್ರವು ಮೌನವಾಗಿದೆ. ಸತ್ಯ, ಅಹಿಂಸೆ, ಭಕ್ತಿ, ಜ್ಞಾನ, ವೈರಾಗ್ಯ- ಇವುಗಳ ಬಗ್ಗೆ ಇದಕ್ಕೆ ಏನೇನೂ ತಿಳಿಯದು. ಈಶ್ವರ, ಪರಲೋಕ, ಜನ್ಮಾಂತರ –ಇವುಗಳ ಅರಿವೇ ಇದಕ್ಕಿಲ್ಲ. ಮನುಷ್ಯನು ಹೇಗೆ ಉಂಟಾದನು ? ಇವನಿಗೆ ಚೈತನ್ಯವು ಹೇಗೆ ಬಂತು ? ಇವನು ಮುಂದಕ್ಕೆ ಏನಾಗುವನು ? ಮರಣವೇ ಇವನ ಅಂತ್ಯವೆ ? ಇವು ಈ ಶಾಸ್ತ್ರಕ್ಕೆ ತಿಳಿಯದ ವಿಷಯಗಳು. ಪ್ರಪಂಚದಲ್ಲಿ ಮನುಷ್ಯನಿಗೆ ಸ್ಥಾನವೇನು ? ಪ್ರಪಂಚಕ್ಕೆ ಹೋಲಿಸಿದರೆ ಅವನು ಒಂದು ಅಣು ಕೂಡ ಆಗುವಂತಿಲ್ಲ. ಇಡಿಯ ವಿಶ್ವದ ದೃಷ್ಟಿಯಿಂದ ನೋಡಿದಾಗ ಅವನಿಗೆ ಯಾವ ಬೆಲೆಯೂ ಇಲ್ಲ. ವಿಜ್ಞಾನವು ಹೊಸಹೊಸ ಶೋಧಗಳನ್ನು ಮಾಡುತ್ತಿದೆ. ಇದಕ್ಕೆ ಪ್ರಲಯರುದ್ರನ ಅನುಗ್ರಹವಿದೆ; ಈ ಶಾಸ್ತ್ರವು ಬೇಕಾದರೆ ಪ್ರಪಂಚವನ್ನೆಲ್ಲ ನಾಶಮಾಡುವದಕ್ಕೆ ಬರುವ ಯಂತ್ರಗಳನ್ನೂ ಆಯುಧಗಳನ್ನೂ ಕಂಡುಹಿಡಿಯ ಬಲ್ಲದು. ಈ ಶಾಸ್ತ್ರದ ದೇವತೆಗೆ ವರ್ತಕರು, ವಿಶ್ವವಿದ್ಯಾಲಯದ ಪದವೀಧರರು, ಸರಕಾರದವರು– ಎಲ್ಲರೂ ತೆಂಗಿನಕಾಯಿಯನ್ನೊಡೆ ು ಆರತಿಮಾಡುವದಕ್ಕೆ ಸಿದ್ಧವಾಗಿದ್ದಾರೆ. ಅವರು ಮತಗಳಿಗೆ ಯಾವ ಯುಕ್ತಿಯ ಆಧಾರವೂ ಇಲ್ಲ ಎಂದು ಮಾತ್ರ ಹೇಳಬಲ್ಲರು !

ದರ್ಶನಗಳು, ಮತಗಳು, ವಿಜ್ಞಾನಶಾಸ್ತ್ರ–ಇವುಗಳು ಒದಗಿಸುವ ಜ್ಞಾನವು ಯಾವದೂ ಪರಿಪೂರ್ಣವಾದ ದರ್ಶನವನ್ನು ಕೊಡಲಾರದು ಅವುಗಳಲ್ಲಿ ಕೆಲವು ಈಗಲೆ ಹಳತಾಗಿಬಿಟ್ಟಿವೆ. ವಿಜ್ಞಾನಶಾಸ್ತ್ರದಲ್ಲಿಕೂಡ ಎಷ್ಟೋ ಅಭಿಪ್ರಾಯಗಳು ಈಗ ಬದಲಾಯಿಸಿವೆ. ಅದರಲ್ಲಿ ಹಿಂದೆ ನಿತ್ಯನಿಶ್ಚಿತವೆಂದು ನಂಬಲಾಗಿದ್ದ ಹಲವು ಅಭಿಪ್ರಾಯಗಳು ಈಗ ಮೂಲೆಗೆ ಬಿದ್ದಿವೆ | ಈಗಿನ ಅಭಿಪ್ರಾಯಗಳು ಮುಂದಕ್ಕೆ ಹೇಗೆ ಮಾರ್ಪಡಬಹುದೋ ಹೇಳುವದಕ್ಕಿಲ್ಲ ಈ ದರ್ಶನಗಳ, ಮತಗಳ, ಮತ್ತು ವಿಜ್ಞಾನಶಾಸ್ತ್ರದ ಸಾರವನ್ನು ಗ್ರಹಿಸಿ ಅವುಗಳಿಗೆ ಇರುವ ಬೆಲೆಯನ್ನು ಕೊಟ್ಟು ಎಲ್ಲಕ್ಕೂ ಅನ್ವಯಿಸುವ ಕುಪ್ಪಿಮಾತ್ರೆಯಂತಿರುವ ದರ್ಶನವೊಂದಿದೆಯೆ ? ಭೂತ ಭವಿಷ್ಯದ್ವರ್ತಮಾನಗಳಲ್ಲಿ ಎಂದೆಂದಿಗೂ ಅಚ್ಚಳಿಯದೆ ಅಬಾಧ್ಯವಾದ ತತ್ತ್ವ ಸ್ವರೂಪವನ್ನು ತಿಳಿಯಪಡಿಸುವ ಜೀವಂತದರ್ಶನವು ಯಾವದಾದರೊಂದು ಇದೆಯೆ ?– ಎಂದರೆ ಇದೆ. ಅದನ್ನು ಉಪಯೋಗಿಸಿಕೊಳ್ಳದೆ ಇರುವದು ನಮ್ಮ ದೌರ್ಭಾಗ್ಯ. ಇಂಥ ದರ್ಶನವನ್ನು ಮತ್ತೆಲ್ಲಿಯೂ ಹುಡುಕಿಕೊಂಡುಹೋಗಬೇಕಾ ಗಿಲ್ಲ. ಅದು ನಮ್ಮಗಳ ಹತ್ತಿರವೇ ಇದೆ. ಅದಕ್ಕೆ ವೇದಾಂತವೆಂದು ಹೆಸರು. ವೇದಾಂತವು ಇಂಥ ದರ್ಶನವೆಂಬುದು ಹೇಗೆಂಬುದನ್ನು ಈಗ ಪರೀಕ್ಷಾಪೂರ್ವಕ ವಾಗಿ ಮನಗಾಣಬೇಕಾಗಿದೆ.

———

# ೪. ವೇದಾಂತವು ಜೀವಂತದರ್ಶನ

(21—7—62)

ವೇದಾಂತದರ್ಶನದಲ್ಲಿ ಜೀವಂತದರ್ಶನದ ಅಂಶಗಳೆಲ್ಲ ಇವೆಯೆ ? ಎಂಬು ದನ್ನು ಈಗ ವಿಮರ್ಶಿಸಬೇಕಾಗಿದೆ. ಉಳಿದ ದರ್ಶನಗಳು, ಮತಗಳು, ವಿಜ್ಞಾನ ಶಾಸ್ತ್ರ– ಇವುಗಳಲ್ಲೆಲ್ಲ ಕೊರತೆಯಿದೆ ಎಂದು ಕಂಡುಕೊಂಡದ್ದಾಗಿದೆ. ಅವುಗಳಲ್ಲಿ ಯಾವದೊಂದೂ ಮನುಷ್ಯನಿಗೇ ಮುಖ್ಯವಾಗಿ ಸಂಬಂಧಪಟ್ಟು, ಮನುಷ್ಯನ ಪೂರ್ಣಸ್ವಭಾವಕ್ಕೆ ಬೆಲೆಯನ್ನು ಕೊಟ್ಟು, ಪುರುಷಾರ್ಥವನ್ನು ತಿಳಿಸಿಕೊಡಬಲ್ಲ ದ್ದಾಗಿಲ್ಲ. ವೇದಾಂತವು ಮಾತ್ರ ಅವುಗಳೆಲ್ಲದವರ ಸಾರವನ್ನೂ ತನ್ನೊಳಗೆ ಅಡಕ ಮಾಡಿಕೊಂಡಿರುತ್ತದೆ. ತೆಂಗಿನಸೊಪ್ಪಿಕಾಯಿ ಬೀಜವಾಗಿದ್ದದ್ದು ತೆಂಗಿನಮರವಾಗಿ ಫಲವನ್ನು ಕೊಡುವಂತೆ, ಅವುಗಳು ಒಡೆದುಕೊಂಡು ಬೆಳೆದು ತಮ್ಮ ಸಾರಾಂಶ ವನ್ನು ವೇದಾಂತದಲ್ಲಿ ತೋರಿಸುತ್ತಿವೆ. ಮನುಷ್ಯನ ಶರೀರದ ಹಳೆಯ ಜೀವ ಕೋಶಗಳು (cells) ಕ್ಷಯಿಸುತ್ತಲೂ ಹೊಸವು ಹುಟ್ಟುತ್ತಲೂ ಇದ್ದರೂ 'ಅವನೇ ಇವನು' ಎಂದು ಗುರುತುಹಿಡಿಯುವಂತೆ ಇರುವದರಿಂದ ಶರೀರವು ಇರುವಷ್ಟು ಕಾಲ ಪರಿಣಾಮಿನಿತ್ಯವಾಗಿರುತ್ತದೆ. ಮಿಕ್ಕದರ್ಶನಗಳೂ ಹೀಗೆಯೇ ರೂಪಾಂತರ ವನ್ನು ಹೊಂದುತ್ತಲೇ ಬಂದು ವೇದಾಂತದಲ್ಲಿ ತಮ್ಮ ಸಾರವನ್ನು ಈಗಲೂ ಇಟ್ಟು ಕೊಂಡಿವೆ. ವೇದಾಂತವು ಮಾತ್ರ ಕೂಟಸ್ಥನಿತ್ಯವಾದ ವಸ್ತುವನ್ನು ಕುರಿತ ದರ್ಶನವಾಗಿದ್ದು ಹಿಂದಿನ ದರ್ಶನಗಳನ್ನೆಲ್ಲ ಅಡಕಮಾಡಿಕೊಂಡು ತಾನೂ ಜೀವಂತ ವಾಗಿ ಬಾಳಿಕೊಂಡಿರುತ್ತದೆ.

ದರ್ಶನಗಳೆಲ್ಲದರ ಸಾರವೂ ವೇದಾಂತದಲ್ಲಿ ಹೇಗೆ ಅಡಕವಾಗಿದೆ ? ಎಂಬು ದನ್ನು ಈಗ ನೋಡೋಣ. ಸಾಂಖ್ಯದರ್ಶನದಲ್ಲಿ ಪ್ರಕೃತಿ, ಪುರುಷ– ಎಂದು ಎರಡು ಮುಖ್ಯತತ್ತ್ವಗಳು. ಪುರುಷರು ಎಂದರೆ ಆತ್ಮರು ಅನೇಕರು. ಪ್ರಕೃತಿಯು ಹೊರಗಿನ ಭೌತಿಕವಸ್ತುಗಳಾಗಿಯೂ ಮತ್ತು ಒಳಗಿನ ದೇಹೇಂದ್ರಿಯಗಳಾಗಿಯೂ ಪರಿಣಮಿಸಿ ಪುರುಷರಿಗೆ ಭೋಗಮೋಕ್ಷಗಳನ್ನುಂಟುಮಾಡುತ್ತಿರುತ್ತದೆ–ಎಂಬುದು ಆ ದರ್ಶನದ ಸಾರ. ಈಗ ಸಾಂಖ್ಯವು ಸ್ವತಂತ್ರದರ್ಶನವಾಗಿ ಜೀವಂತವಾಗಿ ಉಳಿದುಕೊಂಡಿಲ್ಲವಾದರೂ ಅದರ ಅಬಾಧಿತಾಂಶವು ವೇದಾಂತದಲ್ಲಿ ಜೀವಂತ ವಾಗಿರುತ್ತದೆ. ಭಗವದ್ಗೀತೆಯಲ್ಲಿ ಈ ಸಾಂಖ್ಯದರ್ಶನದ ಸಾರವನ್ನು ಬಳಸಿ ಕೊಂಡಿದೆ. ಪ್ರಕೃತಿಯ ಗುಣಗಳು ಶರೀರ, ಕರಣ, ವಿಷಯ– ಎಂಬ ಮೂರು ಬಗೆಯಿಂದ ಪರಿಣಮಿಸಿರುತ್ತವೆ. ಪುರುಷನ ತತ್ತ್ವವನ್ನು ತಿಳಿದುಕೊಂಡಿರು ವಾತನು 'ಗುಣಾ ಗುಣೇಷು ವರ್ತನ್ತೇ' (ಗುಣಗಳಾದ ಇಂದ್ರಿಯಗಳು ಗುಣ ಗಳಾದ ವಿಷಯಗಳಲ್ಲಿ ಪ್ರವರ್ತಿಸುತ್ತಿರುತ್ತವೆ), ಆತ್ಮನಿಗೆ ಯಾವ ಕರ್ಮದ ಲೇಪವೂ ಇಲ್ಲ– ಎಂದುಕೊಳ್ಳುತ್ತಾನೆ ಎಂಬ ಅಂಶವನ್ನು ವೇದಾಂತದಲ್ಲಿ ಸೇರಿಸಿ ಕೊಂಡಿದೆ. ಅಜ್ಞನಾದವನು ಪ್ರಕೃತಿಯನ್ನೇ ತಾನೆಂದು ಭ್ರಮಿಸಿ ಕರ್ಮಕ್ಕೆ ಕಟ್ಟು ಬೀಳುತ್ತಿದಾನೆ ಎಂಬಂಶವೂ ಆ ದರ್ಶನದ್ದೇ.

ಇದರಂತೆಯೇ ನ್ಯಾಯದರ್ಶನವು ವ್ಯವಹಾರದಲ್ಲಿ ಪ್ರಮಾಣಗಳಿಗೆ ಕೊಟ್ಟಿರುವ ಬೆಲೆಯನ್ನು ವೇದಾಂತದಲ್ಲಿ ಹಾಗೆಯೇ ಉಳಿಸಿಕೊಂಡು ಸೇರಿಸಿಕೊಂಡಿದೆ. ಪ್ರಮಾತೃ, ಪ್ರಮಾಣ, ಪ್ರಮೇಯ-ಎಂಬ ಭೇದಗಳನ್ನು ನೈಯಾಯಿಕರಂತೆಯೇ ಒಪ್ಪಿ, ಪ್ರಮಾಣದಿಂದ ಯಾವದು ನಿಶ್ಚಿತವಾಗುತ್ತದೆಯೋ ಅದೇ ಸತ್ಯ ಎಂಬ ವಾದವನ್ನು ಒಪ್ಪಿಕೊಂಡಿರುತ್ತಾರೆ. ಬೌದ್ಧರು ಎರಡು, ಸಾಂಖ್ಯರು ಮೂರು, ನೈಯಾಯಿಕರು ನಾಲ್ಕು, ಮೀಮಾಂಸಕರು ಆರು– ಹೀಗೆ ಪ್ರಮಾಣಸಂಖ್ಯೆಯ ವಿಷಯದಲ್ಲಿ ಭಿನ್ನಾಭಿಪ್ರಾಯವುಳ್ಳವರಾಗಿರುವದರಿಂದ ಸಂಖ್ಯೆಯ ವಿಷಯದಲ್ಲಿ ದುರಾಗ್ರಹವನ್ನು ತಳೆಯದೆ ಆಯಾ ವಾದಿಗಳೊಡನೆ ತತ್ತ್ವವಿಚಾರವನ್ನು ಮಾಡುವಾಗ ಅವರವರು ಒಪ್ಪಿರುವಷ್ಟು ಪ್ರಮಾಣಗಳನ್ನೇ ಒಪ್ಪಿಕೊಂಡಿರುತ್ತಾರೆ. ಇದರಂತೆ ಅನುಮಾನಪ್ರಮಾಣದಲ್ಲಿ ಹೇತುಗಳು ಸರಿಯೊ, ತಪ್ಪೊ?– ಎಂಬುದನ್ನು ಗೊತ್ತುಮಾಡುವದಕ್ಕೆ ನೈಯಾಯಿಕರ ಪ್ರಮಾಣವನ್ನೇ ಇಲ್ಲಿಯೂ ಉಪಯೋಗಿಸಿದೆ. ಆದ್ದರಿಂದ ನ್ಯಾಯದರ್ಶನವೂ ತಾನೇ ಬೇರೆಯಾಗಿ ಬದುಕದೆ ಇದ್ದರೂ ವೇದಾಂತದಲ್ಲಿ ಅಡಕವಾಗಿ ಜೀವಂತವಾಗಿದೆ.

ಹೀಗೆಯೇ ದ್ರವ್ಯ, ಗುಣ, ಕರ್ಮ–ಮುಂತಾದ ವೈಶೇಷಿಕರ ಪರಿಭಾಷೆಯನ್ನು ವ್ಯವಹಾರದಲ್ಲಿ ಬಳಸಿ ಅದನ್ನು ವೇದಾಂತವು ಹೀರಿಕೊಂಡು ತನ್ನೊಳಗೆ ಉಳಿಸಿಕೊಂಡಿರುತ್ತದೆ.

ಇನ್ನು ಯೋಗದರ್ಶನ. ಯೋಗಿಗಳು ಚಿತ್ತವೃತ್ತಿಗಳ ನಿರೋಧವನ್ನು ಮಾಡಿಕೊಳ್ಳುವ ಬಗೆಯನ್ನು ಹೇಳುತ್ತಾರೆ. ವೇದಾಂತದಲ್ಲಿಯೂ ಚಿತ್ತವೆಂಬ ಶಬ್ದವನ್ನೇ ಅಂತಃಕರಣಕ್ಕೆ ಬಳಸಿಕೊಂಡು ಅದನ್ನು ನಿಗ್ರಹಮಾಡಿಕೊಂಡು ಆತ್ಮದರ್ಶನವನ್ನು ಹೇಗೆ ಮಾಡಿಕೊಳ್ಳಬಹುದೆಂಬುದನ್ನು ತಿಳಿಯಿಸಿಕೊಡುವದಕ್ಕೆ ಪ್ರಯತ್ನವನ್ನು ಮಾಡಿದೆ. ಭಗವದ್ಗೀತೆಯಲ್ಲಿ ಹೇಳಿದ ಧ್ಯಾನಯೋಗದಲ್ಲಿ ಯೋಗದರ್ಶನದ ಜೀವಂತಭಾಗಗಳನ್ನು ವೇದಾಂತವು ತನ್ನೊಳಗೆ ಸೇರಿಕೊಂಡಿರುವ ಪರಿಯನ್ನು ಕಾಣಬಹುದು. ಹೀಗೆ ಎಲ್ಲಾ ದರ್ಶನಗಳಲ್ಲಿಯೂ ಸರ್ವಸಂಮತವಾಗುವ ಭಾಗಗಳು ವೇದಾಂತದಲ್ಲಿ ಈಗಲೂ ಇದೆ ಎಂದಾಯಿತು.

ಇನ್ನು ಮತಗಳ ವಿಚಾರ. ಶಿವ, ವಿಷ್ಣು, ಸೂರ್ಯ, ದೇವಿ, ಗಣಪತಿ–ಎಂದು ಮುಂತಾದ ಹೆಸರುಗಳಿಂದ ಬೇರೆಬೇರೆಯ ಮತಗಳವರು ತಮತಮಗೆ ಅಭಿಮತವಾದ ದೇವರ ಹೆಸರು, ಆಕಾರ, ಲೋಕ– ಮುಂತಾದವುಗಳನ್ನು ಇಟ್ಟುಕೊಂಡು ಆ ಮತಾಭಿಮಾನದಿಂದ ಮಿಕ್ಕ ಮತಗಳವರ ದೇವತೆಗಳನ್ನು ನಿಂದಿಸುವ ಹವ್ಯಾಸಕ್ಕೆ ಬಿದ್ದಿದ್ದರು. ಈಗಲೂ ಶೈವವೈಷ್ಣವಶಾಕ್ತೇಯಮತದವರು ಇರುತ್ತಾರೆ; ಅವರ ಅಭಿಪ್ರಾಯದಲ್ಲಿ ತಮ್ಮತಮ್ಮ ಮತದಲ್ಲಿ ಒಪ್ಪಿರುವ ದೇವರೇ ಸರ್ವೋತ್ತಮನು ಎಂಬ ಆಗ್ರಹವಿರುತ್ತದೆ. ಆದರೆ ವೇದಾಂತದಲ್ಲಿ ಇಂಥ

ದುರಾಗ್ರಹವಿಲ್ಲದೆ ಮತಗಳಿಗೆಲ್ಲ ಸ್ಥಾನವನ್ನು ಕಲ್ಪಿಸಿರುತ್ತದೆ. ಪರಮೇಶ್ವರನು ಇರುತ್ತಾನೆ. ಆತನಿಗೇ ಬೇರೆಬೇರೆಯ ಹೆಸರುಗಳಿರುತ್ತವೆ. 'ಏಕಂ ಸದ್ವಿಪ್ರಾ ಬಹುಧಾ ವದಂತಿ' ಇರುವದೊಂದನ್ನೇ ಬಲ್ಲವರು ಬಗೆಬಗೆಯಾಗಿ ವರ್ಣಿಸಿರುತ್ತಾರೆ ಎಂಬ ವೇದೋಕ್ತಿಯನ್ನನುಸರಿಸಿ ಶಿವ, ವಿಷ್ಣು-ಮುಂತಾದ ದೇವತೆಗಳೆಲ್ಲರೂ ಒಬ್ಬನೇ ದೇವ, ಆತ್ಮನಿಗೇ ಬೇರೆಬೇರೆಯ ಆಕಾರಗಳು, ಲೋಕಗಳು-ಮುಂತಾಗಿ ಆಯಾ ಭಕ್ತರ ಅನುಗ್ರಹಕ್ಕಾಗಿ ಏರ್ಪಟ್ಟಿರುತ್ತದೆ- ಎಂಬುದು ವೇದಾಂತಿಗಳ ಅಭಿಪ್ರಾಯ. ಹಿಂದಿನ ಕಾಲದ ಋಷಿಗಳ ಆಶ್ರಮದಲ್ಲಿ ಹುಲಿ, ಚಿರತೆ-ಮುಂತಾದ ಪ್ರಾಣಿಗಳು ವೈರವನ್ನು ತೊರೆದು ಸ್ನೇಹದಿಂದ ವರ್ತಿಸುತ್ತಿದ್ದವೆಂದು ಪುರಾಣಗಳಲ್ಲಿ ವರ್ಣಿಸಿರುವಂತೆ ವೇದಾಂತಿಗಳ ಆಶ್ರಮದಲ್ಲಿ ಮತಗಳೆಲ್ಲ ಪರಸ್ಪರ ವೈರವನ್ನು ತೊರೆದು ಸ್ನೇಹದಿಂದ ಬಾಳುವದಕ್ಕೆ ಅವಕಾಶವಿರುತ್ತದೆ. ವೈದಿಕಮತಗಳೇ ಅಲ್ಲದೆ ಅವೈದಿಕಮತಗಳಾದ ಮುಸಲ್ಮಾನರು, ಕ್ರಿಸ್ತಿಯನರು-ಮುಂತಾದವರ ದೇವರುಗಳೂ ಈ ಒಬ್ಬನೇ ದೇವನ ನಾಮಗಳು ಎಂದು ಕಲ್ಪಿಸಿಕೊಂಡು ಬೇರೆಬೇರೆಯ ಮತದವರು ಸುಖದಿಂದ ಬಾಳುವದಕ್ಕೆ ವೇದಾಂತವು ತನ್ನ ನೆರವನ್ನು ನೀಡಬಲ್ಲದ್ದಾಗಿರುತ್ತದೆ.

ಹೀಗೆಯೇ ಪಾಶ್ಚಾತ್ಯದೇಶಗಳಲ್ಲಿ ಹುಟ್ಟಿರುವ ಬಗೆಬಗೆಯ ತರ್ಕಪ್ರಧಾನವಾದ ಫಿಲಾಸಫಿದರ್ಶನಗಳಿಗೂ ವೇದಾಂತದಲ್ಲಿ ಅವಕಾಶವನ್ನು ಕಲ್ಪಿಸಿಕೊಡುವದಕ್ಕೆ ಆಗುತ್ತದೆ. ಉದಾಹರಣೆಗೆ ಬ್ರಾಡ್ಲಿ ಎಂಬಾತನು 'Reality and Appearance' ಎಂಬ ಒಂದು ಗ್ರಂಥವನ್ನು ಬರೆದಿರುತ್ತಾನೆ. ಇದನ್ನು ವೇದಾಂತದಲ್ಲಿ 'ಪರಮಾರ್ಥವೂ ಆದರಲ್ಲಿ ಅಧ್ಯಸ್ತವಾಗಿರುವ ದೃಶ್ಯವೂ' ಎನ್ನುತ್ತಾರೆ. ಇಲ್ಲಿ ಬ್ರಾಡ್ಲಿ ಎಂಬಾತನು ಹೇಳಿರುವದೆಲ್ಲ ವೇದಾಂತಕ್ಕೆ ಒಪ್ಪಾಗದೆ ಇರಬಹುದು; ಆದರೆ ಪರಮಾರ್ಥವು ಇರುವದು ಇದ್ದಂತೆಯೇ ಇರುತ್ತದೆ; ತೋರುವದು ಮಾತ್ರ ಆ ರೂಪದಿಂದ ಹುಸಿ- ಎಂಬುದು ಸರ್ವವಾದಿಗಳಿಗೂ ಸಮ್ಮತವಾಗಿರಬೇಕು. ಪಾಶ್ಚಾತ್ಯರ ದರ್ಶನಗಳು ಯಾವ ದೃಷ್ಟಿಯಿಂದ ಸರಿ, ಯಾವ ದೃಷ್ಟಿಯಿಂದ ಸರಿಯಲ್ಲ ?- ಎಂಬುದನ್ನು ನಾವು ವಿಚಾರಮಾಡಿ ಒಪ್ಪಬೇಕು. ಅದರ ವಿಚಾರವನ್ನು ಮುಂದಕ್ಕೆ ನೋಡೋಣ, ಆದರೆ ಬರಿಯ ತರ್ಕದಿಂದ ವೇದಾಂತವು ಯಾವದನ್ನೂ ನಿರ್ಣಯಿಸುವದಿಲ್ಲ. 'ಪರಮತಮ್ ಅಪ್ರತಿಷಿದ್ಧಮ್ ಅನುಮತಂ ಭವತಿ'- ಮತ್ತೊಬ್ಬರ ಮತದಲ್ಲಿ ನಾವು ಸರಿಯಲ್ಲವೆಂದು ಸ್ಪಷ್ಟವಾಗಿ ಹೇಳಿದ್ದರೆ ಒಪ್ಪಿದಂತೆ ಎಂಬ ತಂತ್ರಯುಕ್ತಿಯನ್ನನುಸರಿಸಿ ವೇದಾಂತಿಗಳು ಯುಕ್ತ್ಯನುಭವಕ್ಕೆ ಹೊಂದುವ ಯಾವ ಅಂಶವಿದ್ದರೂ ಬೇರೆಯ ದರ್ಶನಗಳಿಂದಲೂ ಸ್ವೀಕರಿಸುತ್ತಾರೆ.

ವೇದಾಂತದಲ್ಲಿ ಮನುಷ್ಯನಿಗೆ ಯಾವ ಸ್ಥಾನವಿದೆ ? ತೈತ್ತಿರೀಯಶ್ರುತಿಯಲ್ಲಿ "ಪರಮಾತ್ಮನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ,

ಅಗ್ನಿಯಿಂದ ಅಪ್ಪು, ಅಪ್ಪಿನಿಂದ ಪೃಥಿವಿ - ಹೀಗೆ ಉಂಟಾದವು ; ಪೃಥಿವಿಯಲ್ಲಿ ಗಿಡಮರಗಳ ಉಂಟಾದವು, ಅವುಗಳಿಂದ ಅನ್ನನಾಯಿತು, ಅನ್ನದಿಂದ ಮನುಷ್ಯ ನಾದನು" ಎಂಬ ವಾಕ್ಯವಿದೆ. ಈ ವಾಕ್ಯಕ್ಕೆ ಭಾಷ್ಯವನ್ನು ಬರೆಯುವಾಗ ಶಂಕರಾಚಾರ್ಯರು ಹೀಗೆಂದು ಬರೆದಿರುತ್ತಾರೆ: "ಎಲ್ಲರೂ ಅನ್ನರಸವಿಕಾರವಾಗಿರುತ್ತಾರೆ ; ಎಲ್ಲಾ ಪ್ರಾಣಿಗಳೂ ಬ್ರಹ್ಮದಿಂದಲೇ ಹುಟ್ಟಿರುತ್ತಾರೆ. ಹೀಗಿರುವಲ್ಲಿ ಅನ್ನದಿಂದ ಮನುಷ್ಯನು ಹುಟ್ಟಿದನು- ಎಂದೇಕೆ ಶ್ರುತಿಯಲ್ಲಿ ಹೇಳಿದೆ ? ಎಂದರೆ ಅವನಿಗೇ ಪ್ರಾಧಾನ್ಯವಿರುವದರಿಂದ. ಅವನ ಪ್ರಾಧಾನ್ಯವೆಂದರೆ ಯಾವದು?- ಎಂದರೆ ಕರ್ಮಜ್ಞಾನಗಳಲ್ಲಿ ಅಧಿಕಾರವಿರುವದು. ಪುರುಷನೇ ಶಕ್ತನು, ಪುರುಷಾರ್ಥವನ್ನು ಬಯಸುವವನು, ಶಾಸ್ತ್ರದಲ್ಲಿ ಹೇಳಿರುವ ಪುರುಷಾರ್ಥಸಾಧನಕ್ಕೆ ಅವನು ಅನರ್ಹನೆಂದು ಹೇಳಿಲ್ಲ ; ಆದ್ದರಿಂದ ಕರ್ಮಜ್ಞಾನಗಳಿಗೆ ಅವನೇ ಅಧಿಕಾರಿಯು. ಮನುಷ್ಯನೇ ಎಲ್ಲಕ್ಕೂ ಹೆಚ್ಚಿನ ಪ್ರಜ್ಞಾನವುಳ್ಳವನು, ವಿಷಯಸ್ಥಿತಿಯನ್ನು ಅರಿತು ಮಾತನಾಡುತ್ತಾನೆ, ಅರಿತು ಕಾಣುತ್ತಾನೆ, ನಾಳೆಯಾಗುವದನ್ನು ಅರಿತುಕೊಳ್ಳಬಲ್ಲನು, ಲೋಕಾಲೋಕಗಳನ್ನು ಅರಿಯಬಲ್ಲನು, ಮರ್ತ್ಯವಾದ ಸಾಧನದಿಂದ ಅಮೃತವನ್ನು ಪಡೆಯುವದಕ್ಕೆ ಇಚ್ಛಿಸುತ್ತಾನೆ. ಇಂಥ ಸ್ವಭಾವವು ವನಿಗಿರುತ್ತದೆಯೇ ಹೊರತು ಮಿಕ್ಕ ಪ್ರಾಣಿಗಳಿಗಿಲ್ಲ ; ಅವುಗಳಿಗೆ ಹಸಿವುನೀರಡಿಕೆಗಳ ತಿಳಿವಳಿಕೆಯೇ ತಿಳಿವಳಿಕೆ- ಎಂದು ಶ್ರುತಿಯು ಹೇಳುತ್ತದೆ. ಮನುಷ್ಯನನ್ನು ಕುರಿತೇ 'ಆ ಬ್ರಹ್ಮವೇ ಸತ್ಯವು, ಅದೇ ಎಲ್ಲಕ್ಕೂ ಆತ್ಮನು, ಅದೇ ನೀನು' ಎಂಬ ವೇದಾಂತೋಪದೇಶವು ಬಂದಿರುತ್ತದೆ. ವಿಜ್ಞಾನಶಾಸ್ತ್ರದಲ್ಲಿ ಭಾವಿಸಿರುವಂತೆ ಇಲ್ಲಿ ಮನುಷ್ಯನು ಕ್ರಿಮಿಗಳಿಗಿಂತಲೂ ಕಡಿಮೆಯ ಬೆಲೆಯುಳ್ಳವನು ಎಂದು ಪರಿಗಣಿಸಿಲ್ಲ; ಅವನು ಸರ್ವಸಾರವಾದ ಪರಮಾತ್ಮವಸ್ತುವೇ ಎಂದು ಅವನ ಸ್ಥಾನವನ್ನು ಮೇಲಕ್ಕೇರಿಸಿ ತೋರಿಸಿರುತ್ತದೆ.

ವೇದಾಂತವು ಮನುಷ್ಯಸಾಮಾನ್ಯಕ್ಕೆ ಹೇಳಿದ್ದು. 'ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ' ಮನುಷ್ಯರು ಎಲ್ಲಾ ಪ್ರಕಾರದಿಂದಲೂ ನನ್ನ ಮಾರ್ಗವನ್ನೇ ಅನುಸರಿಸುತ್ತಿರುತ್ತಾರೆ- ಎಂದು ಭಗವಂತನು ಅರ್ಜುನನಿಗೆ ಹೇಳಿರುತ್ತಾನೆ. ಪರಮಪುರುಷನಾದ ಆತ್ಮನು 'ಜನರ ಹೃದಯದಲ್ಲಿರುತ್ತಾನೆ' ಎಂದು ಶ್ರುತಿ ಹೇಳುತ್ತಿದೆ. ದೇವತೆಗಳು, ಋಷಿಗಳು, ಮನುಷ್ಯರು-ಯಾರೇ ಆಗಲಿ, ಯಾರುಯಾರು 'ನಾನು ಬ್ರಹ್ಮವು' ಎಂದು ಅರಿತುಕೊಳ್ಳುವರೋ ಅವರವರು ಆ ಬ್ರಹ್ಮವೇ ಆಗಿ ಸರ್ವಾತ್ಮರಾಗಿರುತ್ತಾರೆ-ಎಂದು ಬೃಹದಾರಣ್ಯಕಶ್ರುತಿ; ಈಗಲೂ ಯಾವನು ಅರಿತುಕೊಳ್ಳುವನೋ ಅವನಿಗೆ ಇದೇ ಫಲವು ಆಗುತ್ತದೆ-ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ತತ್ತ್ವಜ್ಞಾನವುಂಟಾದರೆ ಈಗಲೂ ಇಲ್ಲಿಯೇ ಬ್ರಹ ಪ್ರಾಪ್ತಿಯಾಗುವದು ಎಂಬಿದನ್ನು ದೇಶಭಾಷೆಗಳಲ್ಲಿಕೂಡ ಸಾಮಾನ್ಯರಿಗೂ

ಗೊತ್ತಾಗುವಂತೆ ಜ್ಞಾನಿಗಳು ಉಪದೇಶಿಸಿರುತ್ತಾರೆ. 'ತಿಳಿದರೆ ನೀ ಶಿವ ದಿಟ ದಿಟ' ಎಂಬ ತತ್ತ್ವವನ್ನು ನಿಮ್ಮಲ್ಲಿ ಕೆಲವರಾದರೂ ಕೇಳಿರಬಹುದು.

ಈ ಜಗತ್ತೆಲ್ಲವೂ ಪರಮಾರ್ಥವಾಗಿ ಬ್ರಹ್ಮವಸ್ತುವೇ ಎಂಬ ಉಪದೇಶವು ವೇದಾಂತಕ್ಕೇ ಮೀಸಲು. 'ಬ್ರಹ್ಮೈವೇದಂ ವಿಶ್ವಮ್', 'ವಾಸುದೇವಃ ಸರ್ವಮಿತಿ', 'ಸಕಲಮಿದಮಹಂ ಚ ವಾಸುದೇವಃ'– ಎಂಬ ಶ್ರುತಿಸ್ಮೃತಿಪುರಾಣ ವಚನಗಳನ್ನು ನೆನಪಿಗೆ ತಂದುಕೊಂಡರೆ ಇಂಥ ವಚನಗಳು ಭೂಮಂಡಲದಲ್ಲಿ ಮತ್ತೆ ಯಾವ ಧಾರ್ಮಿಕಗ್ರಂಥಗಳಲ್ಲಿಯೂ ಇಲ್ಲವೆಂಬುದು ಮನದಟ್ಟಾಗುವದು.

ಈ ಪರಮಾರ್ಥೋಪದೇಶವನ್ನು ತತ್ತ್ವಶಾಸ್ತ್ರಗಳಲ್ಲಿರುವಂತೆ ಬರಿಯ ಯುಕ್ತಿಯಿಂದ ಇಲ್ಲಿ ಸಾಧಿಸುವದಕ್ಕೆ ಹೊರಟಿಲ್ಲ ; ವಾಕ್ಯಪ್ರಾಮಾಣ್ಯವನ್ನು ಶ್ರದ್ಧೆಯಿಂದ ನಂಬಬೇಕೆಂದೂ ಹೇಳಿಲ್ಲ. ಅದನ್ನು ಅನುಭವಕ್ಕೆ ಹೊಂದಿಸಿಯೇ ತಿಳಿಸಿರುತ್ತದೆ. 'ಮೇಧಾವೀ ಗಂಧಾರಾನೇವೋಪಸಂಪದ್ಯೇತೈವಮೇವೇಹಾऽऽಚಾರ್ಯವಾನ್ ಪುರುಷೋವೇದ' (ಛಾಂ. ೬–೧೪–೨) ಒಬ್ಬ ಗಾಂಧಾರದೇಶದ ಸಾಹುಕಾರನನ್ನು ಕಳ್ಳರು ಕಣ್ಣುಕಟ್ಟಿ ದೂರದ ಕಾಡಿಗೆ ಒಯ್ದು ಬಿಟ್ಟುಬಿಟ್ಟಿದ್ದರು; ಅವನು ದಾರಿಹೋಕರ ಉಪದೇಶದಿಂದ ತನ್ನ ದೇಶದ ಮಾರ್ಗವನ್ನು ತಿಳಿದು ಕೊಂಡು, ತನ್ನ ಬುದ್ಧಿಯನ್ನೂ ಉಪಯೋಗಿಸಿಕೊಂಡು, ತನ್ನ ಊರನ್ನೇ ತಲುಪಿದನು. ಹಾಗೆಯೇ ಆಚಾರ್ಯನ ಉಪದೇಶವನ್ನು ಪಡೆದುಕೊಂಡಿರುವ ಮನುಷ್ಯನು ತನ್ನ ಆತ್ಮನಾದ ಪರಮಾರ್ಥ ತತ್ತ್ವವನ್ನು ಅರಿತುಕೊಳ್ಳಬಹುದು– ಎಂದು ಶ್ರುತಿಯಲ್ಲಿ ಹೇಳಿದೆ. ಶ್ರುತಿವಾಕ್ಯ, ಆಚಾರ್ಯನ ವಿವರಣೆಯಿಂದ ಯುಕ್ತಿಗೆ ಹೊಂದಿಸಿಕೊಳ್ಳುವದು, ತನ್ನ ಅನುಭವ–ಎಲ್ಲವನ್ನೂ ಸೇರಿಸಿಕೊಂಡೇ ಪರಮಾರ್ಥ ವನ್ನು ಕಂಡುಕೊಳ್ಳುತ್ತಾನೆ ಎಂದು ಇಲ್ಲಿ ಸ್ಪಷ್ಟಪಡಿಸಿರುತ್ತದೆ.

'ಆತ್ಮನು ಹೃದಯದಲ್ಲಿರುತ್ತಾನೆ ; ಆದ್ದರಿಂದಲೇ ಇದಕ್ಕೆ ಹೃದಯಮ್ ಎಂದು ಹೆಸರು' ಎಂದು ಪರಮಾತ್ಮನನ್ನು ತೀರ ಹತ್ತಿರದಲ್ಲಿ ನಮ್ಮನಮ್ಮ ಹೃದಯ ದಲ್ಲಿಯೇ ಕಂಡುಕೊಳ್ಳಬಹುದು ಎಂದು ಶ್ರುತಿಯಲ್ಲಿ ತಿಳಿಸಿರುತ್ತದೆ. 'ಈಶ್ವರನು ಎಲ್ಲಾ ಪ್ರಾಣಿಗಳ ಹೃದಯದಲ್ಲಿಯೂ ಇರುತ್ತಾನೆ ; ಅವನನ್ನೇ ಶರಣುಹೊಂದು' 'ಕೆಲವರು ಧ್ಯಾನಯೋಗದಿಂದ ತಮ್ಮಲ್ಲಿಯೇ ಈ ಪರಮಾತ್ಮನನ್ನು ಕಂಡುಕೊಳ್ಳು ತ್ತಾರೆ, ಕೆಲವರು ಸಾಂಖ್ಯಯೋಗದಿಂದ ಕಂಡುಕೊಳ್ಳುತ್ತಾರೆ, ಮತ್ತೆ ಕೆಲವರು ಹೀಗೆಂದು ತಿಳಿಯಲಾರದೆ ಮತ್ತೊಬ್ಬರಿಂದ ಕೇಳಿ ತಿಳಿದುಕೊಂಡು ಉಪಾಸನೆ ಮಾಡುತ್ತಾರೆ' (ಗೀ.) –ಇವೇ ಮುಂತಾದ ಶ್ರುತಿಸ್ಮೃತಿವಚನಗಳಲ್ಲಿ ಮನುಷ್ಯನು ಅಂತಃಕರಣದ ಎಲ್ಲಾ ಭಾಗಗಳನ್ನೂ ಉಪಯೋಗಿಸಿಕೊಂಡು ಈ ಆತ್ಮನನ್ನು ತಿಳಿಯಬೇಕಾಗಿರುವದೆಂದು ತರ್ಕ, ಹೃದಯ, ಸಂಕಲ್ಪಶಕ್ತಿ– ಎಲ್ಲಕ್ಕೂ ಹೊಂದಿಸಿ ಹೇಳಿರುತ್ತದೆ.

ಮನುಷ್ಯನ ಕರ್ತವ್ಯವೇನು ? ಇಹಕ್ಕೆ, ಪರಕ್ಕೆ, ಪರಮಪುರುಷಾರ್ಥಕ್ಕೆ ಎಲ್ಲಕ್ಕೂ ಬೇಕಾದ ಉಪದೇಶವು ಇಲ್ಲಿ ಸಿಕ್ಕುತ್ತದೆ. ತನ್ನ ಇಷ್ಟಫಲಕ್ಕಾಗಿ ಕರ್ಮವನ್ನು ಮಾಡಬೇಕು, ಧರ್ಮವನ್ನು ಆಚರಿಸಬೇಕು, ಅಧ್ಯಯನಮಾಡಬೇಕು, ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ನಮ್ಮ ಕರ್ತವ್ಯವೆಲ್ಲವೂ ಜ್ಞಾನದಲ್ಲಿ ಪರಿಸಮಾಪ್ತವಾಗುತ್ತದೆ. 'ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ' (ಗೀ.). 'ಏತಜ್ಞೇಯಂ ನಿತ್ಯಮೇವಾತ್ಮ ಸಂಸ್ಥಂ (ಶ್ವೇ) ಆತ್ಮಜ್ಞಾನಕ್ಕಾಗಿಯೇ ಮಿಕ್ಕ ಎಲ್ಲಾ ಕರ್ತವ್ಯವೂ ಬೇಕು.

ಕರ್ತವ್ಯಕ್ಕೆ ಆಧಾರವೇನು ? ಬಾಹ್ಯಪ್ರಪಂಚ, ಶಾಸ್ತ್ರ, ತನ್ನ ಅನುಭವ –ಎಲ್ಲವನ್ನೂ ಹೊಂದಿಸಿಕೊಂಡು ಬಳಸಬೇಕು. 'ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ', ಶಾಸ್ತ್ರವು ನಮಗೆ ಹಿತವನ್ನೇ ಹೇಳುತ್ತಿದೆ; ಆದ್ದರಿಂದಲೇ ಇಹಪರಗಳೆರಡೂ ಸಿದ್ಧಿಸುತ್ತವೆ, ಪರಮಪುರುಷಾರ್ಥವೂ ಸಿಕ್ಕುತ್ತದೆ ಅದನ್ನು ಅಸಡ್ಡೆಮಾಡಿದರೆ ಇಹ, ಪರ– ಯಾವದೂ ಇಲ್ಲ.

'ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ' (ಬೃ) ಈ ನಮ್ಮ ಆತ್ಮನೇ ಮಹಾಂತನೂ ಅಜನೂ ಅಜರನೂ ಅಮರನೂ ಅಮೃತನೂ ಅಭಯನೂ ಆದ ಬ್ರಹ್ಮವಾಗಿರುತ್ತಾನೆ. ಹೀಗೆಂದು ತಿಳಿದವನು ಅಭಯಬ್ರಹ್ಮವೇ ಆಗಿಬಿಡುತ್ತಾನೆ' ಎಂಬ ದಿವ್ಯಸಂದೇಶವನ್ನು ಸಾರುತ್ತಿದೆ, ವೇದಾಂತ. ಚಕ್ರವರ್ತಿಯಾದವನು ತಿರುಪೆಗೆ ಹೊರಟಿರುವಂತೆ ಈ ಜೀವನು ನಿಜವಾಗಿ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾದ ಬ್ರಹ್ಮವೇ ಆಗಿರುತ್ತಿದ್ದರೂ ಸಂಸಾರಿಯಾಗಿ ದುಃಖಿಸುತ್ತಿದ್ದಾನೆ. ನೀನು ಸರ್ವಸ್ವತಂತ್ರನಾದ ಪರಮಾತ್ಮನೇ ಎಂದು ಶ್ರುತಿಸ್ಮೃತಿ ಪುರಾಣಗಳು ಹಾಡಿಹೊಗಳುತ್ತಿರುತ್ತವೆ.

ಈ ಜ್ಞಾನಕ್ಕೆ ನೀತಿಯು ತಳಹದಿ. 'ನಾವಿರತೋ ದುಶ್ಚರಿತಾತ್' ಕೆಟ್ಟನಡತೆಯನ್ನು ಬಿಡದವನಿಗೆ ಈ ಜ್ಞಾನವು ದಕ್ಕದು. ಧರ್ಮವ್ಯಾಧನಂತೆ ಸ್ವಕರ್ಮವನ್ನು (ಅದು ಎಷ್ಟೇ ಕೀಳಾಗಿರಲಿ) ಮಾಡಿದವನಿಗೇ ಜ್ಞಾನವು. 'ಆತ್ಮಾಪಮ್ಯೇನ ಸರ್ವತ್ರ' ತನ್ನಂತೆಯೇ ಮತ್ತೊಬ್ಬರ ಸುಖದುಃಖಗಳನ್ನು ಕಾಣುವಾತನು ಪರಮಯೋಗಿ, 'ಸರ್ವಭೂತಹಿತೇ ರತಾಃ' ಜ್ಞಾನಿಗಳು ಸರ್ವಪ್ರಾಣಿಗಳಿಗೂ ಹಿತವನ್ನು ಮಾಡುವದರಲ್ಲಿ ನಿರತರಾಗಿರುತ್ತಾರೆ. ಈ ವಿದ್ಯೆಯಲ್ಲಿಯೇ ಎಲ್ಲಾ ವಿದ್ಯೆಗಳೂ ಪ್ರತಿಷ್ಠಿತವಾಗಿವೆ. ವೇದಾಂತವು ಜನಜೀವನದಮೇಲೆ ಪರಿಣಾಮವಾಗುವಂತೆ ಅದರ ತತ್ತ್ವಗಳು ಎಲ್ಲಾ ಭಾಷೆಗಳಲ್ಲಿಯೂ ಇರುತ್ತವೆ. ಈ ಎಲ್ಲಾ ಕಾರಣದಿಂದ ವೇದಾಂತವೇ ಜೀವಂತದರ್ಶನ.

# ೩೯. ಸ್ತೋತ್ರ, ಜಪ, ಕೀರ್ತನೆ

(27-8-'2)

ವೇದಾಂತವು ಜೀವಂತದರ್ಶನವಾದ್ದರಿಂದ ಮನುಷ್ಯಸ್ವಭಾವಕ್ಕೆ ಸೇರಿದ ಯುಕ್ತಿಭಾಗ ವೇದನಾಭಾಗ, ಅನುಭವ- ಎಲ್ಲಕ್ಕೂ ಹೊಂದಿಕೆಯಾಗಿರುವಂತೆ ಅದರಲ್ಲಿ ಉಪದೇಶಗಳಿರುತ್ತವೆ ; ಅದರಲ್ಲಿ ಜ್ಞಾನಕ್ಕೆ ಬೇಕಾದ ಸಾಧನೆಗಳೆಲ್ಲವನ್ನೂ ಹೇಳಿರುತ್ತದೆ. ಶಾಸ್ತ್ರೋಕ್ತಕರ್ಮಗಳನ್ನು ಮಾಡಿ ಚಿತ್ತಶುದ್ಧಿಯಾದ ಬಳಿಕ ವೈರಾಗ್ಯದಿಂದ ಕರ್ಮಸಂನ್ಯಾಸವನ್ನು ಮಾಡಿದ ಮಧ್ಯಮಾಧಿಕಾರಿಗಳಿಗೆ ಓಂಕಾರದ ಧ್ಯಾನದಿಂದ ಪ್ರತೀಕೋಪಾಸನೆಯನ್ನೂ ಅರ್ಥವಿಚಾರದಿಂದ ತಾತ್ತ್ವಿಕ ಜ್ಞಾನವನ್ನು ಪಡೆಯುವ ಮಾರ್ಗಗಳನ್ನೂ ಅಲ್ಲಿ ತಿಳಿಸಿರುತ್ತದೆ ವೈದ್ಯರು ಚಿಕ್ಕಮಕ್ಕಳಿಗೂ ರೋಗಿಗಳಿಗೂ ಅವರವರ ಶಕ್ತಿಗೆ ತಕ್ಕಂತೆ ಆಹಾರದ ಶಕ್ತಿಯನ್ನು ಇಳಿಸಿ ಜೀರ್ಣವಾಗುವಂತೆ ಮಾಡಿಕೊಡುವ ಹಾಗೆ, ಶ್ರುತಿಯಲ್ಲಿ ಹೇಳಿರುವ ಓಂಕಾರಾದ್ಯುಪಾಸನೆಯನ್ನೇ ನಾಮಜಪವೇ ಮುಂತಾದವುಗಳ ವೇಷದಿಂದ ಪುರಾಣಗಳಲ್ಲಿ ಉಪದೇಶಿಸಿರುತ್ತದೆ.

ಭಗವಂತನು ತನ್ನ ಮೂಲರೂಪದಿಂದ ನಿರಾಕಾರನಾಗಿ ನಿರ್ಗುಣನಾಗಿಯೇ ಇದ್ದರೂ ವೈಕುಂಠಾದಿಲೋಕಗಳಲ್ಲಿ ಸಾಕಾರನಾಗಿ ಸಗುಣನಾಗಿಯೂ ದೇವತೆಗಳಿಗೆ ಕಾಣಿಸಿಕೊಂಡಂತೆ ಭೂಲೋಕದಲ್ಲಿ ಮನುಷ್ಯರೂಪದಿಂದಲೂ ಅವತರಿಸಿ ತನ್ನ ಗುಣಕರ್ಮಲೀಲೆಗಳ ಸ್ಮರಣೆಯಿಂದ ಜನರು ಉದ್ಧಾರವಾಗುವಂತೆ ಅನುಗ್ರಹಿಸಿರುತ್ತಾನೆ. ಭಕ್ತರ ಮೇಲಿನ ಪ್ರೇಮದಿಂದ ಹೀಗೆ ಅಜನೂ ಅವ್ಯಯನೂ ಅಶರೀರನೂ ಆಗಿರುವ ಅಪರಮಾತ್ಮನು ಮನುಷ್ಯಾದಿದೇಹಗಳನ್ನು ಧರಿಸಿ ಜನಿಸಿದವನಂತೆ ಕೆಳಗಣಮಟ್ಟಕ್ಕೆ ಇಳಿದು ತನ್ನ ದರ್ಶನಾದಿಗಳ ಲಾಭವನ್ನು ಭಕ್ತರಿಗೆ ಮಾಡಿಕೊಟ್ಟಿದ್ದನ್ನು 'ಅವತಾರ' (ಇಳಿದುಬಂದದ್ದು) ಎಂದು ಪುರಾಣಗಳಲ್ಲಿ ಕರೆದಿರುತ್ತದೆ. ಆತನ ಗುಣಕರ್ಮಲೀಲೆಗಳನ್ನು ನೆನಪಿಗೆ ತಂದುಕೊಡುವದಕ್ಕೆಂದು ಋಷಿಗಳು ಅವನ ಬಗೆಬಗೆಯ ನಾಮಗಳನ್ನು ಸಂಗ್ರಹಿಸಿಕೊಟ್ಟಿರುತ್ತಾರೆ.

ಒಮ್ಮೆ ಧರ್ಮರಾಯನು ಭೀಷ್ಮಾಚಾರ್ಯರನ್ನು ಕುರಿತು ಈ ರೀತಿ ಪ್ರಶ್ನೆಯನ್ನು ಮಾಡಿದನು :

ಕಿಮೇಕಂ ದೈವತಂ ಲೋಕೇ ಕಿಂ ವಾಪ್ಯೇಕಂ ಪರಾಯಣಮ್ |
ಸ್ತುವನ್ತಃ ಕಂ ಕಮರ್ಚನ್ತಃ ಪ್ರಾಪ್ನುಯುರ್ಮಾನವಾಃ ಶುಭಮ್ ||

1. ನಡುವೆ ಎರಡು ದಿನಗಳು ಉಪದೇಶವಾಗಲಿಲ್ಲ.

# ೫. ವೇದಾಂತದಲ್ಲಿ ಶಾಸ್ತ್ರಪ್ರಾಮಾಣ್ಯ

(22-7-62)

ವೇದಾಂತವು ಜೀವಂತದರ್ಶನವೆಂದು ತೋರಿಸುವದಕ್ಕಾಗಿ ಅದರ ರೂಪ ರೇಖೆಯನ್ನು ಚಿತ್ರಿಸಿದ್ದಾಯಿತು. ಇನ್ನು ಅದರ ಒಂದೊಂದು ಅವಯವವನ್ನೂ ಬಿಚ್ಚಿತೋರಿಸುವದು ಉಳಿದಿದೆ. ಈ ದಿನ "ಶಾಸ್ತ್ರಪ್ರಾಮಾಣ್ಯ"ವನ್ನು ಕುರಿತು ಮಾತಾಡೋಣ.

ಶಾಸ್ತ್ರಪ್ರಾಮಾಣ್ಯವನ್ನು ಒಪ್ಪಿಕೊಂಡೇ ಎಲ್ಲಾ ಮತಗಳೂ ಹೊರಟಿರುತ್ತವೆ. ಇದರಲ್ಲಿ ವೇದಾಂತದಲ್ಲಿ ಹೆಚ್ಚುಗಾರಿಕೆಯೇನು ?-ಎಂಬ ಪ್ರಶ್ನೆಯು ಎದ್ದು ಕೊಳ್ಳುವದು ಸ್ವಾಭಾವಿಕವಾಗಿರುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ಕಂಡು ಕೊಳ್ಳುವ ಮುಂಚೆ ನಿಕ್ಕವರು ಶಾಸ್ತ್ರಪ್ರಾಮಾಣ್ಯವನ್ನು ಹೇಗೆ ಇಟ್ಟುಕೊಂಡಿದಾರೆ ? -ಎಂಬುದನ್ನು ನಾವು ಪರೀಕ್ಷಿಸಬೇಕಾಗುತ್ತದೆಯಷ್ಟೆ ? ಆ ಕೆಲಸವನ್ನು ಮೊದಲು ಮಾಡೋಣ.

ಸಾಂಖ್ಯರಿಗೆ ಶಾಸ್ತ್ರವು ಆಪ್ತವಾಕ್ಯದ ಪ್ರಕಾರದಿಂದ ಪ್ರಮಾಣವಾಗಿರುತ್ತದೆ. ಲಂಡನ್ನಿನಲ್ಲಿ 'ಹೈಡ್‌ಪಾರ್ಕ್' ಇದೆ ಎಂಬುದನ್ನು ಹೇಗೆ ಅದನ್ನು ಕಂಡವರ ವಾಕ್ಯದಿಂದ ನಂಬುವೆವೋ ಹಾಗೆಯೇ ವೇದವಾಕ್ಯವನ್ನು ಪ್ರಮಾಣವಾಗಿ ಹಿಡಿಯಬೇಕು-ಎಂಬುದು ಸಾಂಖ್ಯರ ಅಭಿಪ್ರಾಯ. ವ್ಯಾಪಾರಮಾಡುವ ಹುಡುಗ ಯಜಮಾನನನ್ನು ಕೇಳಿ ಮಾಡುವಂತೆ ನಾವು ತತ್ತ್ವನಿರ್ಣಯಕ್ಕೆ ಶಾಸ್ತ್ರವನ್ನು ಕೇಳಬೇಕು ಎಂಬುದು ಅವರ ಮತ. ಸಾಂಖ್ಯರು ಅನುಮಾನಕ್ಕೆ ಹೆಚ್ಚು ಬೆಲೆಯನ್ನು ಕೊಡುವವರು. ಅನುಮಾನವು ಕಂಡಿರುವದರ ಆಧಾರದಿಂದ ಕಾಣದೆ ಇರುವದನ್ನು ಸಮರ್ಥಿಸುತ್ತದೆ ; ಹೊಗೆಯನ್ನು ಕಂಡೇ ಅಲ್ಲವೆ, ಬೆಂಕಿಯಿದೆ ಎಂದು ನಿಶ್ಚಯಿಸುವೆವು ? ಆದ್ದರಿಂದ ಅನುಮಾನವು ಅನುಭವಕ್ಕೆ ಹತ್ತಿರ. ಆದರೆ ಶಬ್ದಪ್ರಮಾಣವು ಹೀಗಲ್ಲ. 'ಈ ಪರ್ವತದಲ್ಲಿ ಬೆಂಕಿ ಇದೆ ಯಂತೆ' ಎಂದು ಶಬ್ದವು ಐತಿಹ್ಯಮಾತ್ರದಿಂದ ಬೆಂಕಿಯು ಇರವನ್ನು ಹೇಳುವದರಿಂದ ಅದು ಅನುಭವಕ್ಕೆ ದೂರವಾಯಿತು. ಒಬ್ಬರ ಮಾತಿನಮೇಲೆ ಇಲ್ಲಿ ಬೆಂಕಿಯಿದೆ ಎಂದು ಆಗುವ ತಿಳಿವು ನಿಜವಾಗಿ ಬೆಂಕಿಯಿದೆ ಎಂಬ ಅನುಭವಕ್ಕೆ ಹೇಗೆತಾನೆ ಹತ್ತಿರವಾದೀತು ? -ಎಂಬುದು ಸಾಂಖ್ಯರ ಅಭಿಪ್ರಾಯ. ಆದ್ದರಿಂದ ಅವರು ಯಾವ ತತ್ತ್ವವನ್ನಾದರೂ ನಿಶ್ಚಯಿಸುವದಕ್ಕೆ ಅನುಮಾನವನ್ನೇ ಮೊದಲು ಮುಂದಕ್ಕೆ ತರುತ್ತಾರೆ. ಅದಕ್ಕೆ ಪೋಷಕವೆಂದು ಬೇಕಾದರೆ ಶಬ್ದವನ್ನೂ ಉಪಯೋಗಿಸಬಹುದೆಂದು ಅವರು ತಿಳಿಯುತ್ತಾರೆ. ಆದ್ದರಿಂದ ಅವರ ಮತದಲ್ಲಿ ಶಾಸ್ತ್ರಕ್ಕೆ ಹಿರಿಯಾದ ಸ್ಥಾನವಿದೆ ಎನ್ನುವದಕ್ಕೆ ಆಗುವದಿಲ್ಲ.

ನೈಯಾಯಿಕರು ಈಶ್ವರೋಕ್ತವಾಗಿರುವದರಿಂದ ಶಾಸ್ತ್ರವು ಪ್ರಮಾಣವೆನ್ನುತ್ತಾರೆ. ಆದರೆ ಈಶ್ವರನು ಮೊದಲೇ ಸಿದ್ಧನಾಗಿದ್ದರೆ ಶಾಸ್ತ್ರವೇತಕ್ಕೆ ? ಶಾಸ್ತ್ರದಿಂದಲೇ ಈಶ್ವರನನ್ನು ಸಿದ್ಧಮಾಡಬೇಕಾಗಿದೆಯಲ್ಲವೆ ? ಹೀಗೆ ಇಲ್ಲಿ ಸರ್ವಜ್ಞನಾದ ಈಶ್ವರನು ಹೇಳಿದ್ದರಿಂದ ಶಾಸ್ತ್ರವು ಪ್ರಮಾಣ ; ಶಾಸ್ತ್ರಪ್ರಮಾಣದಿಂದಲೇ ಈಶ್ವರನು ಸರ್ವಜ್ಞನೆಂದು ಗೊತ್ತಾಗಬೇಕಾಗಿದೆ !

ಆಗಮಪ್ರಾಮಾಣ್ಯವನ್ನು ಒಪ್ಪುವ ಶೈವರು, ವೈಷ್ಣವರು– ಮೊದಲಾದವರು ತಮ್ಮತಮ್ಮ ಆಗಮವು ಸರ್ವಜ್ಞನಾದ ಪರಮೇಶ್ವರನಿಂದ ಉಕ್ತವಾದದ್ದರಿಂದ ಪ್ರಮಾಣವು ಎಂದೇ ತಿಳಿಯುತ್ತಾರೆ. ಸರ್ವಜ್ಞನಾದ ವಾಸುದೇವನು, ಶಂಭುವು ಅಥವಾ ದೇವಿಯು ಹೇಳಿದ್ದರಿಂದ ತಮ್ಮತಮ್ಮ ಆಗಮವು ಪ್ರಮಾಣವು ಎಂಬುದು ಅವರ ಮತ. ನೈಯಾಯಿಕರ ಮತಕ್ಕೂ ಅವರ ಮತಕ್ಕೂ ಯಾವ ವೈಲಕ್ಷಣ್ಯವೂ ಕಾಣುವದಿಲ್ಲ ; ಆದ್ದರಿಂದ ಅವರ ಮತದಲ್ಲಿಯೂ ಶಾಸ್ತ್ರಪ್ರಾಮಾಣ್ಯಸಿದ್ಧಿಯು ಆಗುವದು ಕಷ್ಟವೇ. ಬುದ್ಧನು ಸರ್ವಜ್ಞನಾದ್ದರಿಂದ ಅವನು ಹೇಳಿರುವ ಆಗಮಗಳು ಪ್ರಮಾಣವೆಂದೂ ವೇದವು ಪ್ರಮಾಣವೆನ್ನುವದಕ್ಕೆ ಯಾವ ಆಧಾರವೂ ಇಲ್ಲವೆಂದೂ ಧರ್ಮಕೀರ್ತಿಯೇ ಮೊದಲಾದ ಬೌದ್ಧರು ಅಭಿಪ್ರಾಯಪಟ್ಟಿರುತ್ತಾರೆ ; ಅಲ್ಲಿಯೂ ಇದೇ ದೋಷವಿರುತ್ತದೆ. ಜೈನರ ಆಗಮಗಳ ಪ್ರಾಮಾಣ್ಯವಿಚಾರವೂ ಹೀಗೆಯೇ.

ಈಗ್ಗೆ ಕ್ರಿಸ್ತಿಯನ್, ಪಾರ್ಸಿ, ಹೀಬ್ರೂ, ಮಹಮ್ಮದೀಯ–ಈ ಮತಗಳೂ ಇವೆ. ಇದರಲ್ಲಿ ಹೀಬ್ರೂಜನರ ನಂಬಿಕೆಯಲ್ಲಿ ಮೋಸಸ್ ಎಂಬಾತನಿಗೆ ಈಶ್ವರನು ಬರೆದುಕೊಟ್ಟ ದಶಧರ್ಮಗಳು ಪ್ರಮಾಣ. ಅವನಿಗೆ ಈಶ್ವರನು ಒಂದು ಗಿಡದ ನಡುವೆ ಬೆಂಕಿಯ ರೂಪದಲ್ಲಿ ಕಾಣಿಸಿಕೊಂಡನಂತೆ. ಕ್ರೈಸ್ತನ ವಿಷಯದಲ್ಲಿ ಲ್ಯೂಕ್. ಮ್ಯಾತ್ಯು ಜಾನ್– ಮೊದಲಾದವರು ಬರೆದಿರುವ ಗ್ರಂಥಗಳನ್ನು ಪ್ರಮಾಣವೆಂದು ಹಿಡಿದಿದೆ. ಏಕೆಂದರೆ ಅವರು ಈಶ್ವರಪ್ರೇರಿತರಾಗಿದ್ದರೆಂದು ಕ್ರಿಸ್ತಿಯನ್‌ಜನರ ನಂಬಿಕೆಯಿದೆ. ಇಲ್ಲಿ ಅವರು ಈಶ್ವರಪ್ರೇರಿತರಾಗಿದ್ದರೆಂಬುದಕ್ಕೆ ಪ್ರಮಾಣವನ್ನು ಎಲ್ಲಿಂದ ತರಬೇಕು ? ಅಲ್ ಕೊರಾನ್ ಎಂಬ ಗ್ರಂಥವು ಪೈಗಂಬರ್ ಮಹಮ್ಮದನು ಸಮಾಧಿಯ ದೆಸೆಯಲ್ಲಿ ಉಚ್ಚರಿಸಿದ ಮಂತ್ರಗಳಂತೆ; ಅವು ಅರಬ್ಬೀಭಾಷೆಯಲ್ಲಿವೆ. ಆ ಮಂತ್ರಗಳಂತೆ ಪರಿಶುದ್ಧವಾದ ಅರಬ್ಬೀಭಾಷೆಯಲ್ಲಿ ಯಾರೂ ವಾಕ್ಯರಚನೆಯನ್ನು ಮಾಡಲಾಗಲಿಲ್ಲವಾದ್ದರಿಂದ ಕೊರಾನ್ ಗ್ರಂಥವು ಪ್ರಮಾಣ ಎಂದು ಮುಸಲ್ಮಾನರ ನಂಬಿಕೆ. ಸೋರೋ ಆಸ್ಟರನು ತಂದ ಆಗಮವೇ ಸೆಂಡ್ ಅವೆಸ್ಟ. ವೇದದಂಥ ಪುರಾತನಭಾಷೆಯಲ್ಲಿರುವ ಆ ಗ್ರಂಥವು ಈಶ್ವರವಾಕ್ಯವೇ ಆದ್ದರಿಂದ ಪ್ರಮಾಣವು.

ಮೀಮಾಂಸಕರು ಅಪೌರುಷೇಯವಾದ್ದರಿಂದ ವೇದವು ಪ್ರಮಾಣ ಎನ್ನುತ್ತಾರೆ. ವೇದವು ಅಪೌರುಷೇಯವಾಗಿದ್ದಿದ್ದರೆ ಅದನ್ನು ಬರೆದವರು ಅಥವಾ

ರಚಿಸಿದವರು ಯಾರೆಂಬುದನ್ನು ಯಾರಾದರೂ ನೆನಪಿನಲ್ಲಿಟ್ಟುಕೊಳ್ಳಬೇಕಾಗಿತ್ತು; ಆದರೆ ಹಾಗಿಲ್ಲ. ಪುರುಷಪ್ರೋಕ್ತವಾಗಿದ್ದರೆ ಮನುಷ್ಯನ ದೋಷಗಳಾದ ಅಶಕ್ತಿ ಮಾಯಾ-ಮುಂತಾದ ದೋಷಗಳು ವೇದಕ್ಕೂ ಅಂಟಿಕೊಳ್ಳುತ್ತಿದ್ದವು ; ಪೌರುಷೇಯವಲ್ಲದ್ದರಿಂದಲೇ ವೇದವು ಪ್ರಮಾಣ-ಎಂಬುದು ಅವರ ಅಭಿಪ್ರಾಯ. ಬೇರೆ ಯಾವದಾದರೊಂದು ಮತದವರೂ ತಮ್ಮ ಧರ್ಮಗ್ರಂಥವು ಹೀಗೆಯೇ ಅಪೌರುಷೇಯವೆಂದು ಹೇಳಿಕೊಂಡರೆ ಮೀಮಾಂಸಕರಿಗೆ ಅಲ್ಲವೆನ್ನುವದಕ್ಕೆ ಯಾವ ಆಧಾರವೂ ಇರುವದಿಲ್ಲ. ಆದ್ದರಿಂದ ಅಪೌರುಷೇಯತ್ವವನ್ನು ಯಾರೂ ಈವರೆಗೆ ತಮ್ಮ ಗ್ರಂಥಕ್ಕೆ ಹೇಳಿಕೊಂಡಿಲ್ಲವೆಂಬ ಕಾರಣದಿಂದಲೇ ವೇದವು ಪ್ರಮಾಣವೆನ್ನುವದು ಸರ್ವಸಂಮತವಾಗಲಾರದು. ವಾಕ್ಯವು ಅಪೌರುಷೇಯವಾಗಿರುವದು ಸಾಧ್ಯವೆ ?- ಎಂಬ ವಿಷಯವನ್ನು ಚರ್ಚೆಗೆ ಇಟ್ಟರೆ ಆ ವಿಷಯಕ್ಕೂ ಒಮ್ಮತವು ಬರಲಾರದು.

ಅಂತೂ ಅವರವರಿಗೆ ಅವರವರ ಗ್ರಂಥವು ಮೆಚ್ಚು. ಆದ್ದರಿಂದ ಯಾರೊಬ್ಬರೂ ಮತ್ತೊಬ್ಬರ ಗ್ರಂಥದ ಪ್ರಾಮಾಣ್ಯವನ್ನು ಒಪ್ಪುವಂತಿಲ್ಲ; ಯಾರೊಬ್ಬರೂ ತಮ್ಮ ಮತಗ್ರಂಥಪ್ರಾಮಾಣ್ಯವನ್ನು ಒಪ್ಪದವರನ್ನು ಮೆಚ್ಚುವಂತಿಲ್ಲ. 'ಇವರು ನಾಸ್ತಿಕರು, ಮ್ಲೇಚ್ಛರು ; ಆದ್ದರಿಂದ ವೇದಪ್ರಾಮಾಣ್ಯವನ್ನು ಅಲ್ಲಗಳೆಯುತ್ತಾರೆ' ಎಂದರೆ 'ಇವನು ಪೇಗನ್, ಕಾಫರ್,....ಆದ್ದರಿಂದ ನಮ್ಮ ಮತಗ್ರಂಥವನ್ನು ಪ್ರಮಾಣವೆಂದು ಒಪ್ಪಲಿಲ್ಲ' ಎಂದು ಅವಶ್ಯವಾಗಿ ಇತರರೂ ನಮ್ಮನ್ನು ದೂಷಿಸುವದು ಖಂಡಿತ.

ಸಾಂಖ್ಯರನ್ನೂ ಯೋಗಿಗಳನ್ನೂ ಬಿಟ್ಟರೆ ಉಳಿದವರೆಲ್ಲ ತಮ್ಮ ತಮ್ಮ ಗ್ರಂಥವನ್ನು ಅನುಸರಿಸುವವರಿಗೆ ಅದೃಷ್ಟವಾದ ಫಲವನ್ನು ಹೇಳುತ್ತಾರೆ. ಕ್ರೈಸ್ತನ ಭಕ್ತರು ದೇವರ ಸಮೀಪದಲ್ಲಿರುತ್ತಾರಂತೆ. ಮಹಮ್ಮದೀಯರ ಸ್ವರ್ಗದಲ್ಲಿ ಎಲ್ಲೆಲ್ಲಿ ನೋಡಿದರೂ ಜುಳುಜುಳು ನೀರು ಹರಿಯುತ್ತಿರುವದಂತೆ ; ಸುಂದರಿಯರಾದ ದೇವಸ್ತ್ರೀಯರಿರುವಂತೆ, ಹೀಗೆಯೇ ವೈದಿಕಕರ್ಮವನ್ನು ಮಾಡಿದರೆ ಸ್ವರ್ಗಲೋಕವು ದೊರೆಯುವದಂತೆ. ಇದು ನಿಜ, ಇದು ಸುಳ್ಳು-ಎಂದು ನಿರ್ಣಯಿಸುವದಕ್ಕೆ ಯಾವ ಆಧಾರವೂ ಸಿಕ್ಕುವಹಾಗಿಲ್ಲ.

ಈಗ ವೇದಾಂತದಲ್ಲಿ ಶಾಸ್ತ್ರಪ್ರಾಮಾಣ್ಯವು ಹೇಗೆ ? ಎಂಬುದನ್ನು ನೋಡೋಣ. 'ವೇದಾಂತ' ಎಂದರೆ ತಿಳಿಯುವದಕ್ಕೆ ಬರುವದನ್ನು ಜ್ಞಾಪಿಸುವ ವಾಕ್ಯ, ಬ್ರಹ್ಮವು ನಮ್ಮ ಆತ್ಮನೆಂಬುದನ್ನು ಶಾಸ್ತ್ರವು ಅಥವಾ ವೇದವು ತಿಳಿಸಿಕೊಡುತ್ತದೆ. ಬ್ರಹ್ಮವು ನಮ್ಮ ಆತ್ಮನೆಂಬುದು ಸತ್ತಮೇಲೆ ತಿಳಿಯಬರುವದಲ್ಲ. ಈಗಲೇ ಬ್ರಹ್ಮವು ನಮ್ಮೆಲ್ಲರ ಆತ್ಮನಾಗಿರುತ್ತದೆ. ಆದ್ದರಿಂದ ಉಪನಿಷತ್ತುಗಳಲ್ಲಿ ಹೇಳಿರುವಂತೆ ವಿಚಾರಮಾಡಿನೋಡಿದರೆ ಈಗಲೇ ನಮ್ಮೆಲ್ಲರಿಗೂ ಒಬ್ಬ ಪರಮಾತ್ಮ

ನೇ ಆತ್ಮನಾಗಿರುತ್ತಾನೆ. ಇಲ್ಲಿ ವೇದಾಂತವಾಕ್ಯವನ್ನು ಪ್ರಮಾಣವೆಂದು ನಂಬ ಬೇಕಾದ ಸಂದರ್ಭವೇನೂ ಇರುವದಿಲ್ಲ. ವಾಕ್ಯವು ಇದ್ದದ್ದನ್ನು ಇದ್ದಂತೆ ತಿಳಿಸಿ ಕೊಡುವದರಿಂದಲೇ ಪ್ರಮಾಣವೆನಿಸಿರುತ್ತದೆ. ಅಷ್ಟೆ. 'ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ' ಎಂದು ಛಾಂದೋಗ್ಯದಲ್ಲಿ ಹೇಳಿರುವದು ಪರೋಕ್ಷ ವಿಷಯವಲ್ಲ, ಯಾವದಾದರೊಂದು ಅವಸ್ಥೆಯಲ್ಲಿ ಆಗುವ ಅನುಭವದಿಂದ ತಿಳಿಯ ಬೇಕಾಗಿರುವ ವಸ್ತುವೂ ಅಲ್ಲ. ಇಡಿಯ ಜಗತ್ತಿನ ತಿರುಳಾಗಿರುವ, ನಮ್ಮೆಲ್ಲರಿಗೂ ಆತ್ಮನಾಗಿರುವ ನಿತ್ಯಸತ್ತ್ವವದು ಆದ್ದರಿಂದಲೇ ಶ್ರೀ ಸುರೇಶ್ವರಾಚಾರ್ಯರು

ನ ಚ ವೇದೋಕ್ತಿತೋ ವೇದಃ ಶ್ರದ್ಧೇಯಾರ್ಥ ಇಹೇಷ್ಯತೇ
ಕಿಂ ತ್ವಮಾನತ್ವಹೇತೂನಾಂ ವೇದವಾಕ್ಯೇಷ್ವಸಂಭವಾತ್ ।
ಪ್ರಾಮಾಣ್ಯಂ ವೇದವಾಕ್ಯಾನಾಂ ನ ಚ ಮಾನಾನ್ತರಾಶ್ರಯಾತ್
ಅಕ್ಷಾದೇರಪಿ ಮಾನತ್ವಂ ಯಥೋಕ್ತಾದೇವ ಕಾರಣಾತ್ ॥

—ಬೃ. ವಾ. ೩-೫-೩೨೫, ೩೨೬.

ಎಂದು ಹೇಳಿರುತ್ತಾರೆ. ಇದು ವೇದೋಕ್ತಿ ಎಂಬ ಕಾರಣದಿಂದಲ್ಲ, ವೇದವು ಹೇಳುವದನ್ನು ನಂಬಬೇಕಾಗಿರುವದು; ಅಪ್ರಾಮಾಣ್ಯಹೇತುಗಳಾದ ಅಬೋಧಕತ್ವ ಸಂಶಯಿತಬೋಧಕತ್ವವೇ ಮುಂತಾದವುಗಳಿಲ್ಲದ್ದರಿಂದ. ಹೇಗೆ ಪ್ರತ್ಯಕ್ಷಾದಿಗಳು ತಮ್ಮ ತಮ್ಮ ಅಸಾಧಾರಣವಿಷಯವನ್ನು ತಿಳಿಸುವದರಿಂದ ಪ್ರಮಾಣವೆನಿಸಿರು ವವೋ, ಹಾಗೆಯೇ ವೇದವೂ ತನ್ನ ಅಸಾಧಾರಣವಿಷಯವನ್ನು ಇದ್ದದ್ದು ಇದ್ದಂತೆ ತಿಳಿಯಿಸಿಕೊಡುವದರಿಂದಲೇ ಪ್ರಮಾಣವಾಗಿರುತ್ತದೆ. ವೇದಾಂತದಲ್ಲಿ ಹೇಳಿರು ವದು ಪರಮಾರ್ಥಸತ್ಯವೆಂಬುದೂ ಅದು ನಮ್ಮೆಲ್ಲರಿಗೂ ಆತ್ಮನೆಂಬುದೂ ಕೈಯ ಲ್ಲಿದ್ದ ಕನ್ನಡಿಯಿಂದ ಮುಖವನ್ನು ನೋಡಿಕೊಂಡಂತೆ ನಿಸ್ಸಂದಿಗ್ಧವಾಗಿ ವೇದಾಂತ ಶಾಸ್ತ್ರದಿಂದ ತಿಳಿದುಬರುತ್ತದೆ. ಆದ್ದರಿಂದ ವೇದವು ಪ್ರಮಾಣ. ಆದ್ದರಿಂದಲೇ ಸೂತ್ರಕಾರರು 'ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್' (ವೇ. ಸೂ. ೧-೩-೩೦) ಎಂದಿದಾರೆ. ವಾಮದೇವನು ಹೇಗೆ ನಾನು ಬ್ರಹ್ಮವೆಂದು ಕಂಡು ಕೊಂಡನೋ ಹಾಗೆಯೇ ಈಗಲೂ ಎಲ್ಲರೂ ತಿಳಿದುಕೊಳ್ಳಬಹುದು. 'ಶೃಣ್ವಂತು ಸರ್ವೇ ಅಮೃತಸ್ಯ ಪುತ್ರಾಃ' ಅಮೃತಸ್ವರೂಪರಾದ ಬ್ರಹ್ಮನ ಮಕ್ಕಳೇ ನಾವೆಲ್ಲರೂ ಆಗಿರುತ್ತೇವೆ.

ವೇದಪ್ರಾಮಾಣ್ಯವು ಈಗಲೂ ಸಾರ್ವತ್ರಿಕವಾಗಿ ಅಚ್ಚಳಿಯದೆ ಇರುತ್ತದೆ. ಮಾಡು ಬಿಡು- ಎಂಬ ವಾಕ್ಯಗಳೂ ಈ ಜ್ಞಾನಕ್ಕೆ ಸಾಧನವಾಗಿರುವದರಿಂದ ಕರ್ಮಕಾಂಡಕ್ಕೂ ಇದರಿಂದಲೇ ಪ್ರಾಮಾಣ್ಯವು ಬರುತ್ತದೆ.

---

# ೬. ಶಾಸ್ತ್ರಾಚಾರ್ಯರ ಉಪದೇಶ

(23—7—62)

ಮನುಷ್ಯನ ಕರ್ತವ್ಯಕ್ಕೆ ಯಾವದು ಪ್ರಮಾಣ ? –ಎಂಬ ವಿಷಯವನ್ನು ನೆನ್ನೆ ವಿಚಾರಮಾಡಿದ್ದಾಯಿತು. ಈಗ ಗುರುವಿಗೆ ಇಲ್ಲಿ ಯಾವ ಸ್ಥಾನವಿದೆ ?– ಎಂಬುದನ್ನು ನೋಡೋಣ. ಎಲ್ಲಾ ಮತಗಳಲ್ಲಿಯೂ ಗುರುವಿನ ಅವಶ್ಯಕತೆಯನ್ನು ಒಪ್ಪಲಾಗಿದೆ. ಕ್ರಿಸ್ತಿಯನ್ನರು, ಅದರಲ್ಲಿಯೂ ರೋಮನ್ ಕ್ಯಾಥೋಲಿಕರು, ಗುರುಗಳಿಗೆ ತಪ್ಪನ್ನು ಒಪ್ಪಿಕೊಳ್ಳುವದು (Confession) ಎಂಬ ಕರ್ಮವಿಶೇಷಕ್ಕೆ ಗುರುಗಳನ್ನು ಉಪಯೋಗಿಸಿಕೊಳ್ಳುವರು. ನಮ್ಮಲ್ಲಿಯೂ ಕೆಲವು ಪಂಗಡದವರು ಹೀಗೆಯೇ ಗುರುಗಳಲ್ಲಿ ಹಿಂದಿನ ಪಾಪಕೃತ್ಯಗಳನ್ನು ಹೇಳಿಕೊಂಡು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವದುಂಟು. ಸರಿಯಾಗಿ ನಡೆದರೆ ಅದೂ ಒಂದು ಬಗೆಯ ಪ್ರಾಯಶ್ಚಿತ್ತವೇ ಆಗುವದು. ಜ್ಞಾತಾಜ್ಞಾತಪಾಪಗಳಿಗೆ ಪಂಚಗವ್ಯಾದಿ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳುವದೂ, ಪರಿಷತ್ತಿನಲ್ಲಿ ತಪ್ಪನ್ನು ಹೇಳಿಕೊಂಡು ಪ್ರಾಯಶ್ಚಿತ್ತಮಾಡಿಕೊಳ್ಳುವದೂ, 'ಸರ್ವಪ್ರಾಯಶ್ಚಿತ್ತ' ಎಂಬ ಹೆಸರಿನಿಂದ ಶುದ್ಧಿಮಾಡಿಕೊಳ್ಳುವದೂ ವೈದಿಕಸನಾತನಧರ್ಮದಲ್ಲಿ ಈಗಲೂ ಕೆಲವರಲ್ಲಿ ಆಚರಣೆಯಲ್ಲಿದೆ. ಆದರೆ ಹೀಗೆ ತಪ್ಪನ್ನು ಒಪ್ಪಿಸಿಕೊಳ್ಳುವವರೂ ತಕ್ಕ ಯೋಗ್ಯತೆಯುಳ್ಳವರಾಗಿರಬೇಕು. ಒಪ್ಪಿಸುವವರೂ ಇನ್ನುಮೇಲೆ ಮತ್ತೆ ಅರಿತುಅರಿತೂ ಪಾಪವನ್ನು ಮಾಡುವದಿಲ್ಲವೆಂಬ ದೃಢಸಂಕಲ್ಪವನ್ನು ಮಾಡಿಕೊಳ್ಳಬೇಕು. ಹಾಗಾದರೆಮಾತ್ರ ಇದು ಪ್ರಯೋಜನಕಾರಿಯಾಗುತ್ತದೆ. ಕೆಲವರು ಗುರುಗಳು ಮಂತ್ರೋಪದೇಶವನ್ನು ಮಾಡುತ್ತಾರೆ ; ಅಂಥ ಗುರುಗಳು ಮೊದಲು ತಾವೂ ಉಪದೇಶಪೂರ್ವಕವಾಗಿ ಮಂತ್ರವನ್ನು ಪುರಶ್ಚರಣೆಮಾಡಿ ಸಿದ್ಧಿಯನ್ನು ಪಡೆದವರಾಗಿರಬೇಕು ; ಶಿಷ್ಯರು ಉದ್ಧಾರವಾಗಲೆಂಬ ಒಂದೇ ಹಾರೈಕೆಯಿಂದ ಉಪದೇಶಮಾಡುವವರಾಗಿರಬೇಕು. ಹಾಗಾದರೆಮಾತ್ರ ಮಂತ್ರದ ವೀರ್ಯವು ಬೆಳೆದು ಅದರಿಂದ ಶಿಷ್ಯನಿಗೆ ಲಾಭವುಂಟಾಗುತ್ತದೆ. ಕೆಲಕೆಲವು ಅನುಭವವೈದ್ಯ, ಯೋಗಸಾಧನ, ತಪಸ್ಸಿನ ಮರ್ಮ, ಯಾವದಾದರೂ ಕಲಾಕೌಶಲ್ಯ–ಇವೇ ಮುಂತಾದವುಗಳನ್ನು ರಹಸ್ಯವಾಗಿಟ್ಟುಕೊಂಡು ತಮಗೆ ಶರಣುಬಂದ ಶಿಷ್ಯರಿಗೆಮಾತ್ರ ಉಪದೇಶಮಾಡುವವರೂ ಇರುತ್ತಾರೆ. ಆದರೆ ಅಂಥ ಗುರುಗಳ ಪಂಗಡದಲ್ಲಿ ಶಿಷ್ಯರ ಸೇವೆಯನ್ನು ಸ್ವೀಕರಿಸುವವರು, ಅಥವಾ ಧನವನ್ನು ಬಯಸುವರು– ಇಂಥವರೂ ಇರುತ್ತಾರೆ. ಕಾಮಕ್ರೋಧಾದಿಗಳಿಗೆ ಪರವಶರಾಗಿರುವ ಅಂಥ ಗುರುಗಳಿಂದ ಶಿಷ್ಯರಿಗೆ ಆಗುವ ಉಪಯೋಗವೂ ಬಹಳ ಕಡಿಮೆ.

ಹೀಗೆ ಮಂತ್ರ, ಯೋಗ, ತರ್ಕಶಾಸ್ತ್ರ ಜ್ಯೋತಿಷಾದಿಗಳ ರಹಸ್ಯವನ್ನು ಹೇಳಿಕೊಡುವ ಗುರುಗಳಿಗೂ ವೇದಾಂತತತ್ತ್ವವನ್ನು ಉಪದೇಶಮಾಡುವ ಗುರುಗಳಿಗೂ ಬಹಳ ವೈಲಕ್ಷಣ್ಯವಿರುತ್ತದೆ. ವೇದಾಂತಶಾಸ್ತ್ರದಿಂದಲೇ ತತ್ತ್ವವು ತಿಳಿಯುತ್ತಿರುವಾಗ ಗುರುವೇಕೆ? ಎಂದು ಕೇಳಬಾರದು. ಏಕೆಂದರೆ ಈ ಸಂದರ್ಭದಲ್ಲಿ ಗುರುವೆಂದರೆ ಸಶರೀರವಾದ ಶಾಸ್ತ್ರವೇ ಆಗಿರುತ್ತಾನೆ. ಶಾಸ್ತ್ರವು ಶಬ್ದಮಾತ್ರವಾಗಿರುತ್ತದೆ; ಆದರೆ ಗುರುವಿನ ಬೋಧೆಯ ರೂಪವಾದ ಶಬ್ದದಲ್ಲಿ ಜೀವಕಳೆಯಿರುತ್ತದೆ. ಗುರುವು ಶಾಸ್ತ್ರಾರ್ಥವನ್ನು ತನ್ನ ಅನುಭವದಲ್ಲಿಟ್ಟುಕೊಂಡಿರುತ್ತಾನಾದ್ದರಿಂದ ಶಿಷ್ಯನಿಗೂ ಅದು ಅನುಭವಕ್ಕೆ ಬರುವಂತೆ ಮಾಡಬಲ್ಲನು. ಆದ್ದರಿಂದಲೇ ಶ್ರುತಿಯಲ್ಲಿ 'ಆಚಾರ್ಯವಾನ್ ಪುರುಷೋ ವೇದ' (ಛಾಂ. ೬-೧೪-೨) ಎಂದು ಹೇಳಿರುತ್ತದೆ. ಇಲ್ಲಿ 'ಆಚಾರ್ಯನನ್ನುಳ್ಳವನು' ಎಂದರೆ ಯಾವನಾದರೊಬ್ಬ ಗುರುವನ್ನು ಸೇರಿ ಉಪದೇಶವನ್ನು ಪಡೆದುಕೊಂಡವನು- ಎಂದೇನೂ ಅಭಿಪ್ರಾಯವಲ್ಲ. ವಿಶೇಷಗುಣವುಳ್ಳ ಆಚಾರ್ಯನನ್ನುಳ್ಳವನು ಎಂದರ್ಥ. ಯಾವನು ಶಾಸ್ತ್ರಾರ್ಥವನ್ನು ತಾನು ಅನುಭವಕ್ಕೆ ತಂದುಕೊಂಡಿರುವನೋ, ಯಾವನು ಶಾಸ್ತ್ರದ ಅರ್ಥವನ್ನು ಮತ್ತೊಬ್ಬರಿಗೆ ತಿಳಿಯಪಡಿಸಬಲ್ಲನೋ, ಮತ್ತು ಯಾವನು ತನ್ನಂತೆಯೇ ಶಿಷ್ಯನಿಗೂ ಆತ್ಮಾನುಭವವುಂಟಾಗುವಂತೆ ಮಾಡಬಲ್ಲನೋ-ಅಂಥವನು ನಿಜವಾದ ಆಚಾರ್ಯನು. ಶಿಷ್ಯನನ್ನು ಕೃತಾರ್ಥನನ್ನಾಗಿ ಮಾಡಿಬಿಡುತ್ತಾನೆಂಬುದೊಂದೇ ಇಲ್ಲ, ಅವನೂ ತನ್ನಂತೆ ಆಚಾರ್ಯನಾಗಿ ಮತ್ತೊಬ್ಬರಿಗೆ ಅನುಭವಪರ್ಯಂತವಾದ ಉಪದೇಶಮಾಡಲು ಸಮರ್ಥನಾಗುವಂತೆಯೂ ಮಾಡಬಲ್ಲವನಾಗಿರುತ್ತಾನೆ.

ಆಚಾರ್ಯನಾದವನು ತತ್ತ್ವವನ್ನು ಯಾವ ಪ್ರಯೋಜನಕ್ಕಾಗಿ ಶಿಷ್ಯನಿಗೆ ಬೋಧಿಸುತ್ತಾನೆ? -ಎಂದರೆ ಹಣ, ಕೀರ್ತಿ- ಮುಂತಾದವುಗಳನ್ನು ಬಯಸಿ ಉಪದೇಶಮಾಡುತ್ತಾನೆಂದು ಹೇಳುವದಕ್ಕೆ ಬರುವದಿಲ್ಲ. ಏಕೆಂದರೆ ಯಾವನು ಆಚಾರ್ಯನಾಗಿರುತ್ತಾನೋ ಅವನು ಕೃತಕೃತ್ಯನು, ಆಪ್ತಕಾಮನು; ಯಾವ ಕಾಮವೂ ಇಲ್ಲದ ಪರಬ್ರಹ್ಮದ ಸ್ವರೂಪವನ್ನೇ ಪಡೆದವನಾಗಿರುವವನು ಆತನು. ಅವನು ಉಪದೇಶಮಾಡುವದಕ್ಕೆ ಕರುಣೆಯೊಂದೇ ಹೇತು. ಶ್ರೀಶಂಕರಾಚಾರ್ಯರು ಇಂಥ ಸದ್ಗುರುವನ್ನು 'ಮಹಾಕಾರುಣಿಕನು' ಎಂದೇ ಕರೆಯುತ್ತಾರೆ. ಸಂಕಟದಲ್ಲಿರುವವರನ್ನು ಅದರಿಂದ ಪಾರುಮಾಡುವದು; ದರಿದ್ರರಿಗೆ ಧನ, ರೋಗಿಗಳಿಗೆ ಆರೋಗ್ಯ-ಮುಂತಾದದ್ದನ್ನು ಕೊಡುವದು; ಹಸಿವಿನಿಂದ ಬಳಲಿದವರಿಗೆ ಅನ್ನವನ್ನಿಕ್ಕುವದು; ಪ್ರಾಣದ ಅಪಾಯದಲ್ಲಿದ್ದವರಿಗೆ ಪ್ರಾಣದಾನಮಾಡುವದು- ಇದೆಲ್ಲ ಕರುಣೆಯಿಂದಲೇ ಸರಿ. ಆದರೆ ಅಜ್ಞಾನದಿಂದ ಶಿಷ್ಯರನ್ನು ಬಿಡುಗಡೆ ಮಾಡುವದು ಇವೆಲ್ಲಕ್ಕಿಂತಲೂ ಹೆಚ್ಚಿನ ಕರುಣೆಯ ಫಲವಾಗಿರುತ್ತದೆ; ಏಕೆಂದರೆ

ಅಜ್ಞಾನವು ನಾಶವಾದರೆ ಜನನಮರಣಪರಂಪರೆಗಳಲ್ಲಿ ಅನುಭವಿಸಬಹುದಾದ ಕಷ್ಟಸಂತತಿಯೆಲ್ಲವೂ ನಾಶವಾಗಿಬಿಡುತ್ತದೆ.

ಯಾವನು ಆಚಾರ್ಯನೋ ಅವನು ಪರಬ್ರಹ್ಮವೇ ಆಗಿರುವದರಿಂದ ಅವನು ಹೇಳಿದ್ದೆಲ್ಲವೂ ವೇದವೇ ಆಗಿರುತ್ತದೆ. ಅವನಿಗೆ ಶಿಷ್ಯನ ಮನಸ್ಸೆಂಬ ವೀಣೆಯನ್ನು ನುಡಿಸಿ ಇಂಪಾದ ಸ್ವರವು ಹೊರಡುವಂತೆ ಮಾಡುವ ಶಕ್ತಿ ಇರುತ್ತದೆ. ವೀಣೆಯನ್ನು ನಿರ್ಮಿಸಿದವನಿಗೆ ವೀಣೆಯು ಇಂಥ ಸ್ವರವನ್ನು ಕೊಡುವಂತೆ ಮಾಡಿರುತ್ತೇನೆಂದು ಹೇಗೆ ತಿಳಿದಿರುವದೋ, ಹಾಗೆಯೇ ಶಿಷ್ಯನ ಮನಸ್ಸಿನ ವೀಣೆಯನ್ನು ಸರಿಯಾಗಿ ಶ್ರುತಿಮಾಡಿ ಅದರಿಂದ ಇಂಪಾದ ಗಾನವನ್ನು ಹೊರಡಿಸುವ ಶಕ್ತಿಯೂ ಸದ್ಗುರುವಿನಲ್ಲಿ ಇರುತ್ತದೆ. ಜೀವಂತವಾದ ಹೃದಯದಿಂದ ಜೀವಂತ ಶ್ರದ್ಧಾಭಕ್ತಿಗಳುಳ್ಳ ಶಿಷ್ಯನಿಗೆ ಬರುವ ಉಪದೇಶದಿಂದ ಕೂಡಲೆ ಅಜ್ಞಾನವು ತೊಲಗಿಬಿಡುತ್ತದೆ. 'ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ | ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಣ್ಡವ | ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ||' (ಗೀ. ೪-೩೪, ೩ ). ಅಂಥ ತತ್ತ್ವದರ್ಶಿಯಾದ ಜ್ಞಾನಿಯು ಮಾಡಿದ ಉಪದೇಶವನ್ನು ಅರಿತುಕೊಂಡರೆ ಸಂಸಾರಿಗಳ ಮೋಹವು ತಪ್ಪದೆ ತೊಲಗುವದು ; ತನ್ನ ಆತ್ಮನೇ ಪರಮಾತ್ಮನು, ಆ ಪರಮಾತ್ಮನಲ್ಲಿಯೇ ಸಕಲಭೂತಗಳೂ ಇರುವವು- ಎಂಬುದು ಮನದಟ್ಟಾಗುವದು.

ಶಾಸ್ತ್ರದಲ್ಲಿ ತತ್ತ್ವಜ್ಞಾನದಿಂದ ಕಾಮಗಳೆಲ್ಲ ತೊಲಗುವವೆಂದು ಹೇಳಿದೆ. ಮರ್ತ್ಯನಾಗಿರುವ ಮಾನವನು ಅಮೃತನಾಗುವನು-ಎಂದೂ ಹೇಳಿದೆ. 'ನೀನೇ ಬ್ರಹ್ಮವಾಗಿರುವೆ' ಎಂದು ಮೂರೇ ಮಾತುಗಳಲ್ಲಿ ಶ್ರುತಿಯು ಹೇಳಿಕೊಡುತ್ತಿರುವ ಪರಮಾರ್ಥವು ನಮ್ಮ ಪಾಲಿಗೆ ಮಾತ್ರ ಇಲ್ಲವಾಗಿದೆ. ಗ್ರೀಕ್‌ದೇಶದಲ್ಲಿ ಟಾಂಟಲಸ್ ಎಂಬಾತನಿಗೆ ವಿಧಿಸಿದ್ದ ಒಂದಾನೊಂದು ಶಿಕ್ಷೆಯಲ್ಲಿ ಅವನ ಕೊರಳವರೆಗೂ ದ್ರಾಕ್ಷಾರಸವಿರುವ ಮಡುವಿತ್ತು ; ಅವನ ತಲೆಯ ಮೇಲೆ ದ್ರಾಕ್ಷಿಯ ಗೊಂಚಲುಗಳು ಜೋತಿರುತ್ತಿದ್ದವು. ಆದರೂ ಆ ರಸವನ್ನು ಕುಡಿಯುವದಕ್ಕಾಗಲಿ ಹಣ್ಣನ್ನು ತಿನ್ನುವದಕ್ಕಾಗಲಿ ಆವನಿಗೆ ಎಟುಕುತ್ತಿರಲಿಲ್ಲವಂತೆ ! ಹಾಗಾಗಿದೆ ನಮ್ಮ ಪಾಡು. ಶಾಸ್ತ್ರದೃಷ್ಟಿಯಲ್ಲಿ ನಾವು ಪರಮಾತ್ಮಸ್ವರೂಪರೇ ಆಗಿದ್ದರೂ ಅದರ ಅನುಭವವು ನಮಗೆ ಇಲ್ಲ. ಏಕೆಂದರೆ ಶಾಸ್ತ್ರವಾಕ್ಯಕ್ಕೆ ಅರ್ಥವು ಹೇಗೆ ಎಂಬುದು ನಮಗೆ ತಿಳಿಯದೆ ಇದೆ. ಕಾರುಣಿಕನಾದ ಆಚಾರ್ಯನು ವಾಕ್ಯದ ಅರ್ಥವು ಹೀಗೆ, ತತ್ ಪದಕ್ಕೆ ಅರ್ಥವಿದು, ತ್ವಂಪದಕ್ಕೆ ಅರ್ಥವಿದು.; ಜೀವಪರಮಾತ್ಮರ ಐಕ್ಯವನ್ನು ಹೀಗೆ ಮನಗಾಣಬೇಕು- ಎಂದು ತಿಳಿಸಿಕೊಟ್ಟರೆ ತಟ್ಟನೆ ಕೂಡಲೆ ತತ್ತ್ವದ ಅರಿವು ಅನುಭವಕ್ಕೆ ಬಂದುಬಿಡುವದು. ಒಂದೂರಿನ ಮುಂದೆ ಒಂದು ಹಂದಿಯ ಬಾಯಲ್ಲಿ ಇಕ್ಕಳವನ್ನು ಇಟ್ಟಂತೆ ಕೆತ್ತಿದ್ದ ವಿಗ್ರಹವೊಂದು

ಕಾಣಿಸುತ್ತಿತ್ತು. ಆ ದಾರಿಯಲ್ಲಿ ಬಂದುಹೋಗುವವರೆಲ್ಲರೂ 'ಇದೇನು? ಹಂದಿಗೂ ಇಕ್ಕಳಕ್ಕೂ ಏನು ಸಂಬಂಧ?' ಎಂದು ನಕ್ಕು ಮುಂದಕ್ಕೆ ಸಾಗುತ್ತಿದ್ದರು. ಅಲ್ಲಿಗೆ ಬಂದ ಒಬ್ಬ ದಾರಿಹೋಕನು ವಿಚಾರಶೀಲನಾದ್ದರಿಂದ ಅಲ್ಲಿಯೇ ನಿಂತು ಬಹಳವಾಗಿ ಯೋಚಿಸಿ ಇಲ್ಲಿ 'ಇಕ್ಕಳ ವರಹ'–ಎರಡು ಕೊಳಗ ವರಹಗಳು –ಇವೆ ಎಂದು ಊಹಿಸಿದನಂತೆ! ಅಗೆದು ನೋಡುವಲ್ಲಿ ನಿಜವಾಗಿಯೂ ಅಲ್ಲಿ ಎರಡು ಕೊಳಗ ವರಹವನ್ನು ಇಟ್ಟಿದ್ದರು. ಹೀಗೆಯೇ ಜೀವರ ರೂಪದಿಂದ ಕಾಣುವ ನಮ್ಮಲ್ಲಿ ಪರಮಾರ್ಥರೂಪದಿಂದ ಮಹಾತತ್ತ್ವವೊಂದು ಹುದುಗಿರುತ್ತದೆ. ಅದನ್ನು ಶಾಸ್ತ್ರಾರ್ಥವನ್ನು ಅನುಭವಕ್ಕೆ ತಂದುಕೊಡಬಲ್ಲ ಒಬ್ಬ ಆಚಾರ್ಯನು ತಿಳಿಸಿಕೊಡಬೇಕಾಗಿದೆ. ಆದ್ದರಿಂದಲೇ ಶ್ರುತಿಯು 'ಆಚಾರ್ಯವಾನ್ ಪುರುಷೋ ವೇದ' ಆಚಾರ್ಯನ ಉಪದೇಶದಿಂದಲೇ ಅರಿತುಕೊಳ್ಳುತ್ತಾನೆ ಎಂದಿರುತ್ತದೆ.

ಇಂಥ ಆಚಾರ್ಯನ ಮಾದರಿಯೇ ನಮಗೆ ಸಾಧನಾನುಷ್ಠಾನಕ್ಕೂ ತತ್ತ್ವಜ್ಞಾನಕ್ಕೂ ಆದರ್ಶವಾಗಿರುತ್ತದೆ. ಶಾಸ್ತ್ರವ್ಯಾಖ್ಯಾನಕ್ಕಿಂತಲೂ ಇಂಥ ಆಚಾರ್ಯನ ನಡತೆಯೇ ಹೆಚ್ಚಿನ ಪ್ರಯೋಜನವನ್ನುಂಟುಮಾಡುತ್ತದೆ. ಆಚಾರ್ಯನೆಂದರೇ ವೇದಾಂತದ ಸಾರವೆಂದು ತಿಳಿಯಬೇಕು. ಅಳುವವರನ್ನು ಕಂಡರೆ ಅಳುವಂತೆಯೂ ನಗುವವರನ್ನು ಕಂಡರೆ ನಗುವಂತೆಯೂ ಪ್ರೇರಣೆಯಾಗುವದಿಲ್ಲವೆ? ಹಾಗೆಯೇ ಶ್ರೋತ್ರಿಯರೂ ಬ್ರಹ್ಮನಿಷ್ಠರೂ ಶಾಂತರೂ ಆಗಿರುವ ಸದ್ಗುರುಗಳ ಬಳಿಯಲ್ಲಿ ನಮಗೂ ಆತ್ಮನಕಡೆಗೆ ತಿರುಗುವ ಪ್ರೇರಣೆಯಾಗುವದು. ಕೆಲವರು ಯೋಗಿಗಳು ಬೆನ್ನಿನಲ್ಲಿ ಯಾವದೋ ಒಂದು ಭಾಗವನ್ನು ಮುಟ್ಟಿದಮಾತ್ರದಿಂದ ಜನರಿಗೆ ಮುಂಗಡೆಯಲ್ಲಿ ಚಂದ್ರನ, ಅಥವಾ ಸೂರ್ಯನ, ದರ್ಶನವಾಗುವದಂತೆ. ಆಚಾರ್ಯನು ತನ್ನ ಉಪದೇಶಮಾತ್ರದಿಂದಲೇ ಆತ್ಮಸೂರ್ಯನ ದರ್ಶನವನ್ನು ಮಾಡಿಸುವನು. ಇದೇನೋ ಯಕ್ಷಿಣಿ ವಿದ್ಯೆ– ಎಂದು ಭಾವಿಸಬಾರದು. ಅನುಭವಿಯಾದ ಗುರುವಿನ ಉಪದೇಶವು ಅಧಿಕಾರಿಯಾದ ಶಿಷ್ಯನಿಗೆ ಅವಶ್ಯವಾಗಿ ಅನುಭವಪರ್ಯಂತವಾದ ಜ್ಞಾನವನ್ನುಂಟುಮಾಡುವದು. ಇಂಥ ಗುರುಗಳು ಈಗಲೂ ಇದ್ದಾರೆ ಎಂಬ ಕಾರಣದಿಂದಲೇ ವೇದಾಂತವು ಇಂದಿಗೂ ಜೀವಂತವಾಗಿರುತ್ತದೆ.

ಇಂಥ ಆಚಾರ್ಯನಾದ ಗುರುವು ಶಿಷ್ಯರಿಗೆ ಯಾವದೊಂದು ಪ್ರತಿಫಲವನ್ನೂ ಬಯಸಿ ಉಪದೇಶಮಾಡುವದಿಲ್ಲ. ಅವನು ಶಿಷ್ಯವಿತ್ತಾಪಹಾರಕಗುರುವಲ್ಲ. ಸಂಸಾರದಲ್ಲಿ ತೊಳಲುತ್ತಿರುವ ಶಿಷ್ಯನ ಮೇಲಿರುವ ಕರುಣೆಯೊಂದೇ ಆತನು ತತ್ತ್ವೋಪದೇಶವನ್ನು ಮಾಡುವದಕ್ಕೆ ಹೇತುವಾಗಿರುತ್ತದೆ. ಹಾಗಾದರೆ 'ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ' ಗುರುಸೇವೆಯನ್ನು ಮಾಡಬೇಕು ಎಂದು ಶಾಸ್ತ್ರದಲ್ಲಿ ಹೇಳಿರುವದೇಕೆ?– ಎಂದು ಯಾರಾದರೂ ಕೇಳಬಹುದು. ಅದಕ್ಕೆ

ಉತ್ತರವೇನೆಂದರೆ ಸ್ವಾಭಾವಿಕವಾಗಿ ಮನುಷ್ಯನು ತನ್ನ ಶರೀರಕ್ಕೇ ಷೋಡಶೋಪಚಾರಪೂಜೆಯನ್ನು ಮಡುತ್ತಿರುತ್ತಾನೆ. ಈ ದೇಹಾಭಿಮಾನವು ಹೋಗುವತನಕ ಆತ್ಮಜ್ಞಾನವು ಅವನಿಗೆ ಎಂದಿಗೂ ದಕ್ಕಲಾರದು. ಆದ್ದರಿಂದ ಪರಮೇಶ್ವರನನ್ನು ಸಾಕ್ಷಾತ್ಕರಿಸಿಕೊಂಡಿರುವ ಸದ್ಗುರುವು ಪ್ರತ್ಯಕ್ಷಪರಮೇಶ್ವರನೇ ಎಂಬ ಬುದ್ಧಿಯಿಂದ ಆತನನ್ನು ಸೇವಿಸಿದರೆ ಶರೀರಾಭಿಮಾನವು ಮರೆಯಾಗುತ್ತದೆ. ಆಗ 'ಈಶ್ವರೋ ಗುರುರಾತ್ಮೇತಿ ಮೂರ್ತಿಭೇದಾದ್ ವಿಭಾಗಿನೇ | ವ್ಯೋಮವದ್ ವ್ಯಾಪ್ತದೇಹಾಯ' ಎಂದಂತೆ ಈಶ್ವರ, ಗುರು, ತಾನು- ಎಂಬ ಉಪಾಧಿಕೃತಭೇದವನ್ನು ಕಡೆಗಣಿಸಿ ಸರ್ವತ್ರವೂ ವ್ಯಾಪಿಸಿರುವ ಪರಮಾತ್ಮನೊಬ್ಬನೇ ಪರಮಾರ್ಥಸತ್ಯವೆಂಬ ತತ್ತ್ವವು ಮನದಲ್ಲಿ ಮಿಂಚುವದು. ಗಡಿಗೆ, ಮಡಕೆ, ಕುಡಿಕೆ- ಎಂಬ ಉಪಾಧಿಗಳಿಂದ ಬೇರೆಬೇರೆಯಾಗಿರುವಂತೆ ತೋರುತ್ತಿದ್ದರೂ ನಿಜವಾಗಿಯೂ ಆಕಾಶವು ಒಂದೇ ಆಗಿ ನಿರಂತರವಾಗಿ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವಂತೆ ಬ್ರಹ್ಮಚೈತನ್ಯವೊಂದೇ ಎಲ್ಲೆಲ್ಲಿಯೂ ಇರುತ್ತಿರುವದೆಂಬ ಸತ್ಯವು ಮನದಟ್ಟಾಗುವದು. ಸದ್ಗುರುವಾದವನು ಪರಮಾತ್ಮನೇ ಆಗಿರುವದರಿಂದ ಪರಮಾತ್ಮನಂತೆ ಅವನೂ ಸತ್ಯಸಂಕಲ್ಪನಾಗಿರುತ್ತಾನೆ ; 'ಇವನಿಗೆ ಅಪೇಕ್ಷಿತವಾಗಿರುವ ಇಂಥ ಕಾಮಗಳು ಲಭಿಸಲಿ, ಅಥವಾ ನಿಷ್ಕಾಮಬುದ್ಧಿಯಿಂದ ಸೇವೆಯನ್ನು ಮಾಡುತ್ತಿರುವ ಈ ಶಿಷ್ಯನಿಗೆ ಆತ್ಮಜ್ಞಾನವು ಲಭಿಸಲಿ !' ಎಂಬ ಇಚ್ಛೆ ಆತನ ಮನಸ್ಸಿನಲ್ಲಿ ಉದಯಿಸಿದರೆ ಸಾಕು, ಅಷ್ಟರಿಂದಲೇ ಶಿಷ್ಯನು ಕೃತಾರ್ಥನಾಗುವನು. 'ತಸ್ಮಾದಾತ್ಮಜ್ಞಂ ಹ್ಯರ್ಚಯೇತ್ ಭೂತಿಕಾಮಃ | ಉಪಾಸತೇ ಪುರುಷಂ ಯೇ ಹ್ಯಕಾಮಾಸ್ತೇ ಶುಕ್ರಮೇತದತಿವರ್ತಂತಿ ಧೀರಾಃ' (ಮುಂ. ೩-೧-೧೦, ೩-೨-೧)-ಎಂದು ಶ್ರುತಿಯು ಸಾರುತ್ತಿದೆ.

ಆಚಾರ್ಯನಾದವನು ವಿದ್ಯುಚ್ಛಕ್ತಿಯ ಉತ್ಪಾದನಸ್ಥಾನದಂತೆ ಆತ್ಮಜ್ಞಾನಶಕ್ತಿಯ ಉದ್ಗಮಸ್ಥಾನವಾಗಿರುತ್ತಾನೆ. ಮೂಲಸ್ಥಾನಕ್ಕೆ ಸಂಯೋಗವನ್ನು ಮಾಡಿಕೊಂಡವರ ಮನೆಯೊಳಗೆಲ್ಲ ವಿದ್ಯುದ್ದೀಪವು ಬೆಳಗುವಂತೆ, ಸದ್ಗುರುವಿನ ಹೃದಯದ ಸಂಬಂಧವನ್ನು ಸಂಪಾದಿಸಿಕೊಂಡವರಿಗೆ ಆತ್ಮಶಕ್ತಿಯನ್ನು ಆತನು ಅನುಗ್ರಹಿಸುತ್ತಾನೆ. ಸದ್ಗುರುವಿನಿಂದ ಶಕ್ತಿಪಾತವು ಯಾವನಲ್ಲಿ ಆಗಿಬಿಡುವದೋ ಅವನಿಗೆ ಹೃದಯಗ್ರಂಥಿಭೇದವೂ ಆಗಿಬಿಡುತ್ತದೆ. ಗ್ರಂಥಿ ಎಂದರೆ ಹೃದಯಕ್ಕೂ ವಿಷಯಗಳಿಗೂ ಆಗಿರುವ ಕಾಮರೂಪವಾದ ಕಗ್ಗಂಟು. ವಿಷಯಿಗಳ ಮನಸ್ಸಿಗೆ ಬಾಹ್ಯವಿಷಯಗಳ ಸಂಬಂಧವು ಎಂದೆಂದಿಗೂ ಗಂಟುಬಿದ್ದಿರುತ್ತದೆ. ಅವರ ಮನಸ್ಸಿನಲ್ಲಿ ಕಾಮಕ್ರೋಧಾದಿಗಳು ಗಂಟುಹಾಕಿಕೊಂಡಿರುವದು ಸದ್ಗುರುವಿನ ಅನುಗ್ರಹದಿಂದಲೇ ಬಿಚ್ಚಿಕೊಳ್ಳುವದು. ಆ ಬಳಿಕ ಅವರು ತಿತಿಕ್ಷೆಯ ಪರಮಾವಧಿಯನ್ನು ಹೊಂದಿ ಶಾಂತರಾಗಿ ಪರಮಾತ್ಮನಲ್ಲಿಯೇ ನೆಲೆಸಿಲ್ಲುವರು.

---

# ೭. ತರ್ಕ

## (24—7—62)

ವೇದಾಂತದೃಷ್ಟಿಯಿಂದ ನೋಡುವಾಗ ಮಾನವನ ಕರ್ತವ್ಯಕ್ಕೆ– ಕ್ರಿಯಾ ರೂಪವಾದ ಮತ್ತು ಜ್ಞಾನವನ್ನು ಸಂಪಾದಿಸಿಕೊಳ್ಳಬೇಕಾಗಿರುವ ಕರ್ತವ್ಯಕ್ಕೆ– ಶಾಸ್ತ್ರವೂ ಆಚಾರ್ಯನ ಹೇಗೆ ಸಾಧನವಾಗಿರುತ್ತಾರೆಂಬುದನ್ನು ವಿಚಾರಮಾಡಿ ದ್ದಾಯಿತು. ಕರ್ತವ್ಯನಿರ್ಣಯಕ್ಕೆ ಅಥವಾ ತತ್ತ್ವನಿರ್ಣಯಕ್ಕೆ 'ತರ್ಕ'ವೆಂಬ ಇನ್ನೊಂದು ಸಾಧನವನ್ನು ಜನರು ಉಪಯೋಗಿಸುತ್ತಿರುವದು ಪ್ರಸಿದ್ಧವಾಗಿದೆ ಯಷ್ಟೆ ? ಈ ತರ್ಕಕ್ಕೆ ವೇದಾಂತದಲ್ಲಿ ಸ್ಥಾನವೇನು ?– ಎಂಬುದನ್ನು ಈಗ ವಿಚಾರಮಾಡಬೇಕಾಗಿದೆ.

ಎಲ್ಲಾ ದರ್ಶನಗಳಲ್ಲಿಯೂ ತರ್ಕವನ್ನು ಉಪಯೋಗಿಸುತ್ತಿರುತ್ತಾರೆ. ಮೀಮಾಂಸಕರು ವಾಕ್ಯಾರ್ಥವನ್ನು ನಿರ್ಣಯಿಸುವದಕ್ಕೂ 'ಉಪಪತ್ತಿ'ಯನ್ನು, ಎಂದರೆ ತರ್ಕವನ್ನು ಬಳಸುತ್ತಾರೆ. ಅವರ ದೃಷ್ಟಿಯಿಂದ ಅತೀಂದ್ರಿಯವಿಷಯ ದಲ್ಲಿ ತರ್ಕಕ್ಕೆ ಹೆಚ್ಚಿನ ಸ್ಥಾನವಿಲ್ಲವೆಂಬುದು ಸ್ವಾಭಾವಿಕ. ಮಿಕ್ಕ ದರ್ಶನಕಾರರು ಗಳು ಶಬ್ದಕ್ಕೆ ತತ್ತ್ವನಿರ್ಧಾರಣವನ್ನು ಮಾಡುವ ಶಕ್ತಿಯಿಲ್ಲ, ಅಥವಾ ಅದು ಆ ನಿರ್ಣಯಕ್ಕೆ ಬಹುದೂರದ ಸಾಧನ– ಎಂದೇ ಭಾವಿಸಿರುತ್ತಾರೆ. ಅನುಭವಕ್ಕೆ ಹತ್ತಿರವಿರುವದರಿಂದ ತರ್ಕವು ಶಬ್ದಕ್ಕಿಂತ ಹೆಚ್ಚು ಸಮೀಪದ ಸಾಧನ– ಎಂದು ಸಾಂಖ್ಯರು ಬಗೆಯುತ್ತಾರೆಂಬುದನ್ನು ಆಗಲೆ ತಿಳಿಸಿದ್ದಾಗಿದೆ ತರ್ಕಶಾಸ್ತ್ರದಲ್ಲಿ ಗ್ರಂಥಕಾರರುಗಳು 'ಇತಿ ಪ್ರಾಚೀನಾಃ, ವಸ್ತುತಸ್ತು' (ಹೀಗೆಂದು ಹಿಂದಿನವರು ಅಭಿಪ್ರಾಯಪಟ್ಟಿರುತ್ತಾರೆ ; ಆದರೆ ನಿಜವಾಗಿ) ಎಂದು ತಮ್ಮತಮ್ಮ ಮತವನ್ನು ಮಂಡಿಸುವದು ರೂಢಿಯಲ್ಲಿದೆ. ಶ್ರೀಶಂಕರಾಚಾರ್ಯರು ಸಾಂಖ್ಯರ ಖಂಡನೆ ಯನ್ನು ಮಾಡುವಾಗ 'ಸಮ್ಯಗ್ಜ್ಞಾನದ ವಿಷಯಕ್ಕೆ ಜನರಿಗೆ ಅಭಿಪ್ರಾಯಭೇದ ವಿರುವದೆಂಬುದು ಹೊಂದುವಹಾಗಿಲ್ಲ ; ಏಕೆಂದರೆ ಇದ್ದಂತೆ ಇರುವ ಪರಮಾರ್ಥದ ವಿಷಯದ ಜ್ಞಾನವೇ ಸಮ್ಯಗ್ಜ್ಞಾನವೆನಿಸುವದು. ಆದರೆ ತರ್ಕದ ಸಹಾಯ ದಿಂದ ಉಂಟಾದ ಜ್ಞಾನಗಳು ಒಂದಕ್ಕೊಂದು ವಿರುದ್ಧವಾಗಿರುವವೆಂಬುದು ಸುಪ್ರ ಸಿದ್ಧವಾಗಿರುತ್ತದೆ. ಒಬ್ಬ ತಾರ್ಕಿಕನು ಇದೇ ಸಮ್ಯಗ್ಜ್ಞಾನವು ಎಂದು ತಿಳಿಸಿ ಕೊಟ್ಟಿರುವದನ್ನೇ ಮತ್ತೊಬ್ಬ ತಾರ್ಕಿಕನು ಎತ್ತಿಹಾಕುತ್ತಾನೆ,ಅವನ ಮತವನ್ನೂ ಮತ್ತೊಬ್ಬನು ಎತ್ತಿಹಾಕುತ್ತಾನೆ– ಎಂಬುದು ಲೋಕದಲ್ಲಿ ಪ್ರಸಿದ್ಧವಾಗಿಯೇ ದೆ. ಹೀಗೆ ಒಂದೇ ರೂಪದಲ್ಲಿಲ್ಲದ ತರ್ಕಜನ್ಯಜ್ಞಾನವು ಸಮ್ಯಗ್ಜ್ಞಾನವೆಂತ ಗಾದೀತು ? ಪ್ರಧಾನವಾದಿಯೇ ತರ್ಕಜ್ಞರಲ್ಲಿ ಉತ್ತಮನೆಂದು ಎಲ್ಲಾ ತಾರ್ಕಿ ಟೂ ಒಪ್ಪಿರುವದಿಲ್ಲ. ; ಹಿಂದಿನ ಕಾಲದ, ಈಗಿನ, ಮತ್ತು ಮುಂದೆ ಬರಲಿರುವ

ತಾರ್ಕಿಕರನ್ನೆಲ್ಲ ಒಟ್ಟುಗೂಡಿಸಿ ಇದೇ ಸಮ್ಯಗ್ಜ್ಞಾನವೆಂದು ನಿರ್ಣಯಿಸುವದಕ್ಕೂ ಆಗುವಹಾಗಿಲ್ಲ' (ಸೂ. ಭಾ. ೨-೧-೧೧) ಎಂದು ಬರೆದಿರುತ್ತಾರೆ. ಅದು ಯುಕ್ತವೂ ಆಗಿದೆ. ವೇದಪ್ರಾಮಾಣ್ಯವನ್ನು ಒಪ್ಪುವ ಆಸ್ತಿಕತಾರ್ಕಿಕರ ವಿಷಯವೇ ಹೀಗಿರುವಲ್ಲಿ. ಸ್ವತಂತ್ರತರ್ಕದ ಮೇಲೆಯೇ ಎಲ್ಲವನ್ನೂ ನಿಲ್ಲಿಸುತ್ತೇವೆಂದು ಹೊರಟಿರುವ ಪಾಶ್ಚಾತ್ತ್ಯವಿಚಾರಕರ ಮಾತನ್ನು ಹೇಳತಕ್ಕದ್ದೇನಿದೆ ?

ನಮ್ಮ ಕರ್ತವ್ಯವನ್ನು ನಿರ್ಣಯಿಸುವಾಗ ತರ್ಕವು ಯಾವ ಉಪಯೋಗಕ್ಕೂ ಬರುವದಿಲ್ಲವೆಂಬುದು ಸುಪ್ರಸಿದ್ಧವಾಗಿದೆ. ಮೊದಲನೆಯದಾಗಿ, ಮಾಡುವ ಕಾರ್ಯವು ಆದ ಮೇಲೆಯೇ, ಅಥವಾ ಆದಕ್ಕೆ ಮುಂಚೆಯೇ, ಅದರ ಉಪಯೋಗ. ಹೀಗೆ ಹೀಗೆ ಮಾಡಬೇಕು- ಎಂದು ತರ್ಕಿಸಿ ಮಾಡಿದ ಯೋಚನೆಗಳು ಕಾರ್ಯರಂಗಕ್ಕೆ ಇಳಿದಾಗ ವ್ಯರ್ಥವಾಗುತ್ತಿರುವದು ಅನುಭವದಲ್ಲಿದೆ. ಯಾವದಾದರೂ ತಪ್ಪುಮಾಡಿದವರು 'ನಾನು ಏಕೆ ಹಾಗೆ ಮಾಡಿದೆನೆಂದರೆ' ಎಂದು ತಾವು ಮಾಡಿದ್ದಕ್ಕೆ ಕಾರಣವನ್ನು ಹೇಳುವಾಗಲೇ ತರ್ಕಕ್ಕೆ ಮರೆಹೋಗುತ್ತಾರೆ; ಕಾರ್ಯವನ್ನು ಮಾಡುವಾಗ ಮಾತ್ರ ತಟ್ಟನೆ ಅದರಲ್ಲಿ ಧುಮುಕುವದೇ ಹೊರತು, ಅಲ್ಲಿ ತರ್ಕಕ್ಕೆ ಅವಕಾಶವಿರುವದಿಲ್ಲ. ಒಬ್ಬರಿಗೊಬ್ಬರಿಗೆ ಮತವೈಷಮ್ಯವಿರುವಾಗ- ರಾಜಕೀಯ ವಿಚಾರದಲ್ಲಿ, ಗಿರಣಿಗಳ ಅಥವಾ ಕಂಪೆನಿಗಳ ಕೂಲಿಕಕಾರರ ಮತ್ತು ನೌಕರರ ಮುಷ್ಕರಗಳ ಸಮಯದಲ್ಲಿ -ತರ್ಕವನ್ನು ಮಾಡುವದಕ್ಕೆ ಇಬ್ಬರೂ ಸಿದ್ಧರಾಗಿ ಬಂದರೂ ಒಮ್ಮತವೇನೂ ಆಗುವದಿಲ್ಲ. ಸರಕಾರದವರುಕೂಡ ಅಸಂತುಷ್ಟರಾದ ನೌಕರರ, ಕೂಲಿಕಾರರ, ಅಥವಾ ವಿದ್ಯಾರ್ಥಿಗಳ ಅಭಿಪ್ರಾಯವನ್ನು ತರ್ಕದಿಂದ ಸರಿಪಡಿಸಲಾರದೆ ಕೊನೆಗೆ ಪೋಲೀಸರ ಅಶ್ರುವಾಯು (Tear-gas) ಮುಂತಾದ ದಂಡೋಪಾಯದಿಂದಲೇ ನಿರ್ಣಯಿಸುವದು ಎಲ್ಲರ ಅನುಭವದಲ್ಲಿಯೂ ಇದೆ. ಪಂಡಿತರ ಸಭೆಗಳಲ್ಲಿ ಸೇರಿ ಎಷ್ಟೋ ವಿಷಯಗಳನ್ನು ವಾಕ್ಯಾರ್ಥದಿಂದ ನಿರ್ಣಯಿಸುತ್ತೇವೆಂದು ಹೊರಡುವದೂ, ಕೊನೆಗೂ ಯಾವ ನಿರ್ಣಯಕ್ಕೂ ಬಾರದೆ ಇರುವದೂ, ಸರ್ವವಿದಿತವಾಗಿದೆ. ಹೆಚ್ಚೇಕೆ ? ಬರಿಯ ತರ್ಕದಿಂದ ಯಾವದೊಂದು ವಿಚಾರವಾಗಲಿ ಕರ್ತವ್ಯಕಾರ್ಯಕ್ರಮವಾಗಲಿ ನಿರ್ಣಯವಾದದ್ದಿಲ್ಲವೆಂದೇ ಹೇಳಬಹುದಾಗಿದೆ.

ತರ್ಕಶಾಸ್ತ್ರದ ವಾರ್ತಿಕಕಾರರು 'ತರ್ಕವು ರಾಗದ್ವೇಷಗಳಿಗೆ ಕಾರಣವಾಗಬಹುದಲ್ಲವೆ ?' ಎಂಬ ಆಕ್ಷೇಪವನ್ನೊಡ್ಡಿ ವೀತರಾಗರು ಮಾಡುವ ಚರ್ಚೆಯಲ್ಲಿ ಅಂಥ ಆಕ್ಷೇಪಕ್ಕೆ ಎಡೆಯಿಲ್ಲವೆಂದು ನಿರ್ಣಯಿಸಿರುತ್ತಾರೆ. ತತ್ತ್ವದೃಷ್ಟಿಯಿಂದ ನೋಡಿದಾಗ ಇದು ಸರಿಯೆಂದು ಎಲ್ಲರೂ ಒಪ್ಪಲೇಬೇಕಾದರೂ ಅನುಷ್ಠಾನದಲ್ಲಿ ಹಾಗಾಗುವದು ಕಷ್ಟಸಾಧ್ಯವೇ ಎಂದು ಹೇಳಬೇಕಾಗಿದೆ. ಧರ್ಮರಾಯನು ಹೇಳಿರುವಂತೆ ಶ್ರುತಿಗಳು, ಸ್ಮೃತಿಗಳು, ಋಷಿಗಳು- ಎಲ್ಲರೂ ಭಿನ್ನಭಿನ್ನಾಭಿಪ್ರಾಯಗಳನ್ನೇ ಪ್ರಕಟಿಸಿರುವದು ಕಂಡುಬರುತ್ತದೆ. ಹಿಂದಿನ ಕಾಲದಲ್ಲಿ ಗ್ರೀಕ

ಸಿಸಿರೊ ಎಂಬಾತನು ಮಾನವನ ಹಕ್ಕುಬಾಧ್ಯತೆಗಳನ್ನು ಕ ರಿತು ವಾಗ್ಮಿತಾಪ್ರದ ರ್ಶಕವಾದ ಒಂದು ಭಾಷಣವನ್ನು ಮಾಡುತ್ತಿರುವಲ್ಲಿ 'ಈ ಹಕ್ಕುಗಳು ಗರ್ಭದಾಸ ರಿಗೂ ಉಂಟೊ ?' ಎಂದು ಯಾರೋ ಕೇಳಲಾಗಿ 'ದಾಸರು ಮನುಷ್ಯರಲ್ಲ' ಎಂದುತ್ತರವಿತ್ತನಂತೆ ! ವೀತರಾಗರ ಚರ್ಚೆಯಲ್ಲಿ ಯಾವ ರಾಗದ್ವೇಷಗಳಿಗೂ ಅವಕಾಶವಿಲ್ಲವೆಂದಿರುವ ವಾರ್ತಿಕಕಾರರುಕೂಡ ಬೌದ್ಧರನ್ನು ತಮ್ಮ ಗ್ರಂಥಗಳಲ್ಲಿ ಹೀಯಾಳಿಸಿ ನುಡಿದಿದ್ದಾರೆ. ಇದು ಹೇಗಾದರೂ ಇರಲಿ, ತರ್ಕವು ಪ್ರಮಾಣ ವನ್ನು ಶೋಧಿಸುವದಕ್ಕೆ ಸಾಧನವಾದರೂ ತಾನೇ ನೇರಾಗಿ ಪ್ರಮಾಣವಲ್ಲ ಎಂಬು ದನ್ನೂ ಬರಿಯ ತರ್ಕಕ್ಕೆ ನಿಲುಗಡೆಯಿಲ್ಲವೆಂಬುದನ್ನೂ ಎಲ್ಲರೂ ಒಪ್ಪಲೇಬೇಕು. 'ಇತಿ ಸಿದ್ಧಮ್' (ಹೀಗೆಂದು ಸಿದ್ಧವಾಯಿತು) ಎಂದು ಒಬ್ಬನು ಅನ್ನುವ ಹೊತ್ತಿಗೆ ಸರಿಯಾಗಿ ಮತ್ತೊಬ್ಬನು 'ತನ್ನ' (ಅದು ಹಾಗಲ್ಲ) ಎಂದು ಎದ್ದು ಕೊಳ್ಳುತ್ತಾನೆಂಬುದು ಎಲ್ಲರೂ ಕಂಡಿರುವ ವಿಷಯವಾಗಿದೆ. ತರ್ಕವು ಕತ್ತರಿ ಯಿದ್ದಂತೆ ; ಅದಕ್ಕೆ ಏನನ್ನು ಕೊಟ್ಟರೂ ಕತ್ತರಿಸಿ ಹಾಕುತ್ತದೆ. ಎಚ್ಚರಿಕೆಯಿಲ್ಲ ದವರು ಕೈಬೆರಳನ್ನು ಕೂಡ ಎತ್ತಲೋ ನೋಡುತ್ತ ಕತ್ತರಿಸಿಕೊಳ್ಳಬಹುದಲ್ಲವೆ ? ಹಾಗೆಯೇ ತರ್ಕವು ಯಾವದು ಪ್ರಮಾಣ, ಯಾವದು ಅಲ್ಲ – ಎಂಬ ಚರ್ಚೆಗೆ ಬಂದಾಗ ಪ್ರಮಾಣಗಳನ್ನು ಕೂಡ ಕತ್ತರಿಸಿಹಾಕುತ್ತದೆ. ಪ್ರಮಾಣಗಳಸಂಖ್ಯೆಯು ಬೇರೆಬೇರೆಯ ದರ್ಶನಗಳಲ್ಲಿ ಆರರಿಂದ ಒಂದರವರೆಗೆ ಇಳಿದಿದೆಯಷ್ಟೆ ?

ಪ್ರತ್ಯಕ್ಷವು ಪ್ರಮಾಣವಲ್ಲವೆ ? ಅದು ಎಲ್ಲರಿಗೂ ಒಂದೇ ಆಗಿದೆಯಷ್ಟೆ ? ಎಂದು ಯಾರಾದರೂ ಕೇಳಬಹುದು. ನಿಜ, ದೋಷವಿಲ್ಲದವರೆಗೂ ಅದು ವ್ಯವ ಹಾರದಲ್ಲಿ ಪ್ರಮಾಣವೇ ಸರಿ. ಒಬ್ಬೊಬ್ಬರಿಗೆ ನೇತ್ರದೋಷದಿಂದ ಒಬ್ಬನೇ ಚಂದ್ರ ನಿರುವಲ್ಲಿ ಅನೇಕ ಚಂದ್ರರು ಕಾಣಿಸಬಹುದು– ಎಂಬುದು ಅನುಭವದಲ್ಲಿದೆ. 'ಕುರುಡರ ಕಣಿವೆ'ಯೊಂದರಲ್ಲಿ ಎಲ್ಲರೂ ಕುರುಡರಾಗಿಯೇ ಹುಟ್ಟಿದ್ದರಂತೆ; ಕಣ್ಣು ಕಾಣುವವನೊಬ್ಬನು ಬಂದಾಗ ಅವನಿಗೆ ಆಗುವ ಬಣ್ಣದ ಅನುಭವದ ವಿಷಯ ವನ್ನು ಕೇಳಿ ಆ ಕುರುಡರ ಮುಖಂಡನು 'ಇವನಿಗೇನೋ ಕಣ್ಣಿನಲ್ಲಿ ದೋಷವಿದೆ ; ಆದ್ದರಿಂದ ಅದಕ್ಕೆ ಶಸ್ತ್ರಚಿಕಿತ್ಸೆಮಾಡಬೇಕು' ಎಂದನಂತೆ ! ಪ್ರತ್ಯಕ್ಷವು ಬಹುಜನ ರಿಗೆ ಬಾಹ್ಯಪ್ರಪಂಚದ ಅನುಭವವನ್ನು ಒಂದೇಸಮನಾಗಿ ಉಂಟುಮಾಡುತ್ತಿದೆ ಎಂಬುದು ಸತ್ಯವಾದರೂ ಅದಕ್ಕೆ ಅತೀಂದ್ರಿಯವಿಷಯಗಳ ಅರಿವು ಆಗುವಂತಿಲ್ಲ. ಆದ್ದರಿಂದ ಪರಮಾರ್ಥನಿಶ್ಚಯಕ್ಕೆ ಬರಿಯ ಪ್ರತ್ಯಕ್ಷವೊಂದೇ ಸಾಲದೆಂಬುದು ಸ್ಪಷ್ಟ. ಇಲ್ಲಿ ತರ್ಕದಿಂದ ಪ್ರಮಾಣಗಳನ್ನು ಕೂಡ ಸಂಶಯಕ್ಕೆ ಈಡುಮಾಡ ಲಾಗಿದೆಯಲ್ಲವೆ ? ತರ್ಕದ ಹವ್ಯಾಸವು ಹೆಚ್ಚಾದರೆ ಎಲ್ಲಕ್ಕೂ ತರ್ಕವನ್ನು ಹತ್ತಿಸಿ ವ್ಯವಹಾರವನ್ನೇ ತಲೆಕೆಳಗುಮಾಡಿಬಿಡಬಹುದು. ಒಬ್ಬ ಗಾಣಿಗನು ಅಂಗಡಿ ಯನ್ನೂ ಇಟ್ಟುಕೊಂಡು, ಗಾಣವನ್ನೂ ನಡೆಯಿಸುತ್ತಾ ಇದ್ದನಂತೆ; ಎತ್ತು ಗಾಣದ ಸುತ್ತಲೂ ತಿರುಗುವದನ್ನು ನಿಲ್ಲಿಸಿದರೆ ಕೂಡಲೆ ಹೋಗಿ ಬಾರುಕೋಲಿನಿಂದ

ಅದನ್ನು ಹೊಡೆದು ಮತ್ತೆ ಮುಂದುವರಿಯುವಂತೆ ಮಾಡುತ್ತಿದ್ದನಂತೆ. ಇದನ್ನು ಕಂಡ ಒಬ್ಬ ಶಾಸ್ತ್ರಿಯು 'ಏನಯ್ಯಾ ನೀನು ಹೊಗಗಡೆ ಕೂತುಕೊಂಡಿದ್ದೀಯೆ; ಎತ್ತು ಹಾಗೆಯೇ ನಿಂತಿತು –ಎಂಬುದು ನಿನಗೆ ಹೇಗೆ ಗೊತ್ತಾಗುತ್ತದೆ ?' ಎಂದು ಕೇಳಲು ಗಾಣಿಗನು 'ಸ್ವಾಮಿ, ನನಗೆ ಅದರ ಕಷ್ಟವೇನೂ ಇಲ್ಲ; ಏಕೆಂದರೆ ಎತ್ತಿನ ಕೊರಳಿಗೆ ಘಂಟೆಯನ್ನು ಕಟ್ಟಿರುತ್ತೇನೆ. ಆದ್ದರಿಂದ ಎತ್ತು ಗಾಣವನ್ನು ಸುತ್ತುತ್ತಿದ್ದರೆ ಘಂಟೆ ಅಲುಗಾಡುತ್ತಲೇ ಇರುತ್ತದೆ. ಯಾವಾಗ ಘಂಟೆಯ ಸದ್ದು ನಿಲ್ಲುತ್ತದೆಯೋ ಆಗ ಎತ್ತು ನಿಂತಿದೆ ಎಂದು ನಿಶ್ಚಯಿಸಿಕೊಳ್ಳುತ್ತೇನೆ' ಎಂದನು. ಆಗ ಶಾಸ್ತ್ರಿಯು 'ಇದು ಸರಿಯೆ, ಆದರೆ ಎತ್ತು ಇದ್ದಲ್ಲಿಯೇ ಇದ್ದುಕೊಂಡು ಕತ್ತನ್ನು ಅಲುಗಾಡಿಸಿದರೊ, ಆಗೇನು ಮಾಡುವೆ ?' ಎಂದು ಮತ್ತೆ ಕೇಳಿದನು. ಗಾಣಿಗನು 'ಶಾಸ್ತ್ರಿಗಳೆ, ತಾವು ತಾರ್ಕಿಕರೆಂದು ಕಾಣುತ್ತದೆ. ಆದರೆ ನಮ್ಮ ಎತ್ತು ತರ್ಕವನ್ನು ಓದಿಲ್ಲ. ಆದ್ದರಿಂದ ತಾವು ಹೇಳಿದಂತೆ ಅದು ಮಾಡುವ ಅಂಜಿಕೆಯೇನೂ ಇಲ್ಲ' ಎಂದು ಉತ್ತರವಿತ್ತನಂತೆ !

ತರ್ಕಕ್ಕೆ ವಿಷಯವನ್ನು ಕೊಡುವ ಯೋಗ್ಯತೆಯಿಲ್ಲ. ವಿಷಯವನ್ನು ಕೊಟ್ಟಮೇಲೆ ಅದರ ಆಧಾರದಿಂದ ತರ್ಕವು ಕೆಲಸಕ್ಕೆ ಹೊರಡುತ್ತದೆ. 'ಪರ್ವತದಲ್ಲಿ ಬೆಂಕಿಯಿದೆ ; ಏಕೆಂದರೆ ಇಲ್ಲಿ ಹೊಗೆ ಇದೆ' ಎಂಬ ತರ್ಕವು ಸರಿ ; ಆದರೆ ಇಲ್ಲಿ ಕಾಣುವದು ಹೊಗೆಯೊ, ಅಲ್ಲವೊ ? –ಎಂಬುದನ್ನು ತರ್ಕವು ಹೇಳಲಾರದು, ಅದನ್ನು ಪ್ರಮಾಣದಿಂದಲೇ ನಿಶ್ಚಯಿಸಬೇಕು. ತರ್ಕಭಾಷ್ಯದಲ್ಲಿ 'ನಮಃ ಪ್ರಮಾಣಾಯ' ಎಂದು ಮಂಗಲವನ್ನು ಮಾಡಿರುತ್ತದೆ; ಪರಮಾತ್ಮನು ಪ್ರಮಾಣ ಸ್ವರೂಪನು ಎಂಬ ಭಾವ ಇಲ್ಲಿದೆ. ಪ್ರತ್ಯಕ್ಷವೂ ಅದನ್ನು ಅನುಸರಿಸುವ ಅನುಮಾನಾದಿಗಳೂ ಲೋಕವ್ಯವಹಾರವನ್ನು ಸಾಗಿಸುತ್ತಿವೆ ಎಂಬುದು ತಾರ್ಕಿಕರಿಗೆ ಸಂಮತ. ವಿಜ್ಞಾನಶಾಸ್ತ್ರದವರೂ ಪ್ರತ್ಯಕ್ಷಪ್ರಮಾಣದ ಆಧಾರದಮೇಲೆಯೇ ಹೊಸ ಹೊಸ ಶೋಧಗಳನ್ನು ಮಾಡಿ ಈಗ ಚಂದ್ರಗ್ರಹದವರೆಗೆ ಹೋಗುವ ರಾಕೆಟು ಗಳನ್ನು ಕೂಡ ಕಂಡುಹಿಡಿದಿದ್ದಾರೆ. ಆದರೆ ಈ ಶಾಸ್ತ್ರಕ್ಕೆ ಈಗ ದಿಕ್ಕುಕಾಣದಂತೆ ಆಗಿರುತ್ತದೆ. ಸೂಕ್ಷ್ಮವಾದ ವಸ್ತುಗಳ ಪರೀಕ್ಷೆಯನ್ನು ಮಾಡಿದಂತೆಲ್ಲ ವಸ್ತುತತ್ತ್ವ (Matter), ಶಕ್ತಿ (Energy) –ಇವುಗಳ ವೈಲಕ್ಷಣ್ಯವೇನೆಂಬುದೇ ಅದಕ್ಕೆ ಗೊತ್ತಾಗದಂತೆ ಆಗಿದೆ. ವಿಜ್ಞಾನಶಾಸ್ತ್ರದ ಭಕ್ತರೇ ಒಬ್ಬರೊಡನೊಬ್ಬರು ವಿವಾದಕ್ಕೆ ಪ್ರಾರಂಭಿಸುವಂತೆ ಆಗಿಬಿಟ್ಟಿದೆ. ಜೇಮ್ಸ್ ಜೀನ್ಸ್ ಎಂಬಾತನು 'ಗಹನವಿಶ್ವ' (Mysterious Universe) ಎಂಬ ಗ್ರಂಥದಲ್ಲಿ ವಿಜ್ಞಾನಶಾಸ್ತ್ರವು ಮಾಡಿರುವ ಕಟ್ಟಕಡೆಯ ಸಿದ್ಧಾಂತವೇನಾದರೂ ಇದೆಯೆ ?– ಎಂಬ ಪ್ರಶ್ನೆಗೆ ಇದೇ ಕಟ್ಟಕಡೆಯ ಸಿದ್ಧಾಂತವೆಂದು ಹೇಳದೆ ಇರುವದೇ ಯುಕ್ತವಾಗಿದೆ ಎಂಬ ತೀರ್ಪಿಗೆ ಬಂದಿರುತ್ತಾನೆ !

ತರ್ಕವು ತತ್ತ್ವವಿಚಾರಕ್ಕೊಂದು ಸಾಧನವೆಂಬುದು ಸರಿಯೇ ಆದರೂ ಅದರ ಯೋಗ್ಯತೆಗೆ ಮಿತಿ ಇದೆಯೆಂಬುದನ್ನು ನಾವೆಲ್ಲರೂ ಎಚ್ಚರಿಕೆಯಿಂದ ನೆನಪಿನಲ್ಲಿಡಬೇಕು. ಕಾಲ, ಆಕಾಶ, ಚಲನೆ, ನಿಮಿತ್ತ, ಭಾವಗಳು– ಮುಂತಾದ ವಿಷಯಗಳನ್ನು ಇಟ್ಟುಕೊಂಡೇ ತರ್ಕವು ಮುಂದೆ ಸಾಗಬೇಕು. ಆದರೆ ಅದಕ್ಕೆ ಅವುಗಳ ನಿಜವೇನೆಂಬುದು ತಿಳಿಯದು. ನಮ್ಮಗಳ ನಿಜವಾದ ಸ್ವರೂಪವೇನು? ಎಂದರೆ ತರ್ಕಕ್ಕೆ ಗೊತ್ತಿಲ್ಲ. ಕಾವ್ಯ ಸಂಗೀತ, ಶಿಲ್ಪ, ಚಿತ್ರ– ಮುಂತಾದವುಗಳ ತತ್ತ್ವವೇನೆಂಬುದನ್ನು ಅದು ಅರಿಯದು. ತರ್ಕವನ್ನು ತರ್ಕದಿಂದಲೇ ಪರೀಕ್ಷಿಸಿದರೆ, ಏಕೆ ಎಂಬುದು ಏಕೆ ?–ಎಂದು ಕೇಳಿದರೆ, ಅದು ಉತ್ತರವೀಯಲಾರದು. ತರ್ಕವು ಹೇಳಿದ್ದೇ ಸರಿ ಎಂಬುದಕ್ಕೆ ಆಧಾರವೇನು ? 'ಇದು ತರ್ಕಸಂಮತ' ಎಂಬ ಮಾತಿಗೇನರ್ಥ ? ಎಂದು ಕೇಳಿದರೆ ತಾರ್ಕಿಕರೆಲ್ಲರೂ ಒಂದೇ ಅಭಿಪ್ರಾಯಕ್ಕೆ ಬರುತ್ತಾರೊ ಇಲ್ಲವೊ, ಹೇಳುವದಕ್ಕೆ ಬರುವಂತಿಲ್ಲ ತರ್ಕವನ್ನು ವಾಕ್ಯರೂಪವಾಗಿ ಹೇಳುವಾಗ ಶಬ್ದಗಳ ನಿಜವಾದ ಅರ್ಥವು ಯಾವದು ? ಗೌಣಾರ್ಥ ಲಕ್ಷ್ಯಾರ್ಥಗಳು ಯಾವವು ?– ಎಂಬುದನ್ನು ತರ್ಕದಿಂದ ನಿರ್ಣಯಿಸಲಾದೀತೆ ? ಅದೂ ಸಂಶಯಾಸ್ಪದ. ಹೀಗಿದೆ ತರ್ಕದ ಚೌಕಟ್ಟು !

ವೇದಾಂತದರ್ಶನದಲ್ಲಿಯೂ ಉಪನಿಷದ್ವಚನವೆಂಬ ಶಬ್ದಪ್ರಮಾಣವನ್ನು ಒಪ್ಪಿದೆ; ಆ ದರ್ಶನದಲ್ಲಿಯೂ ತರ್ಕವನ್ನು ಉಪಯೋಗಿಸಲಾಗುತ್ತಿದೆ. ತಾರ್ಕಿಕರ ದರ್ಶನಗಳಿಗೂ ಈ ದರ್ಶನಕ್ಕೂ ಈ ವಿಷಯದಲ್ಲಿ ಯಾವ ವೈಲಕ್ಷಣ್ಯವಿದೆ ?– ಎಂಬ ಶಂಕೆಗೆ ಪರಿಹಾರವನ್ನು ಕಂಡುಹಿಡಿದುಕೊಳ್ಳಬೇಕಾದದ್ದು ಇಲ್ಲಿ ಅತ್ಯವಶ್ಯ. ಮಿಕ್ಕ ದರ್ಶನಗಳೆಲ್ಲ ಪ್ರತ್ಯಕ್ಷವನ್ನು ಜ್ಯೇಷ್ಠಪ್ರಮಾಣವಾಗಿ ಮಾಡಿಕೊಂಡಿರುತ್ತವೆ. ಆ ಪ್ರಮಾಣವು ಸರ್ವಸಂಮತವೆ ? ಅದರಲ್ಲಿ ಯಾವ ಭ್ರಾಂತಿಯ ಅಂಶವೂ ಇಲ್ಲವೆ ?– ಎಂಬುದನ್ನು ಯೋಚಿಸುವ ಗೋಜಿಗೆ ಆ ದರ್ಶನಗಳು ಹೋಗಿರುವದಿಲ್ಲ. ಒಂದು ಮನೆಗೆ ಒಬ್ಬ ಹೊಸಬ ಬಂದು ಯಜಮಾನನನ್ನು 'ರಾಮೂ !' ಎಂದು ಏಕವಚನದಿಂದ ಕೂಗಿದ್ದರಿಂದ 'ಇವನು ಯಾರೋ ನನ್ನ ಹೆಂಡತಿಯ ಕಡೆಯವನಿರಬೇಕು' ಎಂದುಕೊಂಡು ಯಜಮಾನನು ಅವನನ್ನು ಸ್ವಾಗತಿಸಿದನಂತೆ; ಹೆಂಡತಿಯೂ ಹೀಗೆಯೇ 'ಇವನು ಗಂಡನಕಡೆಯವನಿರಬೇಕು' ಎಂದುಕೊಂಡು ಮೋಸಹೋದಳಂತೆ. ನಾಲ್ಕಾರು ದಿನಗಳು ಕಳೆದ ಮೇಲೆ ಅವನ ನಿಜವೇನೆಂಬುದು ಇಬ್ಬರಿಗೂ ಗೊತ್ತಾಗದೆ ವಿಚಾರಿಸುವಲ್ಲಿ 'ನಾನು ನಿಮಗೇನೂ ಆಗಬೇಕಾದದ್ದಿಲ್ಲ ; 'ನಾನು ನಾನೇ, ನೀವು ನೀವೇ !' ಎಂದು ಅವನು ನಿಜವನ್ನು ಹೇಳಿಬಿಟ್ಟನಂತೆ ! ಪ್ರಮಾಣಗಳನ್ನೇಕೆ ನಾವು ನಂಬಬೇಕು? ಪ್ರಮಾಣಗಳು ನಮಗೆ ನಿಜವನ್ನೇ ಹೇಳುತ್ತವೆ ಎಂಬುದಕ್ಕೇನು ಆಧಾರ ?– ಎಂದು ಕೇಳುವವರೆಗೂ ನಾವು ಅವನ್ನು ನಂಬಿಕೊಂಡಿರುತ್ತೇವೆ. ಆದರೆ ಆ ಪ್ರಶ್ನೆಯನ್ನು ಹಾಕಿದರೆ ಸರಿಯಾದ ಉತ್ತರವೇನೂ ನಮಗೆ ದೊರೆಯುವದಿಲ್ಲ.

ಮನಶ್ಶಾಸ್ತ್ರದಲ್ಲಿ ಭ್ರಾಂತಿಯು ಹೇಗಾಗುತ್ತದೆ ಎಂಬುದನ್ನು ವಿವರಿಸಿರುತ್ತಾರೆ ಆದರೆ ನಾವು ಎಲ್ಲವನ್ನೂ ಪ್ರತ್ಯಕ್ಷವಾಗಿಸಿಕೊಂಡು ನಿರ್ಧರಿಸುತ್ತಿದೇವೆಯೆ? ಮರ ಗಿಡಗಳು ಬೆಳೆಯುವದು ಹೇಗೆಂಬುದು ನಮಗೆ ಪ್ರತ್ಯಕ್ಷವಾಗಿದೆಯೆ ? ಕಾರ್ಯ ಕಾರಣಗಳ ಸಂಬಂಧವು ಪ್ರತ್ಯಕ್ಷವೆ ? ಭೌತಿಕವಿಜ್ಞಾನಶಾಸ್ತ್ರಜ್ಞರು ಹೇಳುತ್ತಿ ರುವ ಎಲೆಕ್ಟ್ರಾನ್‌ಗಳನ್ನು ಯಾರಾದರೂ ನೋಡಿದಾರೆಯೆ? ಉಷ್ಣವು ವಸ್ತುವಿನ ಕಂಪನಗಳಿಂದಾಗುವದೆಂದು ಅವರು ಹೇಳುತ್ತಿದಾರಲ್ಲ, ಆ ಕಂಪನಗಳು ನಮಗೆ ಪ್ರತ್ಯಕ್ಷವೆ ? ಇನ್ನು ಈಶ್ವರ, ಆತ್ಮ-ಮುಂತಾದ ಅತಿಸೂಕ್ಷ್ಮತತ್ತ್ವಗಳ ವಿಷಯ ದಲ್ಲಿ ಅದು ಏನು ಹೇಳೀತು ? ನಾವು ಪ್ರತ್ಯಕ್ಷಗಮ್ಯವೆಂದು ಹೇಳುತ್ತಿರುವ ಎಷ್ಟೋ ವಿಷಯಗಳು ತರ್ಕಮಾತ್ರಕ್ಕೆ ಸೇರಿರುತ್ತವೆ; ಆ ತರ್ಕವು ಸಾಧಾರವೊ, ಅಥವಾ ನಮ್ಮ ಪ್ರತ್ಯಕ್ಷಜ್ಞಾನವೂ ವಿಶ್ವಾಸಮಾತ್ರವೊ ?-ಎಂಬುದನ್ನು ನಾವು ಪರೀಕ್ಷಿಸಿರವದಿಲ್ಲವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಸಾಮಾನ್ಯವಿಷಯ ದಲ್ಲಿಕೂಡ ಪ್ರತ್ಯಕ್ಷವು ಮೋಸಹೋಗಿಬಿಡುತ್ತದೆ. ಕೈಗೆ ಬಲವಾದ ವಾಸನೆಯ ಸೆಂಟ್ ಹಚ್ಚಿಬಿಟ್ಟರೆ, ಆಮೇಲೆ ಅದಕ್ಕೆ ವಾಸನೆಯನ್ನು ಗೊತ್ತುಪಡಿಸುವ ಶಕ್ತಿ ಕುಗ್ಗಿಬಿಡುತ್ತದೆ ; ಬಹಳ ಶಬ್ದವನ್ನು ಕೇಳಿದಮೇಲೆ ಕಿವಿ ಸದ್ದನ್ನು ಸರಿಯಾಗಿ ತಿಳಿಯಲು ಅಸಮರ್ಥವಾಗುತ್ತದೆ. ನಾಲಗೆಗೆ ಬಲವಾದ ಸಿಹಿಯನ್ನು ತೋರಿ ಸಿದಮೇಲೆ, ಅದು ಸಿಹಿಯ ಪ್ರಮಾಣವನ್ನು ಗೊತ್ತುಮಾಡಲಾರದು-ಇತ್ಯಾದಿ. ಹೀಗಿರುವಲ್ಲಿ ಈ ಪ್ರತ್ಯಕ್ಷದ ಆಧಾರದಮೇಲೆ ಮಾಡುವ ತರ್ಕಕ್ಕೆ ಏನುಬೆಲೆ ?

ಹಾಗಾದರೆ ವೇದಾಂತಿಗಳಾದರೂ ಏತರ ಆಧಾರದ ಮೇಲೆ ತರ್ಕವನ್ನು ಮಾಡುತ್ತಾರೆ ?– ಎಂದು ನೀವು ಕೇಳಬಹುದು. ಇದಕ್ಕೆ ಉತ್ತರವೇನೆಂದರೆ, ಎಲ್ಲಾ ತಾರ್ಕಿಕರೂ ಒಪ್ಪಿರುವ ಸಾರ್ವತ್ರಿಕಾಧಾರವೊಂದಿದೆ. ಅದಕ್ಕೆ ಅನುಭವ ಎಂದು ಹೆಸರು. ವಾದಿಪ್ರತಿವಾದಿಗಳಿಗೆ ಸಮ್ಮತವಾದ ಅನುಭವವನ್ನು ಆಧಾರ ಮಾಡಿಕೊಂಡೇ ಅವರೆಲ್ಲ ತರ್ಕವನ್ನು ಮಾಡುತ್ತಿರುತ್ತಾರೆ. ನೈಷ್ಕರ್ಮ್ಯಸಿದ್ಧಿ ಯಲ್ಲಿ :

ಇಮಂ ಪ್ರಾಶ್ನಿಕಮುದ್ದಿಶ್ಯ ತರ್ಕಜ್ವರಭೃಶಾತುರಾಃ ।
ತ್ವಾಚ್ಛಿರಸ್ಕವಚೋಜಾಲೈರ್ಮೋಹಯನ್ತಿ ಪರಸ್ಪರಮ್ ॥ (ನೈ. ೨-೫೯)

ಎಂದು ಸುರೇಶ್ವರಾಚಾರ್ಯರು ಹೇಳಿರುವಂತೆ ಈ ಅನುಭವವೆಂಬ ಮಧ್ಯಸ್ಥ ನನ್ನು ಇಟ್ಟುಕೊಂಡೇ ತರ್ಕಜ್ವರದಿಂದ ಬಲವಾಗಿ ನರಳುತ್ತಿರುವ ವಾದಿಗಳು "ಧೂಮವತ್ತ್ವಾತ್, ದೃಷ್ಟತ್ವಾತ್"- ಎಂದು ಮುಂತಾಗಿ 'ತ್ವಾತ್' ಎಂಬ ಪ್ರತ್ಯಯವನ್ನು ಸೇರಿಸಿದ ಹೇತುವಚನಗಳಿಂದ ಒಬ್ಬರನ್ನೊಬ್ಬರು ಮುಗ್ಧರಾಗಿಸು ತ್ತಿದಾರೆ. ಪ್ರತ್ಯಕ್ಷ, ಅನುಮಾನ-ಮುಂತಾದ ಪ್ರಮಾಣಗಳಿಗೆಲ್ಲ ಅನುಭವವೇ ಕೊನೆ. ಇದನ್ನು 'ಅವಗತಿ' ಎಂದೂ ಕರೆಯುತ್ತಾರೆ. ಎಲ್ಲರಿಗೂ ಸಂಮತ

ವಾಗಿರುವ ಅನುಭವವನ್ನು ಆಧಾರವಾಗಿಟ್ಟುಕೊಂಡು ತರ್ಕಮಾಡುವದೇ ಯುಕ್ತ ವೆಂದು ವೇದಾಂತಿಗಳು ಹೇಳುತ್ತಾರೆ. ಅನುಭವದಿಂದಲೇ ನಾವು ಇದು ಪ್ರತ್ಯಕ್ಷ ವಾಯಿತು ಎಂದು ನಂಬಿರುತ್ತೇವೆ; ಅದೇ ಪ್ರಮಾಣಗಳಿಗೆಲ್ಲಕ್ಕೂ ಪ್ರಮಾಣ ವಾಗಿರುತ್ತದೆ. ಕಣ್ಣಿಗೆ ಕಣ್ಣಾಗಿ, ಕಿವಿಗೆ ಕಿವಿಯಾಗಿ, ಮನಸ್ಸಿಗೆ ಮನಸ್ಸಾಗಿರುವ ಅನುಭವಸ್ವರೂಪನಾದ ಆತ್ಮನೊಬ್ಬನು ಇದಾನೆ ಎಂದು ವೇದಾಂತಿಗಳು ಹೇಳು ತ್ತಾರೆ. ಕನ್ನಡಕವು ಕಣ್ಣಿದ್ದವನಿಗೆ ಮಾತ್ರ ಸಹಾಯಕವಾಗುವಂತೆ ಅನುಭವದ ಮೂಲಕವೇ ಕಣ್ಣಿಗೆ ನೋಡುವ ಶಕ್ತಿ ಉಂಟಾಗುವದು. ಆ ಮೂಲಾನುಭವ ವನ್ನು ಮುಟ್ಟಿದರೆ ತರ್ಕಕ್ಕೆ ಪರ್ಯವಸಾನವಾಯಿತು. ಆಮೇಲೆ ಮತ್ತೆ ಕೇಳ ಬೇಕಾದದ್ದೂ ಇಲ್ಲ, ಹೇಳಬೇಕಾದದ್ದೂ ಇಲ್ಲ. ಇದಲ್ಲದೆ ವೇದಾಂತಿಗಳು ಉಪಯೋಗಿಸುವ ಯಾವದೊಂದು ತರ್ಕವೂ ಅನುಭವವಿರುದ್ಧವಾಗಿರುವದಿಲ್ಲ. ತರ್ಕಮಾಡುವ ಪ್ರತಿಯೊಂದು ಹೆಜ್ಜೆಯಲ್ಲಿಯೂ ಅವರು ಸರ್ವಸಮ್ಮತವಾದ ಅನುಭವವನ್ನೇ ಆಧಾರವಾಗಿಟ್ಟುಕೊಂಡಿರುತ್ತಾರೆ. ಆದಕ್ಕೆ ಶ್ರುತ್ಯನುಗೃಹೀತ ತರ್ಕ, ಅಥವಾ ಶ್ರುತ್ಯನುಗುಣವಾದ ತರ್ಕ ಎಂದು ಹೆಸರು. ಶ್ರುತಿಯಲ್ಲಿ ಹೇಳಿರುವ ತರ್ಕವೆಲ್ಲವೂ ಈ ಜಾತಿಯದೇ. ಉದಾಹರಣೆಗೆ ಛಾಂದೋಗ್ಯದಲ್ಲಿ ಶ್ವೇತಕೇತುವಿಗೆ ಅವನ ತಂದೆಯು ಉಪದೇಶಿಸಿ 'ತತ್ತ್ವಮಸಿ' ಎಂದು ತಿಳಿಸಿದ ತರ್ಕವೆಲ್ಲವೂ ಈ ಬಗೆಯ ತರ್ಕವೇ. ಲೋಕದಲ್ಲಿ ಸರ್ವಾನುಭವಸಂಮತವಾಗಿ ರುವ ತರ್ಕವನ್ನು ನಾವು ವೇದಾಂತವಿಚಾರದಲ್ಲಿಯೂ ಉಪಯೋಗಿಸಬಹುದು ; ಅದು ಶ್ರುತಿಯ ತರ್ಕಕ್ಕೆ ಅವಿರುದ್ಧವಾಗಿ ಆದಕ್ಕೆ ಅನುಗುಣವಾಗಿಯೇ ಇರು ತ್ತದೆ.

ಸರ್ಜನ್ ಎನ್ನಿಸಿಕೊಂಡಿರುವ ಶಸ್ತ್ರಚಿಕಿತ್ಸಕನು ಹೇಗೆ ತನ್ನ ಉಪಕರಣ ಗಳನ್ನೆಲ್ಲ ಎಚ್ಚರಿಕೆಯಿಂದ ಪರೀಕ್ಷಿಸಿನೋಡಿಯೇ ಶಸ್ತ್ರಚಿಕಿತ್ಸೆಗೆ ಪ್ರಾರಂಭಿಸು ತ್ತಾನೋ ಹಾಗೆಯೇ ವೇದಾಂತಿಯೂ ಶಾಸ್ತ್ರ, ಆಚಾರ್ಯ, ತರ್ಕ– ಎಂಬ ಮೂರು ಸಾಧನಗಳನ್ನೂ ಸರಿಯಾಗಿ ಶೋಧನೆಮಾಡಿದ ಬಳಿಕವೇ ಪ್ರಯೋಗಿಸು ತ್ತಾನೆ. ವೇದಾಂತವಿಚಾರವನ್ನು ಮಾಡುವಾಗ ನಾವು ಈ ಮೂಲತತ್ತ್ವ ಗಳನ್ನು ಅನುಸರಿಸಿಯೇ ಶಾಸ್ತ್ರ, ಆಚಾರ್ಯ, ತರ್ಕ–ಎಂಬಿವನ್ನು ಬಳಸಬೇಕು. ಹಾಗಾದರೇ ನಮಗೆ ತತ್ತ್ವವು ನಿಸ್ಸಂದಿಗ್ಧವಾಗಿ ಮನದಟ್ಟಾದೀತು.

---

# ೮. ಆತ್ಮ, ಈಶ್ವರ

## ( 25-7-62 )

ನಮ್ಮ ಸ್ವರೂಪದ ನಿಜವೇನು ? ಈಶ್ವರನೊಬ್ಬನಿದಾನೆಯೆ ? ಈಶ್ವರನಿಗೂ ನಮಗೂ ಸಂಬಂಧವೇನು ? ಈ ವಿಷಯಕ್ಕೆ ವೇದಾಂತದೃಷ್ಟಿಯಿಂದ ಉತ್ತರ ವೇನೆಂಬುದನ್ನು ಈ ದಿನ ಕಂಡುಕೊಳ್ಳುವದಕ್ಕೆ ಪ್ರಯತ್ನಿಸೋಣ.

ಅದು ಹೇಗೋ ಎಲ್ಲಾ ದೇಶದ ಜನರಿಗೂ ತಿಳಿದೊ, ತಿಳಿಯದೆಯೋ, ಈಶ್ವರನೊಬ್ಬನಿದಾನೆ ಎಂಬ ಭಾವನೆ ಬಹುಕಾಲದಿಂದಲೂ ಇದ್ದುಕೊಂಡುಬಿಟ್ಟಿರುತ್ತದೆ. ನಮ್ಮ ದೇಶದಲ್ಲಿ ಆಸ್ತಿಕರು ಅನಾದಿ ಎಂದು ನಂಬುವ, ಐತಿಹಾಸಿಕರು ಕೂಡ ಅತ್ಯಂತಪುರಾತನವೆಂದು ಒಪ್ಪಿರುವ ಋಗ್ವೇದದಲ್ಲಿಕೂಡ, ಈಶ್ವರಭಾವನೆಯು ಕಾಣುತ್ತದೆ. ಈ ದೇಶದಲ್ಲಿ ಅಷ್ಟು ಹಿಂದಿನಕಾಲದಲ್ಲಿಯೇ ಈ ಭಾವನೆಯು ಹೇಗೆ ಉದ್ಭವಿಸಿತು ?-ಎಂಬ ಬಗ್ಗೆ ಪುರಾತತ್ತ್ವಶೋಧಕರು ಕೆಲಕೆಲವು ಕಲ್ಪನೆಗಳನ್ನು ಮಾಡಿರುತ್ತಾರೆ. ಋಗ್ವೇದದಲ್ಲಿ ಪ್ರತಿಯೊಂದು ಮಂತ್ರಕ್ಕೂ ಒಂದೊಂದು ಛಂದಸ್ಸು, ಒಬ್ಬೊಬ್ಬ ಋಷಿ, ಒಂದೊಂದು ದೇವತೆ- ಹೀಗೆ ಗೊತ್ತಾಗಿದೆ. ಅದರಲ್ಲಿಯೂ ಅಗ್ನಿಗೆ ಸಂಬಂಧಪಟ್ಟ ಸೂಕ್ತಗಳೇ ಬಹಳ. ಅಗ್ನಿ, ವಾಯು, ಸೂರ್ಯ, ಚಂದ್ರ- ಮುಂತಾದವು ಬೆಂಕಿ, ಗಾಳಿ, ಸೂರ್ಯಮಂಡಲ, ಚಂದ್ರಗ್ರಹ-ಇವುಗಳ ಹೆಸರೂ ಆಗಿರುವದರಿಂದ ಈ ಕಲ್ಪನಾಕುಶಲರು ಊಹಿಸಿರುವದೇನೆಂದರೆ : ಹಿಂದಕ್ಕೆ ನಾಗರಿಕತೆಯಿಲ್ಲದ್ದರಿಂದ ಜನರಿಗೆ ಬೆಂಕಿಯ ಉಪಯೋಗವೇ ತಿಳಿದಿರಲಿಲ್ಲ; ಆದ್ದರಿಂದ ಅವರು ಹೊಸದಾಗಿ ಬೆಂಕಿಯನ್ನು ಕಂಡಾಗ ಅದಕ್ಕೆ ತಮ್ಮಂತೆ ಜೀವವಿದೆ ಎಂದು ಭಾವಿಸಿದರು. ಹೀಗೆ ಗಾಳಿ, ನೀರು, ಭೂಮಿ -ಮುಂತಾದವುಗಳನ್ನೆಲ್ಲ ಸಜೀವಪ್ರಾಣಿಗಳೆಂದೂ ಸಾಮಾನ್ಯಮನುಷ್ಯರಿಗಿಂತ ಹೆಚ್ಚಿನ ಬಲವುಳ್ಳವರೆಂದೂ ಭಾವಿಸಿ, ಆ ಹೆಚ್ಚಿನ ಮಹಿಮೆಯ ದೇವತೆಗಳು ತಮಗೆ ಕೇಡುಮಾಡದೆ ಇರಲಿ, ತಮ್ಮಲ್ಲಿ ಪ್ರಸನ್ನರಾಗಿ ತಮ್ಮ ಇಷ್ಟಾರ್ಥಗಳನ್ನು ಕೊಡಲಿ !-ಎಂದು ಹಾರೈಸುತ್ತಿದ್ದರು. ಇಂಥ ಭಾವನೆಗಳನ್ನು ಋಷಿಗಳೆಂದು ಜನರು ಕರೆಯುವ ಕವಿಗಳು ಗ್ರಂಥರೂಪವಾಗಿ ರಚಿಸಿರುವ ಕಾವ್ಯಖಂಡಗಳೇ ಋಕ್ಕುಗಳು. ಇವುಗಳಲ್ಲಿ ಪ್ರಕೃತಿಯ ಶಕ್ತಿವಿಶೇಷಗಳನ್ನು 'ದೇವತೆ' ಎಂಬ ಹೆಸರಿನಿಂದ ಸ್ತೋತ್ರಮಾಡಿರುತ್ತದೆ. ಹೀಗೆ ದೇವತಾಕಲ್ಪನೆಯು ಪ್ರಾರಂಭವಾಗಿ ಬರುಬರುತ್ತಾ ಈ ದೇವತೆಗಳಿಗೆಲ್ಲ ಒಡೆಯನಾದ ಒಬ್ಬ 'ಮಹಾದೇವತೆ' ಯೊಬ್ಬನು ಇರಬೇಕೆಂದು ಕಲ್ಪಿಸಿಕೊಂಡರು ; ಅವನೇ ಈಶ್ವರನು ಅಥವಾ ದೇವರು.

ಈಗಲೂ ಎಲ್ಲಾ ದೇಶಗಳಲ್ಲಿಯೂ ಸ್ವಲ್ಪಮಟ್ಟಿಗೆ ಇಂಥ ದೇವತೆ, ಭೂತ, ಪ್ರೇತಾದಿಗಳಲ್ಲಿ ನಂಬಿಕೆಯು ಉಳಿದುಕೊಂಡಿದೆ. ಹಳ್ಳಿಗಳಲ್ಲಿ ಊರಿಗೊಂದು

ಅಮ್ಮ ಇದೆ. ಬೀರಪ್ಪ, ಮಾರಮ್ಮ–ಇವುಗಳನ್ನು ಪೂಜಿಸಿ ಹರಕೆಹಾಕಿಕೊಳ್ಳು ತ್ತಾರೆ; ಸಾಂಕ್ರಾಮಿಕರೋಗವು ಬಂದಾಗ ಎಡೆಕೊಡುವದು, ಪೂಜೆಪುರಸ್ಕಾರ ಗಳನ್ನು ವಿಶೇಷವಾಗಿ ಮಾಡುವದು– ಇವು ಈಗಲೂ ಇವೆ. ಅಲ್ಲಲ್ಲಿ ಮರಗಳ ಕೆಳಗೆ, ಬೆಟ್ಟಗುಡ್ಡಗಳಮೇಲೆ, ಗವಿಗಳಲ್ಲಿ, ದೇವತಾವಿಗ್ರಹಗಳನ್ನು ಜನರು ಪೂಜಿಸುತ್ತಿರುತ್ತಾರೆ. ದೇವತೆಗಳಿಗೆ ಒಬ್ಬರನ್ನು ಕಂಡರೆ ಒಬ್ಬರಿಗೆ ಆಗುವದಿಲ್ಲ ವೆಂಬ ನಂಬಿಕೆಯೂ ಇದೆ. ಬೈಬಲಿನಲ್ಲಿ ಕಾಣಬರುವ ಯೆಹೋವ ದೇವತೆಯ ನಂಬಿಕೆಗೆ ಪೂರ್ವದಲ್ಲಿ ಬಗೆಬಗೆಯ ಪಂಗಡಗಳ ದೇವತೆಗಳ ಕಚ್ಚಾಟವಿತ್ತೆಂದು ಇತಿಹಾಸದಿಂದ ತಿಳಿಯಬರುತ್ತದೆ. ಆದ್ದರಿಂದ ಐತಿಹಾಸಿಕರ ಈ ಕಲ್ಪನೆ ಏಕೆ ನಿಜವಾಗಿರಬಾರದು ?–ಎಂಬ ಶಂಕೆ ಎದ್ದುಕೊಳ್ಳುತ್ತದೆ.

ಧರ್ಮದ ಉಗಮಕ್ಕೆ ಮತ್ತೊಂದು ಕಲ್ಪನೆಯೂ ಉಂಟು. ತಮ್ಮತಮ್ಮ ಪೂಜ್ಯಪಿತೃಪಿತಾಮಹಾದಿಗಳು ಸತ್ತಿಲ್ಲ, ಇನ್ನೂ ಬದುಕಿದಾರೆ– ಎಂಬ ನಂಬಿಕೆ ಯಿಂದ ಸತ್ತವರಿಗೆ ಸಾಯುವಕಾಲದಲ್ಲಿ ಅವರು ಮಲಗಿದ್ದ ಸ್ಥಾನದಲ್ಲಿ ದೀಪವನ್ನು ಹಚ್ಚುವದು, ಅವರು ಸತ್ತಬಳಿಕ ಪ್ರೇತಕರ್ಮವನ್ನು ಮಾಡುವದು, ಶ್ರಾದ್ಧಾದಿ ಗಳನ್ನು ಮಾಡುವದು–ಇವೇ ಮುಂತಾದ ಪಿತೃಗಳ ಆರಾಧನಾಕ್ರಮದಿಂದ ಕ್ರಮ ಕ್ರಮವಾಗಿ ದೇವತೆಗಳ ಪೂಜೆಯು ಬಂದು ಏಕೇಶ್ವರವಾದವು ಕಾಲಕ್ರಮದಲ್ಲಿ ಏರ್ಪಟ್ಟಿರಬಹುದು ಎಂಬುದೇ ಈ ತತ್ತ್ವಾನ್ವೇಷಕರ ಕಲ್ಪನೆ. ಇದೂ ಅಸಂಭವ ವೆನ್ನುವಹಾಗಿಲ್ಲ.

ಇದು ಹೇಗಾದರೂ ಇರಲಿ, ಜನರಿಗೆ ಹೇಗೋ ದೇವತೆಗಳ, ಮತ್ತು ಈಶ್ವರನ ಕಲ್ಪನೆಯು ಮೂಡಿದಮೇಲೆ ದೇವತೆಗಳ ಪ್ರಾರ್ಥನೆ, ಸ್ತೋತ್ರ, ಧ್ಯಾನ –ಮುಂತಾದ ಉಪಾಸನಾಕ್ರಮಗಳು ಏರ್ಪಟ್ಟು ಇಂಥ ಅಧ್ಯಾತ್ಮತತ್ತ್ವಗಳನ್ನು ಮತ್ತೊಬ್ಬರಿಗೆ ಉಪದೇಶಮಾಡುವವರೂ ಧಾರ್ಮಿಕಗ್ರಂಥಗಳೂ ಹುಟ್ಟಿ ಕೆಲವು ಶತಮಾನಗಳವರೆಗೆ ಪ್ರಬಲವಾಗಿ ವ್ಯಾಪಿಸಿಕೊಂಡವು. ಆದರೆ ಅವುಗಳೆಲ್ಲ ಈಗ ಹಿಂದಕ್ಕೆ ಸರಿಯುತ್ತಾಬಂದು ಎಲ್ಲಿಯೋ ಒಂದೊಂದು ಕಡೆ ನಾಮಾವಶೇಷವಾಗಿ ಉಳಿದುಕೊಂಡಿರುವದು ಕಾಣುತ್ತಾ ಇದೆ. ಈಗ ಹೀಗೆ ಆತ್ಮೇಶ್ವರರಲ್ಲಿ ನಂಬಿಕೆಯು ಕುಗ್ಗುವದಕ್ಕೆ ಕಾರಣವೇನು ? ಇದಕ್ಕೆ ವಿಜ್ಞಾನಶಾಸ್ತ್ರದ ಬೆಳವಣಿಗೆಯೇ ಕಾರಣ. ಈಗ ಪುರಾಣಗಳ ಕಥೆಯನ್ನೂ ಅವುಗಳಲ್ಲಿ ವರ್ಣಿತವಾಗಿರುವ ಭೂ ವಿವರಣೆಯನ್ನೂ ಯಾರೂ ನಂಬುವದಿಲ್ಲ; ಭೂಮಿಯು 'ಅಚಲಾ' ಎಂದು ಅಮರ ಕೋಶದಲ್ಲಿದೆಯೆಂಬ ಕಾರಣದಿಂದ ಈಗ ಯಾರೂ ಹಾಗೆಂದು ಭಾವಿಸುವದಿಲ್ಲ. ಭೂಮಿಯು ತನ್ನ ಅಕ್ಷದಮೇಲೆ ದಿನಕ್ಕೊಂದುಸಲ ತಿರುಗುತ್ತಿದೆ; ಒಂದುವರ್ಷದ ಕಾಲಾವಧಿಯಲ್ಲಿ ಸೂರ್ಯನ ಸುತ್ತಲೂ ಸುತ್ತುತ್ತಿದೆ– ಎಂಬ ತಿಳಿವಳಿಕೆಯು ಸ್ಕೂಲುಹುಡುಗರ ಬಾಯಲ್ಲಿರುವ ಭೂಗೋಳಪಾಠದಲ್ಲಿಯೂ ಇದ್ದುಕೊಂಡಿದೆ.

ಮತಗಳೆಲ್ಲವೂ ಈ ವಿಜ್ಞಾನಶಾಸ್ತ್ರದ ಪ್ರಭಾವದಿಂದ ಅಸ್ತವ್ಯಾಗುತ್ತಿವೆ. ಆದರೆ ಈ ವಿಜ್ಞಾನಶಾಸ್ತ್ರವಾದರೂ ನಮ್ಮ ಆತ್ಮನ ಅಥವಾ ಈಶ್ವರನ ವಿಷಯದಲ್ಲಿ ಏನಾದರೂ ಹೇಳುತ್ತಿದೆಯೆ ?– ಎಂದರೆ ಈ ವಿಷಯದಲ್ಲಿ ನನಗೇನೂ ತಿಳಿಯದು ಎಂದು ಬಾಯಿಮುಚ್ಚಿಕೊಂಡು ಕುಳಿತಿದೆ. ಅಜ್ಞಾನವಾದಿಗಳು ಅಥವಾ ಅನಿರ್ಧಾರಣವಾದಿಗಳು (Agnostics) ಎಂಬವರು ಕೆಲವರು ಹುಟ್ಟಿಕೊಂಡಿರುತ್ತಾರೆ ; ಅವರು ಈ ವಿಷಯದಲ್ಲಿ ಏನನ್ನೂ ನಿರ್ಧರಿಸಿ ಹೇಳಲಾಗುವಂತಿಲ್ಲ. ಈ ವಿಷಯದಲ್ಲಿ ಅನುಕೂಲ ಅಥವಾ ಪ್ರತಿಕೂಲಪ್ರಮಾಣಗಳೇನೂ ಕಾಣುವದಿಲ್ಲ-ಎಂದಿಷ್ಟೇ ಹೇಳುತ್ತಿದಾರೆ.

ಈ ಜಗತ್ತಿನ ವಿಚಿತ್ರರಚನೆಯನ್ನು ನೋಡಿದರೆ, ಇದನ್ನೊಬ್ಬನು ನಿರ್ಮಾಣ ಮಾಡಿರುತ್ತಾನೆಂದು ಹೇಳಬೇಕಾಗುತ್ತದೆ. ಗಡಿಯಾರವನ್ನು ನೋಡಿದರೆ ಅದನ್ನು ಮಾಡಿದವನೊಬ್ಬನು ಇರಬೇಕೆನಿಸುವದಿಲ್ಲವೆ ? ಅದರಂತೆಯೇ ಈ ಜಗತ್ತನ್ನು ನಿರ್ಮಿಸಿದವನೂ ಒಬ್ಬನು ಇರಬೇಡವೆ ?– ಎಂದು ಪೇಲಿ ಎಂಬಾತನು ಚರ್ಚಿಸಿ ಹೇಳಿದನಂತೆ. ಇದೇ ರೀತಿಯ ಬೇರೆಬೇರೆಯ ಯುಕ್ತಿಗಳನ್ನೊಡ್ಡಿ ಈಶ್ವರನ ಅಸ್ತಿತ್ವವನ್ನು ಒಪ್ಪಿಸುವದಕ್ಕೆ ಅನೇಕರು ಪ್ರಯತ್ನಮಾಡಿರುತ್ತಾರೆ. ಅದಕ್ಕೆ ಪ್ರಕೃತಿಸ್ವಭಾವಾನುಮೇಯೇಶ್ವರವಾದ ((Natural Theology) ಎಂದು ಹೆಸರು. ಅಂಥ ಯುಕ್ತಿಗಳಿಂದ ಈಶ್ವರನೊಬ್ಬನು ಇರಬಹುದೆಂದು ಒಬ್ಬರು ನಂಬಿದರೆ ಪ್ರತಿಯುಕ್ತಿಗಳಿಂದ ಅವನು ಇರಬೇಕಾದದ್ದಿಲ್ಲವೆಂಬುದನ್ನು ಸಿದ್ಧ ಮಾಡಿದ ನಾಸ್ತಿಕರೂ ಇರುತ್ತಾರೆ. ಒಮ್ಮೆ ಒಂದು ಹೋಟಲಿನಲ್ಲಿ ಅಡಿಗೆಯಾಗುವದು ತಡವಾದ್ದರಿಂದ ಅಲ್ಲಿಗೆ ಊಟಕ್ಕೆ ಬಂದವರು ಈಶ್ವರಾಸ್ತಿತ್ವದ ವಿಷಯಕ್ಕೆ ಚರ್ಚೆಯನ್ನು ಮೊದಲು ಪ್ರಾರಂಭಿಸಿದರು. 'ನನಗೆ ತಂದೆಯಿದಾನೆಂದು ಪ್ರತಿಯೊಬ್ಬನೂ ನಂಬುತ್ತಾನೆ : ಅದರಂತೆ ಈ ಲೋಕಕ್ಕೆಲ್ಲ ತಂದೆಯ ಸ್ಥಾನದಲ್ಲಿ ಒಬ್ಬನಿರಬೇಕು'– ಎಂದು ಒಬ್ಬನು ವಾದಿಸಿದನು. ಲೋಕದಲ್ಲಿ ತಂದೆತಾಯಿಗಳಿಂದ ಮಕ್ಕಳು ಹುಟ್ಟುವದು ಪ್ರಸಿದ್ಧವಾಗಿದೆಯಾದರೂ ಈ ಜಗತ್ತು ಹಾಗೆ ಒಬ್ಬ ತಂದೆಯಿಂದ ಅಥವಾ ತಾಯಿಯಿಂದ ಹುಟ್ಟಿತೆಂದು ತಿಳಿಯುವದಕ್ಕೆ ಕಾರಣವಿಲ್ಲ; ಮೊದಲು ಅದು ಯಾವಾಗಲಾದರೂ ಹುಟ್ಟಿತೊ, ಅಥವಾ ಎಂದೆಂದಿನಿಂದಲೂ ಹೀಗೆಯೇ ಇದೆಯೊ ಯಾರು ಬಲ್ಲರು ?–ಎಂದು ಮತ್ತೊಬ್ಬನು ಪ್ರತಿವಾದವನ್ನು ಹೂಡಿದನು. ಎಲ್ಲರೂ ಚರ್ಚಿಸಿದರು. ಆದರೆ ಎಲ್ಲರಿಗೂ ಸಮ್ಮತವಾದ ಯಾವದೊಂದು ವಾದವೂ ಮುಂದಕ್ಕೆ ಬರಲಿಲ್ಲ. ಕೊನೆಗೆ ಊಟಕ್ಕೆ ಹೊತ್ತಾದದ್ದರಿಂದ ಚರ್ಚೆಯು ಅಲ್ಲಿಗೇ ನಿಂತುಬಿಟ್ಟಿತು ! ಈ ವಿಷಯದಲ್ಲಿ ಜಗಳವು ಆಸ್ತಿಕರಿಗೂ ನಾಸ್ತಿಕರಿಗೂ ಇಂದಿಗೂ ಉಳಿದುಕೊಂಡೇ ಇದೆ. ಅದಂತಿರಲಿ. ನಮ್ಮಗಳಿಗೆ ಆತ್ಮನೊಬ್ಬನಿದಾನೆಯೆ ? ಶರೀರವನ್ನು ಕೊಯ್ದುನೋಡಿದರೆ ರಕ್ತ, ಮಾಂಸ ಮೂಳೆ–ಮುಂತಾದವುಗಳು ಕಾಣುವಂತೆ ಆತ್ಮನು ಕಾಣಿಸುತ್ತಾನೆಯೆ ? ಹೀಗಿರು

ವಲ್ಲಿ ಆತ್ಮನೊಬ್ಬನು ಇದಾನೆಂದು ನಂಬುವದಕ್ಕೆ ಕಾರಣವೇನು ?– ಎಂದು ನಾಸ್ತಿಕರು ಕೇಳುವರು. 'ನಾನು ನನ್ನ ಶರೀರಾದಿಗಳನ್ನುಪಯೋಗಿಸುತ್ತೇನೆ' ಎಂಬ ನಂಬಿಕೆಯು ಎಲ್ಲರಿಗೂ ಇರುವದರಿಂದ ಈ ಶರೀರಸ್ವಾಮಿಯಾದ ಆತ್ಮನು ಇರಬೇಡವೆ ? –ಎಂದು ಆಸ್ತಿಕರು ಕೇಳುತ್ತಿರುವರು.

ಈ ವಿಷಯದಲ್ಲಿ ವೇದಾಂತವು ಹೇಳುವದು ಏನಾದರೂ ಇದೆಯೆ ?–ಎಂಬ ಕುತೂಹಲವು ಈ ವಾದವಿವಾದಗಳಿಂದ ದಿಗ್ಭ್ರಮೆಯಾಗಿರುವವರಿಗೆ ಸ್ವಾಭಾವಿಕ ವಾಗಿ ಉಂಟಾಗುತ್ತದೆಯಷ್ಟೆ ? ಮತಗಳೂ ಸೋತು, ವಿಜ್ಞಾನಶಾಸ್ತ್ರವೂ ಮೂಕತ್ವವನ್ನು ವಹಿಸಿ ಕುಳಿತಿರುವ ಈ ವಿಷಯದಲ್ಲಿ ವೇದಾಂತದಲ್ಲಿ ಯಾವ ದಾದರೂ ಬೆಳಕು ಸಿಕ್ಕಿದರೆ ಅದನ್ನು ಯಾರುತಾನೆ ಸ್ವಾಗತಿಸಲಾರರು ? ಈ ಪ್ರಪಂಚದ ತತ್ತ್ವವೇನು ? ನಮ್ಮಗಳ ಪರಮಾರ್ಥಸ್ವರೂಪದ ತತ್ತ್ವವೇನು ? ನನ್ನ ಕರ್ತವ್ಯವೇನು ? ಈಶ್ವರನೊಬ್ಬನಿದಾನೆಯೆ ? ಇದ್ದರೆ ಅವನಿಗೂ ನನಗೂ ಸಂಬಂಧವೇನು ? –ಎಂಬ ಪ್ರಶ್ನೆಯು ವಿಚಾರಶೀಲರೆಲ್ಲರಿಗೂ ಸ್ವಾಭಾವಿಕವಾಗಿ ಮುಂದೆ ಬರುತ್ತದೆಯಷ್ಟೆ ? ಈ ಪ್ರಶ್ನೆಗೆ ವೇದಾಂತದ ಮೂಲಸ್ಥಾನವಾದ ಉಪನಿ ಷತ್ತುಗಳಲ್ಲಿ ಈ ಉತ್ತರವು ಸಿಕ್ಕುತ್ತದೆ.

(೧) 'ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ'

'ಈ ಅತ್ಯಂತಸೂಕ್ಷ್ಮವಾದ ತತ್ತ್ವವಿದೆಯಲ್ಲ, ಇದೇ ಈ ಜಗತ್ತೆಲ್ಲಕ್ಕೂ ಆತ್ಮವು, ಸಾರವು ; ಅದೇ ಸತ್ಯವು, ಅದೇ ನಮ್ಮೆಲ್ಲರ ಆತ್ಮನು, ಅದೇ ನೀನು' (ಛಾಂ. ೬–೮–೭). ಈ ವಾಕ್ಯದ ಅರ್ಥವನ್ನು ಮನನಮಾಡಿದರೆ ಈಶ್ವರಸಿದ್ಧಿಯೂ ಆತ್ಮಸಿದ್ಧಿಯೂ ಒಮ್ಮೆಗೇ ಆಗಿಬಿಡುತ್ತದೆ. (If there be a God, let that Mr. God come and present himself before me) 'ಈಶ್ವರನೆಂಬವನೊಬ್ಬನಿದ್ದರೆ, ಆ ಮಹಾರಾಜಶ್ರೀ ಈಶ್ವರನು ಇಲ್ಲಿ ನನ್ನಮುಂದೆ ಬಂದು ನಿಲ್ಲಲಿ !' ಎಂದು ಒಬ್ಬ ಗಣಿತಶಾಸ್ತ್ರದಲ್ಲಿ ಸೀನಿಯರ್ ರ್ಯಾಂಗ್ಲರ್ ಪದವಿ ಯನ್ನು ಪಡೆದಿದ್ದ ವಿದ್ವಾಂಸನು ಕೈತೋರಿಸಿದನಂತೆ. ಅಯ್ಯೋ, ವಿದ್ವತ್ತೆ ! ನೀನು ಈಗ ನೀಡಿ ತೋರಿಸಿದ ಕೈಗೆ ಹೀಗೆ ಅಲುಗಾಡುವ ಶಕ್ತಿಯನ್ನು ಕೊಟ್ಟವನೇ ಈಶ್ವರನೆಂಬುದು ನಿನಗೆ ತೋರದೆಹೋಯಿತಲ್ಲ ! ಹೀಗೆಯೇ 'ಆ ಮಹಾವಿಷ್ಣುವೆಂಬವವನು ಎಲ್ಲಿದಾನೆಯೊ ?' ಎಂದು ಹಿರಣ್ಯಕಶಿಪು ಗದರಿಸಿ ಕೇಳಿದ ಪ್ರಶ್ನೆಗೆ ಪ್ರಹ್ಲಾದನು 'ಅವನು ನನ್ನಲ್ಲಿಯೂ ಇದಾನೆ, ನಿನ್ನಲ್ಲಿಯೂ ಇದಾನೆ' ಎಂದು ಉತ್ತರವನ್ನು ಕೊಟ್ಟನು. ಈ ವಿದ್ವಾಂಸನು ಪುರಾಣಶ್ರವಣ ಮಾಡಿರಲಿಲ್ಲವಾದ್ದರಿಂದ ಹೀಗೆ ಕೇಳಿದ್ದೇನೂ ಆಶ್ಚರ್ಯವಲ್ಲ.

ಪುರಾಣದಲ್ಲಿ ಹೇಳಿದ ಆ 'ತ್ವಯ್ಯಸ್ತಿ ಮಯ್ಯಸ್ತಿ ಚ' ಎಂಬ ಈ ವಾಕ್ಯವು ಉಪನಿಷತ್ತಿನ ಸಾರವೇ ಆಗಿರುತ್ತದೆ. ವೇದಕ್ಕೆ ಅಧಿಕಾರ ವಿಲ್ಲದವರೂ ಈ ತತ್ತ್ವ

ವನ್ನು ಇತಿಹಾಸಪುರಾಣಗಳಮೂಲಕ ತಿಳಿದುಕೊಳ್ಳುವದಕ್ಕೆ ಅವಕಾಶವಿರುತ್ತದೆ 'ಶ್ರಾವಯೇಚ್ಚತುರೋ ವರ್ಣಾನ್ ಕೃತ್ವಾ ಬ್ರಾಹ್ಮಣಮಗ್ರತಃ' ಈ ಇತಿಹಾಸವನ್ನು ಬ್ರಾಹ್ಮಣನನ್ನು ಮುಂದೆಮಾಡಿಕೊಂಡು ನಾಲ್ಕು ವರ್ಣದವರಿಗೂ ತಿಳಿಸಬೇಕು– ಎಂದು ಮಹಾಭಾರತದಲ್ಲಿ ವಾಕ್ಯವಿದೆ. ಇತಿಹಾಸಪುರಾಣಗಳಲ್ಲಿ ಶ್ರುತಿವಾಕ್ಯಗಳನ್ನೇ ಸ್ವರರಹಿತವಾಗಿ ಲೌಕಿಕವಾಕ್ಯಗಳಂತೆ ಎಣಿಸಿ ಅಕ್ಷರಶಃ ತಂದಿಳಿಸಿರುವದು ಈ ಕಾರಣದಿಂದಲೇ. ಸೂತಸಂಹಿತೆಯಲ್ಲಿ ಮ್ಲೇಚ್ಛರುಕೂಡ ಭಾಷಾಂತರದಮೂಲಕವಾಗಿ ತತ್ತ್ವವನ್ನು ತಿಳಿದುಕೊಳ್ಳಬಹುದೆಂದಿರುವದು ವೇದಾಂತಿಗಳ ಉದಾರಭಾವವನ್ನು ಸೂಚಿಸುತ್ತದೆ. ನಿಷ್ಕಾರಣವಾಗಿ ವೇದವನ್ನು ಓದಬೇಕೆಂಬುದು ಕರ್ತವ್ಯವಾಗಿರುವ ಬ್ರಾಹ್ಮಣರಲ್ಲಿಕೂಡ ಈಗ್ಗೆ ಬಹುಜನರಿಗೆ ಸಂಸ್ಕೃತಭಾಷೆಯ ಪರಿಚಯವು ಕಡಿಮೆಯಾಗುತ್ತಾಬಂದಿದೆ. ಅವರೂ ಭಾಷಾಂತರದಮೂಲಕವಾಗಿಯೇ ತತ್ತ್ವವನ್ನು ವಿಚಾರಮಾಡಿ ತಿಳಿದುಕೊಳ್ಳಬೇಕಾಗಿ ಬಂದಿರುವದು ಎಂಥ ಶೋಚನೀಯ ! ಆದರೂ ಅಮರವಾಣಿಯಾದ ಸಂಸ್ಕೃತವು ಇನ್ನೂ ಉಳಿದುಕೊಂಡಿದೆ. ಆದರ ಭಾವಗಳು ದೇಶಭಾಷೆಯ ಗ್ರಂಥಗಳಲ್ಲಿಯೂ ಕಾಣಬರುತ್ತಾಇವೆ. ಉದಾಹರಣೆಗೆ ಇನ್ನೊಂದು ಉಪನಿಷದ್ವಾಕ್ಯವನ್ನು ಇಲ್ಲಿ ಉದಾಹರಿಸುವೆನು :

(೨) ಏತಜ್ಜ್ಞೇಯಂ ನಿತ್ಯಮೇವಾತ್ಮಸಂಸ್ಥಂ ನಾತಃ ಪರಂ ವೇದಿತವ್ಯಂ ಹಿ ಕಿಂಚಿತ್ | ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್ || (ಶ್ವೇ..೧-೧೨)

'ಎಂದಿಗೂ ಆತ್ಮನ ರೂಪದಿಂದಲೇ ಇದ್ದುಕೊಂಡಿರುವ ಈ ತತ್ತ್ವವನ್ನೇ ಅರಿತುಕೊಳ್ಳಬೇಕು. ಇದಕ್ಕಿಂತ ಹೆಚ್ಚಿನ ಜ್ಞೇಯವಿಲ್ಲ ; ಭೋಕ್ತೃ, ಭೋಗ್ಯ, ಪ್ರೇರಕನಾದ ಈಶ್ವರ– ಈ ಮೂರುರೂಪವಾಗಿ ಕಾಣುವದೆಲ್ಲವೂ ಈ ಬ್ರಹ್ಮವೇ' (ಶ್ವೇ. ೧-೧೨.)

ಈ ಶ್ವೇತಾಶ್ವತರವಾಕ್ಯದಲ್ಲಿ 'ಇಡಿಯ ಜಗತ್ತೇ ಬ್ರಹ್ಮವಾಗಿರುತ್ತದೆ. ಅದನ್ನು ನಮ್ಮ ಆತ್ಮನೆಂದೇ ಅರಿತುಕೊಳ್ಳಬೇಕು. ಹೀಗೆಂದು ಅರಿತುಕೊಂಡರೆ ಆಮೇಲೆ ಅರಿತುಕೊಳ್ಳಬೇಕಾದದ್ದು ಯಾವದೊಂದೂ ಇರುವದಿಲ್ಲ' ಎಂದು ಸ್ಪಷ್ಟವಾಗಿ ಹೇಳಿರುತ್ತದೆ.

ಇನ್ನೆರಡು ವಾಕ್ಯಗಳನ್ನು ನೋಡಿ.

(೩) ನವದ್ವಾರೇ ಪುರೇ ದೇಹೀ ಹಂಸೋ ಲೇಲಾಯತೇ ಬಹಿಃ | ವಶೀ ಸರ್ವಸ್ಯ ಲೋಕಸ್ಯ ಸ್ಥಾವರಸ್ಯ ಚರಸ್ಯ ಚ || ಶ್ವೇ. ೩ ೧೮.

(೪) ತ್ವಂ ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತ ವಾ ಕುಮಾರೀ |
ತ್ವಂ ಜೀರ್ಣೋ ದಂಡೇನ ವಂಚಸಿ ತ್ವಂ ಜಾತೋ ಭವಸಿ ವಿಶ್ವತೋ
ಮುಖಃ || ಶ್ವೇ. ೪-೩.

'ನವದ್ವಾರದ ಪುರದಲ್ಲಿ ಹಂಸನು ಸಂಚರಿಸುತ್ತಿರುವನು. ಅವನು ಸ್ಥಾವರ ಜಂಗಮಾತ್ಮಕವಾದ ಸರ್ವಲೋಕಗಳನ್ನೂ ಸ್ವಾಧೀನದಲ್ಲಿಟ್ಟುಕೊಂಡಿರುತ್ತಾನೆ'– ಎಂಬುದು ಮೊದಲನೆಯ ವಾಕ್ಯದ ಅಭಿಪ್ರಾಯ. ಶರೀರದಲ್ಲಿರುವ ಜೀವನಿಗೂ ಪರಮಾತ್ಮನಿಗೂ ಪರಮಾರ್ಥದೃಷ್ಟಿಯಿಂದ ಐಕ್ಯವೇ ಇರುತ್ತದೆ–ಎಂದು ಅಲ್ಲಿ ಹೇಳಿರುತ್ತದೆ. ಎರಡನೆಯ ವಾಕ್ಯದಲ್ಲಿ 'ಪರಮಾತ್ಮನೇ ಹೆಂಗಸು, ಅವನೇ ಗಂಡಸು ; ಅವನೇ ಹುಡುಗನು, ಅವನೇ ಹುಡುಗಿ ; ಅವನೇ ಕೋಲನ್ನು ಹಿಡಿದುಕೊಂಡು ನಡೆಯುತ್ತಿರುವ ಮುದುಕನು' ಎಂದು ಎಲ್ಲರ ಆತ್ಮನೂ ಪರಮೇಶ್ವರನೆಂದೇ ಘೋಷಿಸಿರುತ್ತದೆ. ಕೆಲವು ಮತಗಳಲ್ಲಿ ಹೆಂಗಸರಿಗೆ ಆತ್ಮನಿಲ್ಲ ವೆಂದಿರುವದು ಸರ್ವಥಾ ಸರಿಯಲ್ಲ ; ಸರ್ವಪ್ರಾಣಿಗಳಿಗೂ ಆತ್ಮನು ಒಬ್ಬನೇ ಪರಮಾತ್ಮನು– ಎಂಬುದು ವೇದಾಂತದ ಹೇಳಿಕೆ.

ಈಗ ಇನ್ನೊಂದು ವಾಕ್ಯವನ್ನು ನೋಡೋಣ :

(೪) ತದೇವಾಗ್ನಿಸ್ತದಾದಿತ್ಯಸ್ತದ್ವಾಯುಸ್ತದು ಚಂದ್ರಮಾಃ |
ತದೇವ ಶುಕ್ರಂ ತದ್ಬ್ರಹ್ಮ ತದಾಪಸ್ತತ್ ಪ್ರಜಾಪತಿಃ|| ಶ್ವೇ. ೪–೨

ಆ ಪರಮಾತ್ಮನೇ ಅಗ್ನಿ, ಅವನೇ ಆದಿತ್ಯ, ಅವನೇ ವಾಯು, ಅವನೇ ಚಂದ್ರನು, ಅವನೇ ಶುದ್ಧವಾದ ಬ್ರಹ್ಮವು, ಅವನೇ ಅಪ್ಪು, ಅವನೇ ಪ್ರಜಾಪತಿ ಯು, ಪರಮಾತ್ಮನೇ ಆಧಿದೈವಿಕವಾಗಿರುವ ಅಗ್ನ್ಯಾದಿಗಳು, ಸಕಲದೇವತೆಗಳ ಆತ್ಮನೂ ಅವನೇ, ಆಧಿದೈವಿಕವಾಗಿ ಸೂರ್ಯನಲ್ಲಿರುವ ಪರಮಾತ್ಮನ ಪರಮಾರ್ಥ ರೂಪದಲ್ಲಿ ಯಾವ ಕಲಂಕವಾಗಲಿ, ಭೇದವಾಗಲಿ ಆಗಿರುವದಿಲ್ಲ– ಎಂಬುದು ವೇದಾಂತದ ಘಂಟಾಘೋಷವಾದ ಹೇಳಿಕೆ. ಇಲ್ಲಿ ಹೊರಗಣ್ಣಿಗೆ ಕಾಣುವ ಸೂರ್ಯಾದಿಗಳನ್ನೇ ದೇವರೆಂದು ಕರೆದಿದೆ ಎಂದು ಮತಾಂತರದವರು ಇದನ್ನು ಸಕಲೇಶ್ವರವಾದ (Pantheism) ಎಂದು ಕರೆದಿರುತ್ತಾರೆ ; ವಿಗ್ರಹಾರಾಧನೆ (idolatry) ಎಂದು ಹಳಿದಿರುತ್ತಾರೆ. ವೇದಾಂತದ ಒಳಗಣ್ಣು ಇಲ್ಲದಿರುವದೇ ಅವರ ಈ ಅಭಿಪ್ರಾಯಕ್ಕೆ ಕಾರಣ. ಇಡಿಯ ಜಗತ್ತಿಗೇ ಪರಮಾತ್ಮನು ಆತ್ಮನು ಎಂಬುದು ವೇದಾಂತದ ಮೂಲೋಪದೇಶ.

ಆತ್ಮನಿರುವನೆಂಬುದಕ್ಕೆ ಪ್ರಮಾಣವೇನು ?– ಎಂದರೆ ಅವನು ಆತ್ಮನಾಗಿ ರುವದೇ. ಆತ್ಮನೆಂಬುವನು ಅಪ್ರತ್ಯಾಖ್ಯೇಯಸ್ವಭಾವನು; ಅವನು ಇಲ್ಲವೆಂದು ಚಿಂತಿಸುವದಕ್ಕೂ ಆಗದೆಇರುವಂಥ ಸ್ವಭಾವದವನು.

ಅಸ್ತಿ ಸ್ವಯಮಿತ್ಯಸ್ಮಿನ್ನರ್ಥೇ ಕಸ್ಯಾಸ್ತಿ ಸಂಶಯಃ ಪುಂಸಃ |
ಅತ್ರಾಪಿ ಸಂಶಯಶ್ಚೇತ್ ಸಂಶಯಿತಾ ಯಃ ಸ ಏವ ಭವಸಿ ತ್ವಮ್ ||

ನನ್ನ ಆತ್ಮನು ಇದಾನೆ ಎಂಬುದರಲ್ಲಿ ಯಾವನಿಗೆತಾನೆ ಸಂಶಯವಾದೀತು ? ಈ ವಿಷಯದಲ್ಲಿಯೂ ಸಂಶಯವಿದೆ ಎನ್ನುವದಾದರೆ, 'ಹೀಗೆ ಸಂಶಯಮಾಡುವ ನೀನೇ ಆತ್ಮನು– ಎಂದು ಹೇಳಬೇಕು' ಎಂಬುದು ವೇದಾಂತದ ವಿಚಾರಕ್ರಮ. ಆತ್ಮಸಿದ್ಧಿಗೆ ಯಾವ ಪ್ರಮಾಣವೂ ಬೇಕಿರುವದಿಲ್ಲ ; ಆತ್ಮನು ಸ್ವಯಂಸಿದ್ಧನಾಗಿರುತ್ತಾನೆ ; ಆದರೆ ಆತ್ಮನ ನಿಜವಾದ ಸ್ವರೂಪವು ಯಾವದು ?– ಎಂಬ ವಿಷಯದಲ್ಲಿಮಾತ್ರ ವಿವಾದವುಂಟಾಗಬಹುದು. ಅಷ್ಟೆ. ಡೆಕಾರ್ಟೆ ಎಂಬ ಪಾಶ್ಚಾತ್ಯ ವಿದ್ವಾಂಸನು (Cogito ergo sum) ನಾನು ಆಲೋಚಿಸುತ್ತಿರುತ್ತೇನೆ, ಆದ್ದರಿಂದ ಇದೇನೆ–ಎಂದು ಆತ್ಮನನ್ನು ಅನುಮಾನದಿಂದ ಸಿದ್ಧಮಾಡುವದಕ್ಕೆ ಪ್ರಯತ್ನಿಸಿದ್ದನು. ಆದರೆ ಹಾಗೆ ಅನುಮಾನಮಾಡುವವನ ಸ್ವರೂಪವು ಅನುಮಾನದ ಪ್ರವೃತ್ತಿಗಿಂತ ಮೊದಲೇ ಸಿದ್ಧವಾಗಿರಬೇಕಲ್ಲವೆ ? ಸ್ವಯಂಸಿದ್ಧನಾದ ಆತ್ಮನನ್ನು ಯಾವನು ಏತರಿಂದ ಸಿದ್ಧಮಾಡಬೇಕು ?

ಇನ್ನು ಈಶ್ವರಸಿದ್ಧಿಯ ವಿಚಾರ : ಈಶ್ವರನಿದಾನೆ ಎಂಬುದಕ್ಕೆ ಪ್ರಮಾಣವೇನು ?– ಎಂದರೆ ವೇದಾಂತದ ಉತ್ತರವಿದು :

ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್ |
ತಸ್ಯಾವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ || ಶ್ವೇ ೪–೧೦.

ಜಗತ್ತಿನ ಪ್ರಕೃತಿಯು ಮಾಯೆ ಎಂದು ತಿಳಿಯಬೇಕು. ಜಗತ್ತೆಲ್ಲವೂ ಆ ಮಾಯೆಯ ವಿಲಾಸವೇ. ಈ ಜಗತ್ತಿನ ತತ್ತ್ವವು ಎಷ್ಟೆಷ್ಟು ವಿಚಾರ ಮಾಡಿದರೆ ಅಷ್ಟಷ್ಟು ನಿಗೂಢವಾಗುತ್ತಿರುವದು. ವಿಜ್ಞಾನಶಾಸ್ತ್ರದವರು ಮಾಡುತ್ತಿರುವ ಹೊಸಹೊಸ ಶೋಧಗಳಿಂದ ಜಗತ್ತಿನ ತತ್ತ್ವವೇನೆಂಬುದು ಯಾರೊಬ್ಬರಿಗೂ ಗೊತ್ತಾಗುತ್ತಿಲ್ಲ. ಈ ಮಾಯೆಯು ಮಾಯಾವಿಯಾದ ಮಹೇಶ್ವರನ ವಶದಲ್ಲಿದೆ. ಹೇಗೆ ಮಾಯಾವಿಯು ತನ್ನ ಸ್ವಾತಂತ್ರ್ಯದಿಂದ ಮಾಯೆಯನ್ನು ಹರಡಿ, ಸ್ವತಂತ್ರೇಚ್ಛೆಯಿಂದ ಅದನ್ನು ಮತ್ತೊಮ್ಮೆ ಹಿಂದಕ್ಕೆ ಸರಿಯಿಸಿಕೊಳ್ಳುವನೋ ಹಾಗೆ ಈಶ್ವರನೊಬ್ಬನೇ ಈ ಜಗತ್ತನ್ನು ವಶದಲ್ಲಿಟ್ಟುಕೊಂಡಿರುತ್ತಾನೆ. ಆ ಪರಮೇಶ್ವರನನ್ನು ಎಲ್ಲಿ ಕಾಣಬೇಕು? ಅವನು ಈ ಜಗತ್ತನ್ನೆಲ್ಲ ತನ್ನ ಅವಯವಭೂತರಾದ ಜೀವರುಗಳ ರೂಪದಿಂದ ವ್ಯಾಪಿಸಿಕೊಂಡಿರುತ್ತಾನೆ. ಈ ಜಗತ್ತಿನಲ್ಲಿರುವ ಚರಾಚರಪ್ರಾಣಿಗಳೆಲ್ಲವೂ ಅವನ ವಿಭೂತಿಯೇ. ಆತನು ಯಾವದೊಂದು ವಿಭೂತಿಯಲ್ಲಿಯೂ ತನ್ನ ಒಂದು ಖಂಡವಾದ ಅಂಶವನ್ನಿಟ್ಟಿರುವದಿಲ್ಲ, ಪ್ರತಿಯೊಂದು ಪ್ರಾಣಿಯಲ್ಲಿಯೂ– ಆನೆಯಲ್ಲಿ ಎಷ್ಟರಮಟ್ಟಿಗೋ ಇರುವೆಯಲ್ಲಿ

ಅಷ್ಟೇಮಟ್ಟಿಗೇ- ಪೂರ್ಣವಾದ ತನ್ನ ಸ್ವರೂಪವನ್ನೇ ಇಟ್ಟಿರುತ್ತಾನೆ. ಎಲ್ಲರಿಗೂ ತನ್ನ ಆತ್ಮಸ್ವರೂಪವನ್ನೇ ಧಾರೆಯೆರೆದುಕೊಟ್ಟು ತಾನು ತನ್ನ ನಿತ್ಯಶುದ್ಧಬುದ್ಧ ಮುಕ್ತಸ್ವರೂಪದಲ್ಲಿ ಹಾಗೆಯೇ ಇದ್ದುಕೊಂಡಿರುತ್ತಾನೆ.

ಆದ್ದರಿಂದ ಈಶ್ವರಸಿದ್ಧಿಗೆ ಪ್ರಮಾಣವೇನು ? ಎಂದರೆ ಪ್ರತಿಯೊಬ್ಬನೂ ತಾನಿರುವದೇ ಆತನ ಅಸ್ತಿತ್ವಕ್ಕೆ ಪ್ರಮಾಣವು ಎಂದುಕೊಳ್ಳಬೇಕು. 'ಅಸನ್ನೇವ ಸ ಭವತಿ ಅಸದ್ ಬ್ರಹ್ಮೇತಿ ವೇದ ಚೇತ್ | ಅಸ್ತಿ ಬ್ರಹ್ಮೇತಿ ಚೇತ್ ವೇದ | ಸನ್ತಮೇನಂ ತತೋ ವಿದುಃ || (ತೈ. ೨-೬) ಬ್ರಹ್ಮವು ಇಲ್ಲವೆಂದು ತಿಳಿದನಾದರೆ ಅವನು ತಾನೂ ಇಲ್ಲದವನೇ ಆಗುತ್ತಾನೆ; ಬ್ರಹ್ಮವು ಇದೆ ಎಂಬುದನ್ನು ಅರಿತನಾದರೆ ಅವನೂ ಇರುವನೆಂದು, ಅವನು ಬ್ರಹ್ಮಸ್ವರೂಪನೇ ಎಂದು ಬಲ್ಲವರು ತಿಳಿಯುವರು-ಎಂಬ ಶ್ರುತಿ ಹೀಗೆಂದು ಸಾರುತ್ತಿದೆ. ವೇದಾಂತದಲ್ಲಿ ಇದೊಂದು ಶುಭವಾರ್ತೆ ಎಂದು ತಿಳಿಯಬೇಕು. ಬ್ರಹ್ಮವು ಸಾರ್ವಕಾಲಿಕವಾಗಿ ಸರ್ವರ ಆತ್ಮನೇ ಆಗಿರುತ್ತದೆ. ವಾಯುಗುಣ, ದೇಶಸ್ವಭಾವ, ಕಾಲ, ಮಾನವನ ವೃತ್ತಿ-ಯಾವದನ್ನೂ ಪರಿಗಣಿಸದೆ, 'ಬ್ರಹ್ಮ ದಾಶಾ ಬ್ರಹ್ಮ ದಾಸಾ ಬ್ರಹ್ಮೈವೇಮೇ ಕಿತವಾಃ'(?) ಬೆಸ್ತರು, ಗರ್ಭದಾಸರು, ಜೂಜುಗಾರರು-ಇಂಥ ನೀಚ ಜೀವರು ಸಹ ಪರಮಾರ್ಥವಾಗಿ ಬ್ರಹ್ಮಸ್ವರೂಪರೇ ಆಗಿರುತ್ತಾರೆ.

---

# ೯. ನಾನು ಎಂಬುದರ ತತ್ತ್ವ

## ( 26—7—62 )

ಆತ್ಮನನ್ನು ಸಿದ್ಧಪಡಿಸಬೇಕಾಗಿರುವದಿಲ್ಲ. ಆತ್ಮನನ್ನು ಇಲ್ಲವೆಂದು ಕಲ್ಪಿಸುವದಕ್ಕೂ ಆಗುವದಿಲ್ಲ. ಆತ್ಮನು ಈಶ್ವರಸ್ವರೂಪನು ಎಂದು ಶ್ರುತಿಯಲ್ಲಿ ಹೇಳಿರುವದನ್ನು ನೈಸರ್ಗಿಕಾನುಭವದಿಂದಲೂ ಮನವರಿಕೆಮಾಡಿಕೊಳ್ಳಬಹುದಾಗಿದೆ. ಹೇಗೆಂದರೆ ಪ್ರತಿಯೊಬ್ಬನೂ ತಾನು ಎಲ್ಲರಿಗಿಂತಲೂ ಹೆಚ್ಚಿನವನೆಂದೂ ತನ್ನ ಪ್ರಭಾವವು ಎಲ್ಲರಮೇಲೂ ಇರಬೇಕೆಂದೂ ಬಯಸುತ್ತಾನೆ. ಈ ಬಯಕೆಯೇ ಪ್ರತಿಯೊಬ್ಬನಲ್ಲಿಯೂ ಈಶ್ವರಾಂಶವಿದೆ ಎಂಬುದಕ್ಕೆ ಒಂದು ಗುರುತಾಗಿದೆ ಎನ್ನಬಹುದು. ಹೀಗೆ ಎಲ್ಲರಿಗೂ ಆತ್ಮನೇ ಆಗಿರುವದರಿಂದ ಈಶ್ವರನು ಅಪರೋಕ್ಷ

ನಾಗಿರುತ್ತಾನೆನ್ನಬಹುದು. ಹಾಗಾದರೆ 'ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ' (ಗೀ. ೧೬-೧೪) ಎಂಬ ಗೀತೋಕ್ತಿಯನ್ನೂ ವೇದಾಂತಸಿದ್ಧಾಂತವೆನ್ನಬೇಕಾಗುವದಲ್ಲ! ಈಶ್ವರರು ನಿಜವಾಗಿಯೂ ಅನೇಕರಿದ್ದಾರೆಯೆ? ಇದನ್ನು ವಿವೇಕಿಗಳು ಯಾರೂ ಒಪ್ಪುವದಿಲ್ಲ.

ಹಾಗಾದರೆ ಈಶ್ವರಾತ್ಮೈಕ್ಯವನ್ನು ಹೇಳಿದ್ದು ಹೇಗೆ?- ಎಂದರೆ, ಆತ್ಮತತ್ತ್ವವನ್ನು ಸರಿಯಾಗಿ ವಿಚಾರಮಾಡಬೇಕು. ಅದರ ನಿಜವು ಇದೆಂದು ಎಲ್ಲಿಗೆ ನಿಲುಗಡೆಯಾಗುವದೋ ಅಲ್ಲಿ ಈಶ್ವರತತ್ತ್ವವು ಎದ್ದುಕಾಣುವದು. ಆತ್ಮನೇ ಇಲ್ಲ-ಎಂಬ ನಾಸ್ತಿಕವಾದದಿಂದ ಹಿಡಿದು ಆತ್ಮನ ಪರಮಾರ್ಥಸ್ವರೂಪವೇ ಈಶ್ವರನು-ಎನ್ನುವವರೆಗೆ ಅನೇಕವಾದಗಳು ಇರುತ್ತವೆ. ಹೀಗೆ ಆತ್ಮಭಾವನೆಯು ಸುಪ್ರಸಿದ್ಧವಾಗಿದ್ದರೂ ಆತ್ಮತತ್ತ್ವದ ವಿಷಯಕ್ಕೆ ಮತಭೇದಗಳು ಅನೇಕವಾಗಿ ಇರುತ್ತವೆಯಾಗಿ ವಿಚಾರಮಾಡಿಯೇ ನಿರ್ಣಯಿಸಬೇಕಾಗಿದೆ.

ವೇದಾಂತದಲ್ಲಿ ಪ್ರಕೃತಿಯೇ ಮಾಯೆ, ಈಶ್ವರನೇ ಮಾಯಾವಿ, ಅವನ ಅವಯವಗಳಿಂದ ಜಗತ್ತೆಲ್ಲವೂ ವ್ಯಾಪ್ತವಾಗಿರುತ್ತದೆ- ಎಂದು ಹೇಳಿರುವದನ್ನು ಆಗಲೆ ಉದಹರಿಸಿದ್ದಾಗಿದೆ. 'ಮಮೈವಾಂಶೋ ಜೀವಲೋಕೇ' ನನ್ನ ಅಂಶವೇ ಜೀವನು ಎಂಬ ಗೀತೋಕ್ತಿಯೂ ಸುಪ್ರಸಿದ್ಧವಾಗಿದೆ. ಆದರೆ ನಾನು ಎಂಬುದನ್ನು ಎಷ್ಟು ಸೂಕ್ಷ್ಮವಾಗಿ ನೋಡಿದರೂ ಅದರಲ್ಲಿ ತುಂಡುಗಳಾಗಿರುವದು ಗೋಚರವಾಗುವದಿಲ್ಲ. 'ಆತ್ಮರುಗಳು' ಎಂದು ಸಂಖ್ಯೆಯನ್ನು ಆತ್ಮಭಾವಕ್ಕೆ ಜೋಡಿಸುವದಕ್ಕೆ ಬರುವದಿಲ್ಲ; ಏಕೆಂದರೆ ಆತ್ಮನೆಂದರೆ ದೇಶ, ಕಾಲ, ಸಂಖ್ಯೆ- ಎಲ್ಲವನ್ನು ನೋಡತಕ್ಕವನು. ಆದ್ದರಿಂದ ಆತ್ಮನು ತಾನು ಒಬ್ಬನೇ ಆಗಿದ್ದು ಬಹುವಾಗಿ ತೋರುತ್ತಾನೆಂದಾಯಿತು. 'ಅಜಾಯಮಾನೋ ಬಹುಧಾ ವಿಜಾಯತೇ' (ತೈ.ಆ.) ಹುಟ್ಟದೆಯೇ ಬಹುವಾಗಿ ಹುಟ್ಟುತ್ತಾನೆ ಎಂದು ಶ್ರುತಿಯೂ ಹೇಳಿರುತ್ತದೆ. 'ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ' (ಬೃ. ೪-೪-೨೫) ಎಂದೂ ಶ್ರುತಿಯಿದೆ. ಆದರೆ ನಮ್ಮ ಆತ್ಮನಿಗೆ ಹುಟ್ಟಿಲ್ಲವೆ, ಮುಪ್ಪಿಲ್ಲವೆ, ಸಾವಿಲ್ಲವೆ? ವಾಕ್ಯವಿದೆ ಎಂದು ವಸ್ತುಸ್ಥಿತಿಯನ್ನು ಹೇಗಾದರೂ ಮಾಡಿಬಿಡಬಹುದೆ? ನಮ್ಮ ಆತ್ಮನು ಜನ್ಮಾದಿಗಳಿಲ್ಲದವನು ಎಂದು ಕಲ್ಪಿಸುವಾಗಲೇ ವಿರುದ್ಧವಾಗಿ ಕಾಣಿಸುತ್ತದೆಯಲ್ಲ! ಇಂಥ ಅನುಭವವು ಯಾವನಿಗೆತಾನೆ ಇದೆ? ಈ ಶಂಕೆಯು ಸ್ವಾಭಾವಿಕವಾಗಿ ಎದ್ದುಕೊಳ್ಳುತ್ತದೆ, ಆದ್ದರಿಂದ ಆತ್ಮವಿಚಾರವು ಇಲ್ಲಿ ಅತ್ಯವಶ್ಯವಾಗಿರುತ್ತದೆ.

ಆತ್ಮನನ್ನು ವಿಚಾರಮಾಡುವದು ಹೇಗೆ?-ಎಂಬ ಪ್ರಶ್ನೆಗೆ ಮೊಟ್ಟಮೊದಲು ನಾವು ಉತ್ತರವನ್ನು ಕಂಡುಕೊಳ್ಳಬೇಕು. ಏಕೆಂದರೆ ಬ್ರಹ್ಮವಿದ್ಯೆ ಎಂದರೆ

ಆತ್ಮವಿದ್ಯೆ ; ಆತ್ಮವಿದ್ಯೆ ಎಂದರೆ ತನ್ನ ವಿಷಯದ ತಿಳಿವಳಿಕೆ. ತಾನೇ ವಿಚಾರ ಮಾಡುವವನು, ತನ್ನನ್ನೇ ವಿಚಾರಮಾಡಿಕೊಳ್ಳಬೇಕಾಗಿದೆ. ಇದು ಹೇಗೆ ಸಾಧ್ಯ? ತಾನೇ ನಾಟಕದಲ್ಲಿ ಪಾತ್ರವನ್ನು ವಹಿಸುವವನೂ ತಾನೇ ನೋಡುವವನೂ ಆಗಿ ರುವದು ಹೇಗೆ ? ಈ ಪ್ರಶ್ನೆಯು ಕೇಳುವದಕ್ಕೆ ಎಷ್ಟೇ ಗಡುಚಾಗಿ ಕಂಡರೂ ವೇದಾಂತದಲ್ಲಿ ಇದಕ್ಕೆ ಒಂದು ಸದುತ್ತರವನ್ನು ಹೇಳಿರುತ್ತದೆ. ಮಾಯಿಯಾದ ಪರಮೇಶ್ವರನು ಎಲ್ಲಾ ಜೀವರೂಪವಾಗಿ ತೋರುತ್ತಿದ್ದರೂ ಅವನಲ್ಲೇನೂ ತುಂಡಾಗಿರುವದಿಲ್ಲ. ಅವನ ಸ್ವರೂಪವು ಇದ್ದದ್ದು ಇದ್ದಂತೆಯೇ ಇರುತ್ತದೆ. ಆತ್ಮನಲ್ಲಿ ಅನೇಕತ್ವಸಂಖ್ಯೆ, ಶರೀರಾದಿಗಳ ವೈಚಿತ್ರ್ಯ, ತಿಳಿವಳಿಕೆಯೇ ಮುಂತಾ ದವುಗಳ ತಾರತಮ್ಯ–ಇವೆಲ್ಲ ಇರುವಂತೆ ತೋರುತ್ತಿರುತ್ತದೆ. ಹೀಗೆ ತೋರುವದು ನಿಜವಾಗಿದೆಯೆ ?–ಎಂಬುದನ್ನು ಮಾತ್ರ ವಿಚಾರಮಾಡತಕ್ಕದ್ದಿದೆ.

ಆತ್ಮನನ್ನು ಎಲ್ಲಿ ನಿಂತು ವಿಚಾರಮಾಡಬೇಕು ? ಪ್ರಪಂಚದೊಳಗೇ ನಾವೂ ಇದ್ದುಕೊಂಡು ವಿಚಾರವನ್ನು ಮಾಡಿ ನಮ್ಮ ಸ್ವರೂಪವನ್ನು ತಿಳಿಯುವದು ಆಗಲಾರದು. ಪ್ರಪಂಚದಲ್ಲಿರುವವರು ಅನೇಕರು ಪಂಚಾಯಿತಿಯವರಂತೆ ಒಮ್ಮ ತಕ್ಕೆ ಬಂದು ನಿರ್ಣಯಮಾಡತಕ್ಕ ವಿಚಾರವಿದಲ್ಲ, ಇಡಿಯ ಪ್ರಪಂಚವೇ ನಮ್ಮ ಸ್ವರೂಪಕ್ಕೆ ಸಂಬಂಧಪಟ್ಟಿರುವಂತೆ ಕಾಣುತ್ತಿದೆ. ಇದರ ತತ್ತ್ವವೇನು ? ನಮ್ಮ ಆತ್ಮನು ನಿಜವಾಗಿ ನಿಷ್ಪ್ರಪಂಚನೊ, ಸಪ್ರಪಂಚನೊ ? ಇದೇ ಇಲ್ಲಿ ವಿಚಾರಕ್ಕೆ ವಿಷಯ. ಭೌತಿಕವಿಜ್ಞಾನಗಳು ಪ್ರಪಂಚದಲ್ಲಿ ಭೌತಿಕಪದಾರ್ಥಗಳ, ಪ್ರಾಣಿ ಗಳ ಅಥವಾ ಮನುಷ್ಯನ ಶರೀರ, ಇಂದ್ರಿಯಗಳು, ಮನಸ್ಸು– ಮುಂತಾದವುಗಳ ನ್ನು ಭಾಗಭಾಗವಾಗಿ ವಿಂಗಡಿಸಿಕೊಂಡು ಅಷ್ಟಷ್ಟನ್ನೇ ಕುರಿತ ವಿಚಾರಕ್ಕೆ ಹೊರ ಟಿರುತ್ತವೆ. ಪರೀಕ್ಷ್ಯವಾದ ಪ್ರಪಂಚವನ್ನೂ ಅದನ್ನು ಪರೀಕ್ಷಿಸುವದಕ್ಕೆ ಉಪ ಯೋಗಿಸುತ್ತಿರುವ ಸಾಧನವಿಶೇಷಗಳನ್ನೂ ಚೆನ್ನಾಗಿ ಶೋಧನೆಮಾಡಿ ವಿಚಾರ ಮಾಡಬೇಕು–ಎಂಬುದು ಅವುಗಳ ನಿಲವು. ಆದರೆ ಇವುಗಳನ್ನೆಲ್ಲ ಪರೀಕ್ಷಿಸ್ಸು ವವನ ಸ್ವಭಾವವನ್ನು ಕುರಿತೂ ಅಷ್ಟೇ ಎಚ್ಚರಿಕೆಯಿಂದ ವಿಚಾರಮಾಡತಕ್ಕದ್ದಿದೆ ಎಂಬುದು ಆ ಶಾಸ್ತ್ರಗಳಿಗೆ ಹೊಳೆದಿಲ್ಲ. 'ನಾನು' ಎಂದು ತೋರುತ್ತಿರುವದೆಲ್ಲ ನಾನೊ, ಅಲ್ಲವೊ ? 'ಹಾಲು' ಎಂದುಕೊಂಡದ್ದನ್ನು ಕಾಯಿಸಿದಮೇಲೆ ಅದರಲ್ಲಿ ಬೆರೆತಿದ್ದ ನೀರಿನ ಅಂಶವು ಆವಿಯಾಗಿಹೋಗಿ ಗಟ್ಟಿಯಾದ ಹಾಲಿನ ಅಂಶವು ಉಳಿದುಕೊಳ್ಳುವಂತೆ, ನಾನು ಎಂಬುದರಲ್ಲಿ ಯಾವದಾದರೂ ತೋರಿಕೆಯ ಅಂಶವೂ ಬೆರೆತಿದೆಯೆ ?–ಎಂಬುದನ್ನು ವಿಚಾರಿಸುವ ಗೋಜಿಗೆ ಅವು ಹೋಗಿಲ್ಲ. ಮಿಕ್ಕ ದರ್ಶನಗಳೂ ಇದನ್ನು ಚೆನ್ನಾಗಿ ವಿಚಾರಮಾಡಿಲ್ಲ. ಈ ಕೆಲಸವು ವೇದಾಂತಕ್ಕೇ ಮೀಸಲಾಗಿದೆ. ಶ್ರೀಶಂಕರಾಚಾರ್ಯರು ವೇದಾಂತದ ಈ ಹೆಚ್ಚು ಗಾರಿಕೆಯನ್ನು ಮನಗಂಡು ತಮ್ಮ ಸೂತ್ರಭಾಷ್ಯದಲ್ಲಿ 'ಸತ್ಯಾನೃತೇ ಮಿಥುನೀ

ಕೃತ್ಯ ಅಹಮಿದಂ ಮಮೇದಮಿತಿ ನೈಸರ್ಗಿಕೋಽಯಂ ಲೋಕವ್ಯವಹಾರಃ' ನಿಜವನ್ನೂ ಸುಳ್ಳನ್ನೂ ಕಲಿಬೆರಕೆಮಾಡಿಕೊಂಡು 'ನಾನು ಇಂಥವನು', 'ನನ್ನದಿದು' ಎಂದು ಸ್ವಾಭಾವಿಕವಾಗಿ ಜನರು ವ್ಯವಹಾರಮಾಡುತ್ತಿದಾರೆ- ಎಂದು ಬರೆದಿರುತ್ತಾರೆ. ಹೀಗೆನ್ನುವದಕ್ಕೆ ಪ್ರಮಾಣವೇನು ?- ಎಂದುಕೂಡ ಅವರು ವಿಚಾರಕ್ಕೆ ತೆಗೆದುಕೊಂಡಿಲ್ಲ; ಏಕೆಂದರೆ ಪ್ರಮಾಣವಿಚಾರವು ಪ್ರಮಾತೃವಿನ ಸ್ವರೂಪವು ಸಿದ್ಧವಾದವೇಲೆ ಬರತಕ್ಕದ್ದು. ಮೊದಲು ನಾನು ಎಂಬ ರೂಪದಲ್ಲಿಯೇ ಅನೃತವು-ಮಾಯಾಂಶವು-ಬೆರೆತಿದೆ ಎಂಬುದನ್ನು ಸಿದ್ಧಮಾಡುವದಕ್ಕೆ ಹೊರಟವರು ಪ್ರಮಾಣವನ್ನು ಹೇಗೆ ಪರೀಕ್ಷೆಗೆ ತೆಗೆದುಕೊಂಡಾರು ? 'ನಾನು' ಎಂಬಲ್ಲಿ 'ನಾ' ಎಂಬ ನಿಜಾಂಶವೊಂದಿದೆ, 'ನು' ಎಂಬ ಅನೃತಾಂಶವೂ ಬೆರೆತುಕೊಂಡಿದೆ ; ಸುಳ್ಳನ್ನು ಅತ್ತೊಗೆದು ನಿಜವಾದ ಆತ್ಮಸ್ವರೂಪವನ್ನು ತಿಳಿದುಕೊಳ್ಳಬೇಕು-ಎಂಬುದು ಅವರ ಭಾಷ್ಯೋಪೋದ್ಘಾತದ ತಿರುಳು.

ನಾನು ಎಂಬುದರಲ್ಲಿ ಮತ್ತೆಯಾವ ಪರಕೀಯಪದಾರ್ಥದ ಬೆರಕೆಯಾಗಿದ್ದೀತು ?-ಎಂದು ನೀವು ಬೆರಗಾಗಿ ಕೇಳಬಹುದು. ಈ ಪ್ರಶ್ನೆ ಸ್ವಾಭಾವಿಕವಾಗಿಯೇ ಇದೆ. ಏಕೆಂದರೆ ನಮಗೆ ಯಾರಿಗೂ ಇಲ್ಲಿ ನಿಜವಾದ ಆತ್ಮಸ್ವರೂಪದ ಜೊತೆಗೆ ಮತ್ತೊಂದು ಬೆರೆತುಕೊಂಡಿದೆ ಎಂಬ ಸಂಶಯವು ಉಂಟಾಗಿರುವದಿಲ್ಲ.

ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ ।
ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥ ಗೀ. ೧೫-೧೦)

ಶರೀರವನ್ನು ಬಿಟ್ಟುಹೋಗುವಾಗ, ದೇಹದಲ್ಲಿದ್ದು ಬದುಕಿರುವಾಗ, ಶಬ್ದಾದಿವಿಷಯಗಳನ್ನು ಭೋಗಿಸುತ್ತಿರುವಾಗ- ಈ ಎಲ್ಲಾ ಅವಸ್ಥೆಗಳಲ್ಲಿಯೂ ಆತ್ಮನು ಸುಖದುಃಖಮೋಹಾತ್ಮಕವಾದ ಗುಣಗಳ ಕಾರ್ಯದಿಂದ ಬೆರೆತುಕೊಂಡೇ ಇರುತ್ತಾನೆ. ಹೀಗೆ ಸಕಲವ್ಯವಹಾರಗಳಲ್ಲಿಯೂ ಅತ್ಯಂತವಾಗಿ ದೃಷ್ಟಿಗೋಚರನಾಗಿದ್ದರೂ ಈ ಆತ್ಮನನ್ನು ಹೊರಗಿನ ವಿಷಯದಲ್ಲಿಯೇ ನೆಟ್ಟ ಚಿತ್ತವುಳ್ಳ ಮೂಢರು ಕಾಣದೆ ಇರುವರು, ಜ್ಞಾನಚಕ್ಷುಸ್ಸುಳ್ಳವರು ಮಾತ್ರ ಕಾಣುತ್ತಿರುತ್ತಾರೆ-ಎಂದು ಗೀತೆ (೧೫-೧೦)ಯಲ್ಲಿ ಹೇಳಿರುವದು ಅಕ್ಷರಶಃ ನಿಜವಾಗಿರುತ್ತದೆ. ನಮ್ಮ ಸಕಲವ್ಯವಹಾರಗಳಲ್ಲಿಯೂ ನಮ್ಮ ಆತ್ಮನಲ್ಲಿ ಬೆರೆತುಕೊಂಡಿರುವ ಮಾಯಾಂಶವೊಂದುಂಟಲ್ಲಾ ; ಅದು ಯಾವದೆಂಬುದನ್ನು ವಿಚಾರಮಾಡುವಷ್ಟುಕೂಡ ವಿರಾಮವಿಲ್ಲದೆ ನಾವು ವ್ಯವಹಾರಮಗ್ನರಾಗಿರುತ್ತೇವೆ !

ಶ್ರೀಗೌಡಪಾದರೂ ಇದೇ ಅಭಿಪ್ರಾಯವನ್ನು ಒಂದು ಶ್ಲೋಕದಲ್ಲಿ ಸಂಗ್ರಹಿಸಿರುತ್ತಾರೆ : 'ಮರಣೇ ಸಂಭವೇ ಚೈವ ಗತ್ಯಾಗಮನಯೋರಪಿ । ಸ್ಥಿತೌ ಸರ್ವಶರೀರೇಷು ಚಾಕಾಶೇನಾವಿಲಕ್ಷಣಃ ॥' (ಗೌ.ಕಾ. ೩-೯) ಪರಮಾತ್ಮನು

ಸರ್ವಗತವಾಗಿರುವ ಅದ್ವಿತೀಯಾಕಾಶದಂತೆ ಇರುತ್ತಾನೆ: ಆಕಾಶವು ಗಡಿಗೆ ಯೊಳಗೆ ಇರುವಂತೆ ಕಾಣುತ್ತಿರುತ್ತದೆ. ಅದು ಗಡಿಗೆಯು ಹುಟ್ಟಿದರೆ ತಾನೂ ಗಡಿಗೆಯ ಆಕಾರವಾಗಿ (ಟೊಳ್ಳಾಗಿ) ಹುಟ್ಟಿದಂತೆ, ಗಡಿಗೆಯು ಇರುವವರೆಗೂ ತಾನೂ ಇರುವಂತೆ, ಗಡಿಗೆಯನ್ನು ಅತ್ತ ಒಯ್ದರೆ ತಾನೂ ಅದರ ಜೊತೆಯಲ್ಲಿ ಹೋಗುವಂತೆ, ಗಡಿಗೆಯನ್ನು ಮತ್ತೆ ಹಿಂದಕ್ಕೆ ತಂದರೆ ತಾನೂ ಹಿಂದಕ್ಕೆ ಬಂದಂತೆ, ಗಡಿಗೆಯು ಒಡೆದು ನಾಶವಾದರೆ ತಾನೂ ನಷ್ಟವಾದಂತೆ ಕಾಣುತ್ತಿರುತ್ತದೆಯಲ್ಲವೆ ? ಆದರೆ ನಿಜವಾಗಿ ಆಕಾಶವು ಗಡಿಗೆ, ಮಡಕೆ, ಕುಡಿಕೆ, ಗುಡಾಣ –ಇವುಗಳ ಸುತ್ತುಗಟ್ಟಿನಿಂದ ತಾನೇನಾದರೂ ಒಡೆದುಕೊಂಡು ತುಂಡಾಗಿರುವದೇನು ? ಇಲ್ಲ. ಆಕಾಶಕ್ಕೆ ಎಂದಿಗೂ ತುಂಡುಗಳಾಗುವಂತೆಯೇ ಇಲ್ಲ. ಇದೂ ಅಲ್ಲದೆ, ಆಕಾಶಕ್ಕೆ ಗಡಿಗೆಯ ಸೋಂಕೇನಾದರೂ ಉಂಟೆ ? ಗಡಿಗೆಯಲ್ಲಿ ದುರ್ಗಂಧವಿದ್ದರೆ ಅದಕ್ಕೇನಾದರೂ ತಾಕುವದೆ ? ಅದರ ಸೌಗಂಧ್ಯವೇನಾದರೂ ಅದಕ್ಕೆ ಅಂಟಿಕೊಂಡೀತೆ ? ಎಂದಿಗೂ ಇಲ್ಲ. ಏಕೆಂದರೆ ಆಕಾಶವು ಅಸಂಸರ್ಗಿ ವಸ್ತು. ಮತ್ತೊಂದು ಮಾತು : ಗಡಿಗೆ ಎಂದರೇನು ? ನಿಜವಾಗಿ ಆಕಾಶವೇ ವಾಯು, ಅಗ್ನಿ, ಜಲ, ಪೃಥ್ವಿ–ಎಂಬ ವೇಷಗಳನ್ನು ತಳೆದು ಮಣ್ಣಾಗಿ ಗಡಿಗೆಯಂತೆ ತೋರುತ್ತಿದೆ. ಆದ್ದರಿಂದ ಗಡಿಗೆ ಎಂಬುದೂ ಆಕಾಶವೇ ಆಯಿತು. ಹೀಗಿರುವಲ್ಲಿ ಗಡಿಗೆ, ಮಡಕೆ– ಮುಂತಾದವುಗಳಿಂದ ಭಿನ್ನವಾಗಿರುವದೂ ಅವುಗಳ ಸಂಪರ್ಕದಿಂದ ಆಯಾ ಗುಣದೋಷಗಳನ್ನು ಹೊಂದುವದೂ-ಆಕಾಶಕ್ಕೆ ಇಲ್ಲವೇ ಇಲ್ಲ–ಎನ್ನಬೇಕಲ್ಲವೆ ?

ಇದರಂತೆ ಆತ್ಮನು ಒಬ್ಬನೇ ನಿಜವಾಗಿರುತ್ತಾನೆ. ಆದರೂ ಅವನೇ ಆಕಾಶಾದಿರೂಪದಿಂದ ತೋರಿಕೊಳ್ಳುತ್ತಿದಾನೆ. ಪೃಥ್ವಿಯವರೆಗಿನ ಪಂಚಭೂತಗಳಿಂದಾಗಿರುವ ಕಾರ್ಯಕರಣಸಂಘಾತವೂ ಆತನೇ; ಬೇರೆಬೇರೆಯ ಗಡಿಗೆಗಳಿಂದ ಬೇರೆಬೇರೆಯಾಗಿ ತೋರುವ ಘಟಾಕಾಶಗಳಂತೆ ಬೇರೆಬೇರೆಯ ಕಾರ್ಯಕರಣ ಸಂಘಾತಗಳಿಂದ ಬೇರೆಬೇರೆಯಾಗಿ ಜೀವರುಗಳಾಗಿತೋರುತ್ತಿರುವವನೂ ಆತನೇ. ಆಕಾಶವು ಹೇಗೆ ಆಕಾಶವೇ ಆಗಿದ್ದು ಘಟಾಕಾಶಗಳಾಗಿ ತೋರುತ್ತಿರುವದೊ, ಹಾಗೆಯೇ ಆತ್ಮನು ಆತ್ಮನೇ ಆಗಿದ್ದು ಜೀವರಾಗಿ ತೋರುತ್ತಿರುವನು. ಆಕಾಶವು ಘಟಾಕಾಶವಾಗಿ ತೋರುತ್ತಿರುವಾಗ ಗಡಿಗೆಯ ಉತ್ಪತ್ತಿ, ಸ್ಥಿತಿ, ನಾಶ–ಇವುಗಳಿಂದ ತಾನೂ ಘಟಾಕಾಶವಾಗಿ ಹುಟ್ಟಿ, ಇದ್ದು, ನಾಶವಾಗುವಂತೆ ಕಾಣಿಸಿಕೊಳ್ಳುವಹಾಗೆಯೇ ಆತ್ಮನೂ ಜೀವರಾಗಿ ಹುಟ್ಟಿ, ಇದ್ದು, ನಾಶವಾಗುವಂತೆ ಕಾಣುತ್ತಾನೆ. ಘಟಾಕಾಶವೊಂದು ಹೊಗೆ ಧೂಳು ಮುಂತಾದದ್ದರಿಂದ ಕೂಡಿರುವದೆಂದು ಇಟ್ಟುಕೊಂಡಾಗ ಮಿಕ್ಕ ಘಟಾಕಾಶಗಳಿಗೂ ಹೇಗೆ ಆ ಹೊಗೆ, ಧೂಳಿ –ಮುಂತಾದವುಗಳ ಸಂಪರ್ಕವು ಅಂಟುವದಿಲ್ಲವೋ ಹಾಗೆಯೇ ಒಬ್ಬ ಜೀವನಿಗೆ

ಆಗುವ ಸಂಸಾರದೋಷಗಳು ಬೇರೆಯ ಜೀವರುಗಳಿಗೆ ಅಂಟುವದಿಲ್ಲ. ನಿಜವಾಗಿ ನೋಡಿದರೆ ಹೇಗೆ ಯಾವ ಘಟಾಕಾಶಕ್ಕೂ ಉಪಾಧಿಯಾದ ಗಡಿಗೆಯ ಹೊಗೆ ಮುಂತಾದವುಗಳ ಸಂಪರ್ಕವು ಇಲ್ಲವೇ ಇಲ್ಲವೋ ಹಾಗೆಯೇ ಯಾವ ಜೀವನಿಗೂ ಕಾರ್ಯಕರಣಸಂಘಾತವೆಂಬ ಉಪಾಧಿಯಿಂದಾದ ಸಂಸಾರದ ಅಂಟು ಇರುವದೇ ಇಲ್ಲ. ಆಕಾಶಘಟಾಕಾಶಗಳು ವಿಕಾರವಲ್ಲ, ಅವಯವವೂ ಅಲ್ಲ; ಅವೆಲ್ಲವೂ ನಿಜವಾಗಿ ಆಕಾಶಮಾತ್ರವಾಗಿರುತ್ತವೆ. ಅದರಂತೆ ಆತ್ಮನಿಗೆ ಜೀವರು ವಿಕಾರವೂ ಅಲ್ಲ, ಅವಯವವೂ ಅಲ್ಲ; ನಿಜವಾಗಿ ಜೀವರೆಲ್ಲರೂ ಪರಮಾತ್ಮಸ್ವರೂಪರೇ ಆಗಿರುತ್ತಾರೆ. ಹೀಗಿದ್ದರೂ ಸರಿಯಾಗಿ ತಿಳಿವಳಿಕೆಯಿಲ್ಲದ್ದರಿಂದ ಉಪಾಧಿಯಿಂದ ಜೀವರುಗಳಿಗೆ ಜನ್ಮಾದಿವಿಕಾರಗಳೂ ಧರ್ಮಾಧರ್ಮಸುಖದುಃಖಾದಿಸಂಸಾರ ಧರ್ಮಗಳೂ ಸೇರಿಕೊಂಡಿರುವಂತೆ ಕಾಣುತ್ತಿರುತ್ತವೆ. ಅಷ್ಟೆ.

ಆತ್ಮಸ್ವರೂಪವನ್ನು ಎಲ್ಲಿ ನಿಂತು ನಾವು ವಿಚಾರಮಾಡತಕ್ಕದ್ದು ? ಬಹು ಜನರ ಅಭಿಪ್ರಾಯದಿಂದ ಪಂಚಾಯಿತಿರಾಜ್ಯವು ನಡೆಯುವಂತೆ ಅಲ್ಲ, ಆತ್ಮ ವಿಚಾರ. ವಿಜ್ಞಾನಶಾಸ್ತ್ರಗಳು – ಖಗೋಳ, ಭೂಗೋಳ, ವಸ್ತುರಚನಾಶಾಸ್ತ್ರ, ಶಕ್ತಿಶಾಸ್ತ್ರ, ಭೂಗರ್ಭಶಾಸ್ತ್ರ, ಪ್ರಾಣಿಶಾಸ್ತ್ರ, ಶರೀರಶಾಸ್ತ್ರ– ಮುಂತಾದ ಜ್ಞೇಯದ ಒಂದೊಂದು ಭಾಗವನ್ನು ಮಾತ್ರ ಗೊತ್ತುಮಾಡಿಕೊಂಡು ಅದರದರ ತತ್ತ್ವವನ್ನು ನಿರ್ಣಯಿಸುವದಕ್ಕೆ ಹೊರಟಿರುತ್ತವೆ. ಆದರೆ ಆತ್ಮಶಾಸ್ತ್ರವು ಹೀಗಲ್ಲ. ಅದಕ್ಕೆ ವಿಚಾರ್ಯವಾದದ್ದು ಜ್ಞೇಯವಲ್ಲ, ವಿಚಾರಮಾಡುತ್ತಿರುವ ಜ್ಞಾತೃವಿನ ತತ್ತ್ವವೇ. ನಾನು ಎಂಬ ಭಾವನೆಯಲ್ಲಿ ಮತ್ತೆ ಯಾವದಾದರೂ ಅಂಶವು, ಅನಾತ್ಮಾಂಶವು ಕೂಡ ಸೇರಿದೆಯೆ? ಕೊಂಡ ಹಾಲನ್ನು ಹಾಲು ಎಂದು ನಾವು ವ್ಯವಹರಿಸುತ್ತಿರುವಾಗಲೂ ಅದರಲ್ಲಿ ನೀರಿನ ಅಂಶವೂ ಬೆರೆತಿರುವಂತೆ, ನಾನು ಎಂಬುದರಲ್ಲಿ ನನ್ನ ನಿಜವಾದ ಸ್ವರೂಪಕ್ಕೆ ಸೇರದೆಇರುವ ಅಂಶವೂ ಬೆರೆತು ಕೊಂಡಿದೆಯೊ, ಹೇಗೆ ?–ಎಂಬಿದನ್ನು ಇಲ್ಲಿ ವಿಚಾರಮಾಡಿ ತಿಳಿಯಬೇಕಾಗಿರುತ್ತದೆ. ಈ ತತ್ತ್ವವು ಪ್ರಮಾಣಗಳಿಂದ ನಿರ್ಣಯಿಸುವದಕ್ಕೆ ಬರುವದಲ್ಲ. ಏಕೆಂದರೆ ನಾನು ಎಂಬುದು ನಿಜವೆಂದು ಗೊತ್ತಾದಮೇಲೆಯೇ ಪ್ರಮಾಣಗಳಿಂದ ಪ್ರಮೇಯಗಳ ತತ್ತ್ವವನ್ನು ನಿರ್ಣಯಿಸುವದಕ್ಕೆ ಬರುತ್ತದೆ. ವಿಜ್ಞಾನಶಾಸ್ತ್ರಜ್ಞರು ಜ್ಞೇಯರಾಶಿಯನ್ನು ವಿಚಾರಮಾಡುವಾಗ, ತಾವು ಉಪಯೋಗಿಸುವ ಸಾಧನಗಳಲ್ಲಿ ಯಾವದಾದರೂ ದೋಷವಿದೆಯೆ ?– ಎಂಬುದನ್ನು ಮೊದಲು ಗೊತ್ತುಮಾಡಬೇಕಾಗುತ್ತದೆ ಏಕೆಂದರೆ ತಾವು ಉಪಯೋಗಿಸುವ ಯಂತ್ರವೇ ಮುಂತಾದ ಸಾಧನಗಳಲ್ಲಿ ಯಾವದಾದರೂ ದೋಷವಿದ್ದರೆ, ಜ್ಞೇಯದ ವಿಷಯಕ್ಕೆ ಮಾಡಿಕೊಂಡ ತೀರ್ಮಾನವು ಎಂದಿಗೂ ನಿರ್ದೋಷವಾಗಲಾರದು. ಆದರೆ ಪ್ರಕೃತವಿಚಾರದಲ್ಲಿ ಪ್ರಮಾಣ ಮತ್ತು ಪ್ರಮೇಯ– ಇವುಗಳನ್ನು ಕೈಬಿಟ್ಟು ಪ್ರಮಾತೃವಿನ ತತ್ತ್ವವನ್ನೇ ವಿಚಾರಮಾಡಬೇಕಾಗಿರುತ್ತದೆ.

ಶ್ರೀಶಂಕರಭಗವತ್ಪಾದರು ಶಾರೀರಕಮೀಮಾಂಸಾಶಾಸ್ತ್ರದ ಭಾಷ್ಯದಲ್ಲಿ ಯಾವ ಪ್ರಮಾಣಗಳನ್ನೂ ಸಾಧನವಾಗಿ ಹಿಡಿಯದೆಯೇ ಪ್ರಮಾತೃವಾದ 'ನಾನು' ಎಂಬುದರಲ್ಲಿ ಅನೃತಾಂಶವೂ ಸೇರಿದೆ ಎಂಬುದನ್ನು ಅನುಭವಮಾತ್ರದ ಆಧಾರದಿಂದ ತೋರಿಸಿಕೊಟ್ಟಿರುತ್ತಾರೆ. ಇದು ಭೌತಿಕವಿಜ್ಞಾನಶಾಸ್ತ್ರಗಳಿಗಿಂತ ಹೆಚ್ಚಿನ ಮಟ್ಟದ ವಿಜ್ಞಾನಶಾಸ್ತ್ರ ಎಂಬುದನ್ನು ಅವರು ನಮ್ಮ ಲಕ್ಷ್ಯಕ್ಕೆ ತಂದು ಕೊಟ್ಟಿರುತ್ತಾರೆ. ನಾನು ಎಂಬುದರಲ್ಲಿ ತೀರ ಒಳಗಿನ ಪರಿಶುದ್ಧವಾದದ್ದನ್ನು 'ನಾ' ಎಂಬ ಅಕ್ಷರಸಂಕೇತದಿಂದ ಗ್ರಹಿಸಿ, ಅದರಲ್ಲಿ ಸೇರಿರುವ ಅನೃತವಾದದ್ದನ್ನು 'ನು' ಎಂಬಕ್ಷರಕ್ಕೆ ವಾಚ್ಯವೆಂದು ಹೊರದೂಡಬೇಕೆಂಬುದನ್ನು ತೋರಿಸಿಕೊಟ್ಟಿರುತ್ತಾರೆ. ಮೇಲೆ ವರ್ಣಿಸಿರುವ 'ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ' (ಗೀ ೧೫-೭) ಎಂದು ಭಗವಂತನು ಹೇಳಿರುವಂತೆ ಜೀವನು ಭಗವಂತನ ಅಂಶವೇ ಆಗಿರುತ್ತಾನೆ ; ಘಟಾಕಾಶವು ಆಕಾಶದ ಅಂಶವಾಗಿ ತೋರುವಂತೆ, ಅವನು ಚೇತನರೂಪನಾದ ಆತ್ಮನ ಒಂದಂಶವೆಂದು ತೋರಿಕೊಳ್ಳುತ್ತಿರುತ್ತಾನೆ. ಮೇಲೆ ಹೇಳಿರುವ ಘಟಾಕಾಶದೃಷ್ಟಾಂತದಲ್ಲಿ ಗಡಿಗೆ ಹೋದರೆ ಘಟಾಕಾಶವೇನೂ ಹೋಗುವದಿಲ್ಲ ; ಅಥವಾ 'ಗಡಿಗೆ ಹೋದರೆ' ಎಂದೇಕೆ ಹೇಳಬೇಕು, 'ಗಡಿಗೆ' ಎಂದರೂ ಆಕಾಶವೇ ಅಲ್ಲವೆ? ಹಾಗೆಯೇ ಜೀವ, ಜೀವನ ಉಪಾಧಿಯಾದ, ಕಾರ್ಯಕರಣಸಂಘಾತ- ಇವೆಲ್ಲವೂ ಪರಮಾತ್ಮನೇ. "ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ | ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ ||" (ಗೀ. ೨-೧೭) ಎಂದಿರುವಂತೆ ಆತ್ಮಚೈತನ್ಯದಿಂದಲೇ ಇದೆಲ್ಲವೂ ವ್ಯಾಪ್ತವಾಗಿಬಿಟ್ಟಿರುತ್ತದೆ. ಆತ್ಮಚೈತನ್ಯವು ಶರೀರದ ಒಳಗೆ ಇದೆಯೆಂದು ಹೇಳುವದೇ ಮೊದಲು ತಪ್ಪು; ಹೇಗೆ ಆಕಾಶವು ಗಡಿಗೆಯೊಳಗೆ ಮಾತ್ರವೇ ಇಲ್ಲವೋ ಗಡಿಗೆಯನ್ನು ಎಲ್ಲೆಲ್ಲಿಯೂ ವ್ಯಾಪಿಸಿಕೊಂಡು ಎಲ್ಲವೂ ತಾನೇ ಆಗಿರುವದೋ ಹಾಗೆಯೇ ಚೈತನ್ಯವು ಶರೀರ, ಮನಸ್ಸು, ಇಂದ್ರಿಯ, ವಿಷಯಗಳು- ಎಲ್ಲವನ್ನೂ ವ್ಯಾಪಿಸಿಕೊಂಡಿರುತ್ತದೆ, ಎಲ್ಲವೂ ತಾನೇ ಆಗಿರುತ್ತದೆ. ಚೈತನ್ಯದ ವ್ಯಾಪ್ತಿಗೆ ಎಲ್ಲೆಯನ್ನು ಗೊತ್ತುಪಡಿಸುವದಕ್ಕೆ ಆದೀತೆ? 'ದೀಪವು ಗೋಡೆಯನ್ನು ವ್ಯಾಪಿಸಿದೆ' ಎಂದರೆ ಗೋಡೆಯ ಮೇಲುಭಾಗವನ್ನು ಮಾತ್ರ ವ್ಯಾಪಿಸಿಕೊಂಡಿರುತ್ತದೆ ಎಂದರ್ಥ. ಗೋಡೆಯ ಆಚೆಕಡೆಯನ್ನಾಗಲಿ, ಗೋಡೆಯ ಒಳಭಾಗವನ್ನಾಗಲಿ ದೀಪದ ಬೆಳಕೇನೂ ವ್ಯಾಪಿಸಿಕೊಂಡು ಬೆಳಗುತ್ತಿರುವದಿಲ್ಲ. ಆದರೆ ಚೈತನ್ಯಪ್ರಕಾಶದ ವ್ಯಾಪ್ತಿಗೆ ಹೀಗೆ ಎಲ್ಲೆಕಟ್ಟನ್ನು ಗೊತ್ತುಪಡಿಸುವದಕ್ಕೆ ಬರುವದಿಲ್ಲ. ಗೋಡೆಯ ಒಳಗೆ, ಆಚೆ-ಯಾವದೇ ಆಗಲಿ, ಇದೆ ಎಂಬುದಕ್ಕೆ ನಮಗೆ ಅನುಭವವೇ ಆಧಾರವಾಗಿದೆ. ಅನುಭವಕ್ಕೆ ಸಂಬಂಧಿಸದೆ ಯಾವ ವಸ್ತುವಿಗೂ ಸತ್ತೆ (ಇರವು) ಇರುವದಿಲ್ಲ. ನಮ್ಮ ಮನಸ್ಸು ಎಷ್ಟೋ ವೇಗವಾಗಿ ಎಷ್ಟು ದೂರದಲ್ಲಿರುವ ವಸ್ತುವನ್ನಾದರೂ ಕಲ್ಪಿಸಿಕೊಳ್ಳಬಲ್ಲದು. ಅಲ್ಲವೆ? ಆದರೆ ಆ

ಮನಸ್ಸು ಹೀಗೆ ಎಲ್ಲವನ್ನೂ ತನ್ನ ಕಲ್ಪನೆಯಲ್ಲಿ ಸೇರಿಸಿಕೊಳ್ಳಬಲ್ಲದೆಂಬುದನ್ನು ಅನುಭವವೇ ನಮಗೆ ತಿಳಿಸಿಕೊಡಬೇಕಾಗಿದೆ. ಮನಸ್ಸು ಯಾವುದನ್ನು ತಿಳಿಯಿಸಿ ಕೊಟ್ಟರೂ ಅನುಭವದ ಆಧಾರದಿಂದಲೇ ಅಲ್ಲವೆ, ಅದನ್ನು ನಮಗೆ ತಿಳಿಯಿಸ ಬೇಕು ? ಮನಸ್ಸಿದೆ ಎಂಬುದಾದರೂ ನಮಗೆ ಅನುಭವದ ಮೂಲಕವೇ ಗೊತ್ತಾ ಗಬೇಕಾಗಿದೆ ಆದ್ದರಿಂದ ಅನುಭವರೂಪನಾಗಿರುವ ನಮ್ಮ ಆತ್ಮನ ಚೈತನ್ಯದ ಬೆಳಕಿನಿಂದ ವ್ಯಾಪ್ತವಾಗದ ವಸ್ತು ಯಾವದೂ– ಕರಣಗಳಾಗಲಿ ವಿಷಯಗಳಾ ಗಲಿ– ಇರುವದೇ ಇಲ್ಲವೆಂದಾಯಿತು. ಹೀಗೆ ಚೈತನ್ಯವು ಜಗತ್ತನ್ನೇ ನುಂಗಿರು ತ್ತದೆ; ಇವೆಲ್ಲವೂ ಚೈತನ್ಯವೇ ಆಗಿರುತ್ತದೆ. ಆತ್ಮನೇ ಕೆಳಗಡೆ, ಆತ್ಮನೇ ಮೇಲುಗಡೆ, ಆತ್ಮನೇ ಹಿಂದುಗಡೆ, ಆತ್ಮನೇ ಮುಂದುಗಡೆ, ಆತ್ಮನೇ ಬಲಗಡೆ, ಆತ್ಮನೇ ಎಡಗಡೆ, ಆತ್ಮನೇ ಎಲ್ಲವೂ–ಎಂಬುದೇ ನಿಶ್ಚಯವು (ಛಾಂ. ೭.೨೫.೨).

ಶ್ರುತಿಯು 'ಈಶ್ವರನಿಂದಲೇ ಇದೆಲ್ಲವೂ ಮುಚ್ಚಿಹೋಗಿರುತ್ತದೆ' ಈ.೧), 'ಆತ್ಮನು ಹೊರಗೂ ಒಳಗೂ ಜನ್ಮಾದಿವಿಕಾರಗಳಿಲ್ಲದವನಾಗಿರುತ್ತಾನೆ' (ಮುಂ. ೨–೧–೨) ಎಂದು ಹೇಳುತ್ತಿದೆ. 'ಸರ್ವವನ್ನೂ ವ್ಯಾಪಿಸಿಕೊಂಡಿರುವದರಿಂದ ಸರ್ವವೂ ನೀನೇ ಆಗಿರುತ್ತೀಯೆ' ( ಗೀ. ೧೧–೪೦ ) ಎಂದು ಅರ್ಜುನನು ಭಗ ವಂತನನ್ನು ಸ್ತುತಿಸಿರುವದು ಬರಿಯ ಹೊಗಳಿಕೆಯಲ್ಲ ; ಅದು ಯಥಾರ್ಥಸ್ಥಿತಿ ಯೇ ಆಗಿರುತ್ತದೆ.

ದೇಹಾದಿಗಳೂ ತೋರುತ್ತಿರುವದು ನಿಜ, ಆದರೆ ಆತ್ಮನ ನಿಜವು ಸರಿಯಾಗಿ ತಿಳಿದುಬರುವವರೆಗೇ ಅವುಗಳ ಇರವು, "ಅನ್ತವನ್ತ ಇಮೇ ದೇಹಾ ನಿತ್ಯಸ್ಯೋ– ಕ್ತಾಃ ಶರೀರಿಣಃ" (ಗೀ. ೨–೧೮) ಆತ್ಮನು ನಿತ್ಯವೂ ಎಲ್ಲೆಲ್ಲಿಯೂ ಎಲ್ಲವನ್ನೂ ವ್ಯಾಪಿಸಿಕೊಂಡು ಪರಮಾರ್ಥಸತ್ಯಸ್ವರೂಪನಾಗಿರುತ್ತಾನೆ ; ಆದರೆ ಶರೀರಾದಿ ಗಳು ಮಾಯೆಯಿಂದ ನಿರ್ಮಿತವಾದ ದೇಹಗಳಂತೆಯೂ ಕನಸಿನಲ್ಲಿ ಕಾಣುವ ದೇಹಗಳಂತೆಯೂ ಬರಿಯ ತೋರಿಕೆಯೇ ಆಗಿದ್ದುಕೊಂಡಿವೆ. ಆತ್ಮನ ನಿಜವನ್ನು ಅರಿತಮಾತ್ರದಿಂದ 'ಎಲ್ಲವೂ ಆತ್ಮನೇ' ಎಂಬ ತತ್ತ್ವವು ಮನದಟ್ಟಾಗುತ್ತದೆ. 'ಅಸತ್ತಿಗೆ ಇರವು ಇಲ್ಲ, ಸತ್ತಿಗೆ ಅಭಾವವೂ ಇಲ್ಲ' ( ಗೀ. ೨–೧೬ ); ಆತ್ಮನೇ ಸತ್ತು, ಶರೀರಾದಿಗಳೇ ಅಸತ್ತು. ಈ ಅಸತ್ತು ನಿಜವಾಗಿಲ್ಲದಿದ್ದರೂ ಇರುವಂತೆ ತೋರುತ್ತಿರುವದು. ಆದ್ದರಿಂದ ಅದು ಮಾಯಾಮಾತ್ರವಾಗಿದೆ. ಮಾಯೆ ಎಂದರೇನು ? ಯುಕ್ತಿಹೀನಪ್ರಕಾಶವು, ಯುಕ್ತಿಗೆ ಹೊಂದದಿದ್ದರೂ ಇರುವಂತೆ ತೋರುತ್ತಿರುವದೇ ಮಾಯೆ. ನೀರಿನಲ್ಲಿ ತೇಲುತ್ತಿರುವ ಮಂಜಿನ ಗಡ್ಡೆಯೆಲ್ಲವೂ ನಿಜವಾಗಿ ನೀರೇ ಆಗಿರುವಂತೆ, ಆತ್ಮಸಮುದ್ರದಲ್ಲಿ ತೇಲುತ್ತಿರುವ ಈ ದೇಹೇಂ ದ್ರಿಯಸಂಘಾತಗಳೆಲ್ಲ ಬರಿಯ ಆತ್ಮನೇ ಆಗಿದೆ.

ಹೀಗೆ 'ನಾನು' ಎಂಬುದರ ನಿಜವನ್ನು ಗೊತ್ತುಪಡಿಸುವದಕ್ಕೆ ಹೊರಟಾಗ ಪರಮಾತ್ಮನೊಬ್ಬನೇ ಇಲ್ಲಿ ನಿಜವಾಗಿ ಇರುವವನು ; ಪರಮಾತ್ಮನಿಗಿಂತ ಭಿನ್ನ ನಾಗಿರುವ ಜೀವನಾಗಲಿ, ಜೀವನ ಉಪಾಧಿಗಳಾಗಲಿ, ಇಲ್ಲವೇಇಲ್ಲ- ಎಂಬ ತತ್ತ್ವವು ಹೊರಬಿದ್ದಿತು, ಜೀವರ ಜನ್ಮಾದಿಗಳೆಲ್ಲವೂ ಮಾಯಿಕವೇ ಆಗಿದೆ, ಎಲ್ಲವೂ ಬ್ರಹ್ಮತತ್ತ್ವವೊಂದೇ- ಎಂಬ ವೇದಾಂತಸಿದ್ಧಾಂತವು ಅನುಭವಮಾತ್ರ ದಿಂದ ನಿರ್ಣಯವಾಯಿತು.



## ೧೦. ಅಧ್ಯಾಸ
( 27—7—62)

ನಾನು ಎಂಬುದು ಚಿನ್ಮಾತ್ರವಾಗಿದೆ, ಆತ್ಮನಲ್ಲಿ ಹೊರತೋರುವದೆಲ್ಲ ಬರಿಯ ಮಾಯೆ ; ನಿಜವಾಗಿ ನೋಡಿದರೆ ಆತ್ಮನಿಗಿಂತ ವ್ಯತಿರಿಕ್ತವಾಗಿ ಯಾವದೊಂದೂ ಇರುವದೇಇಲ್ಲ-ಎಂದು ತಿಳಿದುಕೊಂಡಂತೆ ಆಯಿತು. ಆ ದೃಷ್ಟಿಯಿಂದ ನೋಡಿ ದರೆ ಆತ್ಮನನ್ನು ಸಿದ್ಧಮಾಡಿಕೊಡಬೇಕಾದದ್ದೇ ಇಲ್ಲ. ಪ್ರಪಂಚವೆಲ್ಲವೂ ಸ್ವಯಂ ಸಿದ್ಧನಾದ ಆತ್ಮನಿಂದ ವ್ಯಾಪ್ತವಾಗಿದ್ದು, ಆತ್ಮನೇ ಆಗಿರುತ್ತದೆ. ಆದರೆ ಈಗ ಇದನ್ನೇ ಮತ್ತೊಂದು ರೀತಿಯಿಂದ ವಿಚಾರಮಾಡೋಣ.

'ನಾನು' ಎಂಬುದರಲ್ಲಿ ಏನೇನು ಸೇರಿರುತ್ತದೆ ? 'ನಾನು' ಎಂದಿಷ್ಟೇ ಬೇರೆಯಾಗಿ ನಮಗೆ ಸಿಕ್ಕುವದಿಲ್ಲ. ನಾನು ಅರಿಯುತ್ತೇನೆ, ನಾನು ಕಾಣುತ್ತೇನೆ, ನಾನು ಕೇಳುತ್ತೇನೆ ಎಂದುಮುಂತಾಗಿ ಮತ್ತೊಂದರ ಬೆರಕೆಯಿಟ್ಟುಕೊಂಡೇ ನಾನು ಎಂಬುದು ನಮಗೆ ತೋರುತ್ತಿರುತ್ತದೆ. ನಾವು ಸುಖದುಃಖಗಳನ್ನು ಅನುಭವಿಸುವಾಗ, ವಿಷಯಗಳನ್ನು ಅರಿಯುವಾಗ, 'ನಾನು' ಎಂಬುದರೊಡನೆ ಶರೀರ,ಇಂದ್ರಿಯ, ಮನಸ್ಸು—ಈ ಮೂರೂ ಸೇರಿಕೊಂಡೇ ಇರುತ್ತದೆ. 'ಆತ್ಮೇಂದ್ರಿ ಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ' (ಕಾ.೧-೩-೪) ಎಂದು ಶ್ರುತಿ ಹೇಳುತ್ತಿದೆ. ಭೋಕ್ತೃ ಎಂದರೆ ಅರಿಯುವವನು ಶರೀರೇಂದ್ರಿಯಮನಸ್ಸು ಗಳಿಂದ ಆಗಿರುವವನೇ; ಆದರೂ 'ನಾನು' ಎಂದು ಬೇರೆ ಒಂದು ಇದ್ದಂತೆ ನಿಷ್ಕ ರ್ಷಣ (Abstraction) ಮಾಡಿಕೊಂಡು ಇಂದು ವಿಚಾರಿಸಬೇಕಾಗಿದೆ. 'ನಾನು' ಎಂಬ ತಿಳಿವೇ ಅವಿದ್ಯೆ 'ಅವಿದ್ಯಾಹಂಮತಿಃ' (೧ನೆಯ ಕಾಂಡ, ಧೀವರ್ಗ) ಎಂದು ಅಮರಕೋಶವಿದೆ. ಶರೀರ, ಇಂದ್ರಿಯ, ಮನಸ್ಸು- ಇವುಗಳಿಂದ ಕೂಡಿ ದವನು ಎಂದರೆ ಹೇಗೆ ? ಶರೀರಾದಿಗಳಿಗೂ ಆತ್ಮನಿಗೂ ಯಾವ ಸಂಬಂಧವಿದೆ ?

ಎಂದರೆ ಆತ್ಮನು ಅವುಗಳಿಂದ ಕೂಡಿಕೊಂಡಿರುವಂತೆ ಕಾಣಿಸುತ್ತಿರುವದೇ ಎರಡಕ್ಕೂ ಸಂಬಂಧ ; ನಿಜವಾಗಿ ಮತ್ತೆ ಯಾವ ಸಂಬಂಧವೂ ಇಲ್ಲವೇ ಇಲ್ಲ–ಎಂದು ಬಲ್ಲವರು ಹೇಳುತ್ತಾರೆ.

ಈ ಶರೀರದಲ್ಲಿ ಹೊಕ್ಕಿರುವಂತೆ ಕಾಣುತ್ತಿರುವ ಆತ್ಮನು ಯಾವಯಾವ ಅವಯುವದ ವ್ಯಾಪಾರವನ್ನು ತನ್ನದೆಂದು ಭಾವಿಸುವನೋ ಆಯಾ ವ್ಯಾಪಾರಕ್ಕೆ ತಕ್ಕಂತೆ ಹೆಸರನ್ನು ಪಡೆಯುತ್ತಾನೆ. ಅಷ್ಟಷ್ಟೇ ಅಳತೆಯ ಸ್ವರೂಪದವನು ತಾನೆಂದು ಭಾವಿಸಿಕೊಳ್ಳುತ್ತಾನೆ. "ಅಕೃತ್ಸ್ನೋ ಹಿ ಸ ಪ್ರಾಣನ್ನೇವ ಪ್ರಾಣೋ ನಾಮ ಭವತಿ| ವದನ್ ವಾಕ್ ಪಶ್ಯಂಶ್ಚಕ್ಷುಃ ಶೃಣ್ವನ್ ಶ್ರೋತ್ರಂ ಮನ್ವಾನೋ ಮನಸ್ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ | ಸ ಯೋಽತ ಏಕೈಕಮುಪಾಸ್ತೇ ನ ಸ ವೇದಾಕೃತ್ಸ್ನೋಹ್ಯೇಷೋಽತ ಏಕೈಕೇನ ಭವತ್ಯಾತ್ಮೇತ್ಯೇವೋಪಾಸೀತಾತ್ರ ಸರ್ವ ಏಕಂ ಭವಂತಿ" (ಬೃ. ೧–೪–೭) ಉಸಿರಾಡುವವನು, ಮಾತಾಡುವವನು, ನೋಡುವವನು, ಕೇಳುವವನು, ಯೋಚಿಸುವವನು– ಎಂದುಮುಂತಾಗಿ ಆಯಾ ಕ್ರಿಯೆಯನ್ನು ತನ್ನಮೇಲೆ ಹುಟ್ಟುಹಾಕಿಕೊಂಡು ನಾನು ಇಂಥಿಂಥವನು ಎಂದು ಪ್ರತಿಯೊಬ್ಬನೂ ಅಭಿಮಾನಮಾಪಡುತ್ತಿರುತ್ತಾನೆ. 'ನಾನು ಮಹಾವಾಗ್ಮಿ', 'ನಾನು ಸೂಕ್ಷ್ಮದೃಷ್ಟಿಯುವನು', 'ನಾನು ಸಂಗೀತಗಾರ', 'ನಾನು ವಾಸನೆಯನ್ನು ಹಿಡಿಯುವವನು'– ಎಂದುಮುಂತಾಗಿ ಒಬ್ಬೊಬ್ಬನು ಒಂದೊಂದೇ ಇಂದ್ರಿಯ ವ್ಯಾಪಾರದಲ್ಲಿ ಅಭಿಮಾನವನ್ನು ತಳೆದು ತನ್ನ ಸ್ವರೂಪಕ್ಕೆ ಸಂಕೋಚವನ್ನು ಮಾಡಿಕೊಳ್ಳುತ್ತಿರುತ್ತಾನೆ. ಹೀಗೆ ಆತ್ಮನನ್ನು ತಪ್ಪಾಗಿ ಭಾವಿಸಿಕೊಳ್ಳುತ್ತಿರುವವರು ಸಾಮಾನ್ಯಜನರು ಮಾತ್ರವೇ ಅಲ್ಲ ; ತಿಳಿದವರೆನಿಸಿಕೊಳ್ಳುವ ವಾದಿಗಳೂ ಇಂಥ ಅಭಿಮಾನಕ್ಕೆ ಪಕ್ಕಾಗಿರುತ್ತಾರೆ. ಇಂಥವರನ್ನು ಸಮರ್ಥರಾಮದಾಸರ ಮಾತಿನಲ್ಲಿ 'ಓದಿದ ಮೂರ್ಖ'ರೆನ್ನಬಹುದು. ಈ ಒಂದೊಂದರಲ್ಲಿಯೂ ಅನುಗತವಾಗಿ ಎಲ್ಲವನ್ನೂ ವ್ಯಾಪಿಸಿಕೊಂಡಿರುವ ರೂಪವೇ ಆತ್ಮನು. 'ಆಪ್ನೋತಿ'' (ವ್ಯಾಪಿಸಿರುತ್ತಾನೆ) ಎಂಬ ವ್ಯುತ್ಪತ್ತಿಯಿಂದ ನಮ್ಮ ನಿಜವಾದ ಸ್ವರೂಪಕ್ಕೆ ಆತ್ಮನು ಎಂಬ ಹೆಸರು ಬಂದಿದೆ. ಆ ಸ್ವರೂಪದ ನಿಜವನ್ನು ಅರಿತುಕೊಳ್ಳುವದೇ ಸರಿಯಾದ ಆತ್ಮವಿದ್ಯೆ.

ಮೇಲೆ ಹೇಳಿರುವಂತೆ ದ್ರಷ್ಟೃತ್ವ, ಶ್ರೋತೃತ್ವ, ಮನ್ತೃತ್ವ, ವಿಜ್ಞಾತೃತ್ವ–ಮುಂತಾದ ವಿಶೇಷರೂಪಗಳಲ್ಲೆಲ್ಲ ಸೇರಿಕೊಂಡು ಒಂದೇ ರೂಪದಲ್ಲಿರುವವನೇ ಆತ್ಮನು ಎಂದು ತಿಳಿದುಕೊಂಡಮೇಲೂ ಈ ನಾನು ಎಂಬುದರ ನಿಜವಾದ ಸ್ವರೂಪವನ್ನು ಸರಿಯಾಗಿ ಅರಿತುಕೊಳ್ಳತಕ್ಕದ್ದಿರುತ್ತದೆ. ಏಕೆಂದರೆ ನಾನು 'ಜ್ಞಾತೃ' ಅರಿಯುವವನು– ಎಂದು ಭಾವಿಸಿಕೊಳ್ಳುವದರಲ್ಲಿಕೂಡ ಅವಿದ್ಯೆಯಿರುತ್ತದೆ. 'ನಾನು ಕರ್ತೃ, ನಾನು ಭೋಕ್ತೃ'– ಎಂಬ ಅರಿವನ್ನು ಚೆನ್ನಾಗಿ ಬಿಡಿಸಿ

ನೋಡಿದ ಶ್ರೀಶಂಕರಾಚಾರ್ಯರು 'ನಾನು' ಎಂಬ ವ್ಯವಹಾರದಲ್ಲಿ ಆತ್ಮ ಮತ್ತು ಅನಾತ್ಮ- ಎರಡೂ ಸೇರಿಕೊಂಡಿರುವವೆಂದು ನಿರ್ಣಯಿಸಿರುತ್ತಾರೆ. ಪ್ರಮಾತೃತ್ವವೂ ಕರ್ತೃತ್ವವೂ ಭೋಕ್ತೃತ್ವವೂ ಮನುಷ್ಯನಿಗೆ ಸ್ವಾಭಾವಿಕವೆಂದು ಅವಿಚಾರಸ್ಥಿತಿಯಲ್ಲಿ ತೋರಿದರೂ ನಿಜವಾಗಿ ಅದರಲ್ಲಿ ದೇಹ, ಇಂದ್ರಿಯ, ಮನಸ್ಸು- ಈ ಮೂರರ ಅಧ್ಯಾರೋಪವಾಗಿರುತ್ತದೆ ಎಂಬುದನ್ನು 'ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ' (ಕಾ. ೧-೩-೪) ಎಂಬ ಶ್ರುತಿಯು ವ್ಯಕ್ತಪಡಿಸಿರುತ್ತದೆ. ಅನುಭವಾನುಸಾರಿಯಾದ ಈ ಶ್ರುತಿಯನ್ನು ಮನದಂದುಕೊಂಡೇ ಶಂಕರಾಚಾರ್ಯರು 'ದೇಹೇನ್ದ್ರಿಯಾದಿಷ್ವಹಂಮಮಾಭಿಮಾನರಹಿತಸ್ಯ ಪ್ರಮಾತೃತ್ವಾನುಪಪತ್ತೌ ಪ್ರಮಾಣಪ್ರವೃತ್ತ್ಯನುಪಪತ್ತೇಃ' ಎಂದು ಬರೆದಿರುತ್ತಾರೆ. ದೇಹದಲ್ಲಿ ನಾನೆಂಬ ಬುದ್ಧಿ, ಇಂದ್ರಿಯಗಳಲ್ಲಿಯೂ ಮನಸ್ಸಿನಲ್ಲಿಯೂ ನನ್ನದೆಂಬ ಅಭಿಮಾನವೂ ಇಲ್ಲದಿದ್ದವನಿಗೆ ಪ್ರಮಾತೃತ್ವವು-ನಾನು ಅರಿಯುವಾತನೆಂಬ ವ್ಯವಹಾರವು- ಬರಲಾರದು. ಪ್ರಮಾತೃತ್ವಾಭಿಮಾನವಿಲ್ಲದಿದ್ದರೆ ಅವನನ್ನಾಶ್ರಯಿಸಿಕೊಂಡು ಪ್ರಮಾಣಗಳು ತಮ್ಮ ತಮ್ಮ ಪ್ರಮೇಯಗಳಲ್ಲಿ ತೊಡಗಲಾರವು-ಎಂಬುದು ಭಾಷ್ಯವಾಕ್ಯದ ಅರ್ಥ. ಗಂಡಹೆಂಡತಿಯರಿಗೆ ದಾಂಪತ್ಯವೆಂಬ ಸಂಬಂಧವಿರುವಂತೆ, ಕೈಗೂ ಪುಸ್ತಕಕ್ಕೂ ಸಂಯೋಗವೆಂಬ ಸಂಬಂಧವಿರುವಂತೆ, ಅಥವಾ ನೇರಲೆಹಣ್ಣಿಗೂ ಕಪ್ಪುಬಣ್ಣಕ್ಕೂ, ಓಡುವ ಕುದುರೆಗೂ ಓಟಕ್ಕೂ, ಮಣ್ಣಿಗೂ ಮಡಕೆಗೂ ಸಮವಾಯಸಂಬಂಧವಿರುವಂತೆ ಇಲ್ಲಿ ಆತ್ಮನಿಗೂ ಶರೀರಾದಿಗಳಿಗೂ ಯಾವ ಸಂಬಂಧವಿದೆ ?- ಎಂದು ನೋಡಿದರೆ ಆತ್ಮನು ವಿಷಯಿ, ದೇಹಾದಿಗಳು ವಿಷಯ ; ಹೀಗಿರುವದರಿಂದ, ಮತ್ತು ಆತ್ಮನು ನಿತ್ಯಾವ್ಯಭಿಚರಿತಸ್ವರೂಪನಾಗಿದ್ದು ಶರೀರಾದಿಗಳು ನಿತ್ಯವ್ಯಭಿಚರಿತಸ್ವರೂಪವುಳ್ಳವಾಗಿರುವದರಿಂದ ಈ ಎರಡಕ್ಕೂ ಯಾವದೊಂದು ಸಂಬಂಧವೂ ಇಲ್ಲವೇ ಇಲ್ಲವೆಂದು ಹೇಳಬೇಕಾಗುತ್ತದೆ. ಆದ್ದರಿಂದ ಆತ್ಮನು ದೇಹೇಂದ್ರಿಯಮನೋಯುಕ್ತನಾಗಿರುತ್ತಾನೆ ಎಂಬುದು ಅವಿಚಾರಸಿದ್ಧ ಸಂಬಂಧದಿಂದಲೇ ಎಂದು ಒಪ್ಪಬೇಕು. ದೇಹೇಂದ್ರಿಯಗಳು ಒಮ್ಮೆ "ನಾನು" ಎಂದೂ ಒಮ್ಮೆ "ನನ್ನದು" ಎಂದೂ ಭಾಸವಾಗುತ್ತಿರುವವು ; ಇವುಗಳಲ್ಲಿ ಯಾವದೊಂದೂ ವಿಕಾರರಹಿತವಾಗಿರುವದಿಲ್ಲ. ಹೀಗಿರುವದರಿಂದ ಜ್ಞಾತೃತ್ವವು- ನಾನು ಅರಿಯುವಾತನು ಎಂಬುದು-ಅವಿದ್ಯೆಯಿಂದಲೇ ತೋರುವ ಧರ್ಮವು- ಎಂದಾಗುತ್ತದೆ. ವಿರಾಟ್ಪುರುಷನು ಹಿರಣ್ಯಗರ್ಭನಿಂದ ಹುಟ್ಟುವಾಗಲೇ "ಅಹಮ್" ( ನಾನು ) ಎಂದುಕೊಂಡನಂತೆ ! ಆದ್ದರಿಂದಲೇ ಅವನ ವಂಶಜರಾದ ನಾವುಗಳೆಲ್ಲರೂ 'ನಾನು' ಎಂದುಕೊಳ್ಳುತ್ತಿರುವೆವು. ವಿರಾಟ್ಪುರುಷನ ಅಹಂತೆಗೂ ನಮ್ಮ ಅಹಂತೆಗೂ ಪರಿಮಾಣದಲ್ಲಿ ತಾರತಮ್ಯವಿರಬಹುದಾದರೂ ಜಾತಿಯಲ್ಲಿ ಎಲ್ಲಾ ಅಹಂತೆಯೂ ಅವಿದ್ಯಕವೇ ಆಗಿರುತ್ತದೆ ಎಂಬುದಕ್ಕೆ ಸಂಶಯವಿಲ್ಲ.

ಹೀಗೆ ವಿಚಾರಮಾಡುತ್ತಿರುವವನ ಜ್ಞಾತೃತ್ವವೇ ಅವಿದ್ಯಕವಾಗಿರುವದ ರಿಂದ ಅವನ ವಿಚಾರದಿಂದ ಸಿದ್ಧವಾಗುವ ಪ್ರಮೇಯಗಳ ಸ್ವರೂಪವಾಗಲಿ ಧರ್ಮವಾಗಲಿ ಅವಿದ್ಯಕವಲ್ಲವೆಂದು ಹೇಗೆತಾನೆ ಹೇಳಲಾದೀತು ? ಮೇರು ಪರ್ವತದಲ್ಲಿ ಸಭೆಯನ್ನು ಮಾಡಿಕೊಂಡು ವಿಚಾರಮಾಡುವ ದೇವತೆಗಳಿಗೆಕೂಡ ಈ ನಾನು ಎಂಬುದರ ತತ್ತ್ವವು ಬೇಗನೆ ಬಗೆಹರಿಯಲಿಲ್ಲ. ಹೀಗೆ ಪ್ರಮಾಣ ಪ್ರಮೇಯವ್ಯವಹಾರವೆಲ್ಲವೂ ಶಾಸ್ತ್ರವ್ಯವಹಾರವೆಲ್ಲವೂ ಜ್ಞಾತೃತ್ವಪೂರ್ವಕವಾಗಿ ಯೇ ಇರುವದರಿಂದಲೂ ಸಕಲವ್ಯವಹಾರವೂ ಅವಿದ್ಯಾಪುರಃಸರವೆಂದೇ ಸಿದ್ಧ ವಾಗುತ್ತದೆ–ಎಂದು ಶ್ರೀಶಂಕರಭಗವತ್ಪಾದರವರು ನಿರೂಪಣಮಾಡಿರುವದನ್ನು ಆಲೋಚಿಸುವವರಿಗೆ ಯಾರಿಗೆತಾನೆ ಎದೆಯೊಡೆಯುವೆಇದ್ದೀತು ? ವಿಚಾರಕ್ಕೆ ಹೊರಡುವಾಗಲೇ ತನ್ನ 'ನಾನು' ಎಂಬ ಜ್ಞಾತೃತ್ವವು ಅವಿದ್ಯಾಪುರಸ್ಸರವೆಂದು ತಿಳಿಯಬೇಕೆಂದೂ ಆ ನಾನು ಎಂಬುದಕ್ಕಿಂತಲೂ ವಿಲಕ್ಷಣವಾಗಿ ಆತ್ಮಸ್ವರೂಪವು ಬೇರೆಯಾಗಿರುವದೆಂದೂ ನಿಶ್ಚಯಿಸುವದೇ ಆತ್ಮವಿದ್ಯೆ ಎಂದು ವೇದಾಂತಿಗಳು ಹೇಳುತ್ತಾರೆ.

ಅವಿದ್ಯೆಯಿಂದ ಅಥವಾ ಮಿಥ್ಯಾಜ್ಞಾನದಿಂದ ಬಂಧ, ವಿದ್ಯೆಯಿಂದ ಅಥವಾ ಸಮ್ಯಗ್ಜ್ಞಾನದಿಂದ ಮೋಕ್ಷ–ಎಂಬುದು ವೇದಾಂತಿಗಳಿಗೇ ಮೀಸಲಾದ ಅಭಿ ಪ್ರಾಯವಲ್ಲ. ಹೀಗೆಂದು ಬೇರೆಯ ದರ್ಶನಗಳಲ್ಲಿಯೂ ಹೇಳಿರುತ್ತದೆ. ಉದಾ ಹರಣೆಗೆ, "ದುಃಖಜನ್ಮಪ್ರವೃತ್ತಿದೋಷಮಿಥ್ಯಾಜ್ಞಾನಾನಾಮುತ್ತರೋತ್ತರಾ– ಪಾಯೇ ತದನನ್ತರಾಪಾಯಾದಪವರ್ಗಃ" ( ನ್ಯಾ. ೧–೧–೩ ) ಎಂಬ ನ್ಯಾಯ ಸೂತ್ರದಲ್ಲಿ ದುಃಖಾದಿಗಳಿಗೆ ಮಿಥ್ಯಾಜ್ಞಾನವೇ ಮೂಲವೆಂದೂ ಅದು ಹೋದರೆ ಅಪವರ್ಗವು ಅಥವಾ ನಿತ್ಯಸುಖವಾದ ಮೋಕ್ಷವು ಲಭಿಸುತ್ತದೆಯೆಂದೂ ಹೇಳಿರು ತ್ತದೆ. ಆ ಸೂತ್ರದ ಅಭಿಪ್ರಾಯವೇನೆಂದರೆ ದುಃಖವು ಜನ್ಮಕ್ಕೆ ಗಂಟುಬಿದ್ದಿರು ತ್ತದೆ. ಜನ್ಮಕ್ಕೆ ಪ್ರವೃತ್ತಿಯೇ ಕಾರಣವು ; ಪ್ರವೃತ್ತಿಗೆ ರಾಗಾದಿದೋಷಗಳು ಕಾರಣ ; ದೋಷಗಳಿಗೆ ಮಿಥ್ಯಾಜ್ಞಾನವೇ ಕಾರಣ. ಜನ್ಮವೆಲ್ಲ ದುಃಖಮಯ ವೆನ್ನಬಹುದೆ ? ಸಂಸಾರದಲ್ಲಿ ಸುಖವೂ ಇಲ್ಲವೆ ?– ಎಂದರೆ ಸುಖವೂ ದುಃಖದಿಂ ದಲೇ ಪಡೆಯತಕ್ಕದ್ದಾಗಿರುತ್ತದೆ; ಕ್ಷಣಿಕವಾಗಿದ್ದು ದುಃಖದಲ್ಲಿಯೇ ಕೊನೆಗಾಣ ತಕ್ಕದ್ದಾಗಿದೆ. ಆದ್ದರಿಂದ ಸಂಸಾರದಲ್ಲಿ ಈಗ ಸಿಕ್ಕುತ್ತಿರುವ ಸುಖವು ನಿಜವಾದ ಸುಖವಲ್ಲ, ಅದೂ ದುಃಖವೇ. ಒಬ್ಬ ದಾರಿಹೋಕನು ಕಾಡಿನಲ್ಲಿ ಒಂದು ಗುಂಡಿಯಲ್ಲಿ ಬಿದ್ದನು, ಅದೊಂದು ಹಾಳುಭಾವಿಯಾಗಿದ್ದು ಕೆಳಗೆ ಘಟಸರ್ಪವು ಭುಸ್ಸೆನ್ನುತ್ತಿತ್ತು. ಅದಕ್ಕೆ ಅಂಜಿಕೊಂಡು ಮೇಲುಗಡೆಯಲ್ಲಿದ್ದ ಹುಲ್ಲುಗರಿಕೆಯ ಬೇರನ್ನು ಹಿಡಿದುಕೊಂಡನು. ಆ ಬೇರನ್ನು ಎರಡು ಇಲಿಗಳು ಕಡಿಯುತ್ತಿ ದ್ದವು. ಹೀಗೆ ಅಂಜಿಕೆಯಿಂದ ನಡುಗುತ್ತಾ, ತೂಗಾಡುತ್ತಿದ್ದ ಅವನಿಗೆ ಎಲ್ಲಿಯೋ

ಮರದಮೇಲಿದ್ದ ಜೇನ್ಗೂಡಿನಿಂದ ಗಾಳಿಗೆ ಹಾರಿಬಂದ ಜೇನುತುಪ್ಪದ ತುಂತುರು ಹನಿಯು ನಾಲಗೆಗೆ ಸೋಕಲು 'ಎಂಥ ಸಿಹಿ!' ಎಂಬ ಕ್ಷಣಿಕಭಾವನೆಯು ಹುಟ್ಟಿತೆಂದು ಭಾರತದಲ್ಲಿ ಒಂದು ದೃಷ್ಟಾಂತದ ಆಖ್ಯಾಯಿಕೆಯನ್ನು ಕೊಟ್ಟಿದೆ. ಇಂಥ ಸುಖವು ಸಂಸಾರದಲ್ಲಿ ತೋರುವದು! ಆದ್ದರಿಂದ ಇದನ್ನು ದುಃಖವೆಂದೇ ತಿಳಿಯಬೇಕು. ಜನ್ಮಕ್ಕೆಲ್ಲ ಕರ್ಮಪ್ರವೃತ್ತಿಯೇ ಕಾರಣವು; ಕರ್ಮಗಳಲ್ಲಿ ತೊಡಗುವದರಿಂದಲ್ಲವೆ, ಅವುಗಳ ಫಲವನ್ನು ಅನುಭವಿಸುವದಕ್ಕಾಗಿ ಜೀವನು ಜನ್ಮಾಂತರವನ್ನು ಅನುಭವಿಸುವದು? ರಾಗದ್ವೇಷಾದಿದೋಷಗಳಿಂದಲೇ ಮನುಷ್ಯನು ಕರ್ಮಲ್ಲಿ ತೊಡಗಿಸಲ್ಪಡುತ್ತಾನೆಂಬುದು ಪ್ರಸಿದ್ಧವಾಗಿರುತ್ತದೆ. ಈ ದೋಷಗಳಿಲ್ಲದವನು ಯಾವ ಕರ್ಮದಲ್ಲಿಯೂ-ಯಾವದಾದರೊಂದನ್ನು ಹಿಡಿಯುವದಕ್ಕೆ ಅಥವಾ ಬಿಡುವದಕ್ಕೆ- ಪ್ರವರ್ತಿಸಲಾರನು. ಈ ದೋಷಗಳೊ, ಎಂದರೆ ಮಿಥ್ಯಾಜ್ಞಾನದಿಂದ ಆಗಿರುತ್ತವೆ. ದೇಹಾದಿಗಳೇ ಆತ್ಮನು, ಆವು ನಿತ್ಯವಾಗಿರುವವು- ಎಂಬ ತಪ್ಪುತಿಳಿವಳಿಕೆಯಿಂದಲ್ಲವೆ, ಮನುಷ್ಯನು ಒಳ್ಳೆಯ ಅಥವಾ ಕೆಟ್ಟ ಕರ್ಮದಲ್ಲಿ ಪ್ರವರ್ತಿಸುತ್ತಾನೆ? ಆದ್ದರಿಂದ ಮಿಥ್ಯಾಜ್ಞಾನದಿಂದ ದೋಷಗಳಿಗೆ ವಶನಾಗಿ ಕರ್ಮಗಳಲ್ಲಿ ತೊಡಗಿ ದೇಹವನ್ನು ಧರಿಸಿ ಜೀವನು ದುಃಖವನ್ನನುಸರಿಸುತ್ತಿರುತ್ತಾನೆ. ಇದೇ ಬಂಧವು. ಈ ಮಿಥ್ಯಾಜ್ಞಾನವು ಆತ್ಮವಿಷಯದ ಸಮ್ಯಗ್ಜ್ಞಾನದಿಂದ ಹೋದರೆ ದೋಷವೇ ಮುಂತಾದವುಗಳು ಹೋಗಿ ಜನ್ಮಮರಣರೂಪವಾದ ಸಂಸಾರದಿಂದ ಮುಕ್ತನಾಗುತ್ತಾನೆ- ಎಂಬುದು ನೈಯಾಯಿಕರ ದರ್ಶನವು.

ಹೀಗೆಯೇ ಸಾಂಖ್ಯರೂ ಅಜ್ಞಾನದಿಂದ ಬಂಧವೂ ಜ್ಞಾನದಿಂದ ಮೋಕ್ಷವೂ ಆಗುವವೆಂದು ಅಭಿಪ್ರಾಯಪಟ್ಟಿರುತ್ತಾರೆ. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ- ಎಂಬ ಮೂರು ಬಗೆಯಾದ ತಾಪಗಳಿಂದ ಜೀವರು ಕಷ್ಟಪಡುತ್ತಿದ್ದಾರೆ. ಈ ಕಷ್ಟಕ್ಕೆ ಪ್ರಕೃತಿಪುರುಷನನ್ನು ವಿಂಗಡಿಸಿಕೊಂಡು ತಿಳಿಯದೆ ಇರುವ ಅವಿವೇಕವೇ ಕಾರಣವು. ಪ್ರಕೃತಿಯು ಕರ್ತೃವಾಗಿರುತ್ತದೆ, ಪುರುಷನು ಭೋಕ್ತೃವಾಗಿರುತ್ತಾನೆ; ಈ ಪ್ರಕೃತಿಪುರುಷರ ಸ್ವರೂಪವನ್ನು ವಿಂಗಡಿಸಿಕೊಂಡು ಅರಿಯದೆ ಇರುವದೆಂಬ ಅವಿವೇಕದಿಂದ ತಾನೇ ಸಕಲಕರ್ಮಗಳನ್ನೂ ಮಾಡುವೆನೆಂದು ಭ್ರಾಂತನಾಗುತ್ತಾನೆ. 'ಪ್ರಕೃತಿಯೇ ನಿಜವಾಗಿ ಕರ್ತೃ, ಪುರುಷನಾದ ನಾನು ಅಸಂಗನು,- ಎಂಬ ವಿವೇಕವುಂಟಾದಕೂಡಲೆ ಈ ಸಂಸಾರ ಬಂಧದಿಂದ ಬಿಡುಗಡೆಯಾಗುತ್ತನೆ. ಇದು ಸಾಂಖ್ಯರ ದರ್ಶನವು.

ಆದರೆ ವೇದಾಂತದರ್ಶನದಲ್ಲಿ ಹೇಳಿರುವ ಅವಿದ್ಯಾಕೃತಬಂಧ, ಮತ್ತು ವಿದ್ಯಾಕೃತಮೋಕ್ಷ- ಇವುಗಳ ಸ್ವರೂಪವು ಇವೆರಡಕ್ಕಿಂತಲೂ ವಿಲಕ್ಷಣವಾಗಿರುತ್ತದೆ. ಇಲ್ಲಿಯೂ ಸಾಂಖ್ಯದರ್ಶನದಲ್ಲಿರುವಂತೆಯೇ ಪ್ರಕೃತಿಪುರುಷರ ವಿವೇಕವು ವಿದ್ಯೆಯೆನಿಸುತ್ತದೆ, ಮೋಕ್ಷಕ್ಕೆ ಕಾರಣವಾಗಿರುತ್ತದೆ. ಅವೆರಡರ ಅವಿವೇಕವು

ಬಂಧಕ್ಕೆ ಕಾರಣವಾಗಿರುತ್ತದೆ. ಆದರೆ ಇಲ್ಲಿ ವಿಶೇಷವೇನೆಂದರೆ, ಸಾಂಖ್ಯರ ಮತದಲ್ಲಿ ಪುರುಷರು ಅನೇಕ ; ಪ್ರಕೃತಿ, ಪುರುಷ ಮತ್ತು ಪ್ರಕೃತಿಪುರುಷ ಸಂಯೋಗ– ಇವೆಲ್ಲ ಅನುಮೇಯ, ಅನುಮಾನಪ್ರಮಾಣದಿಂದ ತಿಳಿದುಕೊಳ್ಳ ಬೇಕಾದವು. ಆದರೆ ವೇದಾಂತದಲ್ಲಿ ಹೀಗಲ್ಲ. ಪುರುಷನು ಅಥವಾ ಆತ್ಮನು ಒಬ್ಬನೇ. 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ' (ಗೀ.೧೩–೨) ಎಂಬ ಗೀತೆಯಲ್ಲಿಯೂ 'ಏಕೋ ದೇವಃ ಸರ್ವಭೂತೇಷು ಗೂಢಃ' (ಶ್ವೇ. ೬–೧೧) ಎಂಬ ಶ್ರುತಿಯಲ್ಲಿಯೂ ಹಾಗೆಂದು ಸ್ಪಷ್ಟವಾಗಿ ಹೇಳಿರುತ್ತದೆ. ಪುರುಷನು ಅಥವಾ ಆತ್ಮನು ಅನುಮೇಯನಲ್ಲ. 'ಯತ್ ಸಾಕ್ಷಾದಪರೋಕ್ಷಾದ್ 'ಬ್ರಹ್ಮ ಯ ಆತ್ಮಾ ಸರ್ವಾಂತರಃ' (ಬೃ. ೩–೪–೧)–ಎಂಬ ಶ್ರುತಿಯ ಪ್ರಮಾಣ ದಿಂದ ಆತ್ಮನು ನಮ್ಮ ದೇಹಾದಿಗಳೆಲ್ಲಕ್ಕಿಂತಲೂ ತೀರ ಒಳಗೆ ನೇರಾಗಿ ಅಪರೋಕ್ಷ ವಾಗಿ ಸಿದ್ಧವಾಗಿರುವ ಅನುಭವಸ್ವರೂಪನಾಗಿರುತ್ತಾನೆ. ಪುರುಷನು ಪ್ರಕೃತಿ ಯನ್ನು ಬಿಂಗಡಿಸಿ ತಿಳಿದುಕೊಳ್ಳದೆ ಅದರಲ್ಲಿ ತಾದಾತ್ಮ್ಯವನ್ನು ಹೊಂದಿ ಅದರ ಧರ್ಮಗಳನ್ನು ಅನುಭವಿಸುತ್ತಾನೆಂಬುದನ್ನು ಸಾಂಖ್ಯರಂತೆಯೇ ವೇದಾಂತಿಗಳೂ ಒಪ್ಪುತ್ತಾರೆ. 'ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್' (ಗೀ. ೧೩–೨೧) ಎಂಬ ಗೀತಾವಾಕ್ಯಕ್ಕೆ ಇದೇ ಅಭಿಪ್ರಾಯ. ಆದರೆ ಪುರುಷನಿ ಗಿಂತ ಪ್ರಕೃತಿಯು ನಿಜವಾಗಿ ಬೇರೆಯಾಗಿಲ್ಲವೇ ಇಲ್ಲ ; ಆದರೂ ಅನಾದ್ಯವಿದ್ಯೆ ಯಿಂದ ಈ ಶರೀರಾದಿರೂಪವಾಗಿರುವ ಪ್ರಕೃತಿಯನ್ನು ತಾನೆಂದೇ ಜೀವನು ಬಗೆ ದಿರುತ್ತಾನೆ. ಆತ್ಮನು ಒಂದು ದಿನ ಹೇಗೋ ಪ್ರಕೃತಿಯನ್ನು ಶರೀರೇಂದ್ರಿಯ ಮನಸ್ಸುಗಳನ್ನು–ತಾನೆಂದು ತಪ್ಪಾಗಿ ತಿಳಿದುಕೊಂಡು ನಿಜವಾಗಿ ಭ್ರಾಂತನಾದನು ಎಂಬುದೇನೂ ಅಭಿಪ್ರಾಯವಲ್ಲ. ಸತ್ಯವಾದ ಆತ್ಮಸ್ವರೂಪ, ಅನೃತವಾದ ಶರೀರಾದಿ ಲಕ್ಷಣಾನಾತ್ಮಸ್ವರೂಪ– ಇವೆರಡನ್ನೂ ಸ್ವಭಾವದಿಂದಲೇ ಒಂದರಲ್ಲೊಂದನ್ನೂ ಒಂದರ ಧರ್ಮಗಳಲ್ಲಿ ಮತ್ತೊಂದರ ಧರ್ಮಗಳನ್ನೂ ಆರೋಪಿಸಿಕೊಂಡಿರುವಂತೆ ಕಾಣಿಸುತ್ತಿರುತ್ತಾನೆ. 'ಅನ್ಯೋನ್ಯಸ್ಮಿನ್ ಅನ್ಯೋನ್ಯಾತ್ಮಕತಾಮ್ ಅನ್ಯೋನ್ಯ ಧರ್ಮಾಂಶ್ಚಾಧ್ಯಸ್ಯ ಇತರೇತರಾವಿವೇಕೇನ ಅತ್ಯಂತವಿವಿಕ್ತಯೋರ್ಧರ್ಮಧರ್ಮಿ ಣೋರ್ಮಿಥ್ಯಾ ಜ್ಞಾನನಿಮಿತ್ತಃ ಸತ್ಯಾನೃತೇ ಮಿಥುನೀಕೃತ್ಯ 'ಅಹಮಿದಂ ಮಮೇ ದಮ್' ಇತಿ ನೈಸರ್ಗಿಕೋಽಯಂ ಲೋಕವ್ಯವಹಾರಃ" ಎಂಬ ಶಂಕರಭಾಷ್ಯ ವಾಕ್ಯದ ಅಭಿಪ್ರಾಯವು ಇದೇ ಅಂತಃಕರಣಾದಿಗಳಲ್ಲಿ ಆತ್ಮನ ಚೈತನ್ಯವೇ ಮುಂತಾದ ಧರ್ಮಗಳನ್ನು ಅಧ್ಯಾಸಮಾಡಿಕೊಂಡು ಜನರು ಸ್ವಭಾವದಿಂದ ವ್ಯವ ಹರಿಸುತ್ತಿದಾರೆ ; ಆತ್ಮನಲ್ಲಿ ದೇಹೇಂದ್ರಿಯಮನಸ್ಸುಗಳ ಧರ್ಮಗಳಾದ ಜನನ ಮರಣ, ವಿಷಯಜ್ಞಾನ, ಕರ್ಮಪ್ರವೃತ್ತಿ, ಮನನಸಂಶಯನಿರ್ಣಯಾದಿಗಳು– ಮುಂತಾದವುಗಳೆಲ್ಲವನ್ನೂ ಆರೋಪಮಾಡಿಕೊಂಡಿರುತ್ತಾರೆ. ಈ ಅನ್ಯೋನ್ಯಾ ಧ್ಯಾಸದಿಂದಲೇ 'ನಾನು , 'ನನ್ನದು' ಎಂಬ ವ್ಯವಹಾರವುಂಟಾಗಿರುತ್ತದೆ. ಇದ

ರಿಂದಲೇ 'ನಾನು ಪ್ರಮಾತೃ, ಕರ್ತೃ, ಭೋಕ್ತೃ' ಎಂಬ ವ್ಯವಹಾರವಾಗಿರುತ್ತದೆ. ಆದ್ದರಿಂದ ಈ ಅಧ್ಯಾಸರೂಪವಾದ ತಪ್ಪುತಿಳಿವಳಿಕೆಯಿಂದಲೇ ಪ್ರಮಾಣ ಪ್ರಮೇಯವ್ಯವಹಾರವಾಗಿರುತ್ತದೆ. ಆತ್ಮನ ನಿಜವನ್ನು ಸಾಂಖ್ಯರು ನೈಯಾಯಿಕರು ಮುಂತಾದವರು ಹೇಳುವಂತೆ ಯಾವ ಪ್ರಮಾಣದಿಂದಲೂ ಸಿದ್ಧಮಾಡಬೇಕಾಗಿಲ್ಲ. ಅವನು ಸ್ವಯಂಸಿದ್ಧನಾಗಿರುತ್ತಾನೆ. ಪ್ರಮಾಣವ್ಯವಹಾರವೇ ಆತ್ಮನ ನಿಜವನ್ನು ಅರಿತುಕೊಳ್ಳದ್ದರಿಂದ ಆಗಿರುತ್ತದೆ.

ಈ ಅನ್ಯೋನ್ಯಾಧ್ಯಾಸರೂಪವಾಗಿರುವ ಬಂಧವು ಅನಾದಿಯಾಗಿರುತ್ತದೆ. ಸ್ವಾಭಾವಿಕವಾಗಿರುತ್ತದೆ, ಮಿಥ್ಯಾಪ್ರತ್ಯಯರೂಪವಾಗಿರುತ್ತದೆ. ಅದು ನಿಜವಾಗಿ ಆಗಿಯೇ ಇರುವದಿಲ್ಲ–ಎಂಬುದು ವೇದಾಂತಿಗಳ ಹೇಳಿಕೆ. ಈ ಅಧ್ಯಾಸದ ನಿಮಿತ್ತದಿಂದ ಹೊರಗೆ ಒಂದು ಪ್ರಪಂಚ, ಅದನ್ನು ನೋಡುತ್ತಿರುವ ಶರೀರೇಂದ್ರಿಯಮನಸ್ಸುಗಳುಳ್ಳ ನಾನು, ನನ್ನಂತೆ ಅನೇಕ ಕರ್ತೃಭೋಕ್ತೃಗಳು, ಬೆಟ್ಟ, ನದಿ, ಸಮುದ್ರ, ಅಂತರಿಕ್ಷ, ಸೂರ್ಯ, ಚಂದ್ರ, ನಕ್ಷತ್ರಾದಿಗಳು– ಇವೆಲ್ಲವೂ ತೋರುತ್ತಿರುವವು ಈ ಅಧ್ಯಾಸರೂಪವಾದ ಅವಿದ್ಯೆಯಿಂದಲೇ ಹೊರಗೆ ಇರುವ ವಸ್ತುಗಳಲ್ಲಿಯೂ ಪ್ರಾಣಿಗಳಲ್ಲಿಯೂ ಮನುಷ್ಯನಲ್ಲಿಯೂ ನಮಗೆ ಇಷ್ಟಾನಿಷ್ಟಬುದ್ಧಿಯಾಗುವದು. ಅವುಗಳಲ್ಲಿ ರಾಗದ್ವೇಷಾದಿಗಳೂ ಆ ರಾಗಾದಿಗಳಿಂದ ಪ್ರವೃತ್ತಿನಿವೃತ್ತಿಗಳೂ ಆಗುತ್ತಿರುವವು. ಈ ವಿಶ್ವವೆಂಬುದೆಲ್ಲವೂ ಹಲವು ಬೇಕುಬೇಡಗಳ ಸಂತೆಯಾಗಿರುತ್ತದೆ. ಈ ಜಗತ್ತಿನ ಇತಿಹಾಸವೇನು ?– ಎಂದರೆ ಅವಿದ್ಯೆಯ ವಿಲಾಸವೇ. ಈ ಹೇಳಿಕೆಯು ಸಾಮಾನ್ಯಜನರಿಗೆ ಒಗ್ಗದೆಂಬುದು ಸ್ವಾಭಾವಿಕವಾಗಿದೆ. ನಮಗೆ ಕಾಣುವದೆಲ್ಲವೂ ಒಂದಾನೊಂದು ದಪ್ಪಸುಳ್ಳು ತಿಳಿವಳಿಕೆಯ ಫಲವಾಗಿರುತ್ತದೆ ; ನಾವೆಲ್ಲರೂ 'ನಾನು', 'ನಾನು' ಎಂದುಕೊಳ್ಳುತ್ತಿರುವ ವಸ್ತುವುಕೂಡ ಎಲ್ಲದರಂತೆ ಹುಸಿತೋರಿಕೆಯೇ– ಎಂದರೆ ಯಾರುತಾನೆ ಒಪ್ಪಿಯಾರು? ಹೀಗಿರುವದರಿಂದ ಇದರ ನಿಜವನ್ನು ಕುರಿತು ಇಷ್ಟಷ್ಟು ಒಳಹೊಕ್ಕು ವಿಚಾರಮಾಡತಕ್ಕದ್ದಿದೆ.

---

# ೧೧. ಪ್ರಮಾಣವ್ಯವಹಾರ
## ( 28-7-62 )

ನಾನೆಂಬ ಬುದ್ಧಿಯು ಅವಿದ್ಯೆ, ಈ ನಾನು ಎಂಬುದರ ತತ್ತ್ವವನ್ನು ವಿವೇಕ ದಿಂದ ನಿರ್ಧರಿಸಿಕೊಳ್ಳಲಾರದೆ, ಶರೀರವೇ ನಾನು ಎಂದೂ ಇಂದ್ರಿಯಗಳು ನನ್ನವು ಎಂದೂ ನೆರೆನಂಬಿ ವ್ಯವಹಾರಮಾಡುತ್ತಿದಾರೆ. ದೇಹಾದಿರೂಪವಾದ ಅನಾತ್ಮವು ಅನೃತ, ಆತ್ಮನೇ ಸತ್ಯ ; ಈ ಎರಡನ್ನೂ ಒಂದನ್ನೊಂದರಲ್ಲಿ ಅಧ್ಯಾಸಮಾಡಿ ಒಂದರ ಧರ್ಮವನ್ನೊಂದರಲ್ಲಿ ಆರೋಪಿಸಿಕೊಳ್ಳುತ್ತಿರುವದೇ ವ್ಯವಹಾರವು- ಎಂಬುದು ವೇದಾಂತದ ಸಿದ್ಧಾಂತವು. ಆದರೆ ಇದನ್ನು ಯಾವ ಪ್ರಮಾಣದ ಬಲ ದಿಂದ ಒಪ್ಪಬೇಕು ? ಕಾಣುತ್ತಿರುವ ದೇಹಾದಿಸಂಘಾತವೂ ಬಾಹ್ಯಪ್ರಪಂಚವೂ ಅನೃತವೆಂದೂ ಯಾರಿಗೂ ಕಾಣದ ಆತ್ಮನು ಸತ್ಯನೆಂದೂ ಒಪ್ಪುವದಕ್ಕೆ ಯಾವ ಪ್ರಮಾಣದ ಆಧಾರವಿದೆ ? ಆತ್ಮಾನಾತ್ಮರಿಗೆ ಅಧ್ಯಾಸವಾಗಿದೆ ಎಂಬುದಕ್ಕಾದರೂ ಯಾವ ಪ್ರಮಾಣವಿದೆ ? ಎಂದು ಜಿಜ್ಞಾಸುಗಳು ಶಂಕಿಸುವದು ಸ್ವಾಭಾವಿಕ ವಾಗಿದೆ.

ಆದರೆ ಇಲ್ಲಿ ಸತ್ಯ, ಮಿಥ್ಯೆ, ಪ್ರಮಾಣ- ಮುಂತಾಗಿ ನಾವು ಬಳಸುತ್ತಿರುವ ಶಬ್ದಗಳ ಅರ್ಥವನ್ನು ಮೊದಲು ವಿವೇಚಿಸಿ ನಿಶ್ಚಯಿಸಿಕೊಳ್ಳುವದು ಅತ್ಯವಶ್ಯ ವಾಗಿದೆ, ಏಕೆಂದರೆ ದುರಭಿಮಾನದಿಂದ ಯಾವದನ್ನಾದರೂ ಸತ್ಯವೆಂದು ನಾವು ಬಗೆಯಬಹುದು ; ಮತ್ತೊಬ್ಬರಿಗೆ ತಿಳಿಸಲೂಬಹುದು. ಇದು ಸತ್ಯ, ಇದು ಮಿಥ್ಯೆ-ಎಂದು ನಿಶ್ಚಯಿಸುವದಕ್ಕೆ ಯಾವದಾದರೊಂದು ಮಾನದಂಡವು ಬೇಡವೆ ಅವಿಚಾರಿತಸಿದ್ಧವಾಗಿ ನಮಗೆಲ್ಲರಿಗೂ ತೋರುವದನ್ನೆಲ್ಲ ಸತ್ಯವೆಂದು ಹೇಳುವದು ಸರಿಯಾದೀತೆ ? ಇಲ್ಲ. ಆದ್ದರಿಂದ ಸತ್ಯಮಿಥ್ಯಾಶಬ್ದಗಳ ಅರ್ಥವನ್ನೇ ಮೊದಲು ನಾವು ನಿರೂಪಣಮಾಡೋಣ.

ಯಾವದು ಪ್ರಮಾಣವೇದ್ಯವೋ ಅದೇ ಸತ್ಯ ಎಂದು ನೈಯಾಯಿಕರೂ ಅವರನ್ನು ಅನುಸರಿಸುವವರೂ ಹೇಳುತ್ತಾರೆ. ಲೋಕದಲ್ಲಿಕೂಡ ಜನರು 'ಇದ ಕ್ಕೇನು ಪ್ರಮಾಣವಿದೆ ?' ಎಂದು ಕೇಳುತ್ತಾರೆ. ವೇದಾಂತಿಗಳು ಪ್ರಮಾಣ ವೇದ್ಯವಾದದ್ದನ್ನು ಲೋಕದಲ್ಲಿ ಸತ್ಯವೆಂದು ವ್ಯವಹರಿಸುತ್ತಾರೆಂಬುದನ್ನೇನೋ ಒಪ್ಪುತ್ತಾರೆ. ಆದರೆ ಪರಮಾರ್ಥಸತ್ಯವು ಯಾವದೆಂಬುದನ್ನು ನಿಶ್ಚಯಿಸು ವದಕ್ಕೆ 'ಪ್ರಮಾಣಗಮ್ಯನಾದದ್ದು ಸತ್ಯವು' ಎಂಬ ಲಕ್ಷಣವು ಸಾಕಾಗಲಾರದು ಎಂದು ಅವರ ಅಭಿಪ್ರಾಯ. ಪ್ರತ್ಯಕ್ಷಕ್ಕೆ ಸರಿಯಾದ ಜರತಾರಿ ಎಂತ ಕಂಡು ಅಂಗಡಿಯವನು 'ಇದು ನಿಜವಾದ ಜರತಾರಿ' ಎಂದು ಹೇಳಿದಮೇಲೂ ಪರೀಕ್ಷಿ ಸಿದಮೇಲೆ ಅದು ಕಾಲಾಂತರದಲ್ಲಿ ಖೋಟಜರತಾರಿ ಎಂದು ತಿಳಿದುಬರುತ್ತದೆ. ನಿಜವಾಗಿ ಜರತಾರಿಯೇ, ಆಣೆಮಾಡಿ ಹೇಳುತ್ತೇನೆ- ಎಂದರೂ ಅದು ನಿಜವಾ

ಜಟತಾರಿಯಾಗಲಿಲ್ಲ. ಆದ್ದರಿಂದ ಯಾವದು ಹೇಗೆ ಇಂದ್ರಿಯಾದಿಗಳಿಗೆ ಒಂದು ಸಲ ತೋರಿ ಎಂಥ ಸ್ವರೂಪದ್ದೆಂದು ನಿಶ್ಚಯವಾಗುವದೋ, ಅದು ಹಾಗೆಯೇ ಮಾರ್ಪಡದೆ ಇದ್ದರೆ ಮಾತ್ರ 'ಸತ್ಯ'ವೆನಿಸೀತು, ಇದು ಎಂದಿಗೂ ವ್ಯಭಿಚರಿತ ವಾಗದ ಸ್ವರೂಪದ್ದು ಎಂಬ ನಿಶ್ಚಯಕ್ಕೆ ಅವಕಾಶವಿರಬೇಕು ; ಎಂದಾದರೂ ಇದು ಮಾರ್ಪಡಬಹುದಾದ ಸ್ವರೂಪವುಳ್ಳದ್ದು ಎಂದಾದರೆ ಅದನ್ನು ಯಾರು ತಾನೆ 'ಸತ್ಯ'ವೆಂದು ನಂಬಿಯಾರು? ಆದ್ದರಿಂದ ಬರಿಯ ಪ್ರಮಾಣವೇದ್ಯವಾದದ್ದೇ ಸತ್ಯವೆಂದು ನಂಬುವದು ಸರಿಯಲ್ಲ. ಅರ್ಥಕ್ರಿಯಾಕಾರಿಯಾದದ್ದು ಸತ್ಯವೆಂದು ಕೆಲವರು ಅನ್ನುತ್ತಾರೆ ; ಅದರೆ ಅದೂ ಸರಿಯಾಗಿ ತೋರುವದಿಲ್ಲ. ಏಕೆಂದರೆ ಕನಸಿನಲ್ಲಿ ಅರ್ಥಕ್ರಿಯಾಕಾರಿಯಾಗಿರುವದು ಎಚ್ಚರದಲ್ಲಿ ಹಾಗಿರುವದಿಲ್ಲ ; ಕನಸಿನಲ್ಲಿ ಉಂಡು ತೇಗಿದವನಿಗೆ ಎಚ್ಚರವಾದಮೇಲೆ ಹಸಿವೇ ಇರಬಹುದು. ಆದ್ದರಿಂದ ಅದರಿಂದ ಆಗುವ ಸಮರ್ಥಕ್ರಿಯೆಯು ಅದಮಾತ್ರಕ್ಕೆ ಅದು ಸತ್ಯವಸ್ತು ಎನ್ನುವದಕ್ಕೆ ಬರುವಂತಿಲ್ಲ.

ಪ್ರಮಾಣವೇದ್ಯವಾದದ್ದನ್ನು ನಾವು ಸತ್ಯವೆಂದು ಕರೆಯುವದಕ್ಕೆ ಬರುವ ದಿಲ್ಲವೆಂಬುದು ಇನ್ನೊಂದು ಕಾರಣದಿಂದಲೂ ಗೊತ್ತಾಗುತ್ತದೆ. 'ನಮ್ಮ ಮುಂದೆ ಚೇತನಾಚೇತನಾತ್ಮಕವಾದ ಪ್ರಪಂಚವಿದೆ ಎಂಬುದಕ್ಕೆ ಪ್ರತ್ಯಕ್ಷಪ್ರಮಾಣವಿದೆ ; ಇನ್ನೇನು ಬೇಕು ?' ಎಂದು ಕೆಲವರು ಕೇಳುತ್ತಾರೆ, ಪ್ರಪಂಚವು ಕಾಣುತ್ತಿದೆ ಎಂಬುದಕ್ಕೆ ಮತ್ತೇನೂ ಬೇಡ; ಪ್ರತ್ಯಕ್ಷವೇ ಸಾಕು. ಆದರೆ ಪ್ರತ್ಯಕ್ಷವು ಹೇಳಿದ್ದು ಸತ್ಯವೆನ್ನುವದಕ್ಕೆ ಏನು ಆಧಾರವಿದೆ ? ಪ್ರತ್ಯಕ್ಷವು ಪ್ರಮಾಣವಷ್ಟೆ ? ಪ್ರಮಾಣವು ವ್ಯಾಪಾರವನ್ನು ಮಾಡುವದಕ್ಕೆ ಮೊದಲೇ ಪ್ರಮಾತೃವಿರಬೇಕು, ಪ್ರಮಾತೃವಿಗೆ ಶರೀರವಿರಬೇಕು, ಇಂದ್ರಿಯಗಳಿರಬೇಕು, ಮನಸ್ಸಿರಬೇಕು ; ಈ ಶರೀರಾದಿಗಳಿವೆ ಎಂಬುದಕ್ಕೆ ಆಧಾರವೇನು ? ಅದಕ್ಕೆ ಪ್ರತ್ಯಕ್ಷವೇ ಪ್ರಮಾಣ ವೆನ್ನಬಹುದೆ ? ಯಾವ ಪ್ರತ್ಯಕ್ಷಪ್ರಮಾಣದಿಂದ ದೇಹಾದಿಗಳ ಸಿದ್ಧಿಯಾಗುವ ದೆನ್ನುವೆವೋ ಆ ಪ್ರತ್ಯಕ್ಷಪ್ರಮಾಣಕ್ಕೂ ಪ್ರಮಾತೃ ಬೇಕಷ್ಟೆ ? ಆ ಪ್ರಮಾತೃ ವಿಗೂ ಶರೀರೇಂದ್ರಿಯಮನಸ್ಸುಗಳಿರಬೇಕಲ್ಲವೆ ? ಆ ಶರೀರಾದಿಗಳು ಪ್ರಮೇಯ ವಾಗಿರುವ ಶರೀರಾದಿಗಳಿಗಿಂತ ಬೇರೆಯಾಗಿವೆಯೆ ? 'ಶರೀರವಿದೆ ಎಂಬುದಕ್ಕೆ ಪ್ರಮಾಣವೇನು ಬೇಕು, ಅದು ಇದೆ ಎಂಬ ಪ್ರತ್ಯಕ್ಷವೇ ಸಾಕಲ್ಲವೆ ?' ಎಂದು ಕೇಳುವದು ಪ್ರತ್ಯಕ್ಷಕ್ಕೆ ಪ್ರತ್ಯಕ್ಷವನ್ನೇ ಆಧಾರವಾಗಿಟ್ಟುಕೊಂಡಂತೆ ಆಗುವದು ; ಈ ಶರೀರಾದಿಗಳು ಪ್ರತ್ಯಕ್ಷವೇದ್ಯವಾಗಿರುವವು, ಪ್ರತ್ಯಕ್ಷದಿಂದ ಇವು ಸಿದ್ಧವಾಗು ವವೆನ್ನುವದಕ್ಕೆ ಇವು ನಮಗೆಲ್ಲರಿಗೂ ಇರುವವೆಂದು ತೋರುತ್ತಿರುವದೇ ಸಾಕಾ ಗಿದೆ—ಎಂದುಮುಂತಾಗಿ ವಾದಿಸುವದು ಹಾಸ್ಯಾಸ್ಪದವಾಗುವದು. ಇಲ್ಲಿ ಆತ್ಮಾ- ಶ್ರಯ, ಅನ್ಯೋನ್ಯಾಶ್ರಯ, ಅನವಸ್ಥೆ—ಮುಂತಾದ ದೋಷಗಳು ಸ್ಫುಟವಾಗಿರು ತ್ತವೆ. ಪ್ರತ್ಯಕ್ಷಪ್ರಮಾಣವೇ ಹೀಗೆ ಸಡಿಲವಾದಮೇಲೆ ಅದರ ಆಧಾರದಿಂದ

ಬಾಳಬೇಕಾಗಿರುವ ಅನುಮಾನಾದಿಗಳ ಗತಿಯೇನಾಯಿತು! 'ನಮಗೆಲ್ಲ ಶರೀರಾದಿಗಳಿರುವವೆನ್ನುವದು ಯಾವನೊಬ್ಬ ವ್ಯಕ್ತಿಯ ಅಭಿಪ್ರಾಯವಲ್ಲ, 'ಯಾರನ್ನು ಬೇಕಾದರೂ ಕೇಳಿ' ಎನ್ನುವದೂ ಸರಿಯಾಗುವದಿಲ್ಲ; ಏಕೆಂದರೆ ಇದು ಬಹುಮತದಿಂದ ಸಿದ್ಧವಾಗಬೇಕಾಗಿರುವ ವಿಷಯವಲ್ಲ. ಪ್ರಮಾಣವು ತನ್ನ ವಿಷಯುವನ್ನು ನಿರ್ವಿವಾದವಾಗಿ ನಿಃಸಂಶಯುವಾಗಿ ನಿಶ್ಚಯಿಸಿ ತಿಳಿಸಬೇಕು. ನಾಲ್ಕು ಸಲ ಒಂದು ಸುಳ್ಳನ್ನು ನಿಜವೆಂದು ಬೇರೆಬೇರೆ ಸಂದರ್ಭಗಳಲ್ಲಿ ಬೇರೆಬೇರೆಯ ಕಡೆಗಳಲ್ಲಿ ಪ್ರಕಟಿಸಿದರೆ ಅದೇ ನಿಜವಾಗಿಬಿಡುವದೆಂದು ಹಿಟ್ಲರನು ಹೇಳುತ್ತಿದ್ದನಂತೆ ! ಆ ಮತವನ್ನು ಪ್ರಾಮಾಣಿಕರು ಒಪ್ಪಿಯಾರೆ? ಒಬ್ಬ ಮನುಷ್ಯನು ಹೊಸಕೋಟೆಯಲ್ಲಿ ತಾನು ಅಮಲ್ದಾರನೆಂತ ಛಾರ್ಜ ತೆಗೆದುಕೊಳ್ಳುವದಕ್ಕೆ ಹೋದನಂತೆ ; ಆದರೆ ನಾಲ್ಕೈದು ದಿನಗಳೊಳಗೇ ಅವನ ವೇಷಧಾರಣೆಯ ಗುಟ್ಟು ಬಯಲಾಗಿ ಹೋಯಿತು ! ಅದುವರೆಗೆ ಅವನನ್ನು ಅಮಲ್ದಾರನೆಂದೇ ಬಹುಜನರು ನಂಬಿದ್ದರು. ತಪ್ಪುತಿಳಿವಳಿಕೆಯು ವೈಯಕ್ತಿಕವಾಗಿರಬಹುದು, ಸಾರ್ವತ್ರಿಕವಾಗಿಯೂ ಇರಬಹದು. ಸೂರ್ಯನು ಪೂರ್ವದಲ್ಲಿ ಹುಟ್ಟುತ್ತಾನೆ, ಪಶ್ಚಿಮದಲ್ಲಿ ಮುಳುಗುತ್ತಾನೆ- ಎಂದು ಅನೇಕರು ನಂಬಿದ್ದರು ; ಈಗಲೂ ಸಾಮಾನ್ಯಜನರೆಲ್ಲರೂ ಹಾಗೆಂದೇ ನೆರೆನಂಬಿರುತ್ತಾರೆ. ಆದರೂ ಭೂಮಿಯು ಸೂರ್ಯನ ಸುತ್ತಲೂ ತಿರುಗುತ್ತಿದೆ ಎಂದೂ ಸೂರ್ಯನು ಭೂಮಿಯ ಸುತ್ತಲೂ ಸುತ್ತುತ್ತಿಲ್ಲವೆಂದೂ ವಿಜ್ಞಾನಶಾಸ್ತ್ರವು ನಿಶ್ಚಯಿಸಿಬಿಟ್ಟಿದೆ. ವಿಜ್ಞಾನಶಾಸ್ತ್ರವನ್ನು ಬಲ್ಲವರು ಕೂಡ 'ಸೂರ್ಯನು ತಲೆಯಮೇಲಕ್ಕೆ ಬಂದನು', 'ಈಗ ಮುಳುಗಿದನು' ಎಂದು ಮುಂತಾಗಿ ಅವಿವೇಕಿಗಳಂತೆಯೇ ವ್ಯವಹರಿಸುತ್ತಿರುತ್ತಾರೆ ; ಆದರೆ ಅವರ ಶಾಸ್ತ್ರಜ್ಞಾನದಿಂದ ಆ ತಿಳಿವಳಿಕೆ ಭಾಧಿತವಾಗಿರುತ್ತದೆ. ಈ ಕಾರಣದಿಂದ 'ಶರೀರವಿಲ್ಲವೆಯೇ ಸ್ವಾಮಿಗಳು ಇಲ್ಲಿ ಕುಳಿತುಕೊಂಡು ಉಪದೇಶಿಸುತ್ತಿರುತ್ತಾರೊ ?' ಎಂದು ಹಾಸ್ಯಮಾಡುವವರಿಗೆ ತತ್ತ್ವನಿಶ್ಚಯವನ್ನು ಮಾಡುವ ಯೋಗ್ಯತೆ ಇಲ್ಲವೆಂದು ಮಾತ್ರ ಸಿದ್ಧವಾಗುತ್ತದೆಯೇ ಹೊರತು ಶರೀರಾದಿಗಳು ಪ್ರಮಾಣಸಿದ್ಧವಲ್ಲವೆನ್ನುವ ಸಿದ್ಧಾಂತಕ್ಕೆ ಅವರ ಹಾಸ್ಯದಿಂದ ಯಾವ ಹಾನಿಯೂ ಇರುವದಿಲ್ಲ.

ದೇಹಾದಿಗಳು ಪ್ರತೀತಿಸಿದ್ಧ, ಅವು ಇರುವವೆಂದು ತೋರುತ್ತಿರುವದು ನಿಜ ; ಆದರೆ ಅವಕ್ಕೆ ಈ ಪ್ರತೀತಿಯಲ್ಲದೆ ಮತ್ತೆ ಯಾವ ಪ್ರಮಾಣವೂ ಇಲ್ಲವೆಂದೇ ಏರ್ಪಡುತ್ತದೆ. ಲೋಕದಲ್ಲಿ 'ಹಗ್ಗದ ಹಾವು' ಪ್ರತೀತಿಸಿದ್ಧ ; 'ಹಾವು' ಪ್ರತ್ಯಕ್ಷಾದಿಪ್ರಮಾಣಸಿದ್ಧ. ಇದರಂತೆ ವಿಚಾರಿಸುವಾಗ ಪ್ರಮಾತೃತ್ವವೆಂಬುದು ಪ್ರತೀತಿಮಾತ್ರಸಿದ್ಧ; ಅದಕ್ಕೆ ಮತ್ತೆ ಯಾವ ಪ್ರಮಾಣವನ್ನೂ ನಾವು ಮುಂದಕ್ಕೆ ತರುವದಕ್ಕೆ ಸಾಧ್ಯವಿಗ- ಎಂದು ನಿಶ್ಚಯವಾಗುತ್ತದೆ. ಪ್ರಾಣಿಗಳು ಈ ಶರೀರಾದಿಗಳೊಡನೆ ಹೇಗೆ ಎಲ್ಲಿಂದ ಬರುತ್ತಾರೋ, ಎಲ್ಲಿಗೆ ಹೋಗುತ್ತಾರೋ, ಅವರಿಗೆ ವಿಷಯಗಳಿಂದ ಸುಖದುಃಖಗಳು ಹೇಗೆ ಆಗುತ್ತವೆಯೋ ಯಾರೂ ಹೇಳಲಾರರು,

ಶರೀರವು ಹಿಂದೆ ಮಾಡಿದ ಕರ್ಮದ ಫಲವು ; ಶರೀರವು ಬಾಲ್ಯ, ಯೌವನ, ಕೌಮಾರ, ವಾರ್ಧಕ— ಎಂಬ ಅವಸ್ಥೆಗಳನ್ನು ಹೊಂದುತ್ತಿರುವಂತೆಯೇ ಪೂರ್ವ ಜನ್ಮದಿಂದ ಈ ಜನ್ಮಕ್ಕೆ ಬಂದು ಈಗಿನ ಶರೀರವನ್ನು ಹೊಂದುತ್ತದೆ. ಹೀಗೆಯೇ ಜನ್ಮಾಂತರದಲ್ಲಿಯೂ ಬೇರೊಂದು ಶರೀರವನ್ನು ಹೊಂದುತ್ತದೆ— ಎಂದು ಕರ್ಮ ಶಾಸ್ತ್ರವನ್ನು ಆಧಾರವಾಗಿಟ್ಟುಕೊಂಡು ನಂಬಬಹುದು. ಆದರೆ ಶರೀರವು ಎಲ್ಲಿಯೂ ಪ್ರಮಾಣಸಿದ್ಧವೆಂದು ಮಾತ್ರ ಅಷ್ಟರಿಂದ ಏರ್ಪಡುವದಿಲ್ಲ. ಜೀವನು ಕರ್ಮ ವನ್ನು ಮಾಡಿ ಶರೀರವನ್ನು ಸಂಪಾದಿಸುತ್ತಾನೊ, ಶರೀರವು ಮೊದಲೇ ಸಿದ್ಧ ವಾಗಿದ್ದು ಕರ್ಮವನ್ನು ಮಾಡುವದೊ ? ಕರ್ಮ, ಶರೀರ— ಇವೆರಡರಲ್ಲಿ ಯಾವದ ರಿಂದ ಯಾವದು ಹೇಗೆ ಮೊದಲು ಸಿದ್ಧವಾಗುತ್ತದೆ ?— ಎಂದು ಕೇಳಿದರೆ ಅನ್ಯೋ ನ್ಯಾಶ್ರಯ, ಅನವಸ್ಥಾ— ಮುಂತಾದ ದೋಷಗಳು ಈ ನಂಬಿಕೆಗೆ ಗಂಟುಬೀಳು ವವು. ಆದ್ದರಿಂದ ಶರೀರಗಳು ಪ್ರತೀತಿಸಿದ್ಧವೆಂಬುದು ನಿಜ ; ಶರೀರಾದಿಗಳು ಆತ್ಮನಿಗೆ ಇರುವಂತೆ ತೋರುವವೆಂಬುದೂ ನಿಜ ; ಆದರೆ ಆತ್ಮನು ನಿಜವಾಗಿಯೂ ಶರೀರಾದಿಗಳುಳ್ಳವನೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಪ್ರಮಾಣಾದಿ ವ್ಯವಹಾರವೇ ಆತ್ಮನಿಗೆ ಶರೀರಾದಿಗಳುಂಟೆಂಬ ನಂಬಿಕೆಯನ್ನವಲಂಬಿಸಿ ಉಂಟಾ ಗಿರುತ್ತದೆ ಎಂದು ನಿಶ್ಚಯವಾಯಿತು.

ಶರೀರಾದಿಗಳ ಸಂಬಂಧವು ನಮಗೆ ಇರುವದೆಂದು ವ್ಯವಹರಿಸುತ್ತಿರುವದು ನಿಜ ; ಆದರೆ ಅಷ್ಟುಮಾತ್ರದಿಂದ ನಾವು ನಿಜವಾಗಿಯೂ ಶರೀರಾದಿಗಳುಳ್ಳವ ರೆಂದಾಗಲಿ, ಪ್ರಮಾತೃಗಳೆಂದಾಗಲಿ, ಪ್ರಮಾಣಾದಿವ್ಯವಹಾರವು ಸತ್ಯವೆಂದಾಗಲಿ ಏರ್ಪಡುವದಿಲ್ಲ. ಹಿಂದೆ 'ಅರಬತ್‌ನಾಟ್ ಕಂಪೆನಿ' ಎಂಬುದೊಂದು ಕಂಪೆನಿ ಇತ್ತು ; ಅದರಲ್ಲಿ ಎಷ್ಟೋ ಸಾವಿರಾರುಮಂದಿ ಷೇರ್ (ಪಾಲು)ಗಳನ್ನು ತೆಗೆದು ಕೊಂಡು ಆ ಕಂಪೆನಿಯಲ್ಲಿ ಹಾಕಿದ ಹಣಕ್ಕೆ ಯಾವ ಧಕ್ಕೆಯೂ ಬರುವಂತಿಲ್ಲ ವೆಂದು ನಂಬಿದ್ದರು. ಆದರೂ ಆ ಕಂಪೆನಿಯು ಮುಳುಗಿಹೋಯಿತು ! ಇದರಂತೆ ಶರೀರಾದಿಗಳು ನಮಗೆ ಇರುವವೆಂಬ ನಂಬಿಕೆಯು ನಮಗೆಲ್ಲರಿಗೂ ಬಲವಾಗಿರು ತ್ತದೆ; ನಮಗೆ ಬಾಲ್ಯಾದ್ಯವಸ್ಥೆಗಳು ಬಂದುಹೋಗುತ್ತಿರುವವೆಂದೂ ನಂಬಿಕೆಯಿದೆ ಆದರೆ ಈ ಪ್ರತೀತಿಯನ್ನು, ನಮ್ಮ ಆತ್ಮನು ನಿಜವಾಗಿ ಯಾವ ವಿಕಾರವೂ ಇಲ್ಲ ದವನಾಗಿದ್ದರೂ ಅವನಲ್ಲಿ ಈ ಬೇರೆಬೇರೆಯ ಅವಸ್ಥೆಗಳು ತೋರುತ್ತಿರುವವು ಎಂದೂ ಅರ್ಥಮಾಡಿಕೊಳ್ಳಬಹುದಾಗಿದೆ. ಆದ್ದರಿಂದಲೇ 'ತಥಾ ದೇಹಾನ್ತರ ಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ' (ಗೀ. ೨–೧೩) ಹೀಗೆಯೇ ಮತ್ತೊಂದು ದೇಹವು ಬರುವದೆಂಬುದನ್ನು ತಿಳಿಯಬೇಕು ; ವಿವೇಕಿಗಳು ಇದರ ವಿಷಯದಲ್ಲಿ ಭ್ರಾಂತಿಯನ್ನು ಎಂದಿಗೂ ಪಡೆಯರು ಎಂದು ಭಗವದ್ಗೀತೆಯಲ್ಲಿ ಹೇಳಿರುತ್ತದೆ. 'ನ ಜಾಯತೇ ಮ್ರಿಯತೇ ವಾ ಕದಾಚಿತ್' (ಗೀ. ೨–೨೦) ಈ ಆತ್ಮನು

ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ ; ಇವನು ಜನ್ಮರಹಿತನು, ಶಾಶ್ವತನು, ಪುರಾಣನು-ಎಂಬ ಗೀತೋಕ್ತಿಯು ಪರಮಾರ್ಥವನ್ನು ತಿಳಿಸುತ್ತಿದೆ.

ಜನರಿಗೆ ನಿಜವನ್ನು ಕೇಳಿ ತಿಳಿದುಕೊಳ್ಳುವದಕ್ಕೆ ಬೇಕಾದ ತಾಳ್ಮೆಯಿರುವದಿಲ್ಲ. ಈ ಸಂಸಾರವು ಸತ್ಯವೆಂದೂ ಇಲ್ಲಿರುವ ಸುಖದುಃಖಗಳು ಪರಮಾರ್ಥವೆಂದೂ ಸುಖಪ್ರಾಪ್ತಿಗೂ ದುಃಖನಿವೃತ್ತಿಗೂ ಪ್ರಯತ್ನಿಸುತ್ತಾ ಬಳಲುತ್ತಿರುವದೇ ನಮ್ಮ ಸ್ವಭಾವವೆಂದೂ ಯಾವ ವಾದಿಗಳು ಹೇಳುತ್ತಾರೋ ಅವರನ್ನು ಜನರ ಜೀವನಕ್ಕೆ ಹೊಂದುಗೆಯಾಗಿ ಬೋಧಿಸುವವರು-ಎಂದು ಪ್ರಶಂಸಿಸುತ್ತಾರೆ ! ಆದರೆ ಯಾರು 'ಈ ಸಂಸಾರವು ಬರಿಯ ತೋರಿಕೆ ; ಇದರ ಮಿಥ್ಯಾ ವಿಲಾಸಕ್ಕೆ ಮರುಳಾಗಬೇಡಿರಿ' ಎನ್ನುವರೋ ಅವರನ್ನು "ಇವರು ಹೇಡಿಗಳು ; ಸಂಸಾರದಿಂದ ತಪ್ಪಿಸಿಕೊಂಡು ಯಾವದೋ ಪರಗತಿಯನ್ನು ಪಡೆಯಿರೆಂದು ಬೋಧಿಸುವವರು ; 'ಈಸಬೇಕು ಇದ್ದು ಜಯಿಸಬೇಕು' ಎಂಬಂತೆ ಸಂಸಾರದಲ್ಲಿಯೇ ಇದ್ದುಕೊಂಡಿರಬೇಕೆಂಬುದೇ ಯುಕ್ತ" ಎನ್ನುತ್ತಾ ಸಾಧುಗಳನ್ನೂ ಸಂನ್ಯಾಸಿಗಳನ್ನೂ ಹಳಿಯುತ್ತಿರುವರು. 'ನಿಜವನ್ನು ಹೇಳಬೇಡಿರಿ ; ಹಾಗಾದರೆ ನೀವು ನಮ್ಮ ಮಿತ್ರರು' ಎಂಬುದೇ ಇವರ ವಾದವೆಂದು ಕಾಣುತ್ತದೆ ! ಆದರೇನು ? 'ಸತ್ಯಮೇವ ಜಯತೇ' ಸತ್ಯವೇ ಗೆಲ್ಲುವದು ಎಂಬ ಉಪನಿಷದ್ವಾಕ್ಯವು ಪರಮಾರ್ಥವನ್ನೇ ಬೋಧಿಸುತ್ತದೆ ; ಪರಮಾರ್ಥವೇ ಸತ್ಯವಾಗಿರುತ್ತದೆ. "ಸತ್ಯಂ ಜ್ಞಾನಮನನ್ತಂ ಬ್ರಹ್ಮ" ಎಂದು ಶ್ರುತಿಯು ಪರಮಾರ್ಥವನ್ನು ಸತ್ಯವಾಗಿರುವದೆಂದೇ ವರ್ಣಿಸುತ್ತದೆ. ಶರೀರಾದಿಗಳು ತಮ್ಮನ್ನು ಸತ್ಯವೆನ್ನುವ ಪ್ರಮಾಣವನ್ನು ಸಿಂಹಾಸನದ ಮೇಲಕ್ಕೆ ಏರಿಸಿಬಿಟ್ಟಿರುತ್ತವೆ. ಶರೀರೇಂದ್ರಿಯ ಮನಸ್ಸುಗಳ ಆಧಾರದಿಂದ ಪ್ರತ್ಯಕ್ಷಪ್ರಮಾಣಕ್ಕೆ ಎಲ್ಲರ ಓಟು (ಮತ) ಬಂದಿರುತ್ತದೆ ; ಅವಿದ್ಯೆಯಿಂದ ಕೂಡಿರುವ ಜನರು ಒಪ್ಪಿರುವ ತಿಳಿವಳಿಕೆಗಳಲ್ಲಿ ಪ್ರಮಾಣ ಜನಿತವೆಂದೂ ಅದಕ್ಕಿಂತ ಬೇರೆಯೆಂದೂ ಎರಡು ಬಗೆಯಾಗಿದೆ. ಪ್ರಮಾಣ ದಿಂದಾದ ತಿಳಿವಳಿಕೆಯು ಸತ್ಯ ; ಮತ್ತೊಂದು ತಪ್ಪು- ಎಂದು ನಮ್ಮಗಳೆಲ್ಲರ ವ್ಯವಹಾರ. ಜನರ ನೆರಳು ಅವರನ್ನು ಆಶ್ರಯಿಸಿಕೊಂಡು ನಿತ್ಯವೂ ಪ್ರತೀತಿ ಸಿದ್ಧವಾಗಿಯೇ ಇದ್ದರೂ ನಾವು ಅದನ್ನೇನೂ ಸತ್ಯವಾದ ವಸ್ತುವೆಂದು ಬಗೆಯುವದಿಲ್ಲ ; ಇದರಂತೆ ಪ್ರಮಾಣದಿಂದ ತೋರುವ ವಸ್ತುಗಳು ಪ್ರತೀತಿಸಿದ್ಧವೆನ್ನುವದಕ್ಕೆ ಯಾವ ಅಡ್ಡಿಯೂ ಇಲ್ಲ. ಶರೀರಾದಿಗಳು ನಿಜವಾಗಿ ತಮಗೆ ಅಂಟಿಕೊಂಡಿರುವವೆಂದು ಎಲ್ಲರಿಗೂ ತೋರುವದು ನಿಜ ; ಅಷ್ಟುಮಾತ್ರದಿಂದ ಅವು ಪರಮಾರ್ಥವಾಗಿರಬೇಕಾದದ್ದೇನೂ ಇಲ್ಲ.

ಹೀಗೆಂದಮಾತ್ರಕ್ಕೆ ವ್ಯವಹಾರದಲ್ಲಿ ನಮಗೆ ಶರೀರಾದಿಗಳಿವೆಯೆಂದು ಇಟ್ಟುಕೊಳ್ಳುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ. ನಮ್ಮ ನೆರಳು ಯಾವಾ

ಗಲೂ ಹೀಗೆಯೇ ತೋರುತ್ತದೆ ಎಂದಮಾತ್ರಕ್ಕೆ ಅದಕ್ಕೆ ಸತ್ಯತ್ವವೇನೂ ಬರುವದಿಲ್ಲ, ಆ ವ್ಯವಹಾರಕ್ಕೂ ಯಾವ ಅಡ್ಡಿಯೂ ಇರುವದಿಲ್ಲ. ಅಲ್ಲವೆ ?

ಶರೀರಾದಿಗಳು ಪ್ರತೀತಿಸಿದ್ಧವೆಂದೇ ಆಗಲಿ ; ಅದಕ್ಕೆ ಪ್ರಮಾಣವೇನೂ ಇಲ್ಲ, ಪ್ರಮಾಣವ್ಯವಹಾರವೇ ಅವಿದ್ಯೆಯಿಂದ– ಶರೀರಾದಿಗಳಿಗೂ ಆತ್ಮನಿಗೂ ಆಗಿರುವ ಪರಸ್ಪರಾಧ್ಯಾಸದ ಕಾರಣದಿಂದ–ಆದದ್ದು ಎಂದೂ ಆಗಲಿ; ಆದರೂ ಈ ತಿಳಿವಳಿಕೆಯನ್ನು 'ಅವಿದ್ಯೆ' ಎಂಬ ಕೆಟ್ಟ ಹೆಸರಿನಿಂದ ಏಕೆ ಕರೆಯಬೇಕು ? ಪ್ರಮಾಣಜ್ಞಾನವೆಂದರೆ ಸರಿಯಾದ ತಿಳಿವಳಿಕೆಯೆಂದೇ ಜನರಲ್ಲಿ ನಂಬಿಕೆಯಿದೆ. ಹಾಗೆಂದೇ ಎಲ್ಲರೂ ಒಪ್ಪಿರುತ್ತಾರೆ, ಹೀಗಿರುವಲ್ಲಿ ಅದನ್ನು "ಮಿಥ್ಯಾಜ್ಞಾನ" 'ತಪ್ಪುತಿಳಿವಳಿಕೆ", "ಭ್ರಾಂತಿ" ಎಂದು ಹೇಳಬಹುದೆ?–ಎಂದರೆ, ಇಲ್ಲಿ ಒಂದು ರಹಸ್ಯವಿದೆ. 'ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ | ಅನಾಶಿನೋಽಪ್ರಮೇಯಸ್ಯ' (ಗೀ. ೨–೧೮) ಈ ದೇಹಾದಿಗಳು ಅಂತವುಳ್ಳವುಗಳು ಎಂದರೆ ಪರಮಾರ್ಥದ ಜ್ಞಾನದಿಂದ ಬಾಧಿತವಾಗುವವಾಗಿರುತ್ತವೆ. ಸ್ವಪ್ನದಲ್ಲಿ ಕಾಣುವ ದೇಹಾದಿಗಳೂ ಮಾಯೆಯಿಂದ ತೋರುವ ದೇಹಾದಿಗಳೂ ತತ್ಕಾಲಕ್ಕೆ ನಿಜವೆಂದೇ ತೋರುತ್ತಿರುವವು. ಅವುಗಳು ಎಂದೆಂದಿಗೂ ಹಾಗೆಯೇ ಇರುವವೆಂದೂ ನಮಗೆ ನಂಬಿಕೆಯನ್ನುಂಟುಮಾಡಿರುತ್ತವೆ. ಅದರಂತೆ ಈ ದೇಹಾದಿಗಳೂ ವ್ಯವಹಾರಾವಸ್ಥೆಯಲ್ಲಿ ತಾವು ಸತ್ಯವಾಗಿಯೂ ಇರುವೆವೆಂದೇ ನಮಗೆ ಹೇಳುತ್ತಿರುವವು. ದೇಹಾದಿಗಳು ಸತ್ಯವೆಂದೂ ನೆರಳು ಮುಂತಾದವುಗಳು ಬರಿಯ ತೋರಿಕೆಯೆಂದೂ ನಾವು ವ್ಯವಹರಿಸುತ್ತಿರುವೆವು. ಆದರೆ ಎಚ್ಚರವಾದ ಮೇಲೆ ಕನಸಿನ ತೋರಿಕೆಯ ದೇಹಗಳು ಹುಸಿಯಾಗಿಬಿಡುವಂತೆಯೂ ಮಾಯೆಯಿಂದ ಕಲ್ಪಿಸಿದ್ದ ಪದಾರ್ಥಗಳು ಅದೃಶ್ಯವಾಗಿಬಿಡುವಂತೆಯೂ ಇವೇ ದೇಹಾದಿಗಳೇ ಆತ್ಮಸತ್ಯತ್ವಜ್ಞಾನದಿಂದ ಬಾಧಿತವಾಗಿಬಿಡುವವು. ಆದ್ದರಿಂದ ವ್ಯವಹಾರದಲ್ಲಿ ಹುಸಿಯೆಂದು ತೋರುವ ಬಿಸಿಲುಕುದುರೆಯ ನೀರೇ ಮುಂತಾದವುಗಳಿಗೆ ಹೋಲಿಸಿದಾಗ ನೀರು ಮುಂತಾದವುಗಳು ಸತ್ಯವೇ ಆಗಿರುವಂತೆ ಈ ಶರೀರಾದಿಗಳೂ ನೆರಳು ಮುಂತಾದವುಗಳಿಗೆ ಹೋಲಿಸಿದರೆ ಸತ್ಯವಾಗಿರುತ್ತವೆ ; ಇವುಗಳ ಜ್ಞಾನವು ಸರಿಯಾದ ತಿಳಿವಳಿಕೆಯೇ ಆಗಿರುತ್ತದೆ. ಹಾಗೆಂದೇ ಜನರೆಲ್ಲರೂ ವ್ಯವಹರಿಸುತ್ತಲೂ ಇರುತ್ತಾರೆ. ಆದರೂ 'ಇಂಥದ್ದೊಂದು ದಿನಾಂಕವಾದ ಬಳಿಕ ಇಂಥಿಂಥ ನಾಣ್ಯಗಳು ಚಲಾವಣೆಯಲ್ಲಿರುವದಿಲ್ಲ' ಎಂದು ಸರಕಾರದವರು ಕಾನೂನನ್ನು ಹೊರಡಿಸಿದಮೇಲೆ ಅದೇ ಸರಕಾರದ ರಾಷ್ಟ್ರದಲ್ಲಿಯೇ ಆ ನಾಣ್ಯಗಳಿಗೆ ಹೇಗೆ ನಾಣ್ಯಗಳೆಂಬ ಹೆಸರು ಇರುವದಿಲ್ಲವೋ ಹಾಗೆಯೇ ಪರಮಾರ್ಥಜ್ಞಾನವು ಉಂಟಾದ ಬಳಿಕ ಅವು ಮಿಥ್ಯೆಯಾಗಿಬಿಡುವವು ; ಅವುಗಳ ಅರಿವೂ ಮಿಥ್ಯಾಜ್ಞಾನವಾಗಿಬಿಡುವದು. ಹೀಗೆಂದು ಹೇಳುವದರಲ್ಲಿ ತಪ್ಪೇನಿದೆ ?

ಇಲ್ಲಿ ಕೆಲವರು ಹೀಗೆನ್ನಬಹುದು- ಇವುಗಳನ್ನು ಸತ್ಯವೆನ್ನುವದೂ ಬೇಡ, ಮಿಥ್ಯೆಯೆನ್ನುವದೂ ಬೇಡ; ಅಮೇಲೆ ಇವುಗಳಿಗೆ ಸತ್ಯಾಸ್ಯತವ್ಯವಹಾರವಿಲ್ಲ ವೆಂದಿಷ್ಟೇ ಹೇಳೋಣ, ನಾಣ್ಯಗಳಿಗೆ ನಾಣ್ಯವೆಂಬ ಹೆಸರಿಲ್ಲದಿದ್ದರೂ ಅವುಗಳ ಲ್ಲಿರುವ ಬೆಳ್ಳಿಯೇ ಮುಂತಾದದ್ದಕ್ಕೆ ಬೆಳ್ಳಿಯ ಬೆಲೆಯಾದರೂ ಉಳಿಯುವದಷ್ಟೆ ? ಈ ಶಂಕೆಗೆ ಪರಿಹಾರವೇನೆಂದರೆ 'ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್' (ಗೀ. ೨-೧೭) ಎಂಬ ಗೀತೋಕ್ತಿಯಂತೆ ನಿಜವಾಗಿ ನೋಡಿದರೆ ಈಗಲೇ ಶರೀರಾದಿಗಳೆಲ್ಲವನ್ನೂ ಆತ್ಮಚೈತನ್ಯವು ವ್ಯಾಪಿಸಿಕೊಂಡುಬಿಟ್ಟಿದೆ; 'ಮಂಜಿನಗಡ್ಡೆ' ಎಂಬ ಹೆಸರು ಇರುವಾಗಲೂ ಅದನ್ನು ನೀರೇ ವ್ಯಾಪಿಸಿಕೊಂಡಿ ರುವದರಿಂದ ಅದು ನಿಜವಾಗಿ ನೀರೇ ಆಗಿರುವಂತೆ, ಶರೀರಾದಿಗಳನ್ನು ಆತ್ಮ ಚೈತನ್ಯವೇ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವದರಿಂದ ಶರೀರಾದಿಗಳು ಎಂದಿಗೂ ತಮ್ಮ ತೋರಿಕೆಯ ರೂಪದಿಂದ ಸತ್ಯವಲ್ಲ. ಆತ್ಮರೂಪದಿಂದಲೇ ಅವು ಸತ್ಯ ವಾಗಿರುತ್ತವೆ. ಆದ್ದರಿಂದ ದೇಹಾದಿಜ್ಞಾನವು ಮಿಥ್ಯೆಯೆಂದದ್ದು ಸರಿಯೇ ಆಗಿದೆ; ಎಲ್ಲವೂ ಆತ್ಮನೇ ಎಂಬುದೇ ಸಮ್ಯಗ್ಜ್ಞಾನ. 'ಶರೀರಾದಿಗಳು ಹೀಗೆ, ಆತ್ಮನು ಹೀಗೆ'- ಎಂದು ಎರಡು ಪಾಲುಮಾಡಿ ಪಂಚಾಯತಿಯ ತೀರ್ಪುಕೊಡುವದಕ್ಕೆ ಯಾವ ಕಾರಣವೂ ಇಲ್ಲ.

ಹೀಗೆ ತೋರುವದೆಲ್ಲವೂ ಮಿಥ್ಯೆಯೇ ಆದರೆ, ಆತ್ಮನಲ್ಲಿ ಅಧ್ಯಾಸವಾಗಿರ ತಕ್ಕದ್ದೇ ಆದರೆ, ವ್ಯವಹಾರದ ಗತಿಯೇನು ?- ಎಂಬ ಪ್ರಶ್ನೆಯೊಂದು ಎದ್ದುಕೊಳ್ಳ ಬಹುದು. ಯಥಾವಕಾಶವಾಗಿ ಅದನ್ನು ವಿಚಾರಕ್ಕೆ ಇಟ್ಟುಕೊಳ್ಳೋಣ.

---

## ೧೨. ಅನಾದಿಭ್ರಾಂತಿ

(29-7-62)

ಆತ್ಮನಿಗೂ ಶರೀರಕ್ಕೂ ಯಾವ ಸಂಬಂಧವೂ ಇಲ್ಲ. ಆತ್ಮನಿಗೆ ಶರೀರವು ಸಂಬಂಧಿಸಿರುವಂತೆ ತೋರುತ್ತದೆ, ಅಷ್ಟೆ. ಯಾವದು ಯಾವಾಗ ತೋರುತ್ತದೆ ಯೋ ಅದು 'ನಿಜವಾಗಿ ಇದೆ' ಎಂದು ಭಾವಿಸುವದೇ ಮನಸ್ಸಿನ ಸ್ವಭಾವ. ಇದು ಇದೆಯೊ, ಇಲ್ಲವೊ ?- ಎಂಬ ಸಂಶಯವು ವಸ್ತು ಮೊದಲು ತೋರಿ ಕೊಂಡಾಗ ಬರುವದೇ ಇಲ್ಲ. ತಪ್ಪುಗಳು ತಪ್ಪುಗಳೆಂದು ತಿಳಿಯುವದು, ಅವು ಬಾಧಿತವಾಗಿ ನಿಜವಾದ ತಿಳಿವಳಿಕೆ ಬಂದ ಮೇಲೆಯೇ ಎಂಬುದು ಲೋಕದಲ್ಲಿ ಪ್ರಸಿದ್ಧ. ಒಂದು ತಪ್ಪು ಹೋಗಿ ಮತ್ತೊಂದು ತಪ್ಪುತಿಳಿವಳಿಕೆ ಬಂದರೂ 'ಈಗಿನದು ಸರಿಯಾದ ತಿಳಿವಳಿಕೆ' ಎಂದೇ ನಾವುಗಳು ಭಾವಿಸುತ್ತೇವೆ. ಮನಸ್ಸಿನ ಒಲವೇ ಆ ಕಡೆಗೆ ಇರುತ್ತದೆ.

ಶ್ರುತಿಯು ಪ್ರಕೃತವಿಷಯದಲ್ಲಿ ನಿಜವನ್ನು ಹೀಗೆಂದು ಸಾರುತ್ತಿದೆ :

'ಮಘವನ್ ಮರ್ತ್ಯಂ ವಾ ಇದಂ ಶರೀರಂ ಆತ್ತಂ ಮೃತ್ಯುನಾ ತದಸ್ಯಾಽಮೃತಸ್ಯಾತ್ಮನೋಽಧಿಷ್ಠಾನಮಾತ್ತೋ ವೈ ಸಶರೀರಃ ಪ್ರಿಯಾಪ್ರಿಯಾಭ್ಯಾಂ ನ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತ್ಯಶರೀರಂ ವಾವ ಸಂತಂ ನ ಪ್ರಿಯಾ ಪ್ರಿಯೇ ಸ್ಪೃಶತಃ' || ಛಾಂ.೮-೧೨-೧.

ಈ ಶರೀರವು ಮರ್ತ್ಯವಾದದ್ದು, ಮೃತ್ಯುವಿನಿಂದ ವ್ಯಾಪ್ತವೇ ಆಗಿರುತ್ತದೆ. ಇಲ್ಲಿ 'ಶರೀರ'ವೆಂಬ ಮಾತಿನಿಂದ ಇಂದ್ರಿಯಗಳು, ಮನಸ್ಸು– ಎಲ್ಲ ಗ್ರಹಿಸಬೇಕು. ಶರೀರಾದಿಗಳು ಬಿಸಿಲುಕುದುರೆಯ ನೀರಿನಂತೆ ತೋರಿಹಾರುವ ಸ್ವಭಾವದವು ; ಅವಕ್ಕೆ ಎಂದಿಗೂ ಜೀವಿತವಿಲ್ಲ, ಅವು ಮೃತ್ಯುವಿನಿಂದ ವ್ಯಾಪ್ತವಾಗಿಯೇ ತೋರಿಕೊಳ್ಳುತ್ತಿರುವವು. ಈ ಶರೀರವು ಅಮೃತನಾಗಿರುವ ಆತ್ಮನಿಗೆ ಅಧಿಷ್ಠಾನವಾಗಿರುತ್ತದೆ. ಆತ್ಮನು ಸತ್ಯಸ್ವರೂಪನು, ಅವ್ಯಭಿಚರಿತವಾದ ಸ್ವರೂಪವುಳ್ಳವನು ; ಅವನನ್ನು ಇಲ್ಲವೆಂದು ಚಿಂತಿಸಿಕೊಳ್ಳುವದಕ್ಕೂ ಆಗುವಂತಿಲ್ಲ. 'ಈ ಶರೀರವು ಆತ್ಮನಿಗೆ ಅಧಿಷ್ಠಾನವು, ಭೋಗಕ್ಕೆ ಆಶ್ರಯವು ; ಶರೀರವು ಆತ್ಮನಿಂದ ಎದ್ದುತೋರುತ್ತಿರುವ ಭೂತಗಳ ರೂಪಾಂತರವೇ ಆಗಿರುವದರಿಂದಲೂ ಆತ್ಮನ ಅಧಿಷ್ಠಾನವೆನಿಸಿರುತ್ತದೆ. ಆತ್ಮನೇ ಜೀವರೂಪದಿಂದ ಈ ಶರೀರಕ್ಕೆ ಒಡೆಯನಾಗಿರುವದರಿಂದಲೂ ಇದು ಆತ್ಮನಿಗೆ ಅಧಿಷ್ಠಾನವು' ಎಂದು ಶಂಕರಾಚಾರ್ಯರು ಬರೆದಿರುತ್ತಾರೆ. ಆತ್ಮನು ಅಶರೀರಸ್ವಭಾವದವನೇ ಆಗಿದ್ದರೂ ನಾನು ಈ ಶರೀರವೇ, ಈ ಶರೀರವು ನಾನೇ– ಎಂದು ಅವಿವೇಕದಿಂದ ಶರೀರಾತ್ಮಭಾವವನ್ನು ಹೊಂದಿರುವದೇ ಸಶರೀರತ್ವವು. ಹೀಗೆ ಅವಿವೇಕದಿಂದ ಸಶರೀರನಾಗಿರುವ ಈ ಆತ್ಮನನ್ನು ಪ್ರಿಯಾಪ್ರಿಯಗಳು ಹಿಡಿದುಕೊಂಡಿರುವವು ; ಈ ಭ್ರಾಂತಿಯಿಂದಲೇ ಆತ್ಮನು ದ್ವಂದ್ವಗಳಿಂದ ಗ್ರಸ್ತನಾಗಿರುತ್ತಾನೆ. ಶರೀರಿಯು ನಾನು ಎಂದು ಮಾಡಿಕೊಂಡದ್ದರಿಂದದ್ವಂದ್ವಗಳು ಇವನಲ್ಲಿ ತೋರುತ್ತಿರುವವೇ ಹೊರತು,ನಿಜವನ್ನು ತಿಳಿದುಕೊಂಡ ಮೇಲೆ ಶರೀರದ ಸಂಬಂಧವಿಲ್ಲದಾಗ, ಇವನಿಗೆ ಆ ಪ್ರಿಯಾಪ್ರಿಯಾದಿದ್ವಂದ್ವಗಳೂ ಇರುವದಿಲ್ಲ. ಶ್ರುತಿಯು 'ನೀವು ಸಶರೀರರಾಗಿರುವದರಿಂದ ನಿಮ್ಮನ್ನು ಪ್ರಿಯಾಪ್ರಿಯಗಳು ಮುತ್ತಿಕೊಂಡಿವೆ' ಎಂದು ಸಾರುತ್ತಿರುವಲ್ಲಿ, ನಾವು ಮಾತ್ರ ಅದಕ್ಕೆ ವಿರುದ್ಧವಾಗಿ 'ನಮ್ಮನ್ನು ಪ್ರಿಯಾಪ್ರಿಯಗಳು ಮುತ್ತಿಕೊಂಡಿರುವದರಿಂದ ನಾವು ಸಶರೀರರೇ' ಎಂದು ಪಟ್ಟುಹಿಡಿದಿದ್ದೇವೆ. ಭ್ರಾಂತಿಯು ಎಷ್ಟು ಬಗೆಯಾಗಿರುತ್ತದೆ ! ಹೊರಗೆ ವಸ್ತುಗಳಿದ್ದು ಬೇರೆಯ ರೀತಿಯಿಂದ ತಿಳಿದುಕೊಳ್ಳುವ ಭ್ರಾಂತಿ (illus ion), ವಸ್ತುವಿಲ್ಲದಿದ್ದರೂ ಕಲ್ಪಿಸಿಕೊಳ್ಳುವ ಭ್ರಾಂತಿ (hallucination), ಮನಸ್ಸಿನಲ್ಲಿಯೇ ವಿಕಲ್ಪಿಸಿಕೊಳ್ಳುವ ಮೋಹದ ಭ್ರಾಂತಿ (delusiou)– ಎಂದು ಲೋಕದಲ್ಲಿ ಆಗುವ ಭ್ರಾಂತಿಗಳನ್ನು ವಿಂಗಡಿಸಿ ಇಂಥ ಭ್ರಾಂತಿಗಳು ಹೇಗೆ ಆಗುತ್ತವೆ ಎಂಬುದನ್ನು ವಿವರಿಸುವದಕ್ಕೆ ಒಬ್ಬ ವಿಜ್ಞಾನಶಾಸ್ತ್ರಜ್ಞನು ಒಂದು ಗ್ರಂಥವನ್ನೇ ಬರೆದಿರುತ್ತಾನೆ. ಯಾವ ಭ್ರಾಂತಿಯೇ ಆಗಲಿ, 'ಅದಲ್ಲದ್ದರಲ್ಲಿ ಅದೆಂಬ ಬುದ್ಧಿ'

ಎಂಬಲಕ್ಷಣದಲ್ಲಿಯೇ ಅಡಕವಾಗಿರುತ್ತದೆ. ಶುಕ್ತಿರಜತ, ದ್ವಿತೀಯಚಂದ್ರ- ಮುಂತಾದ ಪ್ರಸಿದ್ಧದೃಷ್ಟಾಂತಗಳನ್ನೇ ಆಚಾರ್ಯರು ತಮ್ಮ ಭಾಷ್ಯಗಳಲ್ಲಿ ಉದಾಹರಿಸಿರುತ್ತಾರೆ. ಭ್ರಾಂತಿಗಳಲ್ಲಿ ಇಂದ್ರಿಯಗಳು ನಮಗೆ ಮೋಸಮಾಡು ತ್ತಿಲ್ಲ, ತಮಗೆ ಆದ ಅನುಭವವನ್ನೇ ವರದಿಮಾಡುತ್ತಿರುತ್ತವೆ; ಆದರೆ ಮನಸ್ಸು ಮಾಡುವ ತೀರ್ಪು ಮಾತ್ರ ಬೇರೆಯ ರೀತಿಯಾಗಿರುತ್ತದೆ, ಅಷ್ಟೆ. ಇದು ಹೇಗಾದರೂ ಇರಲಿ. ನಮಗೆ ಶರೀರಾದಿಗಳು ಇರುವಂತೆ ತೋರುವದು ನಿಜ ; ಆದ್ದರಿಂದಲೇ ಈ ತೋರಿಕೆಯು ಸತ್ಯವೆ?–ಎಂಬ ಚರ್ಚೆ. ಪರಮಾರ್ಥವಾಗಿಯೂ ನಾವು ಸಶರೀರರೆಂದು ತಿಳಿದುಕೊಂಡಿರುವದು ಮಾತ್ರ ಭ್ರಾಂತಿಯೇ ವಿಚಾರದಿಂದ ಇದು ಸಿದ್ಧವಾಗುತ್ತದೆ. ಇದೇ ವೇದಾಂತಿಗಳ ಉಪದೇಶ.

'ಪ್ರಪಂಚವೆಲ್ಲವೂ ಮಿಥ್ಯೆ' ಎಂದು ವೇದಾಂತಿಗಳು ಹೇಳುವದನ್ನು ಕೇಳಿ ಕೆಲವರು "ಅವರಿಗೆ ಮನೆ, ಬಾಗಿಲು- ಯಾವದೂ ಕಾಣಿಸುವದಿಲ್ಲವೆ ? ಸುಳ್ಳು, ನಿಜ–ಎರಡೂ ಮಿಥ್ಯೆಯಾದ್ದರಿಂದ ಎರಡೂ ಒಂದೆಂದು ಅವರು ಹೇಳುವರೆ ? ಮನುಷ್ಯನಿಗೆ ಧರ್ಮಾಧರ್ಮಗಳ ವಿವೇಕವೇನೂ ಬೇಕಿಲ್ಲವೊ ? ಎಲ್ಲವೂ ಮಿಥ್ಯೆ ಯಷ್ಟೆ ?" ಎಂದು ಆಕ್ಷೇಪಿಸುವರು. ಇದು ವಿಚಾರಮಾರ್ಗವನ್ನು ಅರಿಯ ದವರ ಶಂಕೆ. ಸತ್ಯವೆಂದರೆ ತೋರುವದೆಂದೇನೂ ವೇದಾಂತಿಗಳು ಹೇಳುತ್ತಿಲ್ಲ ; ತೋರಿದ್ದೆಲ್ಲ ಸತ್ಯವೆಂದು ಸಾಮಾನ್ಯಜನರೂ ಒಪ್ಪುವದಿಲ್ಲ. ಆದ್ದರಿಂದ ವ್ಯವ ಹಾರದಲ್ಲಿ ಯಾವದು ಹೇಗೆ ತೋರುವದೋ ಅದನ್ನು ಹಾಗೆಯೇ ಇಟ್ಟುಕೊಳ್ಳ ಬಹುದು ; ಆದರೆ ಅದು ಪರಮಾರ್ಥವೇ ಎಂದು ಹೇಳುವದ್ದು ಸರಿಯಲ್ಲ. ಪ್ರಮಾತೃ, ಪ್ರಮಾಣ, ಪ್ರಮೇಯ- ಇವೆಲ್ಲವನ್ನೂ ಒಂದು ಮೂಟೆಯಾಗಿಟ್ಟು ಕೊಂಡು, ಇವೆಲ್ಲವನ್ನೂ ದಾಟಿರುವ ಪರಮಾರ್ಥವೇ ಆತ್ಮ-ಎಂದು ವೇದಾಂತಿ ಗಳು ಹೇಳಿದರೆ ಅದು ಯಾವ ವ್ಯವಹಾರಕ್ಕೂ ವಿರುದ್ಧವಾಗಲಾರದು. ಆದ್ದರಿಂದ ಆತ್ಮನ ಹೋಲಿಕೆಯಿಂದ, ನಮಗೆ ಕಾಣುತ್ತಿರುವ ಶರೀರಾದಿಗಳೂ ಜಗತ್ತೂ ಆಧ್ಯಾಸಿಕ, ಭ್ರಾಂತಿ- ಎಂದು ಪರಮಾರ್ಥದೃಷ್ಟಿಯಿಂದ ಹೇಳುವದೇನೂ ತಪ್ಪಲ್ಲ.

ಜ್ಞಾನಿಗಳಿಗೆ ಪ್ರಪಂಚವೂ ಕಾಣುತ್ತಿರುವದರಿಂದ ಪ್ರಪಂಚವು ಮಿಥ್ಯೆ ಹೇಗೆ ?–ಎಂಬ ಪ್ರಶ್ನೆಗೆ ಈಗ ಉತ್ತರವನ್ನು ಕೊಟ್ಟಂತೆ ಆಯಿತು. ಪ್ರಪಂಚ ವನ್ನು ಜ್ಞಾನದಿಂದ ಇಲ್ಲದಂತೆ ಮಾಡಿಕೊಳ್ಳಬೇಕೆಂಬುದೇನೂ ವೇದಾಂತವಲ್ಲ. ನಿದ್ರೆಯಲ್ಲಿ ಯಾವ ಪ್ರಪಂಚವೂ ಕಾಣಿಸುವದಿಲ್ಲ, ಅಷ್ಟುಮಾತ್ರದಿಂದ ಪ್ರಪಂ ಚವು ಮಿಥ್ಯೆಯೆಂದೇನೂ ನಿಶ್ಚಯವಾಗುವದಿಲ್ಲ. ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲುಕುಡಿದರೆ ಯಾರಿಗೂ ಕಾಣಿಸದೆ ? ಪರಮಾರ್ಥದೃಷ್ಟಿಯಿಂದ ನೋಡಿ ದಾಗ ಪ್ರಪಂಚವು ತೋರುತ್ತಿದ್ದರೂ ಮಿಥ್ಯೆಯೆಂದು ನಿಶ್ಚಯವಾಗುತ್ತದೆ ;

ಆತ್ಮನು ಸಶರೀರನಾಗಿ ತೋರುತ್ತಿದ್ದರೂ ಅಶರೀರನು, ಅಮೃತನು- ಎಂದು ನಿಶ್ಚಯವಾಗುತ್ತದೆ. ಸೂರ್ಯನು ಚೋಟಗಲವೆಂದು ತೋರಿದರೂ ನಿಜವಾಗಿ ಅವನು ಅಷ್ಟೇ ಅಗಲವಲ್ಲವೆಂಬುದು ಶಾಸ್ತ್ರದಿಂದ ತಿಳಿಯಬರುವಂತೆಯೇ ಇದು. ಶರೀರೇಂದ್ರಿಯಮನಸ್ಸುಗಳ ಸಂಬಂಧದಿಂದ ಆತ್ಮನು ಪ್ರಮಾತೃವಾಗಿ ತೋರು ತ್ತಾನೆ; ಆದರೆ ಶರೀರಾದಿಗಳು ಮಾರ್ಪಡುತ್ತಲೇ ಇರುತ್ತವೆ. ಆದ್ದರಿಂದ ಅವು ಅಸತ್ಯ. ಪ್ರಮಾತೃವು ಸತ್ಯವಲ್ಲ, ಆದ್ದರಿಂದ ಪ್ರಮಾತೃವಿಗೆ ಮಾತ್ರ ಸತ್ಯವೆಂದು ತೋರುವ ಪ್ರಪಂಚವೂ ಅಸತ್ಯ, ಅದನ್ನು ಸತ್ಯವೆಂದು ತಿಳಿಯುವ ಜ್ಞಾನವು ಭ್ರಾಂತಿಯೇ.

ಭ್ರಾಂತಿಗಳು ವೈಯಕ್ತಿಕವೆಂದೂ ಸಾರ್ವತ್ರಿಕವೆಂದೂ ಎರಡು ಬಗೆ. ಸೂರ್ಯನು ಆಕಾಶದಲ್ಲಿ ಚೋಟಗಲ ಕಾಣಿಸುವನೆಂಬುದು ಸಾರ್ವತ್ರಿಕಭ್ರಾಂತಿ ಹಾಗೆಯೇ ಮನುಷ್ಯನು ಸಶರೀರನಾಗಿ ತೋರುವನೆಂಬುದೂ ಸಾರ್ವತ್ರಿಕಭ್ರಾಂತಿ, ಅದು ಎಲ್ಲರಿಗೂ ಹಾಗೆಯೇ ತೋರುತ್ತಿರುತ್ತದೆ. ಹೀಗೆಯೇ ಭ್ರಾಂತಿಯು ಕ್ವಾಚಿತ್ಕವೆಂದೂ ಅನಾದಿಯೆಂದೂ ಎರಡು ವಿಧ. ದಾರಿಯಲ್ಲಿ ಹೋಗುವಾಗ ಹಗ್ಗವನ್ನು ಹಾವೆಂದು ತಿಳಿದು ಬೆಚ್ಚಿಬೀಳುತ್ತಾನೆ ; ಅದು ಹಗ್ಗವೆಂದು ತಾನೇ ಅರಿತರೂ ಅಥವಾ ಮತ್ತೊಬ್ಬರು ತಿಳಿಸಿದಮೇಲಾದರೂ ಆ ಅಂಜಿಕೆ ಹೋಗಿಬಿಡು ತ್ತದೆ. ಇದು ಕ್ವಾಚಿತ್ಕಭ್ರಾಂತಿ, ಸೂರ್ಯನು ಅಷ್ಟು ಸಣ್ಣವನೆಂದು ಕಾಣು ವದೂ ಪೂರ್ವದಲ್ಲಿ ಹುಟ್ಟಿ ಪಶ್ಚಿಮದಲ್ಲಿ ಮುಳುತುವನೆಂದು ತೋರುವದೂ ಅನಾದಿಭ್ರಾಂತಿ ; ಅದು ರಜ್ಜುಸರ್ಪಭ್ರಾಂತಿಯಂತೆ ಯಾವಾಗಲಾದರೂ ಒಂದು ಕಾಲದಲ್ಲಿ ಪ್ರಾರಂಭವಾದ ಭ್ರಾಂತಿಯಲ್ಲ. ಆದರೂ ಅದು ಶಾಸ್ತ್ರಜನ್ಯಜ್ಞಾನ ದಿಂದ ಹೋಗಿಬಿಡುತ್ತದೆ. ಆಮೇಲೆ ಸೂರ್ಯಮಂಡಲವು ಬಹಳ ವಿಶಾಲ ವಾಗಿದೆ, ಅದರ ಸುತ್ತಲೂ ಭೂಮಿ ತಿರುಗುತ್ತಿದೆ- ಎಂಬ ಜ್ಞಾನವು ನಿಶ್ಚಯ ವಾಗುತ್ತದೆ; ಆದರೆ ಆ ಜ್ಞಾನದಿಂದ ಭ್ರಾಂತಿಯಿಂದ ತೋರಿದ ಸೂರ್ಯನ ಅಲ್ಪಗಾತ್ರತ್ವವಾಗಲಿ, ಸಂಚರಿಸುತ್ತಾನೆಂಬ ತೋರಿಕೆಯಾಗಲಿ ಹೋಗುವದಿಲ್ಲ. ಇದರಂತೆ ನಾವು ಶರೀರಿಗಳು, ಪ್ರಮಾತೃಗಳು, ಕರ್ತೃಗಳು, ಭೋಕ್ತೃಗಳು- ಎಂಬ ತಿಳಿವಳಿಕೆಯು ಅನಾದಿಯಾದ ಸಾರ್ವತ್ರಿಕಭ್ರಾಂತಿ. 'ಅನಾದಿರನನ್ತೋಽ ಧ್ಯಾಸೋ ಮಿಥ್ಯಾಪ್ರತ್ಯಯರೂಪಃ ಕರ್ತೃತ್ವಭೋಕ್ತೃತ್ವಪ್ರವರ್ತಕಃ ಸರ್ವ ಲೋಕಪ್ರತ್ಯಕ್ಷಃ' ಎಂಬ ಭಾಷ್ಯವಾಕ್ಯದ ಅಭಿಪ್ರಾಯವಿದು. ಅದು ಹಾಗೆಂದು ಎಲ್ಲರಿಗೂ ಎಂದಿನಿಂದಲೂ ತೋರುತ್ತಲೇ ಬಂದಿದೆ ; ಅದೇ ಸತ್ಯವೆಂದೂ ಎಲ್ಲರೂ ಸ್ವಾಭಾವಿಕವಾಗಿಯೇ ನಂಬಿಕೊಂಡಿರುತ್ತಾರೆ. ಆದರೆ ಇದೂ ಭ್ರಾಂತಿಯೇ, ಏಕೆಂದರೆ ಶಾಸ್ತ್ರಜನ್ಯಜ್ಞಾನದಿಂದ ಈ ನಂಬಿಕೆಯು ಬಾಧಿತವಾಗಿಬಿಡುತ್ತದೆ.

ಈ ಸಶರೀರತ್ವವು ಭ್ರಾಂತಿಯೆಂದು ಹೇಗೆ ತಿಳಿಯಬೇಕು ? ನಾವು ಅಶರೀರ ರೇ, ನಿಷ್ಪ್ರಪಂಚರೇ- ಎಂಬುದು ಹೇಗೆ ಅನುಭವಕ್ಕೆ ಬರಬೇಕು ?- ಎಂದರೆ

ಇದಕ್ಕೆ ಆಗಲೆ ಉತ್ತರವನ್ನು ಹೇಳಿದ್ದಾಗಿದೆ. 'ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ', 'ಯೇನ ಸರ್ವಮಿದಂ ತತಮ್'-ಎಂಬ ಗೀತಾ ವಾಕ್ಯಗಳನ್ನು ನೆನಪಿಸಿಕೊಳ್ಳಿರಿ. ಆತ್ಮನು ಚೈತನ್ಯಸ್ವರೂಪನಾಗಿರುತ್ತಾನೆ, ಚೈತನ್ಯಕ್ಕೆ ಎಲ್ಲೆ ಕಟ್ಟಿಲ್ಲ ; ಎಲ್ಲವನ್ನೂ ವ್ಯಾಪಿಸಬಲ್ಲ ಮನಸ್ಸನ್ನು ಕೂಡ ವ್ಯಾಪಿಸಿ ಕೊಂಡಿರುತ್ತಾನೆ. ಶರೀರಾದಿಗಳೆಲ್ಲವೂ ಚೈತನ್ಯವ್ಯಾಪ್ತವಾಗಿರುತ್ತವೆ, ಇಡಿಯ ಜಗತ್ತೇ ಆತ್ಮಚೈತನ್ಯವ್ಯಾಪ್ತವಾಗಿರುತ್ತದೆ ; ಚೈತನ್ಯವ್ಯಾಪ್ತವಲ್ಲದ ಅಣು ಮಾತ್ರವೂ ಜಗತ್ತಿನ ಭಾಗವಾಗಿ ಉಳಿಯುವದಿಲ್ಲ. ಹೀಗೆ ಚೈತನ್ಯದೃಷ್ಟಿ ಯಿಂದ ನೋಡಿದರೆ ಶರೀರಾದಿಗಳೆಲ್ಲವೂ ಪ್ರಮಾತ್ರಾದಿಸರ್ವಜಗತ್ತೂ ಚಿದ್ವ್ಯಾಪ್ತ ವಾಗಿ ಚಿನ್ಮಾತ್ರವಾಗಿರುವದರಿಂದ ಚೈತನ್ಯಕ್ಕಿಂತ ಬೇರೆಯಾಗಿರುವದೇ ಇಲ್ಲ. ಈಗ ಎಲ್ಲಿಯ ಸಶರೀರತ್ವ ? ಎಲ್ಲಿಯ ಜಗತ್ತು ? ಈ ಚಿದ್ವ್ಯಾಪ್ತಿಯು ಮನಸ್ಸಿಗೆ ಬೇಗ ಹಿಡಿಯದವನು ಬೇರೊಂದು ರೀತಿಯಿಂದಲೂ ಇದನ್ನು ಮನಗಾಣಬಹುದು. ಉದಾಹರಣೆಗೆ ಸ್ವಪ್ನದೃಷ್ಟಾಂತವನ್ನು ಮನಸ್ಸಿನಲ್ಲಿ ಹೊರಳಾಡಿಸಿರಿ. ಸ್ವಪ್ನದಲ್ಲಿ ಕಾಣುವ ಪ್ರಪಂಚವು ಆಗ್ಗೆ ಸತ್ಯವೆಂದೇ ತೋರುತ್ತಿರುತ್ತದೆ. ಅದು ಎಂದು ಹುಟ್ಟಿತೆಂದು ಆಗ್ಗೆ ಹೇಳುವದಕ್ಕೆ ಬರುವಂತಿರುವದಿಲ್ಲ. ಅದು ಅನಾದಿಯಾಗಿ ಅನಂತವಾಗಿ ಇರುತ್ತದೆಯೆಂದೇ ಭಾವನೆಯಾಗಿರುತ್ತದೆ. ಅಲ್ಲಿಯೂ ನಮಗೆ ಶರೀರಾದಿಗಳ ಸಂಬಂಧವಿರುತ್ತದೆ ; ಪ್ರಿಯಾಪ್ರಿಯಾದಿಗಳ ಹೊಡೆತವೂ ನಮಗೆ ಅಲ್ಲಿ ಇರುತ್ತದೆ ; ದೇಶವು ವಿಶಾಲವಾಗಿ ಕಾಲವು ದೀರ್ಘವಾಗಿ ತೋರುತ್ತಿರು ತ್ತದೆ. ಅಲ್ಲವೆ ? ಆದರೂ 'ಕನಸು' ಎಂದಕೂಡಲೆ ಭ್ರಾಂತಿ ಎನ್ನುತ್ತೇವೆ, ಅದು ಎಚ್ಚತ್ತಕೂಡಲೆ ಬಾಧಿತವಾಗಿಬಿಡುತ್ತದೆ ಎಂಬುದು ಸರ್ವವಿದಿತ. ಅದಕ್ಕೆ ಹೋಲಿಸುವಾಗ ಪ್ರಪಂಚವು ಸತ್ಯವೆನ್ನುವದಕ್ಕೆ ಏನೋ ಅಡ್ಡಿಯಿರುವಂತೆ ತೋರು ತ್ತದೆ. ಅದೂ ಜ್ಞಾನದಿಂದ ಹೋಗಬಹುದು ಎಂಬುದನ್ನು ನಾವು ವೇದಾಂತಿಗಳ ಮಾತಿನ ಮೇಲೆ ನಂಬಬಹುದೆನಿಸುತ್ತದೆ. ಇದೊಂದು ಸಂಭಾವನಾತರ್ಕ. ಈ ಜಗತ್ತು ಸತ್ಯವೆಂದು ಎಷ್ಟು ಜನರಿಗೆ ಕಂಡರೂ 'ಈಗ್ಗೆ ಇದು ಸತ್ಯವಾಗಿ ತೋರ ಬಹುದು ; ಆದರೆ ಇದು ನಿಜವಾಗಿ ಸತ್ಯವೆಂಬುದಕ್ಕೆ ಇಷ್ಟೇ ಸಾಕೆ ?'- ಎನಿಸು ತ್ತದೆ.

ವೇದಾಂತದಲ್ಲಿ ನುರಿತ ಸಾಂಪ್ರದಾಯಿಕರು ಹೀಗೆಂದು ಹೇಳುತ್ತಿದಾರೆ:

ದೇಹಾತ್ಮಪ್ರತ್ಯಯೋ ಯದ್ವತ್ ಪ್ರಮಾಣತ್ವೇನ ಕಲ್ಪಿತಃ ।<br>
ಲೌಕಿಕಂ ತದ್ವದೇವೇದಂ ಪ್ರಮಾಣಂ ತ್ವಾತ್ಮನಿಶ್ಚಯಾತ್ ॥

ದೇಹವು ನಾನೆಂಬ ಭ್ರಾಂತಿಯು ದೇಹವ್ಯತಿರಿಕ್ತನಾದ ಆತ್ಮನು ನಾನೆಂಬ ಜ್ಞಾನವು ಬರುವವರೆಗೂ ಪ್ರಮಾಣವಾಗಿರುತ್ತದೆ. ದೃಶ್ಯವಾದ ದೇಹವು ದೃಗ್ರೂಪನಾದ ನಾನು ಎಂಬುದು ಹೇಗೆ ಸರಿಯಾದೀತು ?- ಎಂಬ ತಿಳಿವಳಿಕೆಯು

ದೇಹಾತ್ಮಪ್ರತ್ಯಯವನ್ನು ಭ್ರಾಂತಿ ಎಂದು ತಿಳಿಸಿಕೊಡುತ್ತದೆ. ಇದರಂತೆ ಪ್ರತ್ಯಕ್ಷಾದಿಪ್ರಮಾಣಗಳೂ 'ನಾನು ಪ್ರಮಾತೃವಲ್ಲ' ಎಂಬ ಜ್ಞಾನವು ಉದಯಿಸುವವರೆಗೂ ಪ್ರಮಾಣವೆನಿಸಿರುತ್ತವೆ. ಶರೀರಾದಿಗಳು ವಿಷಯ, ನಾನು ವಿಷಯಿ ; ನನಗೆ ಅವುಗಳ ಸಂಬಂಧವೆಲ್ಲಿ ? ಶರೀರಾದಿಗಳಿಲ್ಲದಿದ್ದರೆ ಪ್ರಮಾತೃತ್ವವು ಹೇಗೆ ಸತ್ಯವಾದೀತು ? ಶರೀರಾದಿಗಳು ವ್ಯಭಿಚರತ್ಸ್ವರೂಪವಾಗಿರುವದರಿಂದ ಶುಕ್ತಿರಜತಾದಿಗಳಂತೆ ಬರಿಯ ತೋರಿಕೆಯಾಗಿವೆ ; ಅವುಗಳಿಂದ ನನಗೆ ಸಂಬಂಧವಾಗಲಿ ಪ್ರಮಾತೃತ್ವವಾಗಲಿ ಹೇಗೆ ಬಂದೀತು ? ಅದಿಲ್ಲದಿದ್ದರೆ ಎಲ್ಲಿಯ ಪ್ರತ್ಯಕ್ಷಾದಿಗಳು ? ಎಲ್ಲಿಯ ಪ್ರಮಾಣಗಮ್ಯಪ್ರಮೇಯಪ್ರಪಂಚ ?– ಎಂಬ ಶಾಸ್ತ್ರಜನ್ಯಜ್ಞಾನದಿಂದ ಪ್ರಮಾತೃತ್ವಾದಿಭ್ರಾಂತಿಯು ಅತ್ಯಂತಿಕವಾಗಿ ಹೋಗಿಬಿಡುವದು. ಹಿಂದೆ ನಾವು ಬ್ರಿಟಿಷರ ಆಳ್ವಿಕೆಯಲ್ಲಿದ್ದೆವು. ಒಂದು ದಿನ ಅರ್ಧರಾತ್ರಿಯಲ್ಲಿ ನಮಗೆ ಸ್ವಾತಂತ್ರ್ಯವು ಬಂದಿತು ; ಆ ಹಿಂದಿನ ಘಂಟೆಯಲ್ಲಿದ್ದ ನಮ್ಮ ದಾಸ್ಯವು ಕಡಿದೇಹೋಯಿತು. ಅಲ್ಲವೆ ? ಆದರಂತೆ ದೇಹಾದಿಸತ್ಯತ್ವವೂ ಅವುಗಳಿಂದಾಗಿರುವ ಪ್ರಮಾತೃತ್ವವೂ ಇರುವವರೆಗೆ ನಮಗೆ ಸಂಸಾರದ ಬಂಧ ; ಅಲ್ಲಿಯವರೆಗೇ ಪ್ರತ್ಯಕ್ಷಾದಿಪ್ರಮಾಣಗಳ ಆಳ್ವಿಕೆ. ಆದರೆ ಶಾಸ್ತ್ರಜನ್ಯಜ್ಞಾನದಿಂದ ಯಾವಾಗ ನಾವು ಅಶರೀರರು– ಅಪ್ರಮಾತೃಗಳು ಎಂಬ ತಿಳಿವಳಿಕೆಯು ಬರುತ್ತದೆಯೋ, ಆ ಕ್ಷಣದಿಂದಲೇ ನಾವು ಸರ್ವಥಾ ಮುಕ್ತರು, ಅಪ್ರಮೇಯರು.

ಅನ್ವೇಷ್ಟವ್ಯಾತ್ಮವಿಜ್ಞಾನಾತ್ ಪ್ರಾಕ್ ಪ್ರಮಾತೃತ್ವಮಾತ್ಮನಃ ।
ಅನ್ವಿಷ್ಟಃ ಸ್ಯಾತ್ ಪ್ರಮಾತೈವ ಪಾಪ್ಮದೋಷಾದಿವರ್ಜಿತಃ ॥

ಈಗ ನಾವು ಪರಮಾತ್ಮನನ್ನು ಹುಡುಕುತ್ತಿರುವೆವು, ನಾವು ಪ್ರಮಾತೃಗಳು ; ಆತ್ಮಸ್ವರೂಪವನ್ನು ವಿಚಾರಮಾಡಿ ಅರಿಯಬೇಕಾಗಿರುವವರು. ಶಾಸ್ತ್ರಪ್ರಮಾಣವನ್ನು ಆಶ್ರಯಿಸಿ ಆತ್ಮನ ಸ್ವರೂಪವನ್ನು ಕಂಡುಕೊಂಡರೆ ಆಗ ನಾವು ಪ್ರಮಾತೃಗಳಲ್ಲ, ಶೋಕಮೋಹಾದಿಸಂಸಾವುಳ್ಳವರಲ್ಲ ; ನಾವೇ ಆ ಪರಮಾತ್ಮಸ್ವರೂಪರು, ಎಂದೆಂದಿಗೂ ಪಾಪಪುಣ್ಯಾದಿದೋಷರಹಿತನಾದ ಸತ್ಯಕಾಮನಾದ ಸತ್ಯಸಂಕಲ್ಪನಾದ ಪರಮಾತ್ಮಸ್ವರೂಪರೇ ನಾವು– ಎಂಬ ಅರಿವು ಆಗಿಬಿಡುತ್ತದೆ. ಒಬ್ಬ ರಾಜನ ಮಗನು, ರಾಜಸಂತತಿಗೆಲ್ಲ ಒಬ್ಬನೇ ಇದ್ದವನು, ಹೇಗೋ ತಪ್ಪಿಸಿಕೊಂಡು ಬೇಡರ ಮನೆಯಲ್ಲಿ ಬೆಳೆದ. ಮಂತ್ರಿಗಳು ಅವನನ್ನು ಶೋಧಿಸಿ ಕಂಡುಹಿಡಿದು ಅವನಿಗೆ ನಿಜವನ್ನು ತಿಳಿಯಿಸಲು ತಾನು ರಾಜನು, ವ್ಯಾಧಪುತ್ರನಲ್ಲ– ಎಂಬುದನ್ನು ಕಂಡುಕೊಂಡ. ಹಾಗೆಯೇ ಇದು. ಈಗ ನಾವು ಸಂಸಾರಿಗಳು; ಪರಮಾತ್ಮನಿಗಿಂತ ಭಿನ್ನರಾದ ಕಿಞ್ಚಿಜ್ಞರು, ಅಲ್ಪಶಕ್ತಿಯುಳ್ಳವರು ಎಂದುಕೊಂಡಿದೇವೆ. ಸದ್ಗುರುವಿನ ಬೋಧೆಯಿಂದ ನಮ್ಮ ಸ್ವರೂಪವು ತಿಳಿದಮೇಲೆ ನಾವು ಎಂದೆಂದಿಗೂ ಪರಮಾತ್ಮಸ್ವರೂಪರೇ ಎಂಬ ಅರಿವು ಮನದಲ್ಲಿ ಮಿಂಚುತ್ತದೆ.

ಆಗ ನಮ್ಮ ಸ್ವರೂಪವೇನೂ ನಾಶವಾಗುವದಿಲ್ಲ; ಪ್ರಮಾತೃತ್ವವು ಬಾಧಿತವಾಗಿ ಬಿಡುತ್ತದೆ, ಅಷ್ಟೆ. ಅಧ್ಯಾಸವಾಗಲಿ ಅದರ ಕಾರ್ಯವಾದ ಸಂಸಾರಿತ್ವವಾಗಲಿ, ಎಂದಿಗೂ ನಮಗೆ ಇರಲಿಲ್ಲವೆಂದೇ ಜ್ಞಾನವುಂಟಾಗಿಬಿಡುತ್ತದೆ.

---

## ೧೪. ಕಾರ್ಯಕಾರಣಪ್ರಕ್ರಿಯೆ

( 30-7-62 )

ಅನಾತ್ಮವೆಲ್ಲವೂ ಆತ್ಮನಲ್ಲಿ ಅಧ್ಯಸ್ತವಾಗಿರುತ್ತದೆ. ಮನುಷ್ಯನೊಬ್ಬ, ಅವನ ನೆರಳು ಮತ್ತೊಂದು- ಎಂದು ಹೇಗೆ ಎರಡು ವಸ್ತುಗಳಿರುವದಿಲ್ಲವೋ, ಹಾಗೆಯೇ ಆತ್ಮನೊಬ್ಬ, ಅನಾತ್ಮವೊಂದು-ಎಂದು ಎರಡು ವಸ್ತುಗಳಿಲ್ಲ; ಆತ್ಮನೊಬ್ಬನೇ ನಿಜವಾಗಿರುತ್ತಾನೆ. ದೃಷ್ಟಾಂತದಲ್ಲಿ ನೆರಳಾದರೂ ಬೇರೆಯಾಗಿ ತೋರುತ್ತಿರುತ್ತದೆ; ಮನುಷ್ಯನೇನೂ ನೆರಳಲ್ಲ, ನೆರಳು ಮನುಷ್ಯನೂ ಅಲ್ಲ. ಆದರೆ ಇಲ್ಲಿ ಆತ್ಮನೊಬ್ಬನೇ ನಿಜವಾಗಿ ಇರುವವನು; ಅವನಿಗಿಂತ ವ್ಯತಿರಿಕ್ತವಾದ ಅನಾತ್ಮವೆಂಬುದು ಇಲ್ಲವೇ ಇಲ್ಲ. ಹೇಗೆ ನೆರಳು ಎಂಬುದು ಬೆಳಕಿನ ಅಭಾವ ಮಾತ್ರವಾಗಿದ್ದು ಬೇರೆಯಾಗಿರುವಂತೆ ತಪ್ಪುತಿಳಿವಳಿಕೆಯಿಂದ ತೋರುತ್ತಿರುವದೋ ಹಾಗೆ ಅನಾತ್ಮವೆಂಬುದೊಂದು ಇದೆ ಎಂದು ತಪ್ಪುತಿಳಿವಳಿಕೆಯಿಂದ ತೋರುತ್ತಿರುತ್ತದೆ. ಇಷ್ಟಂಶದಲ್ಲಿ ದೃಷ್ಟಾಂತಕ್ಕೂ ದಾರ್ಷ್ಟಾಂತಿಕಕ್ಕೂ ಹೋಲಿಕೆ ಇದೆ. ನೆರಳಿನಿಂದ ಮನುಷ್ಯನನ್ನು ಊಹಿಸುವಂತೆ ಅನಾತ್ಮದ ಸಹಾಯದಿಂದ ಆತ್ಮನನ್ನು ಅರಿತುಕೊಳ್ಳಬಹುದು, ಹಾಗೆಯೇ ಆತ್ಮನಲ್ಲಿ ಅಧ್ಯಸ್ತವಾಗಿರುವ ಶರೀರಾದಿಗಳ ತೋರಿಕೆಯ ಸಹಾಯದಿಂದ ಆತ್ಮನನ್ನು ತಿಳಿಯಿಸಿಕೊಡಬಹುದು. ಹೀಗೆ ವೇದಾಂತದಲ್ಲಿ ಅಧ್ಯಸ್ತಪದಾರ್ಥಗಳ ತೋರಿಕೆಯನ್ನು ಆತ್ಮಜ್ಞಾನಕ್ಕೆ ಸಹಾಯಕವಾಗಿ ಮಾಡಿಕೊಂಡಿರುತ್ತದೆ.

ಇನ್ನೊಂದು ದೃಷ್ಟಾಂತ. ಕನ್ನಡಿಯಲ್ಲಿ ಮನುಷ್ಯನ ಪ್ರತಿಬಿಂಬವು ಬಿದ್ದಿರುತ್ತದೆ, ಅದು ಅವನಂತೆಯೇ ಕಾಣಿಸುತ್ತಿರುತ್ತದೆ. ಕನ್ನಡಿಯಿಂದ ಇವನು ಎಷ್ಟುದೂರವಿದ್ದರೆ ಆ ಪ್ರತಿಬಿಂಬವೂ ಹಿಂದಕ್ಕೆ ಅಷ್ಟೇ ದೂರದಲ್ಲಿರುವಂತೆ ಕಾಣಿಸುತ್ತಿರುತ್ತದೆ. ಆದರೂ ಅಲ್ಲಿ ನಿಜವಾಗಿ ಮತ್ತೊಬ್ಬ ಮನುಷ್ಯನೇನೂ ಇರುವದಿಲ್ಲ. ಮನೆಯಲ್ಲಿ ಅನೇಕ ನಿಲುಗನ್ನಡಿಗಳಿದ್ದರೆ, ಒಬ್ಬನೇ ಮನುಷ್ಯನಿಗೆ ಅನೇಕ ಪ್ರತಿಬಿಂಬಗಳು ಏಕಕಾಲಕ್ಕೆ ಕಾಣಿಸಬಹುದು; ಹೀಗೆಯೇ ಎರಡು ಕಡೆ ದೀಪಗಳಿರುವಾಗ ಮನುಷ್ಯನೊಬ್ಬನಿಗೇ ಎರಡು ನೆರಳುಗಳು ಬೀಳಬಹುದು. ಆದರೆ ಈ ಪ್ರತಿಬಿಂಬಗಳಾಗಲಿ, ನೆರಳಾಗಲಿ ನಿಜವಾಗಿರುವ ವಸ್ತುಗಳೇನೂ ಅಲ್ಲ. ಇದ

ರಂತೆ ಒಬ್ಬನೇ ಆತ್ಮನಲ್ಲಿ ಅನೇಕವಾಗಿರುವ ಆತ್ಮರುಗಳೂ ಅನಾತ್ಮಪದಾರ್ಥಗಳೂ ಬೇರೆಬೇರೆ ಇರುವಂತೆ ಕಾಣಿಸಬಹುದು ; ಆದರೆ ಅಷ್ಟುಮಾತ್ರದಿಂದ ಆ ಆತ್ಮ ಭೇದವಾಗಲಿ, ಅನಾತ್ಮವಸ್ತುಗಳ ಭೇದವಾಗಲಿ ನಿಜವಾಗಿರುವದೆಂದಾಗುವದಿಲ್ಲ. ದೃಷ್ಟಾಂತದಲ್ಲಿ ಕನ್ನಡಿಗಳೆಂಬ ಉಪಾಧಿಗಳಿಂದ ಪ್ರತಿಬಿಂಬಗಳು ಅನೇಕವಾಗಿ ಕಾಣಿಸುವಂತೆ ಶರೀರಗಳೆಂಬ ಉಪಾಧಿಗಳಿಂದ ಅನೇಕಾತ್ಮರು ಕಾಣಿಸುತ್ತಿರುತ್ತಾರೆ. ಆದರೆ ಒಂದು ವಿಶೇಷ. ದೃಷ್ಟಾಂತದಲ್ಲಿ ಕನ್ನಡಿಗಳು ನಿಜವಾದ ಉಪಾಧಿಗಳು ; ಇಲ್ಲಿ ಉಪಾಧಿಗಳಾಗಿರುವ ಶರೀರಗಳೂ ಸತ್ಯವಸ್ತುಗಳಲ್ಲ, ಅವೂ ಅಸ್ಯಸ್ತವಾಗಿಯೇ ಇರುತ್ತವೆ. ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬವನ್ನು ನೋಡಿ ನಿಜವಾಗಿ ಅದರಲ್ಲಿ ಮತ್ತೊಂದು ಮಗುವಿದೆಯೆಂದೇ ಮಕ್ಕಳು ಭಾವಿಸಿಕೊಂಡು ಆಡುತ್ತಿರುತ್ತಾರೆ ; ಅವರಿಗೆ ವಯಸ್ಸಾಗಿ ತಿಳಿವಳಿಕೆಯುಂಟಾದಹಾಗೆಲ್ಲ ಆ ಪ್ರತಿಬಿಂಬಗಳು ನಿಜವಾದ ವಸ್ತುಗಳಲ್ಲ. ಬರಿಯ ತೋರಿಕೆಗಳು-ಎಂದು ಗೊತ್ತಾಗುತ್ತದೆ. ಅಲ್ಲವೆ ? ಇದರಂತೆ ನಾನಾರೂಪವಾದ ಪ್ರಪಂಚವು ತೋರುತ್ತಿರುವದನ್ನೇ ಮಕ್ಕಳಂತೆ ಸತ್ಯವೆಂದು ಜನರು ಬಗೆಯುತ್ತಿರುತ್ತಾರೆ : ಅದ್ವಿತೀಯನಾದ ಆತ್ಮನೊಬ್ಬನೇ ಸತ್ಯವು ಎಂದು ಅರಿತುಕೊಳ್ಳುವದಕ್ಕೆ ಅವರಿಗೆ ಕಾಲವು ಬೇಕಾಗುತ್ತದೆ.

ಹೇಗೆ ಕಳ್ಳರು ಎಲ್ಲಾ ಬೀಗಗಳನ್ನೂ ತೆಗೆಯುವದಕ್ಕೆ ಒಂದೇ ಬೀಗದ ಕೈಯನ್ನುಪಯೋಗಿಸುವರೋ, ಹಾಗೆ ವೇದಾಂತಿಗಳು ಬೇರೆಬೇರೆಯಾಗಿ ಕಾಣುತ್ತಿರುವ ಸಮಸ್ಯೆಗಳಿಗೆ ಒಂದೇ ಒಂದು ಪರಿಹಾರವನ್ನು ಕಂಡುಹಿಡಿದಿರುತ್ತಾರೆ. ಈ ಪರಿಹಾರೋಪಾಯಕ್ಕೆ 'ಅಧ್ಯಾರೋಪಾಪವಾದಪ್ರಕ್ರಿಯೆ' ಎಂದು ಹೆಸರು. ಈ ಪ್ರಕ್ರಿಯೆಯೊಂದೇ ಅನೇಕ ಅವಾಂತರಪ್ರಕ್ರಿಯೆಗಳನ್ನೊಳಗೊಂಡಿರುತ್ತದೆ, 'ಅಧ್ಯಾರೋಪ'ವೆಂದರೆ ವಸ್ತುವಿನ ನಿಜವನ್ನು ತಿಳಿಸಿಕೊಡುವದಕ್ಕೆಂದು ಮಾಡಿಕೊಳ್ಳುವ ಕಲ್ಪನೆ, ಕಲ್ಪಿಸಿಕೊಳ್ಳುವದು ; 'ಅಪವಾದ'ವೆಂದರೆ ಹಾಗೆ ಕಲ್ಪಿಸಿಕೊಂಡದ್ದನ್ನು ನಿಜವಾಗಿಲ್ಲವೆಂದು ತಿಳಿಸಿಕೊಡುವದು. ಈ ದಿನ 'ಕಾರ್ಯಕರಣಪ್ರಕ್ರಿಯೆ'ಯನ್ನು ವಿವರಿಸಿ ಅದಕ್ಕೆ ಈ ಅಧ್ಯಾರೋಪಾಪವಾದನ್ಯಾಯವು ಹೇಗೆ ಹೊಂದುತ್ತದೆಂಬುದನ್ನು ತಿಳಿಸುವದಕ್ಕೆ ಪ್ರಯತ್ನಿಸುವೆನು.

ಕಾರ್ಯಕಾರಣವಾದದಲ್ಲಿ ನಮ್ಮ ದೇಶದ ದರ್ಶನಕಾರರುಗಳಲ್ಲಿಯೇ ಅಲ್ಲದೆ ಭೌತಿಕವಿಜ್ಞಾನವಾದಿಗಳಲ್ಲಿಯೂ ಅಭಿಪ್ರಾಯಭೇದಗಳುಂಟಾಗಿರುತ್ತದೆ.' ಕಾರ್ಯಕಾರಣತ್ವ'ವಿಲ್ಲದೆ ವಿಜ್ಞಾನಶಾಸ್ತ್ರವು ಮುನ್ನಡೆಯಲೇ ಆರದು ಎಂದು ಹಿಂದಿನವರು ಹೇಳುತ್ತಿದ್ದರು; ಈಗ ಅನೇಕರು ಅದರ ಬಗ್ಗೆ ಸಂಶಯಗ್ರಸ್ತರಾಗಿರುತ್ತಾರೆ. ಇದು ಪುರಾತನಕಾಲದವರ ಮೂಢನಂಬಿಕೆಯ ಅವಶೇಷವೆಂದು ಖ್ಯಾತನು ( Lord Russel ) ಅಭಿಪ್ರಾಯಪಟ್ಟಿರುತ್ತಾನೆ. 'ಡೇವಿಡ್

ಹ್ಯೂಮ್’ ಎಂಬ ತತ್ತ್ವವಿಚಾರಕನು ಕಾರ್ಯಕಾರಣಸಂಬಂಧವೆಂಬುದೊಂದು ಇಲ್ಲವೇ ಇಲ್ಲ. ಒಂದು ಘಟನೆಯಾದರೆ ಮತ್ತೊಂದು ಘಟನೆಯಾಗಬಹುದು ; ಈ ಪೌರ್ವಾಪರ್ಯದೃಶ್ಯವನ್ನೇ ಜನರು ‘ಕಾರ್ಯಕಾರಣಸಂಬಂಧ’ವೆನ್ನುತ್ತಾರೆ ಎಂದು ನಮ್ಮ ಕಡೆಯ ಬೌದ್ಧರಂತೆ ವಾದಿಸುತ್ತಿದ್ದನು. ‘ಕಾರಣವೆಂಬುದು ಅಜ್ಞಾತದೇವತೆಗೆ ನಿರ್ಮಾಣವಾಗಿರುವ ಬಲಿವೇದಿಕೆ’ ಎಂಬುದು ಒಬ್ಬ ತತ್ತ್ವಶಾಸ್ತ್ರವಿಚಾರಕನ (William James) ಹೇಳಿಕೆ. ಇಲ್ಲಿ ನಾವು ವಿಚಾರಮಾಡಿರುವದು ಒಂದಾನೊಂದು ಕಾರಕವು ಮತ್ತೊಂದು ಫಲವನ್ನು ನಿಯತವಾಗಿ ಉಂಟುಮಾಡುವ ವ್ಯಾಪಾರವನ್ನು ಮಾಡುವದೊ, ಇಲ್ಲವೊ ?– ಎಂಬ ಪ್ರಶ್ನೆ. ಆದರೆ ನಮ್ಮ ದರ್ಶನಗಳಲ್ಲಿ ‘ಕಾರ್ಯಕಾರಣವಾದ’ವೆಂದರೆ ಉಪಾದಾನಕಾರಣದಿಂದ ಆಗುವ ಕಾರ್ಯವನ್ನು ಕುರಿತದ್ದು. ಅದನ್ನು ಕುರಿತೇ ಈ ದಿನ ನಾವು ಮುಖ್ಯವಾಗಿ ವಿಚಾರಮಾಡಬೇಕಾಗಿದೆ.

ಕಾರ್ಯವು–ಉದಾಹರಣೆಗೆ ಒಂದು ಗಡಿಗೆ–ಮೊದಲು ಇದ್ದು ಹುಟ್ಟುವದೆ, ಮೊದಲು ಇಲ್ಲದೆ ಇದ್ದೇ ಹೊಸದಾಗಿ ಹುಟ್ಟುತ್ತದೆಯೆ? ಇದ್ದದ್ದೇ ಹುಟ್ಟುವದೆಂಬ ವಾದವು ಸತ್ಕಾರ್ಯವಾದವು, ಇಲ್ಲದ್ದು ಹೊಸದಾಗಿ ಹುಟ್ಟುವದೆಂಬುದು ಅಸತ್ಕಾರ್ಯವಾದವು. ಮೊದಲಿದ್ದ ಮಣ್ಣೇ ಗಡಿಗೆಯಾಗಿ ಮಾರ್ಪಡುತ್ತದೆ, ಮಡಕೆಯೆಂಬುದು ಮಣ್ಣಿನ ರೂಪಾಂತರವೇ ಎಂಬುದು ಸತ್ಕಾರ್ಯವಾದ. ಮೊದಲು ಗಡಿಗೆಯು ಯಾವ ರೂಪದಿಂದಲೂ ಇರುವದಿಲ್ಲ.; ಹೊಸದಾಗಿಯೇ ಹುಟ್ಟಿ ಮಣ್ಣಿಗೆ ಸೇರಿಕೊಳ್ಳುತ್ತದೆ–ಎಂಬುದು ಅಸತ್ಕಾರ್ಯವಾದ. ಸಾಂಖ್ಯರು ಸತ್ಕಾರ್ಯವಾದಿಗಳು; ಏಕೆಂದರೆ ಅವರು ಪ್ರಧಾನವೇ ಪರಿಣಾಮವಾಗಿ ಮಹತ್ತು ಅಹಂಕಾರ–ಮುಂತಾದ ರೂಪಗಳನ್ನು ಪಡೆಯುತ್ತದೆ ಎನ್ನುತ್ತಾರೆ. ಅವರು ಹೇಳುವ ಪರಿಣಾಮವಾದವನ್ನು ವೈಶೇಷಿಕರು ಒಪ್ಪುವದಿಲ್ಲ ; ಅವರದು ಆರಂಭವಾದ. ಅನೇಕ ಕಾರಣಗಳು ಸೇರಿ ಒಂದು ಕಾರ್ಯವು ಆಗುತ್ತದೆ ಎಂಬುದು ಅವರ ಮತ. ಎರಡು ಪರಮಾಣುಗಳು ಸೇರುವದರಿಂದ ಒಂದು ದ್ವ್ಯಣುಕವು ಹೊಸದಾಗಿ ಉಂಟಾಗುತ್ತದೆ ; ಆ ದ್ವ್ಯಣುಕವು ಕಾರಣಗಳಾಗಿರುವ ಪರಮಾಣುಗಳೊಡನೆಯೂ ಸತ್ತಾಸಾಮಾನ್ಯದೊಡನೆಯೂ ‘ಸಮವಾಯ’ ಎಂಬ ಸಂಬಂಧದಿಂದ ಸೇರಿಕೊಂಡು ‘ಸತ್ತು’ (ಇರುವದು) ಎನಿಸಿಕೊಳ್ಳುತ್ತದೆ– ಎಂದು ಅವರು ಅಸತ್ಕಾರ್ಯವಾದವನ್ನು ವರ್ಣಿಸುತ್ತಾರೆ. ಭೌತಿಕವಿಜ್ಞಾನದವರನ್ನೂ ಆರಂಭವಾದಿಗಳೆಂದೇ ಕರೆಯಬಹುದು; ಏಕೆಂದರೆ ಆಮ್ಲಜನಕ, ಜಲಜನಕ–ಎರಡೂ ಸೇರಿ ನೀರು ಆಗುತ್ತದೆ, ಆ ಎರಡು ಕಾರಣಗಳೂ ಒಂದಕ್ಕೊಂದು ರಾಸಾಯನಿಕಕ್ರಮದಿಂದ ಸಂಯುಕ್ತವಾಗಿ ಮೊದಲು ಇಲ್ಲದಿದ್ದ ನೀರು ಆಗುತ್ತದೆ ಎನ್ನುವದು ಅವರ ಮತ. ಇದ್ದದ್ದು ಹೋಗುವದು ಹೇಗೆ, ಇಲ್ಲದ್ದು ಬರುವದು ಹೇಗೆ ?– ಎಂದು

ಸಾಂಖ್ಯರು ; ಇಷ್ಟದ್ದೇ ಆದರೆ ಮತ್ತೆ ಹುಟ್ಟುವದೆಂತರೇನು ?–ಎಂದು ವೈಶೇಷಿಕರು. ಹೀಗೆ ಇವರಿಬ್ಬರೂ ಒಬ್ಬರೊಡನೊಬ್ಬರು ಕಚ್ಚಾಡುತ್ತಿರುತ್ತಾರೆ. ವೈಶೇಷಿಕರ ಆಕ್ಷೇಪಣೆಗೆ ಸಾಂಖ್ಯರಲ್ಲಿ ಸಮಾಧಾನವಿಲ್ಲ, ಸಾಂಖ್ಯರ ಆಕ್ಷೇಪಣೆಗೆ ವೈಶೇಷಿಕರಲ್ಲಿ ಸಮಾಧಾನವಿಲ್ಲ; ಆದ್ದರಿಂದ 'ಅಜಾತಿ' ಯಾವದೂ ಹುಟ್ಟುವದೇ ಇಲ್ಲ ಎಂಬುದೇ ಸರಿ ಎಂದು ಶೂನ್ಯವಾದಿಗಳು ಹೇಳುತ್ತಾರೆ. ವೇದಾಂತಿಗಳೂ ಎಂದರೆ 'ಶೂನ್ಯವಾದಿಗಳ ಯುಕ್ತಿ ಸರಿ; ಆದರೆ ಏನೂ ಇಲ್ಲ ಎಂಬುದು ಸರಿಯಲ್ಲ. ಒಂದಾನೊಂದು ಪರಮಾರ್ಥವಿದೆ, ಅದೇ ನಮ್ಮೆಗಳೆಲ್ಲರ ಆತ್ಮ. ಆತ್ಮವನ್ನು ಇಲ್ಲವೆಂದು ತೋರಿಸಿಕೊಡುವದು ಯಾರಿಂದಲೂ ಆಗಲಾರದು. ಈ ಆತ್ಮನು ಜನ್ಮರಹಿತನು, ಅವನು ಕಾರ್ಯರೂಪವಾಗಿ ಪರಿಣಮಿಸಲಾರದು, ಆದರೂ ಅವನೇ ಬೇರೆಯ ರೂಪದಿಂದ ಹುಟ್ಟುವಂತೆ ತೋರುತ್ತಾನೆ, 'ಅಜಾಯಮಾನೋ ಬಹುಧಾ ವಿಜಾಯತೇ' ಹುಟ್ಟದೆಯೇ ಬಹುವಿಧವಾಗಿ ಹುಟ್ಟಿದಂತೆ ತೋರಿಕೊಳ್ಳುತ್ತಾನೆ ಎಂಬುದೇ ಸಿದ್ಧಾಂತ. ಮಾಯೆಯಿಂದ ಹುಟ್ಟುತ್ತಾನೆ, ಎಂದರೆ ಹುಟ್ಟಿದಂತೆ ತೋರುತ್ತಾನೆ. ಮಾಯೆಯೆಂದರೇನು ? ಯುಕ್ತಿಹೀನವಾಗಿರುವ ತೋರುವಿಕೆಯೇ ಮಾಯೆ. ಇದೇ ನಿಜವಾದ 'ಕಾರ್ಯಕಾರಣವಾದ' ಎನ್ನುತ್ತಾರೆ. ವೇದಾಂತಿಗಳು ಇದನ್ನೇ ನಿಜವಾದ ಅಜಾತಿವಾದವೆಂದು ಕರೆಯುತ್ತಾರೆ.

ಹಾಗಾದರೆ ಇದು 'ಹುಟ್ಟಿತು', 'ಬೆಳೆಯಿತು', 'ಸೊರಗಿತು', 'ಸತ್ತಿತು'– ಎಂಬ ವ್ಯವಹಾರಕ್ಕೇನು ಗತಿ ? 'ಹೊಲದಲ್ಲಿ ಪೈರು ಹುಟ್ಟಿತು' ಎನ್ನುವಾಗ ಮಾಯೆಯ ಪೈರು ಹುಟ್ಟಿತೆಂದು ಅರ್ಥವೆ ?–ಎಂದು ಕೆಲವರು ಆಕ್ಷೇಪಿಸುತ್ತಾರೆ. ದೇಶ, ಕಾಲ, ನಿಮಿತ್ತ–ಇವುಗಳಿದ್ದರೇ ಕಾರ್ಯವಾಗುವದು ಲೋಕದಲ್ಲಿ ಕಂಡಿದೆ; ಆದ್ದರಿಂದ ಕಾರ್ಯವು ನಿಜವಾಗಿ ಹುಟ್ಟಿತೆಂದೇ ತಿಳಿಯಬೇಕು–ಎಂಬುದು ಅವರ ಅಭಿಪ್ರಾಯ. ಆದರೆ ಹುಟ್ಟಿದಂತೆ ತೋರಿದಮಾತ್ರಕ್ಕೆ, ಅರ್ಥಕ್ರಿಯೆಯುಂಟಾದ ಮಾತ್ರಕ್ಕೇ ಸತ್ಯವೆಂದು ತಿಳಿಯುವದಕ್ಕಿಲ್ಲ–ಎಂದು ಹಿಂದೆ ಹೇಳಿರುವದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು. ಭ್ರಾಂತಿಯಲ್ಲಿಕೂಡ ಇದೆಲ್ಲ ಹೀಗೆಯೇ ತೋರುತ್ತದೆ. ಕನಸಿನಲ್ಲಿ ನೂರಾರು ಜನರು ಸೇರಿರುವಂತೆಯೂ ಪದಾರ್ಥಗಳು ಹುಟ್ಟಿ ಬೆಳೆಯುತ್ತಿರುವಂತೆಯೂ ತೋರುತ್ತಿರುತ್ತದೆ. ಆದರೆ ಅಷ್ಟುಮಾತ್ರದಿಂದ ಅಲ್ಲಿ ನಿಜವಾಗಿ ಕಾರ್ಯಕಾರಣಸಂಬಂಧವು ವಸ್ತುಗಳಿಗಿತ್ತೆಂದು ನಾವು ಯಾರಾದರೂ ಒಪ್ಪುವೆವೆ ? ಇಲ್ಲ. ಆದ್ದರಿಂದ ಹುಟ್ಟಿದಂತೆ ತೋರುವದು ನಿಜ ; ಆದರೆ ಇದೆಲ್ಲ ಅಧ್ಯಾಸಮಾತ್ರ–ಎನ್ನುವದೇ ಸರಿ.

ಭೌತಿಕವಿಜ್ಞಾನಿಗಳುಕೂಡ ಈ ಭ್ರಾಂತಿಗೆ ಪಕ್ಕಾಗಿರುತ್ತಾರೆ. ಅವರು ಒಂದು ಕಾಲದಲ್ಲಿ ಸತ್ಯವೆಂದು ಹೇಳಿದ್ದನ್ನು ಮತ್ತೊಂದು ಕಾಲದಲ್ಲಿ ಹಾಗಿಲ್ಲ ಎಂದೇ ನಿಶ್ಚಯಿಸುತ್ತಿರುತ್ತಾರೆ. ಒಂದಾನೊಂದು ಕಾಲದಲ್ಲಿ ವಸ್ತುಗಳೆಲ್ಲವೂ

ಕೆಲವು ಪ ರ ಮಾ ಣು ಗ ಳಿಂ ದ ಆಗಿರುತ್ತವೆ-ಎಂದು ಅವರು ನಂಬಿದ್ದರು. ಪರಮಾಣುಗಳಿಗೆ ಅವಯುವಗಳಿಲ್ಲದ್ದರಿಂದ ಅವುಗಳಿಗೆ 'ಅಖಂಡ್ಯ' ಎಂಬ ಅರ್ಥ ವುಳ್ಳ 'ಅಟಮ್' (atom) ಎಂಬ ಹೆಸರನ್ನು ಕೊಟ್ಟಿದ್ದರು. ಆದರೆ ಈ ಮತವೂ ಖಂಡಿತವಾಯಿತು. ಈಚಿಗೆ ಅಖಂಡ್ಯವಾದ ಪರಮಾಣುಗಳು ಖಂಡ್ಯ ವೆಂದೇ ನಿಶ್ಚಯವಾಯಿತು. 'ಅಟಂ ಬಾಂಬ್' ಎಂಬ ಘಾತುಕಾಸ್ತ್ರವು ಸಿದ್ಧ ವಾದಮೇಲೆ ಪರಮಾಣುಗಳು ಅಖಂಡ್ಯವೆಂಬುದನ್ನು ಯಾರುತಾನೆ ನಂಬು ತ್ತಾರೆ? ಈಚಿಗೆ ಕೆಲವರು ಭೌತಿಕಶಾಸ್ತ್ರಜ್ಞರು ಎಲೆಕ್ಟ್ರಾನ್, ಪ್ರೋಟಾನ್-ಮುಂತಾದ ಕಣಗಳಿಂದ ಪರಮಾಣುಗಳಾಗಿವೆಯೆಂದರು. ಇತ್ತಲಾಗಿ ಅವು ಯಾವ ವೂ ಪದಾರ್ಥಗಳೇ ಅಲ್ಲ, ಬರಿಯ ಶಕ್ತಿವಿಶೇಷಗಳೆನ್ನುತ್ತಿದಾರೆ. ಇತ್ತೀಚಿಗೆ 'ಸಾಪೇಕ್ಷತಾವಾದ' (Theory of Relativity), 'ಕ್ವಾಂಟಂ ವಾದ' ಅಣುತಮವಾದ (puantum Theory)-ಎಂಬ ವಾದಗಳೆರಡು ಹುಟ್ಟಿ ಕೊಂಡು ಒಂದಕ್ಕೊಂದು ಹೊಂದಿಕೊಳ್ಳದೆ ಇವೆ. 'ಈಗ ಕನಸಿಲ್ಲ, ಎಚ್ಚರವಾಗಿ ದೇನೆ' ಎಂದು ಕನಸಿನಲ್ಲಿಯೇ ಭಾವಿಸಿಕೊಳ್ಳುವವರಂತೆ ವಿಜ್ಞಾನಶಾಸ್ತ್ರಜ್ಞರು ಹೊಸ ಹೊಸ ವಾದಗಳನ್ನು ಹೂಡುತ್ತಲೇ ಬಂದಿರುತ್ತಾರೆ. ವಸ್ತುಗಳೇ ಇಲ್ಲ, ಎಲ್ಲವೂ ಸಕ್ತಿವಿಶೇಷವೇ-ಎಂಬ ಮತವೂ ಇದೆ; ಇನ್ನು ಕಾರಣವೆಲ್ಲಿ, ಕಾರ್ಯವೆಲ್ಲಿ?

ಇಲ್ಲಿ ವೇದಾಂತಿಗಳ ಮತವೇನೆಂದರೆ, 'ಕಾರಣಸ್ಯಾತ್ಮಭೂತಾ ಶಕ್ತಿಃ, ಶಕ್ತೇಶ್ಚಾತ್ಮಭೂತಂ ಕಾರ್ಯಮ್' (ಸೂ. ಭಾ. ೨-೧-೧೭) ಕಾರಣ, ಶಕ್ತಿ, ಕಾರ್ಯ- ಎಲ್ಲವೂ ಒಂದೇ ವಸ್ತು. ಕಾರಣಕ್ಕಿಂತ ವ್ಯತಿರಿಕ್ತವಾಗಿ ಶಕ್ತಿ ಯಾಗಲಿ ಕಾರ್ಯವಾಗಲಿ ಇಲ್ಲವೇ ಇಲ್ಲ; ಆದ್ದರಿಂದ ಕಾರಣದ ಕಾರಣತ್ವವು ಪರಮಾರ್ಥವಲ್ಲ. ಇದೆಲ್ಲ ಬರಿಯ ಮಾತಿನ ಆಡಂಬರವೇ 'ಯಥಾ ಸೋಮ್ಯೈ ಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್' (ಛಾ. ೬-೧-೧) ಒಂದು ಮಣ್ಣೇ 'ಗಡಿಗೆ', 'ಮಡಕೆ', 'ಕುಡಿಕೆ' ಎಂದು ಮುಂತಾದ ಕಾರ್ಯವಾಗಿ ತೋರುತ್ತದೆ; ಕಾರ್ಯವೆಂಬುದು ಬರಿಯ ಮಾತಿನಿಂದಾದದ್ದೇ, ಮಣ್ಣೆಂಬು ದೊಂದೇ ಸತ್ಯ. ಇದರಂತೆ ಪರಮಕಾರಣವೆಂಬುದು ಆತ್ಮನೇ. ಅವನಲ್ಲಿಯೇ ಎಲ್ಲವೂ ಕಲ್ಪಿತವಾಗಿರುತ್ತದೆ, ಅವನನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತೆ. ಕಾರ್ಯಕಾರಣಭಾವವೆಂಬುದು ಬರಿಯ ಮಾಯೆ. ಹೊಂದದೆ ಇರುವದನ್ನು ಹೊಂದಿದಂತೆ ತೋರಿಸುವದೇ ಮಾಯೆ. ಇದು ಕಾರಣ, ಇದು ಕಾರ್ಯ -ಎಂದು ನಾವು ಭಾವಿಸಿರುವದೂ ವಸ್ತುಗಳನ್ನು ಭೌತಿಕವಿಜ್ಞಾನಿಗಳು ಪರೀಕ್ಷಿಸಿ ಹೊಸ ಹೊಸ ಶೋಧಗಳನ್ನು ಮಾಡುತ್ತಿರುವದೂ, ಎಲ್ಲವೂ ಈ ಮಾಯೆಯೊಳಗೇ ಅಡಕ ವಾಗಿರುತ್ತದೆ. ಬರಿಯ ತೋರಿಕೆಯನ್ನು ನಂಬಿ, ಎಲ್ಲದಕ್ಕೂ ಸಾರವಾಗಿರುವ ಪರಮಾರ್ಥವನ್ನು ಬಿಡತಕ್ಕದ್ದಲ್ಲ.

ಹಾಗಾದರೆ ವ್ಯವಹಾರಕ್ಕೇನು ಗತಿ ? ನಿಯಮಬದ್ಧವಾಗಿ ತೋರುತ್ತಿರುವದನ್ನು ಸತ್ಯವೆಂದು ನಂಬುವದೇ ವ್ಯವಹಾರ. ಅಷ್ಟುಮಾತ್ರದಿಂದ ಪರಮಾರ್ಥವೊಂದಿದೆ ಎಂಬುದನ್ನು ಅಲ್ಲಗಳೆಯುವದಕ್ಕೆ ಆಗುವದಿಲ್ಲ. ವ್ಯವಹಾರದಲ್ಲಿಯೂ ಕಾರಣವೇ ಕಾರ್ಯವಾಗಿ ತೋರುತ್ತಿರುವಂತೆ ಪರಮಕಾರಣವಾದ ಆತ್ಮನೇ ಎಲ್ಲವೂ ಆಗಿ ತೋರುತ್ತಿರುತ್ತಾನೆ. ಇದನ್ನು 'ವಿವರ್ತವಾದ' ಎಂದು ಈಚಿನ ವೇದಾಂತಿಗಳು ಕರೆದಿರುತ್ತಾರೆ. ಪರಮಾರ್ಥವಾದ ಆತ್ಮನೇ ಕಾರ್ಯ, ಕಾರಣ–ಎಲ್ಲವೂ ಆಗಿ ತೋರುತ್ತಾನೆ. ನಮ್ಮ ಒಳಗೆ, ಹೊರಗೆ, ಮೇಲೆ, ಕೆಳಗೆ–ಎಲ್ಲೆಲ್ಲಿಯೂ ಈ ಪರಮಾತ್ಮತತ್ತ್ವವೊಂದೇ ನಿಜವಾಗಿ ಇರುತ್ತದೆ. ಇದನ್ನು ಮರೆಯಬಾರದೆಂಬುದೇ ಕಾರ್ಯಕಾರಣವಿಚಾರದ ಫಲ.

## ೧೪. ಕಾರ್ಯಕಾರಣಭಾವ

### (31—7—62)

ಅಧ್ಯಾರೋಪಾಪವಾದವೆಂಬ ಪ್ರಕ್ರಿಯೆಯೇ ವೇದಾಂತದ ಮೂಲಪ್ರಕ್ರಿಯೆಯೆಂದೂ ಮಿಕ್ಕವುಗಳೆಲ್ಲವೂ ಅದರಲ್ಲಿ ಅಡಕವಾಗಿವೆಯೆಂದೂ ಹೇಳಿದ್ದಾಯಿತು. ಕಾರ್ಯಕಾರಣವಿವೇಚನಾಪ್ರಕ್ರಿಯೆಯೂ ಈ ಪ್ರಧಾನಪ್ರಕ್ರಿಯೆಯಲ್ಲಿ ಸೇರಿರುತ್ತದೆ ಎಂಬುದನ್ನು ಸಂಗ್ರಹವಾಗಿ ತೋರಿಸಿಕೊಟ್ಟದ್ದಾಗಿದೆ. ಈಗ ಮತ್ತೊಮ್ಮೆ ಕಾರ್ಯಕಾರಣವಾದವನ್ನು ಸ್ವಲ್ಪ ವಿಸ್ತಾರವಾಗಿ ವಿಮರ್ಶಿಸೋಣ.

ಕಾರ್ಯಕಾರಣವಾದದಲ್ಲಿ ಪರಿಣಾಮವಾದ, ಆರಂಭವಾದ–ಎಂದು ಎರಡು ಮುಖ್ಯಭೇದಗಳಿವೆಯೆಂದು ಆಗಲೆ ತಿಳಿಸಿರುತ್ತದೆ. ಈ ಎರಡು ವಾದಗಳಲ್ಲಿಯೂ ಕಾರ್ಯಕಾರಣಸಂಬಂಧಕ್ಕೆ ಕಾಲಸಾಪೇಕ್ಷತ್ವವಿರುತ್ತದೆ. ಕಾರಣವು ಯಾವ ಕಾಲಪ್ರವಾಹದಲ್ಲಿರುತ್ತದೆಯೋ, ಕಾರ್ಯವೂ ಅದೇ ಕಾಲಪ್ರವಾಹದಲ್ಲಿರಬೇಕು. ಕಾರ್ಯನಿಯತಪೂರ್ವವೃತ್ತಿಯಾಗಿರುವದೇ ಕಾರಣ ; ಎಂದರೆ ನಿಯಮದಿಂದ ಕಾರ್ಯಕ್ಕೆ ಮೊದಲೇ ಯಾವದು ಇದ್ದುಕೊಂಡಿರುವದೋ ಅದು ಕಾರಣ ಎಂದು ತಾರ್ಕಿಕರು ಹೇಳುತ್ತಾರೆ. ಸ್ವಪ್ನಕಾಲದಲ್ಲಿ ಕಾಣುವ ಕಾರ್ಯಕ್ಕೆ ಎಚ್ಚರದ ಕಾಲದಲ್ಲಿರುವ ಯಾವದೊಂದೂ ಕಾರಣವಾಗಲಾರದು ; ಎಚ್ಚರಕಾಲದಲ್ಲಿ ಹುಟ್ಟುವ ಕಾರ್ಯಕ್ಕೆ ಸ್ವಪ್ನಕಾಲದಲ್ಲಿರುವ ಯಾವದೊಂದೂ ಕಾರಣವಾಗಲಾರದು. ಎಚ್ಚರದಲ್ಲಿರುವ ಮಣ್ಣಿನಿಂದ ಕನಸಿನ ಗಡಿಗೆಯಾಗಲಿ ಕನಸಿನಲ್ಲಿದ್ದ ಮಣ್ಣಿನಿಂದ ಎಚ್ಚರದ ಗಡಿಗೆಯಾಗಲಿ ಆದದ್ದು ಯಾರೂ ಕಂಡಿಲ್ಲ. ಅದು ಸಾಧ್ಯವೂ ಅಲ್ಲ ; ಏಕೆಂದರೆ ಎಚ್ಚರದ ಮತ್ತು ಕನಸಿನ ಕಾಲಪ್ರವಾಹಗಳು ಬೇರೆಬೇರೆಯಾಗಿರುತ್ತವೆ. ಇದರಂತೆ ದೇಶದ ಸಾಮಾನಾಧಿಕರಣ್ಯವೂ ಕಾರ್ಯಕಾರಣಗಳಿಗಿರಬೇಕು. ಉತ್ತರದೇಶದಲ್ಲಿರುವ ಕಲಕತ್ತೆಯ ದೋಸೆಯು ದಕ್ಷಿಣದೇಶದ ತಿರುವಾಂಕೂರಿನ

ಹಿಟ್ಟಿನಿಂದ ಆಗಲಾರದು. ಕನಸಿನ ಕೊಳದಲ್ಲಿ ಸ್ನಾನಮಾಡಿದವನಿಗೆ ಎಚ್ಚರದ ಮರಳುಕಾಡಿನಲ್ಲಿರುವಾಗ ಮೈಒದ್ದೆಯಾಗಲಾರದು. ಅಂತೂ ಕಾರ್ಯಕಾರಣ ಗಳಿಗೆ ಸಮಾನಕಾಲದೇಶಗಳಿರಬೇಕು.

ಗಡಿಗೆಯಂಥ ಕಾರ್ಯಕ್ಕೆ ಕುಂಬಾರನಂಥ ನಿಮಿತ್ತಕಾರಣವೂ ಬೇಕು. ಕುಂಬಾರನಂಥ ಒಂದು ಗೊಂಬೆಯಿದ್ದರೆ ಸಾಲದು, ನಿಜವಾದ ಕುಂಬಾರನೇ ಕೆಲಸಮಾಡಿ ಗಡಿಗೆಯನ್ನು ಮಾಡಬೇಕಾಗುತ್ತದೆ. ಇನ್ನು ಮಣ್ಣಿನಂತೆ ಇರುವ ಉಪಾದಾನಕಾರಣವಂತೂ ಇದ್ದೇಇರಬೇಕು, ಎಂಥ ಕುಶಲನಾದ ಕುಂಬಾರ ನಾದರೂ ಗಾಳಿಯಿಂದ ಗಡಿಗೆಯನ್ನು ಮಾಡಲಾರನು. ಆದ್ದರಿಂದ ಕಾರಣ ವಿಲ್ಲದೆ– ನಿಮಿತ್ತಕಾರಣ, ಉಪಾದಾನಕಾರಣ ಎರಡೂ ಇಲ್ಲದೆ– ಕಾರ್ಯವು ಉಂಟಾಗಲಾರದು.

ಗೌತಮಬುದ್ಧನು ಪ್ರಪಂಚದ ದುಃಖಕ್ಕೆ ಕಾರಣವೇನೆಂಬುದನ್ನು ನಿರ್ಣ ಯಿಸುವದಕ್ಕೆಂದು ಚಿಂತಿಸುತ್ತಿದ್ದು ಒಂದು ಅರಳಿಯಮರದ ಕೆಳಗೆ ಕುಳಿತಿರು ವಾಗ ಅವನಿಗೆ ಈ ಕಾರ್ಯಕಾರಣಗಳ ಸರಪಳಿಯೊಂದು ಮನಸ್ಸಿನಲ್ಲಿ ಹೊಳೆಯಿ ತಂತೆ. (೧) ಅವಿದ್ಯೆ, (೨) ಸಂಸ್ಕಾರ, (೩) ವಿಜ್ಞಾನ, (೪) ನಾಮರೂಪ, (೫) ಷಡಾಯತನ, (೬) ಸ್ಪರ್ಶ, (೭) ವೇದನೆ, (೮) ತೃಷ್ಣೆ, (೯) ಉಪಾದಾನ, (೧೦) ಭಾವ, (೧೧) ಜಾತಿ, (೧೨) ಜರೆ (ಮುಪ್ಪು), ಮರಣ, ಶೋಕ, ಪರಿ ವೇದನೆ, ದುಃಖ, ದುರ್ಮನಸ್ತಾ. ಈ ಹನ್ನೆರಡಕ್ಕೂ ದ್ವಾದಶನಿದಾನಗಳೆಂದು ಹೆಸರು. ಇವುಗಳಲ್ಲಿ ಒಂದಿದ್ದರೆ ಮತ್ತೊಂದು ಇರುತ್ತದೆ. ಒಂದನ್ನೊಂದು ನಿಜ ವಾಗಿ ಸವ್ಯಾಪಾರವಾಗಿ ಉಂಟುಮಾಡುತ್ತವೆ ಎಂದೇನೂ ಅಭಿಪ್ರಾಯವಲ್ಲ. ಹೀಗೆ ಒಂದಿದ್ದರೆ ಮತ್ತೊಂದು ಅನಂತರವೇ ತೋರಿಕೊಳ್ಳುವದು ಎಂಬುದನ್ನು ಪ್ರತೀತ್ಯಸಮುತ್ಪಾದ –ಎನ್ನುವರು. ಈ ನಿಮಿತ್ತನೈಮಿತ್ತಿಕಭಾವಕ್ಕೂ ಕಾಲ ದೇಶಗಳ ಅಪೇಕ್ಷೆಯಿದೆ ಎಂಬುದು ಸ್ಪಷ್ಟ.

ಭೌತಿಕವಿಜ್ಞಾನದಲ್ಲಿ ಹೇಳಿರುವ ರಾಸಾಯನಿಕಪ್ರಕಾರದಲ್ಲಿ (Chemical Change) ಆಮ್ಲಜನಕ ಮತ್ತು ಜಲಜನಕ– ಇವೆರಡೂ ನೀರಾಗುವ ಮೊದಲು ಸವ್ಯಾಪಾರವಾಗಿ ಒಂದಕ್ಕೊಂದು ಸೇರುವವೆಂದು ಕಲ್ಪಿಸುವದಕ್ಕೆ ಬರುವದಿಲ್ಲ. ಈ ಕಾರ್ಯೋತ್ಪಾದವಾದಾಗ ಆಮ್ಲಜನಕದಲ್ಲಿಯೂ ಜಲಜನಕದಲ್ಲಿ ಯೂ ಮಾರ್ಪಾಡಾಗಿದ್ದರೆ, ಮತ್ತೆ ನೀರನ್ನು ಒಡೆದು ಅದೇ ಮೂಲವಸ್ತುಗಳನ್ನು ಪಡೆಯುವದು ಶಕ್ಯವಾಗಬಾರದಿತ್ತು. ಆದ್ದರಿಂದ ಈ ಮಾರ್ಪಾಡೂ ಬೌದ್ಧರು ಹೇಳುವಂತೆ ಒಂದ ಬಗೆಯ 'ಪ್ರತೀತ್ಯಸಮುತ್ಪಾದ'ವೇ ಎನ್ನಬೇಕಾಗಿದೆ.

ವೇದಾಂತಿಗಳು ಹೇಳುವ ಕಾರ್ಯೋತ್ಪತ್ತಿಯು ಈ ಯಾವ ಮತಕ್ಕೂ ಹೊಂದುವಂತಿಲ್ಲ. ಆತ್ಮನೊಬ್ಬನೇ ಸೃಷ್ಟಿಗೆ ಪೂರ್ವದಲ್ಲಿರುತ್ತಾನೆ; ಅವನೇ

ಪಂಚಭೂತಗಳಾಗಿ ಮಾರ್ಪಡುತ್ತಾನೆ ಎಂದು ಅವರು ಹೇಳಿರುವದು ನಿಜ. 'ಆತ್ಮನ ಆಕಾಶಃ ಸಂಭೂತಃ | ಆಕಾಶಾದ್ವಾಯುಃ | (ತೈ. ೨-೧) ಎಂದು ಅವರು ಹೇಳುವಾಗ ಆತ್ಮನು ಆಕಾಶವಾಗಿ ಪರಿಣಮಿಸಿದನೆಂದಾಗಲಿ, ಆತ್ಮನೂ ಮತ್ತೊಂದೂ ಸೇರಲು ವೈಶೇಷಿಕರ ಆರಂಭವಾದಕ್ಕನುಗುಣವಾಗಿ ಜಗತ್ತೆಂಬ ಕಾರ್ಯವಾಗುವದೆಂದಾಗಲಿ ಹೇಳುವದಕ್ಕಾಗುವದಿಲ್ಲ, ಅಥವಾ ಆತ್ಮನಿದ್ದರೆ ಜಗತ್ತಿರುವದು, ಆತ್ಮನಿಲ್ಲದಿದ್ದರೆ ಅದಿಲ್ಲ-ಎಂಬ ಅನ್ವಯವ್ಯತಿರೇಕವನ್ನೂ ಅವರು ಒಪ್ಪಿಲ್ಲ. ಆತ್ಮನಿಲ್ಲದ ಕಾಲವೇ ಇಲ್ಲ; ಜಗತ್ತಾದಮೇಲೂ ಆತ್ಮನೊಬ್ಬನೇ ಇರುತ್ತಾನೆ-ಎಂಬುದು ಅವರ ವಾದವು. ಆತ್ಮನು ಸಾವಯವನಲ್ಲ, ಸದ್ವಿತೀಯನೂ ಅಲ್ಲ; ಅವನು ಕಾಲವೆಂಬ ಆಧಾರವನ್ನಿಟ್ಟುಕೊಂಡೂ ಇಲ್ಲ, ಏಕೆಂದರೆ ಕಾಲವೂ ಅವನಿಂದಲೇ ಆದ ಕಾರ್ಯವೆಂದೇ ಶ್ರುತಿ ಹೇಳುತ್ತಿದೆ. ಹಾಗಾದರೆ ಆತ್ಮನು ಜಗತ್ತಾಗುವದಕ್ಕೆ ಅವಯವಗಳಾಗಲಿ, ಕಾಲವಾಗಲಿ ಇಲ್ಲದ್ದರಿಂದ ಅವನು ಜಗತ್ತಾದದ್ದು ಹೇಗೆ? -ಎಂದು ಕೇಳಿದರೆ, ಅದಕ್ಕೆ ಶಂಕರಾಚಾರ್ಯರು ಈ ಉತ್ತರವನ್ನು ಹೇಳಿರುತ್ತಾರೆ: "ರಜ್ಜ್ವಾದ್ಯವಯವೇಭ್ಯಃ ಸರ್ಪಾದಿ ಸಂಸ್ಥಾನವತ್ ಬುದ್ಧಿಪರಿಕಲ್ಪಿತೇಭ್ಯಃ ಸದವಯವೇಭ್ಯೋ ವಿಕಾರಸಂಸ್ಥಾನೋಪಪತ್ತಿಃ, 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್' ಏವಂ ಸದೇವ ಸತ್ಯಮ್ ಇತಿ ಶ್ರುತೇಃ, ಏಕಮೇವಾದ್ವಿತೀಯಂ ಇದಂಬುದ್ಧಿಕಾಲೇಽಪಿ" (ಛಾಂ. ಭಾ. ೬-೧-೨) ಸರ್ಪಾದಿಗಳು ಅವಯವವಿಲ್ಲದೆಯೇ ಹಗ್ಗವೇ ಮುಂತಾದವುಗಳಲ್ಲಿ ಬುದ್ಧಿಯಿಂದ ಕಲ್ಪಿತವಾಗಿರುವ ಅವಯವಗಳಿಂದಲೇ ಹೇಗೆ ಉತ್ಪತ್ತಿಯಾಗುವವೋ, ಹಾಗೆಯೇ ಸದ್ಬ್ರಹ್ಮದ ಅವಯವಗಳಿಂದಲೇ ಕಾರ್ಯವಾದ ಭೂತಗಳುಂಟಾಗಬಹುದಾಗಿದೆ. ಏಕೆಂದರೆ ಬುದ್ಧಿಕಲ್ಪಿತವಾದ ಕಾರ್ಯವಲ್ಲದೆ, ಬೇರೆಯಾದ ನಿಜವಾದ ಕಾರ್ಯವೇ ಇರುವದಿಲ್ಲ. 'ಇದು' ಎಂದು ನಾವು ತಿಳಿಯುತ್ತಿರುವಾಗಲೂ ಕನಗೆರಡನೆಯದಿಲ್ಲದ, ಆತ್ಮತತ್ತ್ವವೊಂದೇ ಇರುತ್ತಿರುವದು. ಹಾಗಾದರೆ ಹಗ್ಗವು ಹಾವಿನಂತೆ ಕಾಣುತ್ತಿರುವಾಗ ಹಾವು ಅಸತ್ತೇ ಆಗಿರುವಂತೆ ಜಗತ್ತೆಂದು ನಾವು ಕಾಣುತ್ತಿರುವದೆಲ್ಲವೂ ಅಸತ್ತೇ ಆಯಿತಲ್ಲ?-ಎಂದರೆ ಅದಕ್ಕೆ ಆಚಾರ್ಯರು ಕೊಟ್ಟಿರುವ ಉತ್ತರವಿದು: "ನ| ಸತ ಏವ ದ್ವೈತಭೇದೇನ ಅನ್ಯಥಾಗೃಹ್ಯಮಾಣತ್ವಾತ್, ನಾಸತ್ತ್ವಂ ಕಸ್ಯಚಿತ್ ಕ್ವಚಿದಿತಿ ಬ್ರೂಮಃ| ಯಥಾ ಸತೋಽನ್ಯದ್ ವಸ್ತ್ವನ್ತರಂ ಪರಿಕಲ್ಪ್ಯ ಪುನಸ್ತಸ್ಯೈವ ಪ್ರಾಗುತ್ಪತ್ತೇಃ ಪ್ರಧ್ವಂಸಾಚ್ಚೋರ್ಧ್ವಮ್ ಅಸತ್ತ್ವಂ ಬ್ರುವತೇ ತಾರ್ಕಿಕಾಃ, ನ ತಥಾ ಅಸ್ಮಾಭಿಃ ಕದಾಚಿತ್ ಕ್ವಚಿದಪಿ ಸತೋಽನ್ಯದಭಿಧಾನಮ್ ಅಭಿಧೇಯಂ ವಾ ವಸ್ತು ಪರಿಕಲ್ಪ್ಯತೇ ಸದೇವ ತು ಸರ್ವಮ್ ಅಭಿಧಾನಮ್ ಅಭಿಧೀಯತೇ ಚ ಯದನ್ಯಬುದ್ಧ್ಯಾ.... ಯಥಾ ರಜ್ಜುರೇವ ಸರ್ಪಬುದ್ಧ್ಯಾ ಸರ್ಪ ಇತ್ಯಭಿಧೀಯತೇ ಯಥಾ ವಾ ಪಿಣ್ಡಘಟಾದಿ ಮೃದೋಽನ್ಯ

ಬುದ್ಧ್ಯಾ ಪಿಣ್ಡಘಟಾದಿಶಬ್ದೇನಾಭಿಧೀಯತೇ ಲೋಕೇ ; ರಜ್ಜುವಿವೇಕ ದರ್ಶಿನಾಂ ತು ಸರ್ಪಾಭಿಧಾನಬುದ್ಧೀ ನಿವರ್ತೇತೇ ಯಥಾ ಚ ಮೃದ್ವಿವೇಕ ದರ್ಶಿನಾಂ ಘಟಾದಿಶಬ್ದಬುದ್ಧೀ ತದ್ವತ್ ಸದ್ವಿವೇಕದರ್ಶಿನಾಂ ಅನ್ಯವಿಕಾರಶಬ್ದ ಬುದ್ಧೀ ನಿವರ್ತೇತೇ ||' (ಛಾಂ. ಭಾ. ೬-೩-೩) ಮಣ್ಣಿನಿಂದ ಗಡಿಗೆ, ಮಡಕೆ ಮುಂತಾದ ವಿಕಾರಗಳು ಆಗಿವೆ ಎಂದೇನೂ ಶ್ರುತಿಗೆ ಅಭಿಪ್ರಾಯವಿಲ್ಲ. ಮಣ್ಣಿನಿಂದ ಆಗಿವೆ ಎಂದು ಜನರು ತಿಳಿಯುವ ಕಾರ್ಯಗಳೆಲ್ಲ ಮಣ್ಣೇ, ಮಣ್ಣಿಗಿಂತ ವ್ಯತಿರಿಕ್ತವಾಗಿ ಏನೊಂದೂ ಇಲ್ಲ. ಹಾವು ಎಂದು ತಿಳಿಯುವದು, ಹಾವೆಂಬ ಶಬ್ದ-ಇವೆರಡೂ ಅವಿವೇಕಿಗಳಿಗೆ ಹಗ್ಗದಲ್ಲಿಯೇ ಉಂಟಾಗಿರುತ್ತವೆ; ಇದರಂತೆಯೆ ಬ್ರಹ್ಮದಿಂದಾಗಿರುವ ಭೂತಗಳೆಂಬಿವೂ ಶಬ್ದಮಾತ್ರವೇ, ಅವೆಲ್ಲವೂ ಜ್ಞಾನಿಗಳ ದೃಷ್ಟಿಯಿಂದ ಸದ್ಬ್ರಹ್ಮವೇ ಹೊರತು ಬೇರೆಯಲ್ಲ. ಮಾಯೆಯಿಂದ ಜಗತ್ತು ಬ್ರಹ್ಮದಕಾರ್ಯವೆಂತ ತೋರುತ್ತಿದೆ ಎಂದರೆ ಬ್ರಹ್ಮವೇ ನಿಜವಾಗಿದೆ, ಜಗತ್ತೆಂಬ ಶಬ್ದಬುದ್ಧಿಗಳು ಅವಿವೇಕಿಗಳಿಗೆ ಅದರಲ್ಲಿ ಉಂಟಾಗಿವೆ ಇಂದಿಷ್ಟೇ ಅರ್ಥ. ಇದೇ ವೇದಾಂತಿಗಳಿಗೆ ಸಮ್ಮತವಾಗಿರುವ ಕಾರ್ಯಕಾರಣವಾದ. ನಮ್ಮೆಗಳಿಗೆಲ್ಲ ಆತ್ಮನಾಗಿರುವ ಬ್ರಹ್ಮವು ತಾನಿದ್ದಂತೆಯೇ ಇದೆ; ಅದು ಜಗತ್ತಾಗಿಯೇ ಇಲ್ಲ. ನಾವುಮಾತ್ರ ನಿಜವಾಗಿ ಜಗತ್ತು ಉಂಟಾಗಿದೆ ಎಂದು ತಿಳಿದುಕೊಂಡಿರುತ್ತೇವೆ ; ಇಲ್ಲಿ ಬುದ್ಧಿಯನ್ನು ಸರಿಪಡಿಸಿಕೊಳ್ಳಬೇಕೇ ಹೊರತು ಜಗತ್ತನ್ನು ಕರಗಿಸಿ ಬ್ರಹ್ಮವಾಗಿ ಮಾಡಿಕೊಳ್ಳಬೇಕಾದದ್ದೇನೂ ಇಲ್ಲ.

ಇಲ್ಲಿ ಒಂದು ಶಂಕೆ : ಆತ್ಮನಿಗಿಂತ ಬೇರೆಯಾದ ಬುದ್ಧಿಯಾದರೂ ಎಲ್ಲಿದೆ? ರಜ್ಜುಸರ್ಪಾದಿಗಳಲ್ಲಿ ಹಗ್ಗವನ್ನು ಹಾವೆಂತ ತಿಳಿಯುವ ಬುದ್ಧಿಯಿದೆ ; ಇಲ್ಲಿಲ್ಲವಲ್ಲ ! ಶ್ರುತಿಯಲ್ಲಿ ರಜ್ಜುಸರ್ಪವೇ ಮುಂತಾದ ದೃಷ್ಟಾಂತಗಳಿಲ್ಲ; ಅಲ್ಲಿರುವದು ಮಣ್ಣುಮಡಕೆ- ಮುಂತಾದವುಗಳ ದೃಷ್ಟಾಂತವಲ್ಲವೆ ? ಹೀಗಿರುವದರಿಂದ ಮಾಯಿಕಕಾರ್ಯಕಾರಣವಾದವೇ ಇಲ್ಲಿ ವಿವಕ್ಷಿತವೆಂದು ಹೇಗೆ ನಂಬುವದು ? ಈ ಶಂಕೆ ಶುಷ್ಕತರ್ಕದಿಂದ ಆಗಿರುವ ಶಂಕೆ. ಆತ್ಮನು ಒಬ್ಬನೇ ಇದಾನೆ, ಅವನನ್ನು ನಾವು ಅನಾತ್ಮರೂಪದಿಂದಲೂ ಕಾಣುತ್ತಿದೇವೆ ಎಂಬುದು ಅನುಭವ; ಹೀಗಿರುವಲ್ಲಿ ಬರಿಯ ತರ್ಕದಿಂದ ಆಕ್ಷೇಪಮಾಡಿದರೆ ಹೇಗಾದೀತು ? ಮಣ್ಣುಮಡಕೆಗಳ ದೃಷ್ಟಾಂತದಲ್ಲಿಯೂ ಮಣ್ಣೇ ಮಡಕೆ ಮುಂತಾದ ರೂಪದಿಂದ ಕಾಣುತ್ತಿದೆಯೇ ಹೊರತು ಮಣ್ಣಿಗಿಂತ ಬೇರೆಯಾದ ಮಡಕೆಯೇ ಮುಂತಾದವುಗಳು ಬೇರೆ ಎಲ್ಲಿವೆ ? ಇದನ್ನು ನಾವು ಅನುಭವಕ್ಕೆ ಹೊಂದಿಸಿಕೊಂಡು ಮನನ ಮಾಡಬೇಕು. ದೃಷ್ಟಾಂತದಲ್ಲಿ ಮಣ್ಣಿಗೆ ಅವಯವಗಳಿವೆಯಾದ್ದರಿಂದ ಆತ್ಮನಿಗೆ ಆತ್ಮನಿಗಿಂತ ಬೇರೆಯಾಗಿ ಬುದ್ಧಿಯಿರಬೇಕಾಗುವದು-ಎಂದು ಕಲ್ಪಿಸುವದು ಒಣ ತರ್ಕವೇ ಸರಿ. ಒಬ್ಬ ಕುರುಡನಿಗೆ ಹಾಲು ಹೇಗಿದೆ ಎಂಬುದನ್ನು ತಿಳಿಸಿಕೊಡ ಬೇಕಾಗಿ ಕೊಕ್ಕರೆಯಂತೆ ಬೆಳ್ಳಗೆ ಇದೆ ; ಕೊಕ್ಕರೆಗೆ ಕುಹುಗೋಲಿನಂ

ಡೊಂಕಾಗಿರುವ ಕತ್ತಿದೆ-ಎಂದು ವಿವರಿಸಿ 'ಕುಡುಗೋಲು ಡೊಂಕೆಂದರೆ ಹೀಗೆ' ಎಂದು ತೋಳನ್ನು ಡೊಂಕುಮಾಡಿಕೊಂಡು ತೋರಿಸಲು 'ಮಗುವಿಗೆ ಇಷ್ಟು ದಪ್ಪ ಹಾಲು ಕುಡಿಸುತ್ತೀರಾ ?' ಎಂದು ಕೇಳಿದನಂತೆ! ದೃಷ್ಟಾಂತವನ್ನು ಯಾವ ಅಂಶದಲ್ಲಿ ಹೋಲಿಕೆಯನ್ನು ತಿಳಿಸುವದಕ್ಕೆ ಹೇಳಿದೆಯೋ ಅಷ್ಟುಮಾತ್ರ ವನ್ನೇ ಇಟ್ಟುಕೊಂಡು ಮನನಮಾಡಬೇಕು. ಆ ಕಥೆಯ ಕುರುಡನು ಬಣ್ಣದ ಹೋಲಿಕೆಯನ್ನು ಕೊಟ್ಟಿದೆ ಎಂಬುದನ್ನು ನಿಶ್ಚಯಿಸಲಾರದೆ ಇದ್ದದ್ದರಿಂದ, ತೋಳಿನಷ್ಟೇ ದಪ್ಪವಾಗಿದೆ, ಹಾಲು-ಎಂದು ತಿಳಿದಂತೆಯೇ ನಾವೂ ರಜ್ಜು ಸರ್ಪಾದಿದೃಷ್ಟಾಂತಗಳಲ್ಲಿ ಬುದ್ಧಿ ಬೇರೆಯಾಗಿರುವಂತೆ, ಆತ್ಮನಿಗಿಂತ ಬುದ್ಧಿಯು ಬೇರೆಯಾಗಿದೆಯೆಂದೇ ವೇದಾಂತಿಗಳು ಹೇಳುತ್ತಾರೆಂದು ಇಟ್ಟುಕೊಳ್ಳುವೆವು ; ಮಣ್ಣಿಗೆ ಅವಯವಗಳಿರುವಂತೆ ಆತ್ಮನಿಗೂ ಅವಯವಗಳಿರಬೇಕಾಯಿತು-ಎಂದೂ ತರ್ಕಿಸುವೆವು! ಇದೆಲ್ಲ ಸರಿಯಲ್ಲ. ಆತ್ಮನೊಬ್ಬನೇ ಅಖಂಡವಾಗಿರುವವನು ; ಅವನಲ್ಲಿಯೇ ಬುದ್ಧಿ, ಜಗತ್ತು-ಎಲ್ಲವೂ ಕಲ್ಪಿತವಾಗಿ ತೋರುತ್ತಿದೆ ಎಂಬುದೇ ಇಲ್ಲಿ ವಿವಕ್ಷಿತ.

ಮನುಷ್ಯನ ಬುದ್ಧಿಗೆ ಯಾವದೊಂದು ವಸ್ತುವನ್ನಾದರೂ ಮಿಕ್ಕ ವಸ್ತು ಗಳಿಂದ ಬೇರ್ಪಡಿಸಿ ತಿಳಿಯುವಷ್ಟು ಶಕ್ತಿ ಮಾತ್ರ ಇದೆ. ಆತ್ಮನ ವಿಷಯವಾಗಿ ವಿಚಾರಮಾಡುವಾಗಲೂ ಅದು ಘಟಪ್ರತ್ಯಯ, ಪಟಪ್ರತ್ಯಯ- ಮುಂತಾದವು ಗಳನ್ನು ಏರ್ಪಡಿಸಿಕೊಂಡು ಅರಿಯುತ್ತಿರುವಂತೆ 'ಆತ್ಮಪ್ರತ್ಯಯ'ವನ್ನು ಮಾಡಿ ಕೊಂಡೇ ಅರಿಯಬೇಕೆಂದು ಹವಣಿಸುತ್ತದೆ. ಆದರೆ ಆತ್ಮನು ಅಖಂಡಚಿನ್ಮಾತ್ರ ಸ್ವರೂಪನಾಗಿರುತ್ತಾನೆ, ಅವನನ್ನು ಅದು ಹೇಗೆತಾನೆ ಪ್ರತ್ಯಯಗಳಿಂದ ಅರಿ ತೀತು ? ಒಂದು ವಿಷಯವನ್ನು ಅರಿಯುವಾಗ ಅದಕ್ಕೆ ತಕ್ಕಂತೆ ಬುದ್ಧಿವೃತ್ತಿ ಯಾಗುವದು; ಆಗ ಮತ್ತೆ ಯಾವ ವೃತ್ತಿಗಳೂ ಇರುವದೇ ಇಲ್ಲ. ಮತ್ತೊಂದು ವೃತ್ತಿಯು ಹುಟ್ಟುವಾಗ ಈ ವೃತ್ತಿಯು ಹೋಗಿಬಿಡುತ್ತದೆ. ಹೀಗಿದ್ದರೂ ಬುದ್ಧಿಯು ತನ್ನ ಎಲ್ಲಾ ವೃತ್ತಿಗಳಿಂದಲೂ ಅರಿತದ್ದನ್ನು ಕೂಡಿಸಿಕೊಂಡು ಒಂದಾನೊಂದು ಅಭಿಪ್ರಾಯವನ್ನು ಕಲ್ಪಿಸಿಕೊಳ್ಳುತ್ತಿರುತ್ತದೆ. ಜಗತ್ತು ಒಂದು ಇದೆ, ಇದರಲ್ಲಿ ಅನೇಕ ಚೇತನಾಚೇತನವಸ್ತುಗಳಿವೆ, ಅವುಗಳು ಒಂದಕ್ಕಿಂತ ಒಂದು ಬೇರೆಬೇರೆಯಾಗಿರುತ್ತವೆ ; ಕೆಲಕೆಲವು ಸಂಬಂಧಗಳಿಂದ ಕೂಡಿರುತ್ತವೆ- ಎಂದು ಮುಂತಾಗಿ ಬುದ್ಧಿಯಲ್ಲಿ ನಾವು ಕಲ್ಪಿಸುತ್ತಿರುವದೆಲ್ಲ ಕಲ್ಪನಾಮಾತ್ರವೇ ಆಗಿರುತ್ತದೆ. ಚಿತ್ರಗಾರನು ಒಂದೇ ಮಟ್ಟದ ಭಿತ್ತಿಯಮೇಲೆ ಬೇರೆಬೇರೆಯ ಗಾತ್ರ, ಉದ್ದ, ಎತ್ತರ, ತಗ್ಗು, ತಿಟ್ಟು-ಮುಂತಾದ ಭಾವಗಳಾಗುವಂತೆ ಚಿತ್ರ ವನ್ನು ಬರೆಯುವದಿಲ್ಲವೆ ? ಹಾಗೆ ಈ ನಮ್ಮ ಬುದ್ಧಿಯು ಅಖಂಡವಾದ ಏಕ ಮೇವಾದ್ವಿತೀಯವಾದ ಆತ್ಮಚೈತನ್ಯವನ್ನು ಇಷ್ಟು ಚಿತ್ರವಿಚಿತ್ರವಾಗಿರುವ ಜಗ ತ್ತಿನ ರೂಪದಲ್ಲಿ ಕಲ್ಪಿಸಿಕೊಂಡಿರುತ್ತದೆ. ಇಲ್ಲಿ ನನ್ನಂತೆ ಅನೇಕರು ಜೀವರು

ಇರುತ್ತಾರೆ ; ಮನುಷ್ಯಪಶುಪಕ್ಷಿಕ್ರಿಮಿಕೀಟಾದಿರೂಪವಾಗಿರುತ್ತದೆ. 'ಹೊರಗೆ ಶಬ್ದಸ್ಪರ್ಶರೂಪರಸಗಂಧಾದಿಗಳಿಂದ ಕೂಡಿದ ವಸ್ತುಗಳಿವೆ, ಇವುಗಳನ್ನರಿಯುವ ಇಂದ್ರಿಯಗಳೂ ನನಗಿವೆ; ಈ ಶಬ್ದಾದಿಗಳ ಅನುಭವದಿಂದ ಆಗುತ್ತಿರುವ ಸುಖ ದುಃಖಗಳನ್ನು ನಾನು ಮನಸ್ಸಿನಲ್ಲಿ ಅನುಭವಿಸುತ್ತಿರುತ್ತೇನೆ' ಎಂದು ಮನುಷ್ಯನು ತನ್ನ ಬುದ್ಧಿಯಿಂದಲೇ ಬಗೆಬಗೆಯಾಗಿ ಕಲ್ಪಿಸಿಕೊಂಡು ಸಂಸಾರದಲ್ಲಿ ತೊಳಲುತ್ತಿರುತ್ತಾನೆ. ಕನಸಿನಲ್ಲಿಯೂ ಹೀಗೆಯೇ ಕಾಣುತ್ತಿರುತ್ತದೆಯಲ್ಲವೆ ? ಕನಸಿನಲ್ಲಿ ವಿಶಾಲವಾದ ಜಗತ್ತಿನ ಒಂದು ಭಾಗದಲ್ಲಿ ಅನೇಕರು ಸೇರಿ ಒಂದು ಮದುವೆಯೋ ಉತ್ಸವವೋ ಆದಂತೆ ಕಾಣುತ್ತಿದ್ದು ಎಚ್ಚರುತ್ತಲೂ ಅದೆಲ್ಲವೂ ಹುಸಿತೋರಿಕೆಯೇ ಎಂಬ ನಿಶ್ಚಯವಾಗುವಂತೆಯೇ ನಮ್ಮಲ್ಲಿ ಅವಿದ್ಯೆಯಿರುವವರೆಗೆ ಹೊರಗೆ ಈ ಜಗತ್ತಿದೆಯೆಂದೂ ನಾವು ಇದರಲ್ಲಿದ್ದು ಸಂಸಾರವನ್ನನುಭವಿಸುತ್ತಿರುವೆವೆಂದೂ ಭಾವಿಸಿಕೊಂಡಿರುತ್ತೇವೆ. ಆದರೆ ನಿಜವಾಗಿ ಏನೂ ಆಗಿಲ್ಲ.

ಅವಿದ್ಯೆಯಿಂದ ಹೊರಗೆ ಮಾಯಾಜಗತ್ತು ಕಾಣಿಸುತ್ತಿದೆಯೆಂದೂ ವಿದ್ಯೆಯಿಂದ ಅದು ಹೋಗುವದೆಂದೂ ಭಾವಿಸಿಕೊಳ್ಳಬಾರದು. ಈ ವಿದ್ಯಾವಿದ್ಯಾವಿಭಾಗವೂ ಜಗತ್ತು ತೋರಿ ಬಾಧಿತವಾಗುವದೆಂಬುದೂ ಎಲ್ಲವೂ ಅವಿದ್ಯೆಯೇ, ನಿಜವಾಗಿ ಆತ್ಮನು ಇದ್ದಂತೆಯೇ ಇರುತ್ತಾನೆಂಬುದೊಂದೇ ಪರಮಾರ್ಥ. ಒಬ್ಬ ಹುಡುಗನು ತಂದೆಯಿಂದ ಕೈಕಟ್ಟಿಸಿಕೊಂಡು, ಹುಸಿಯಾಗಿ ಅಳುವದಕ್ಕೆ ಪ್ರಾರಂಭಿಸಿದನಂತೆ ; ಆಮೇಲೆ ಕೈಕಾಲುಕಟ್ಟುಗಳನ್ನು ಬಿಚ್ಚಿಕೊಳ್ಳುವದಕ್ಕೆ ಆಗುವದಿಲ್ಲವೆಂಬುದನ್ನು ಕಂಡುಕೊಂಡು ನಿಜವಾಗಿಯೂ ಅಳುವದಕ್ಕೇ ಮೊದಲು ಮಾಡಿದನಂತೆ ! ಹೀಗೆಯೇ ನಮಗೆ ಜಗತ್ತಿನಲ್ಲಿ ಸತ್ಯಾನೃತವಿಭಾಗವೂ ಸುಖದುಃಖವಿಭಾಗವೂ ತೋರುತ್ತಿರುವದು– ಎಲ್ಲವೂ ಬುದ್ಧಿಕಲ್ಪಿತವಾಗಿದ್ದರೂ ನಮಗೆ ದುಃಖವಾಗುತ್ತಿರುವದು ಸುನಿಶ್ಚಿತವಾಗಿರುತ್ತದೆ. ವಾಸಿಷ್ಠದ ಹತ್ತುಜನರು ತಾವು ಇಂದ್ರರೆಂಬ ಭಾವನೆಯನ್ನು ಮಾಡಿಕೊಂಡು ಇಂದ್ರರಾದೆವೆಂದೇ ಸುಖವನ್ನನುಭವಿಸುತ್ತಿದ್ದರೆಂದೂ, ಒಬ್ಬ ತಪಸ್ವಿಯು ಅಪ್ಸರೆಯನ್ನು ಕಂಡು ಅದೇ ಭಾವನೆಯಿಂದ ತಪಃಶರೀರವನ್ನು ಬಿಟ್ಟು ಶರೀರಾಂತರವನ್ನು ಹೊಂದಿ ಮತ್ತೆ ವೈರಾಗ್ಯದಿಂದ ಆ ಕಲ್ಪಿತಶರೀರದಿಂದ ತಪಸ್ಸನ್ನು ಮಾಡುವದಕ್ಕಾರಂಭಿಸಿದನೆಂದೂ ಒಬ್ಬ ಭಿಕ್ಷುಕನಿಗೆ ಬೇರೆಬೇರೆಯಾದ ಸ್ವಪ್ನಾಂತರ್ಗತಸ್ವಪ್ನಗಳು ಆದವೆಂದೂ– ವರ್ಣಿಸಿ ಬರೆದಿರುವ ಆಖ್ಯಾನಗಳಿಗೆಲ್ಲ ಇದನ್ನು ತಿಳಿಸಿಕೊಡುವದರಲ್ಲಿಯೇ ತಾತ್ಪರ್ಯ. ದೃಶ್ಯವು ನಿಜವಾಗಿಲ್ಲವೇ ಇಲ್ಲ, ಬುದ್ಧಿಯ ವಾಸನೆಯಿಂದ ಹೀಗೆಲ್ಲ ಕಾಣುತ್ತಿರುತ್ತದೆ. ಅಷ್ಟೆ.

ಪ್ರಮಾತೃ, ಪ್ರಮಾಣ, ಪ್ರಮೇಯ –ಎಂದು ವಿಭಕ್ತವಾಗಿರುವ ಈ ಜಗತ್ತೆಲ್ಲವೂ ಆತ್ಮನಲ್ಲಿ ಅಧ್ಯಾಸಮಾತ್ರವಾಗಿರುತ್ತದೆ. ಇದನ್ನು ಅನುಭವಕ್ಕೆ ತಂದು

ಕೊಡುವದೇ ವೇದಾಂತಕ್ಕೆ ಉದ್ದೇಶವು. ದೇಹಾದಿಗಳೇ ತಾನೆಂಬ ಬುದ್ಧಿಯು ಹೇಗೆ ಈಗ ಗಟ್ಟಿಯಾಗಿರುವದೊ, ಹಾಗೆಯೇ ಅಷ್ಟೇ ಗಟ್ಟಿಯಾಗಿ ಆತ್ಮನಲ್ಲಿಯೇ ಆತ್ಮಬುದ್ಧಿಯುಂಟಾದರೆ, ಅಂಥವನು ಬೇಡವೆಂದರೂ ಸಂಸಾರದಿಂದ ಮುಕ್ತನಾಗುವನು- ಎಂದು ಉಪದೇಶಸಾಹಸ್ರಿಯಲ್ಲಿ ಆಚಾರ್ಯರು ಹೇಳಿರುತ್ತಾರೆ. ಜಗತ್ತು ಸತ್ಯವೆಂದು ತಿಳಿಯುವದೇ, ಜಗತ್ತಿನ ಹುಟ್ಟು; ಆಗ ಜಗತ್ತು ಕಾರ್ಯವೆನಿಸುವದು, ಆತ್ಮನು ಕಾರಣನೆನಿಸುತ್ತಾನೆ. ಶ್ರುತಿಯಲ್ಲಿ ಸೃಷ್ಟಿಯನ್ನು ಹೇಳಿರುವದು ನಿಜ. ಆದರೆ ಆ ಶ್ರುತಿಗೆ ಸೃಷ್ಟಿಯಲ್ಲಿ ತಾತ್ಪರ್ಯವೇನೂ ಇರುವದಿಲ್ಲ. ಇದನ್ನು ವೇದಾಂತಸಂಪ್ರದಾಯಜ್ಞರಾದ ಶ್ರೀಗೌಡಪಾದಾಚಾರ್ಯರವರು ಹೀಗೆಂದು ತಿಳಿಸಿಕೊಟ್ಟಿರುತ್ತಾರೆ :

ಮೃಲ್ಲೋಹವಿಸ್ಫುಲಿಙ್ಗಾದ್ಯೈಃ ಸೃಷ್ಟಿರ್ಯಾ ಚೋದಿತಾನ್ಯಥಾ ।
ಉಪಾಯಃ ಸೋಽವತಾರಾಯ ನಾಸ್ತಿ ಭೇದಃ ಕಥಞ್ಚನ ॥ ಗೌ. ಕಾ.

ಮಣ್ಣಿನಿಂದ ಮಡಕೆ, ಕುಡಿಕೆ-ಮುಂತಾದವುಗಳಾಗುವಂತೆಯೂ ಚಿನ್ನದಿಂದ ಬಗೆಬಗೆಯ ಒಡವೆಗಳಾಗುವಂತೆಯೂ ಅಗ್ನಿಯಿಂದ ಕಿಡಿಗಳು ಹಾರಿಬರುವಂತೆಯೂ ಆತ್ಮನಿಂದ ಸೃಷ್ಟಿಯಾಗಿರುವದೆಂದು ಶ್ರುತಿ ಹೇಳಿರುವದು, ಸೃಷ್ಟಿಯು ನಿಜವೆಂದೂ ಆತ್ಮನಿಗಿಂತ ಬೇರೆಯಾಗಿ ಚೇತನಾಚೇತನಾವಸ್ತುಗಳು ನಿಜವಾಗಿಯೂ ಇರುವವೆಂದೂ ತಿಳಿಸುವದಕ್ಕಲ್ಲ ; ಪರಮಾತ್ಮನೊಬ್ಬನೇ ನಿಜವಾಗಿರುತ್ತಾನೆ ಎಂಬ ತಿಳಿವಳಿಕೆಯನ್ನುಂಟುಮಾಡುವದಕ್ಕೋಸ್ಕರ ಮಾಡಿಕೊಂಡಿರುವ ಕಲ್ಪನೆಯದು- ಎಂಬುದು ಶ್ಲೋಕದ ಅಭಿಪ್ರಾಯ.

ಇದುವರೆಗೆ ಮಾಡಿರುವ ವಿಚಾರದ ಸಾರವಿದು ; ಕಾರ್ಯಕಾರಣವಾದದಲ್ಲಿ 'ಇದು ಉಪಾದಾನಕಾರಣ, ಇದು ಅದರ ಕಾರ್ಯ'-ಎಂದು ನಾವು ತಿಳಿಯುತ್ತಿರುವಾಗಲೂ ಕಾರಣವೇ ಕಾರ್ಯರೂಪದಿಂದ ತೋರುತ್ತಿರುತ್ತದೆ. ಕಾರಣಕ್ಕಿಂತ ವ್ಯತಿರಿಕ್ತವಾಗಿ ಕಾರ್ಯವು ನಿಜವಾಗಿರುವದೇ ಇಲ್ಲ. ಲೋಕದಲ್ಲಿ ಕಾಣುವ ಕಾರ್ಯಕಾರಣಭಾವವು ಕಾಲಾಪೇಕ್ಷವಾಗಿ ಕಾಣಬಹುದು. ಆದರೆ ಆತ್ಮನಿಂದ ಜಗತ್ತು ಉಂಟಾಗಿದೆ ಎಂಬುದು ಎಂದಿಗೂ ಹೀಗೆ ಕಾಲಾಪೇಕ್ಷವಲ್ಲ. ಏಕೆಂದರೆ ಕಾಲವೂ ಆತ್ಮನಿಂದ ಉಂಟಾಗಿರುತ್ತದೆ. ಕಾಲ, ಆಕಾಶ- ಮುಂತಾದ ಜಗತ್ತೆಲ್ಲವೂ ಆತ್ಮನಲ್ಲಿಯೇ ತೋರುತ್ತಿರುತ್ತದೆ ; ಅದು ತೋರುತ್ತಿರುವಾಗಲೂ ಆತ್ಮಸ್ವರೂಪದಿಂದಲೇ ಇರುತ್ತದೆ ಎಂಬುದನ್ನು ನಾವು ಅನುಭವದಿಂದ ಕಂಡುಕೊಳ್ಳಬಹುದು. ಆದ್ದರಿಂದ ಆತ್ಮನು ಕಾರಣನೆಂಬುದೂ ಜಗತ್ತು ಕಾರ್ಯವೆಂಬುದೂ ಬರಿಯ ಅಧ್ಯಾರೋಪಮಾತ್ರವೇ, ಆತ್ಮನೊಬ್ಬನೇ ಪರಮಾರ್ಥಸತ್ಯ.

---

# ೧೫. ಜೀವರುಗಳ ಉತ್ಪತ್ತಿ
(1— —62)

ಕಾರ್ಯಕಾರಣವಾದಗಳ ಪ್ರಭೇದಗಳನ್ನು ತಿಳಿಸಿ ವೇದಾಂತದಲ್ಲಿ ತೆಗೆದು ಕೊಂಡಿರುವ ಕಾರ್ಯಕಾರಣಪ್ರಕ್ರಿಯೆಯ ವೈಲಕ್ಷಣ್ಯವನ್ನು ತಿಳಿಸಿಕೊಟ್ಟಿದ್ದಾಯಿತು. ವೇದಾಂತದ ದೃಷ್ಟಿಯಿಂದ ಕಾರ್ಯವೆಂದರೆ ಅಧ್ಯಸ್ತವಾದದ್ದು, ಕಲ್ಪಿತವಾದದ್ದು. ಯಾವದರಲ್ಲಿ ಕಲ್ಪಿತವಾಗುತ್ತದೆಯೋ ಆ ಕಾರಣವು ಹಾಗೆಯೇ ಇದ್ದುಕೊಂಡಿರುತ್ತದೆ; ಅದೇ ಕಾರ್ಯದ ರೂಪದಲ್ಲಿ ಕಾಣುತ್ತಿರುತ್ತದೆ, ಕಾರ್ಯಕ್ಕೆ ಪ್ರಾಶಸ್ತ್ಯವನ್ನು ಕೊಟ್ಟು ಮಾತಾಡುವಾಗ ಅದು ಕಾರ್ಯ; ಅದರ ತತ್ತ್ವವೇನು ? –ಎಂದು ನೋಡಿದಾಗ ಅದು ಎಂದೆಂದಿಗೂ ಕಾರಣವೇ ಆಗಿರುತ್ತದೆ– ಎಂದು ತಿಳಿಸಿದ್ದಾಯಿತು.

ಈಗ ಒಂದು ಶಂಕೆ : ನಮಗೆ ಹೇಗೆ ಬೇಕೋ ಹಾಗೆ ದೃಷ್ಟಾಂತವನ್ನು ಕಲ್ಪಿಸಿಕೊಂಡು– ಹಗ್ಗವು ಹಗ್ಗವೇ ಆಗಿದ್ದು ಹಾವಾಗಿ ತೋರುವಂತೆ, ಕಪ್ಪೆಯ ಚಿಪ್ಪು ತನ್ನ ರೂಪದಲ್ಲಿಯೇ ಇದ್ದು ಬೆಳ್ಳಿಯಾಗಿ ಭ್ರಾಂತಿಯಿಂದ ತೋರುವಂತೆ– ಕಾರಣವು ತನ್ನ ರೂಪದಲ್ಲಿಯೇ ಇದ್ದುಕೊಂಡು ಕಾರ್ಯವಾಗಿ ತೋರುತ್ತದೆ ಎನ್ನಬಹುದೆ ? ಇದಕ್ಕೆ ಪರಿಹಾರವೇನೆಂದರೆ, ನಿಜವಾಗಿ ಉಪಾದಾನಕಾರಣವು ಕಾರ್ಯವಾಯಿತೆಂದು ನಾವು ಹೇಳುವ ಸಂದರ್ಭಗಳಲ್ಲೆಲ್ಲ ಕಾರಣವೇ ಕಾರ್ಯವಾಗಿ ತೋರುತ್ತಿದೆ ಎಂಬ ನಿಯಮವೇ ಇರುತ್ತದೆ. ಉದಾಹರಣೆಗೆ ನೋಡಿ. ಆಮ್ಲಜನಕ ಮತ್ತು ಜಲಜನಕ– ಇವೆರಡೂ ಸೇರಿ ನೀರಾಗಿದೆ –ಎಂದು ಭೌತಿಕಶಾಸ್ತ್ರಜ್ಞರು ತೋರಿಸಿಕೊಟ್ಟಿರುತ್ತಾರಷ್ಟೆ ? ಇಲ್ಲಿ ನೀರು ಎಂಬುದು ಹೊಸ ದ್ರವ್ಯ; ಅದರ ಗುಣಗಳು ಮೊದಲು ಸಂಯುಕ್ತವಾಗಿದ್ದ ಆಮ್ಲಜನಕ ಜಲಜನಕಗಳ ಗುಣಕ್ಕಿಂತ ಅತ್ಯಂತವಿಲಕ್ಷಣವಾಗಿರುತ್ತವೆ. ಆದರೂ ಇಲ್ಲಿ ಆಮ್ಲಜನಕ ಜಲಜನಕಗಳು ನಿಜವಾಗಿ ರೂಪಾಂತರವಾಗಿವೆಯೆ ? –ಎಂದು ವಿಚಾರಿಸಿದರೆ, ವ್ಯವಹಾರದ ದೃಷ್ಟಿಯಿಂದ ಹಾಗೆಂದೇ ಒಪ್ಪಬೇಕಾಗುತ್ತದೆ. ಇಲ್ಲಿ ಕಾರ್ಯವು ಕಾರಣಕ್ಕಿಂತ ತೀರ ವಿಲಕ್ಷಣವಾಗಿಯೇ ಕಾಣುತ್ತಿದೆ. ಆದರೂ ಶಾಸ್ತ್ರಜ್ಞರು ನೀರನ್ನು ವಿಶ್ಲೇಷಣಮಾಡಿ ಮತ್ತೆ ಆಮ್ಲಜನಕಜಲಜನಕಗಳ ರೂಪಕ್ಕೆ ತಿರುಗಿಸಿ ತೋರಿಸುತ್ತಾರೆ. ಆದ್ದರಿಂದ ಅಲ್ಲಿಯೂ ಕಾರಣವು ಅಚ್ಚಳಿಯದೆ ತನ್ನ ರೂಪದಲ್ಲಿಯೇ ಇದ್ದುಕೊಂಡು ಕಾರ್ಯರೂಪದಲ್ಲಿ ತೋರುತ್ತದೆ– ಎಂದು ಒಪ್ಪಬೇಕಾಯಿತು. ಹೀಗೆಯೇ ವಿಲಕ್ಷಣವಾದ ಕಾರ್ಯವು ಹೊಸದಾಗಿ ಉತ್ಪತ್ತಿಯಾಗಿದೆ ಎಂದು ನಮಗೆ ನಿಸ್ಸಂಶಯವಾಗಿರುವಾಗಲೂ ಕಾರಣವೇ ಆ ರೂಪದಿಂದ ಕಾಣುತ್ತದೆ ಎಂದು ಸಿದ್ಧವಾಗುತ್ತದೆ. ನೀರಿನಿಂದಾಗುವ ಅರ್ಥಕ್ರಿಯೆ ಬೇರೆ, ಅದರ ರೂಪವು ಬೇರೆ ; ಆಮ್ಲಜನಕವೂ ಜಲಜನಕವೂ ಅನಿಲಗಳು, ನೀರು ದ್ರವವಸ್ತು. ಆದ್ದರಿಂದ ಕಾರ್ಯವು ಮೊದಲು

ಇಲ್ಲದ್ದು ಹೊಸದಾಗಿ ಹುಟ್ಟಿತೆಂಬ ಅಸತ್ಕಾರ್ಯವಾದಕ್ಕೆ ಹೆಚ್ಚು ಬೆಂಬಲವಿರು ವಂತೆ ಇಲ್ಲಿ ತೋರುತ್ತಿದೆ. ಹೀಗಿದ್ದರೂ ನೀರಿನಲ್ಲಿ ಆಮ್ಲಜನಕ, ಜಲಜನಕ– ಇವೆರಡಲ್ಲದೆ ಮತ್ತೆ ಯಾವ ಹೊಸ ಪದಾರ್ಥವೂ ಇಲ್ಲವೆಂದು ಭೌತಿಕಶಾಸ್ತ್ರದಿಂದ ಸಿದ್ಧವಾಗಿರುವದರಿಂದ ವ್ಯವಹಾರದೃಷ್ಟಿಗೆ ಒಗ್ಗದಿದ್ದರೂ ಇಲ್ಲಿಯೂ ಬೇರೊಂದು ಹೊಸ ಪದಾರ್ಥವು ಹುಟ್ಟಿಲ್ಲವೆಂದೇ ಒಪ್ಪಬೇಕಾಗುತ್ತದೆ. ಗಾರುಡಿವಿದ್ಯೆಯವನು ಗಾಜಿನ ಪಾತ್ರೆಯಲ್ಲಿ ನೀರುಹಾಕಿ ಅದರಲ್ಲಿ ಒಂದುಬಗೆಯ ಕೆಮ್ಮಣ್ಣನ್ನು ಕದರು ತ್ತಾನೆ; ನಮಗೆಲ್ಲರಿಗೂ ಮಣ್ಣು ನೀರಿನಲ್ಲಿ ಕದರಿತೆಂದೇ ಭಾಸವಾಗುತ್ತದೆ. ಆದರೆ ಅವನು ಮತ್ತೆ ಪಾತ್ರೆಯಲ್ಲಿ ಕೈಹಾಕಿ ಒಣಮಣ್ಣಿನ ಹುಡಿಯನ್ನೇ ತೆಗೆದುತೋರಿಸಿ ದಾಗ ನಮಗೆ ಎಂಥ ಅಚ್ಚರಿ! ಮೇಣದ ಬಟ್ಟೆಯಮೇಲೆ ನೀರು ಬಿದ್ದಾಗ ಅದು ಒದ್ದೆಯಾಗಿರಬೇಕೆಂಬ ನಮ್ಮ ಊಹೆಯು, ಒಟ್ಟೆಯನ್ನು ಕೊಡವಿದಮಾತ್ರ ದಿಂದ ಅದು ಮೊದಲಿನಂತೆಯೇ ಇದ್ದದ್ದನ್ನು ಕಂಡಕೂಡಲೆ ಹಾರಿಹೋಗುತ್ತದೆ. ಅಲ್ಲವೆ? ಈ ದೃಷ್ಟಾಂತಗಳಿಂದ ಕಾರಣವು ತನಗಿಂತ ವಿಲಕ್ಷಣವಾದ ಕಾರ್ಯ ವಾಗಿ ಪರಿಣಮಿಸಿತೆಂದು ಭ್ರಾಂತಿಯಾದಾಗಲೂ ಕಾರ್ಯವೆಂಬುದು ಕಾರಣರೂಪ ದಿಂದಲೇ ಇರುತ್ತದೆಯೆಂದೂ ಕಾರ್ಯವೆಂಬುದು ಕಾರ್ಯಾವಸ್ಥೆಯಲ್ಲಿಯೂ ಇಲ್ಲವೆ ಇಲ್ಲವೆಂದೂ ಏರ್ಪಡುತ್ತದೆ. ಇನ್ನೊಂದು ದೃಷ್ಟಾಂತ. ಒಂದು ರೇಷ್ಮೆಯ ಶೀರೆ ಯನ್ನು ಕೊಳ್ಳುವಾಗ ಅದನ್ನು ಉಟ್ಟುಕೊಳ್ಳುವ ಹೆಣ್ಣುಮಗಳು ಅದರ ಆಕಾರದ ಕಡೆಗೇ ಲಕ್ಷ್ಯವನ್ನು ಇಟ್ಟು ಇದು ಇಷ್ಟು ಮೊಳವಿದೆ, ಇದರ ಅಂಚು ಹೀಗಿದೆ, ಸೆರಗು ಹೀಗಿದೆ– ಎಂದು ಮುಂತಾಗಿ ಲಕ್ಷಿಸಿ ಅದನ್ನು ಬಯಸುತ್ತಾಳೆ. ಆದರೆ ಮಾರುವಾತನೂ ಅದನ್ನು ಹಣಕೊಟ್ಟು ಕೊಳ್ಳುವಾತನೂ ಅದರ ತೂಕವೆಷ್ಟು? –ಎಂಬುದಿಷ್ಟನ್ನೇ ಲಕ್ಷ್ಯದಲ್ಲಿಟ್ಟಿರುತ್ತಾರೆ. ಅಲ್ಲವೆ? ಸೀರೆಯ ಆಕಾರವು ಬೇರೆ ಬೇರೆಯಾಗಿದ್ದರೂ ಅದರ ಅಂಚು, ಸೆರಗು– ಮುಂತಾದವು ಹೇಗೇ ಇದ್ದರೂ ತೂಕವು ಒಂದೇ ಆಗಿರಬಹುದು, ಆಗ ಅದರ ಬೆಲೆಯೂ ಒಂದೇ ಆಗಿರುತ್ತದೆ ಯಷ್ಟೆ? ಇಲ್ಲಿ ರೇಷ್ಮೆಗಿಂತ ವ್ಯತಿರಿಕ್ತವಾಗಿ ಸೀರೆ ಎಂಬುದು ಆಗ ಬೇರೆಯಾಗಿ ರುವದೇನು? ರೇಷ್ಮೆಗೇ ಅಲ್ಲದೆ, ಸೀರೆಗೂ ಬೇರೆಯ ಬೆಲೆಯನ್ನು ಯಾರಾದರೂ ಕಟ್ಟುತ್ತಾರೇನು? ಇಲ್ಲ. ಆದ್ದರಿಂದ ಶಬ್ದಸ್ಪರ್ಶರೂಪರಸಗಂಧರೂಪವಾಗಿರುವ ಪ್ರಪಂಚವು ಬ್ರಹ್ಮದಿಂದ ಹುಟ್ಟಿರುವದರಿಂದ ಇದು ಬ್ರಹ್ಮಕ್ಕಿಂತ ಬೇರೆಯೇ ಎಂದು ಎಷ್ಟೇ ಗಟ್ಟಿಯಾಗಿ ನಮಗೆ ನಂಬಿಕೆಯಾದರೂ ತತ್ತ್ವದೃಷ್ಟಿಯಿಂದ ಅದನ್ನು ನೋಡುವಾಗ ಪ್ರಪಂಚವೆಂಬುದು ಈಗಲೂ ಬ್ರಹ್ಮವೇ, ನಮ್ಮೆಲ್ಲರ ಆತ್ಮನೇ ಆಗಿರುತ್ತದೆ; ಆ ಆತ್ಮನಿಗಿಂತ ವ್ಯತಿರಿಕ್ತವಾಗಿ ಶಬ್ದಾದಿಗಳುಳ್ಳ ಪ್ರಪಂಚವು ಇಲ್ಲವೇ ಇಲ್ಲ– ಎಂಬುದೇ ಸಿದ್ಧಾಂತವಾಗುತ್ತದೆ; ಕಾರ್ಯವು ಉತ್ಪತ್ತಿಸ್ಥಿತಿಲಯ ಗಳೆಂಬ ಅವಸ್ಥೆಗಳಲ್ಲಿಯೂ ಕಾರಣವೇ ಆಗಿರುತ್ತದೆ; ಕಾರಣಕ್ಕಿಂತ ಬೇರೆಯಾದ ಕಾರ್ಯವೆಂಬುದು ನಿಜವಾಗಿ ಇಲ್ಲವೇ ಇಲ್ಲ, ಅದು ಕಾರಣದಲ್ಲಿ ಅಧ್ಯಸ್ತವಾಗಿರು

ತ್ತದೆ. ನಾವು ಕಾರಣವೆನ್ನುತ್ತಿರುವದೇ ಕಾರ್ಯವೆಂಬ ಹೆಸರನ್ನು ತಳೆದು ವ್ಯವಹಾರಕ್ಕೆ ಗೋಚರವಾಗುತ್ತಿದೆ ಎಂದೇ ನಿಶ್ಚಯಿಸಬೇಕಾಗುವದು.

ಇಲ್ಲಿ ಒಂದು ಶಂಕೆ : ಬ್ರಹ್ಮಾದಿಸ್ತಂಬಪರ್ಯಂತವಾಗಿ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳಿವೆ ಎಂದು ಪುರಾಣಗಳಲ್ಲಿ ವರ್ಣಿಸುತ್ತಾರೆ. ಇವರುಗಳು ಉತ್ಪತ್ತಿಯಾಗಿರುವದು ಸುಳ್ಳೆ ? ಜೀವರೇ ಉತ್ಪತ್ತಿಯಾಗಿಲ್ಲವೆಂದರೆ ವೇದಾಂತ ವನ್ನಾದರೂ ಯಾರಿಗೆ ಹೇಳಿಕೊಡಬೇಕು ? ಜೀವರುಗಳೆಲ್ಲ ಅಸತ್ಯ– ಎಂದರೆ ಯಾರುತಾನೆ ಒಪ್ಪಿಯಾರು ? ಇಂಡಿಯ, ಪಾಕಿಸ್ತಾನ, ಚೀನ, ರಷಿಯ– ಮುಂತಾದ ದೇಶಗಳಿವೆ ; ಇಂಡಿಯದಲ್ಲಿಯೇ ಇಂಗ್ಲಿಷಿನವರು, ಫ್ರೆಂಚರು, ಪೋರ್ಚುಗೀಸರು, ಮುಸಲ್ಮಾನರು– ಮುಂತಾದ ಜನಾಂಗಗಳು ನಮ್ಮನ್ನು ಆಳಿರುತ್ತಾರೆ. ಲೋಕದಲ್ಲಿ ಮನುಷ್ಯರಲ್ಲಿ ಅನೇಕ ಕುಲಗಳಿರುತ್ತವೆ ; ಅವರಲ್ಲಿ ಒಂದೇ ಕುಲದವರಲ್ಲಿಯೂ ಹುಡುಗರು, ಮುದುಕರು, ಹೆಂಗಸರು, ಗಂಡಸರು– ಎಂಬ ಪ್ರಭೇದಗಳಿವೆ ; ಇವರಲ್ಲಿ ಒಬ್ಬರೊಬ್ಬರ ಮನಃಪ್ರವೃತ್ತಿಗಳು ಒಂದೊಂದು ಬಗೆಯಾಗಿರುತ್ತವೆ. ತಂದೆ, ಮಗ. ಗಂಡ, ಹೆಂಡತಿ–ಇವರುಗಳಿಗೆ ಮನಸ್ಸಿನ ಒಲವುಗಳು ಬೇರೆಬೇರೆಯಾಗಿರುತ್ತವೆ. ಸುಹೃತ್ತು, ಮಿತ್ರ, ಅರಿ, ಉದಾಸೀನ, ಮಧ್ಯಸ್ಥ, ದ್ವೇಷ್ಯ, ಬಂಧು– ಎಂಬ ವೈಲಕ್ಷಣ್ಯಗಳು ಇರುಂದು ಸುಳ್ಳೆ ? ಜನರ ಮತಗಳು ಬೇರೆಬೇರೆ. ವೈದಿಕರ ಮತದಲ್ಲಿ ವೇದವೇ ಪ್ರಮಾಣ, ಕ್ರಿಸ್ತಿಯನರಿಗೆ ಬೈಬಲು, ಮುಸಲ್ಮಾನರಿಗೆ ಕುರಾನ್. ದೇವರು ಜಗತ್ತನ್ನು ಸೃಷ್ಟಿಸಿ ಅದರಲ್ಲಿ ಜೀವನಾಗಿ ಪ್ರವೇಶಿಸಿದನು ಎಂದು ವೈದಿಕರೆಂದರೆ ದೇವರು ತನ್ನ ಪ್ರತಿಬಿಂಬವಾಗಿ ಮನುಷ್ಯನನ್ನು ಸೃಷ್ಟಿಸಿದನು ಎಂದು ಕ್ರಿಸ್ತಿಯನರೂ ಒಂದೇ ಮಣ್ಣಿನಿಂದ ಎಲ್ಲಾ ಜನರನ್ನೂ ಸೃಷ್ಟಿಸಿದನೆಂದು ಮುಸಲ್ಮಾನರೂ ಎನ್ನುತ್ತಾರೆ. ಒಂದೊಂದು ಜನಾಂಗದವರ ರಾಜಕಾರಣವೇ ಬೇರೆಬೇರೆಯಾಗಿರುತ್ತದೆ. ಈ ಭೇದಗಳೆಲ್ಲ ಸುಳ್ಳೆ ? ಮನುಷ್ಯನಿಗೂ ಪ್ರಾಣಿಗಳಿಗೂ ಇರುವ ತಾರತಮ್ಯವೂ ಸುಳ್ಳೆ ? ಇವುಗಳನ್ನೆಲ್ಲ ಮನದಂದರೆ ಏಕತ್ವವಾದವು ಎಲ್ಲಿ ಉಳಿಯುತ್ತದೆ ?

ಜೀವರು ಬ್ರಹ್ಮದಿಂದ ಹುಟ್ಟಿದಾರೆಯೆ, ಇಲ್ಲವೆ ? ಜೀವರು ಬ್ರಹ್ಮಕ್ಕೆ ಸಂಬಂಧಪಟ್ಟಿದಾರೆಯೆ, ಅಥವಾ ಅನಾದಿಕಾಲದಿಂದಲೂ ಈಶ್ವರನಿಗಿಂತ ಬೇರೆ ಯೇ ಆಗಿದ್ದು ಈಶ್ವರಾಧೀನರಾಗಿರುತ್ತಾರೆಯೆ ?– ಇದನ್ನು ಶಾಸ್ತ್ರಕ್ಕೂ ನಮ್ಮ ಯುಕ್ತ್ಯನುಭವಗಳಿಗೂ ಹೊಂದಿಸಿ ತಿಳಿದುಕೊಳ್ಳಬೇಕಾದದ್ದು ಅವಶ್ಯ. ಏಕೆಂದರೆ ಶಾಸ್ತ್ರವು ಯುಕ್ತ್ಯನುಭವಗಳಿಗೆ ವಿರುದ್ಧವಾಗಿ ಎಂದಿಗೂ ಹೇಳಲಾರದು. ಶ್ರುತಿ ವಾಕ್ಯಗಳೇನೋ ತಟ್ಟನೆ ನೋಡಿದರೆ ಪರಸ್ಪರವಿರುದ್ಧವಾಗಿರುವಂತೆ ಕಾಣಿಸು ತ್ತಿವೆ :

(೧) ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಂಗಾ ವ್ಯುಚ್ಚರನ್ತ್ಯೇವಮೇವಾಸ್ಮಾ ಅಸ್ಮಾದಾತ್ಮನಃ ಸರ್ವೇ ಪ್ರಾಣಾಃ........ಸರ್ವ ಏತೇ ಆತ್ಮಾನೋ ವ್ಯುಚ್ಚರನ್ತಿ||

(೨) 'ನ ಜೀವೋ ಮ್ರಿಯತೇ' ( ಛಾಂ. ೬–೧೧–೩ ) 'ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ' (ಬೃ. ೪–೪–೨೫) 'ನ ಜಾಯತೇ ಮ್ರಿಯತೇ ತೇ ವಾ ವಿಪಶ್ಚಿತ್' (ಕ. ೧-೨-೧೮)

(೩) 'ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' (ಛಾಂ. ೬–೩–೨)

ಇಲ್ಲಿ ಕೊಟ್ಟಿರುವ ಶ್ರುತಿಗಳಲ್ಲಿ ಬೆಂಕಿಯಿಂದ ಕಿಡಿಗಳು ಹಾರಿಬಂದಿರುವಂತೆ ಬ್ರಹ್ಮದಿಂದ ಜೀವರು ಹುಟ್ಟಿರುವರೆಂದು ಮೊದಲನೆಯ ವಾಕ್ಯದಲ್ಲಿ ಹೇಳಿದೆ. ಜೀವನು ಹುಟ್ಟುವದಿಲ್ಲ, ಸಾಯುವದೂ ಇಲ್ಲ-ಎಂದು ಎರಡನೆಯ ಉದಾಹರಣೆಯಲ್ಲಿ ಹೇಳಿದೆ. ಬ್ರಹ್ಮವೇ ಜೀವನ ರೂಪದಿಂದ ಸೃಷ್ಟಿಯ ಒಳಗೆ ಹೊಕ್ಕಿರುವದೆಂದು ಮೂರನೆಯ ಉದಾಹರಣೆಯಲ್ಲಿದೆ. ಈ ಮೂರರಲ್ಲಿ ಯಾವದು ಸರಿ ? ಈ ಶ್ರುತಿಗಳು ಒಂದಕ್ಕೊಂದು ವಿರುದ್ಧವಾಗಿರುವದರಿಂದ ಇವುಗಳಿಗೆಲ್ಲ ಹೇಗೋ ಏಕವಾಕ್ಯತೆಯನ್ನು ಮಾಡಬೇಕು ; ಯುಕ್ತ್ಯನುಭವಗಳಿಗೂ ಹೊಂದುಗಡೆಯಾಗಬೇಕು.

ವೇದಾಂತದ ಸಂಪ್ರದಾಯವನ್ನು ಬಲ್ಲವರು ಇಲ್ಲಿ ಹೇಳುವದೇನೆಂದರೆ ಈ ಶ್ರುತಿಗಳಿಗೆಲ್ಲ ಒಂದೇ ಅಭಿಪ್ರಾಯವಿದೆ. ಜೀವನು ಹುಟ್ಟಿದಾನೆ, ಬ್ರಹ್ಮವು ಜೀವರೂಪದಿಂದ ಇಲ್ಲಿ ಒಳಹೊಕ್ಕಿದೆ– ಎಂಬ ವಾಕ್ಯಗಳಿಗೆ ಜೀವನು ಬ್ರಹ್ಮಕ್ಕಿಂತ ಅಭಿನ್ನನೇ, ಅದರಂತೆ ಚೈತನ್ಯಸ್ವರೂಪನೇ ಎಂದರ್ಥ. ಜೀವನು ಹುಟ್ಟುವದಿಲ್ಲ, ಸಾಯುವದಿಲ್ಲ ಎಂದು ಹೇಳುವ ಶ್ರುತಿಗಳು ಅವನು ಬ್ರಹ್ಮಸ್ವರೂಪನೇ ಎಂದು ಕಂಠೋಕ್ತವಾಗಿ ಹೇಳುತ್ತವೆ. ಇದನ್ನು ಯುಕ್ತಿಗೆ ಹೊಂದಿಸಿ ಶ್ರೀಗೌಡಪಾದಾಚಾರ್ಯರು ಹೇಳಿರುವದೇನೆಂದರೆ ;

ಆತ್ಮಾ ಹ್ಯಾಕಾಶವಜ್ಜೀವೈರ್ಘಟಾಕಾಶೈರಿವೋದಿತಃ |
ಘಟಾದಿವಚ್ಚ ಸಂಘಾತೈರ್ಜಾತಾವೇತನ್ನಿದರ್ಶನಮ್ ||

ಶ್ರುತಿಯಲ್ಲಿ ಜೀವರು ಬ್ರಹ್ಮದಿಂದ ಹುಟ್ಟುತ್ತಾರೆಂದು ಕೆಲವು ಕಡೆಗಳಲ್ಲಿ ಹೇಳಿರುವದು ನಿಜ. ಆದರೆ ಅದರ ಅಭಿಪ್ರಾಯವೇನೆಂದರೆ ಮಹಾಕಾಶದಿಂದ ಘಟಾಕಾಶಗಳು ಉತ್ಪತ್ತಿಯಾಗುವಂತೆ ಜೀವರು ಬ್ರಹ್ಮದಿಂದ ಹುಟ್ಟಿದಂತೆ ತೋರುತ್ತಾರೆ ; ನಿಜವಾಗಿ ಅವರು ಹುಟ್ಟುವದಿಲ್ಲ. ಆಕಾಶವು ಘಟಾಕಾಶಗಳಾಗಿ ಹುಟ್ಟುವದಕ್ಕಿಂತ ಮೊದಲು ಏನಿತ್ತು ? ಆಕಾಶವೇ ಅಲ್ಲವೆ ? ಗಡಿಗೆಯೊಳಗೆ ಘಟಾಕಾಶವಿರುತ್ತದೆ ; ಅದರಲ್ಲಿ ಅಕ್ಕಿಯನ್ನಾಗಲಿ ಬೇಳೆಯನ್ನಾಗಲಿ ತುಂಬಿ ಸುರಿಯಬಹುದು. ಆದರೆ ಗಡಿಗೆಯ ಆಕಾಶವನ್ನು ಹೊರಕ್ಕೆ ಸುರಿ–

ಎಂದರೆ ಆಗುವಂತಿಲ್ಲ. ಏಕೆಂದರೆ ಅದು ಮಹಾಕಾಶಕ್ಕಿಂತ ಬೇರೆಯಾಗಿರುವ ದಿಲ್ಲ. ಇಷ್ಟೇ ಅಲ್ಲ. ಘಟವೆಂದರೂ ಆಕಾಶದ ಕಾರ್ಯವೇ; ಅದೂ ಆಕಾಶ ಕ್ಕಿಂತ ಬೇರೆಯಿಲ್ಲ. ಎಲ್ಲವೂ ಮಹಾಕಾಶಮಾತ್ರವೇ ಆಗಿದ್ದು ಘಟಗಳೂ ಘಟಾಕಾಶಗಳೂ ಬೇರೆಬೇರೆಯಾಗಿ ತೋರುತ್ತಿರುತ್ತವೆ.

ಯಥೈಕಸ್ಮಿನ್ ಘಟಾಕಾಶೇ ರಜೋಧೂಮಾದಿಭಿರ್ಯುತೇ |
ನ ಸರ್ವೇ ಸಂಪ್ರಯುಜ್ಯನ್ತೇ ತದ್ವಜ್ಜೀವಾಃ ಸುಖಾದಿಭಿಃ || ಗೌ. ಕಾ. ೩-೫.

ಒಂದು ಘಟಾಕಾಶಕ್ಕೆ ಧೂಳು, ಹೊಗೆ-ಮುಂತಾದದ್ದು ಸೇರಿಕೊಂಡಿದ್ದರೆ ಎಲ್ಲಾ ಘಟಾಕಾಶಗಳಿಗೂ ಅವುಗಳ ಸಂಪರ್ಕವಾಗಿರುವದಿಲ್ಲ. ಹೀಗೆಯೇ ಜೀವರ ಸುಖಾದಿಗಳು ಅವರವರಿಗೇ ಸೇರಿರುತ್ತವೆ; ಒಬ್ಬರದು ಮತ್ತೊಬ್ಬರಿಗೆ ಸೇರಿರುವದಿಲ್ಲ-ನಿಜವಾಗಿ ನೋಡಿದರೂ, ಎಂದರೆ ಯಾವದೊಂದು ಘಟಾಕಾಶ ಕ್ಕೂ ಯಾವದೊಂದು ಧೂಳಿನ ಅಥವಾ ಹೊಗೆಯ ಸಂಪರ್ಕವೂ ಆಗಿರುವದೇ ಇಲ್ಲ; ಏಕೆಂದರೆ ಆಕಾಶವು ಅಸಂಸರ್ಗಿಪದಾರ್ಥವು. ಅದಕ್ಕೆ ಯಾವದೂ ಅಂಟಿಕೊಳ್ಳುವಹಾಗೆಯೇ ಇಲ್ಲ. ಇದರಂತೆ ಜೀವರಿಗೂ ಯಾವ ರಾಗದ್ವೇಷ ಸುಖದುಃಖಾದಿಗಳೂ ನಿಜವಾಗಿ ಅಂಟುವಹಾಗೇ ಇಲ್ಲ. ಸುಖದುಃಖಾದಿಗಳೆಲ್ಲ ಜ್ಞೇಯವಾದ ಅಂತಃಕರಣಕ್ಕೆ ಸೇರಿದವು, ಜ್ಞಾತೃವಾದ ಆತ್ಮನವಲ್ಲ. ಆದ್ದರಿಂದ ತನ್ನ ನಿಜವಾದ ಸ್ವರೂಪದಿಂದ ಎಲ್ಲರೂ ಬ್ರಹ್ಮವೇ ಆಗಿರುತ್ತಾರೆ. ಆಕಾಶ, ಘಟಾಕಾಶಗಳು-ಎಂದು ಎರಡು ಪಾಲಾಗಿಲ್ಲ; ಹೀಗೆಯೇ ಬ್ರಹ್ಮ, ಜೀವರುಗಳು -ಎಂದು ಎರಡು ಪಾಲಾಗಿಲ್ಲ. ಬ್ರಹ್ಮವೆಂದರೂ ಜೀವರೆಂದರೂ ಒಂದೇ; ತೋರುವಿಕೆಗೆ ಮಾತ್ರ ಜೀವರು ಬೇರೆಬೇರೆಯಾಗಿ ಹುಟ್ಟಿಸಾಯುತ್ತಾ ಸಂಸಾರ ವನ್ನನುಭವಿಸುತ್ತಾರೆ. ಅಷ್ಟೆ. ವಾಸಿಷ್ಠರಾಮಾಯಣದಲ್ಲಿ ಲವಣರಾಜನು ಮಂತ್ರಗಾರನ ಮಾಯೆಯಿಂದ ಮುಗ್ಧನಾಗಿ ಎಲ್ಲಿಯೋ ಸಂಚರಿಸಿ ಸಂಸಾರದ ಸುಖದುಃಖಗಳನ್ನು ಅನುಭವಿಸಿದಂತೆಯೇ ಜೀವರುಗಳಿಗೂ ಈ ಕಲ್ಪಿತ ಸಂಸಾರದ ಭೋಗವು ಆಗುತ್ತಿರುವದು. ಜೀವರು ಹುಟ್ಟುತ್ತಾರೆಂಬುದು ನಮ್ಮ ನಂಬಿಕೆ; ಶಾಸ್ತ್ರದೃಷ್ಟಿಯಿಂದ ಅವರು ಹುಟ್ಟಿಯೇ ಇಲ್ಲ. ನೋಡುವದಕ್ಕೆ ಈ ಏಳುಗೇಣಿನ ಶರೀರದೊಳಗೆ ಅಡಕವಾಗಿ ಸುಖದುಃಖಗಳನ್ನು ಭೋಗಿಸುವಂತೆ ಇದ್ದರೂ ಇದೇ ಜೀವನೇ ಮಹಾನ್, ಅಜಃ, ಆತ್ಮಾ, ಅಜರಃ, ಅಮೃತಃ, ಅಭಯಃ-ಈಶ್ವರನು 'ನಾನು ಬಹುವಾಗಿ ಹುಟ್ಟುವೆನು' ಎಂದು ಸಂಕಲ್ಪಿಸಿ ಜೀವರಾದನು ಎಂಬುದು ಅವಿದ್ಯಾಕಲ್ಪಿತಮಾಯೆಯ ದೃಷ್ಟಿಯಿಂದ ಹೇಳಿದ್ದು.

ರೂಪಕಾರ್ಯ-ಸಮಾಖ್ಯಾಶ್ಚ ಭಿದ್ಯನ್ತೇ ತತ್ರ ತತ್ರ ವೈ |
ಆಕಾಶಸ್ಯ ನ ಭೇದೋಽಸ್ತಿ ತದ್ವಜ್ಜೀವೇಷು ನಿರ್ಣಯಃ || ಗೌ. ಕಾ. ೩-೬.

ಸಂಘಾತಾಃ ಸ್ವಪ್ನವತ್ ಸರ್ವ ಆತ್ಮಮಾಯಾವಿಸರ್ಜಿತಾಃ |
ಆಧಿಕ್ಯೇ ಸರ್ವಸಾಮ್ಯೇ ವಾ ನೋಪಪತ್ತಿರ್ಹಿ ವಿದ್ಯತೇ || ಗೌ. ಕಾ. ೩-೧೦.

ಶರೀರಗಳು ರೂಪ, ಕಾರ್ಯ, ಹೆಸರು- ಇವುಗಳಿಂದ ಘಟಾಕಾಶಗಳಿಗೆ ಉಪಾಧಿಯಾಗಿರುವ ಗಡಿಗೆಗಳಂತೆ ಬೇರೆಬೇರೆಯಾಗಿರುತ್ತವೆ. ಅವು ತಿರ್ಯಕ್ಪ್ರಾಣಿಗಳು, ಮನುಷ್ಯರು, ಋಷಿಗಳು, ದೇವತೆಗಳು-ಎಂದು ತಾರತಮ್ಯದಿಂದ ಬೇರೆಬೇರೆಯಾಗಿ ಕಾಣಿಸುತ್ತಿದ್ದರೂ ಕನಸಿನಲ್ಲಿ ಕಾಣುವ ಶರೀರಗಳಂತೆಯೇ ಅವುಗಳೆಲ್ಲವೂ ಅವಿದ್ಯಾಕಲ್ಪಿತವಾದ ಮಾಯಾಶರೀರಗಳೇ ಎಂದು ತಿಳಿಯಬೇಕು. ಗಡಿಗೆಗಳು ಬೇರೆಬೇರೆಯಾಗಿ ತೋರಿದರೂ ಆಕಾಶದಲ್ಲಿ ಹೇಗೆ ಭೇದವಿಲ್ಲವೋ, ಆಕಾಶದಿಂದಲೇ ಆಗಿರುವ ಶರೀರಗಳಲ್ಲಿಯೂ ನಿಜವಾಗಿ ಹೇಗೆ ಭೇದವು ಇಲ್ಲವೇಇಲ್ಲವೋ ಕನಸಿನಲ್ಲಿ ಕಾಣುವ ಶರೀರಗಳು ಎಷ್ಟೇ ಭಿನ್ನಭಿನ್ನವಾಗಿ ಕಂಡರೂ ಅವೆಲ್ಲ ಹೇಗೆ ಹುಸಿತೋರಿಕೆಯೇ ಆದ್ದರಿಂದ ಹೇಗೆ ಆತ್ಮರುಗಳು ಅಲ್ಲಲ್ಲಿ ಬೇರೆಬೇರೆ ಎಂಬುದಿಲ್ಲವೋ, ಹಾಗೆಯೇ ಪರಮಾರ್ಥದೃಷ್ಟಿಯಿಂದ ನೋಡುವಾಗ ಜೀವರುಗಳು ಹುಟ್ಟುವದಾಗಲಿ, ಬೆಳೆಯುವದಾಗಲಿ, ಸಂಸಾರಸುಖದುಃಖಗಳನ್ನು ಅನುಭವಿಸುವದಾಗಲಿ ಶರೀರಾದಿಗಳನ್ನು ಪಡೆದಿರುವದಾಗಲಿ ಸಾಯುವದಾಗಲಿ ಇಲ್ಲವೇ ಇಲ್ಲ.

ಈಗ ಹೇಳಿರುವದು ಬರಿಯ ತರ್ಕವೊ, ಅನುಭವಕ್ಕೂ ಹೊಂದುತ್ತದೆಯೊ? ನಾವೆಲ್ಲರೂ ನಿಜವಾಗಿ ಬ್ರಹ್ಮಸ್ವರೂಪರೆ? ಉಪಾಧಿಗಳಿಂದ ಮಾತ್ರವೇ ಜೀವರಿಗೆ ಭೇದವಿದೆಯೆ? ಉಪಾಧಿಗಳಾದ ಶರೀರಾದಿಗಳು ಬರಿಯ ತೋರಿಕೆಯೆ? ನಮ್ಮ ಸ್ವರೂಪವು ಕಾರ್ಯಕಾರಣವಿಲಕ್ಷಣವಾದ ಬ್ರಹ್ಮವೆ? 'ತತ್ತ್ವಮಸಿ' ಎಂದು ಶ್ರುತಿ ಹೇಳುತ್ತದೆ. ಆದರೆ ಹೀಗೆ ಇರಬೇಕಲ್ಲ! ಇದ್ದರೆ ಇದಕ್ಕಿಂತ ಹೆಚ್ಚಿನ ಐಶ್ವರ್ಯವು ಯಾವದೂ ಇಲ್ಲ. ಇದೆಲ್ಲ ಅನುಭವಾನುಸಾರವಾಗಿದೆಯೆ?- ಎಂಬುದನ್ನೀಗ ವಿಚಾರಿಸಬೇಕಾಗಿದೆ.

---

## ೧೬. ಪಂಚಕೋಶಪ್ರಕ್ರಿಯೆ

( 2—8—62 )

ಆತ್ಮನಿಂದ ಜಗತ್ತೂ ಜೀವರೂ ಹುಟ್ಟಿರುತ್ತಾರೆಂಬುದು ಸರಿಯಾದ ತಿಳಿವಳಿಕೆಯಲ್ಲ. ಹಾಗೆಂಬುದು ಅಧ್ಯಾಸಮಾತ್ರ, ಬರಿಯ ತೋರಿಕೆ, ಭ್ರಾಂತಿ, ಅವಿಭಕ್ತವಾಗಿರುವ ಆತ್ಮವಸ್ತುವೊಂದೇ ವಿಭಕ್ತವಾಗಿರುವಂತೆ ಕಾಣುತ್ತದೆ. ಇದು ಭೌತಿಕಶಾಸ್ತ್ರಜ್ಞರಂತೆ ಪರೀಕ್ಷೆಮಾಡಿ (experiment) ನೋಡುವ ವಿಷಯವಲ್ಲ. ಒಂದು ವಿಚಾರವು ಮನಸ್ಸಿಗೆ ಹೊಳೆದರೆ ಅದರಿಂದ ಇನ್ನೊಂದನ್ನು ತರ್ಕದಿಂದ ಸಿದ್ಧಮಾಡಬಹುದು; ಉದಾಹರಣೆಗೆ 'ಹಿರಿಯ ಹೆಂಡತಿಗೆ ಗಂಡನಲ್ಲಿ

ಭಕ್ತಿ' ಎಂದರೆ ಕಿರಿಯ ಹೆಂಡತಿ ಹೇಗೆ? ಎಂಬ ವಿಚಾರವು ಹುಟ್ಟುವದು. ಕಾಲ ದೇಶನಿಮಿತ್ತಗಳಿಗೆ ಒಳಪಟ್ಟು ತರ್ಕವು ಏರ್ಪಡುತ್ತದೆ. ಕ್ಯಾಂಟ್ ಎಂಬ ಪಾಶ್ಚಾತ್ಯತತ್ತ್ವವಿಚಾರಕನು ಮನಸ್ಸಿಗೆ ಇಂತಿಷ್ಟು ಆಕಾರಗಳಲ್ಲಿಯೇ ವಿಚಾರ ಮಾಡಬೇಕೆಂಬ ನಿಯಮವಿದೆ ಎಂದು ಗೊತ್ತುಪಡಿಸಿರುತ್ತಾನೆ ; ಆ ಆಕಾರ ಗಳನ್ನು ಬಿಟ್ಟರೆ ಬುದ್ಧಿಗೆ ತರ್ಕವನ್ನು ಮಾಡುವದಕ್ಕೆ ಬರುವದೇ ಇಲ್ಲ. ಒಬ್ಬನು 'ಲಕ್ಕೋಟೆಯ ಪ್ರಶ್ನೆಯನ್ನು ಹೇಳುತ್ತೇನೆ : ನೀವು ಮನಸ್ಸಿನಲ್ಲಿ ಕುರಿತದ್ದನ್ನು ಬರೆದುಕೊಂಡು ಕೇಳಿರಿ, ಅದಕ್ಕೆ ಉತ್ತರಬರೆದಿಡುತ್ತೇನೆ'–ಎಂದು ಪ್ರತಿಜ್ಞೆಮಾಡಿ ದ್ದನ . ಒಬ್ಬ ಶಾಸ್ತ್ರಿಗಳು 'ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಮೊದಲು ಹೇಳಿದರೆ ಆಮೇಲೆ ನನ್ನ ಪ್ರಶ್ನೆಗಳನ್ನು ಓದುತ್ತೇನೆ' ಎಂದರು. ಅವನು ಕಲ್ಪಿಸಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವವನಾದ್ದರಿಂದ 'ಇಬ್ಬರು', 'ಆರು ತಿಂಗಳಿಗೆ'– ಎಂದು ಉತ್ತರವನ್ನು ಓದಿದನು. ಪ್ರಶ್ನೆಗಳು ಹೀಗಿದ್ದವು : 'ಬಂಜೆಗೆ ಎಷ್ಟು ಮಕ್ಕಳು ? ನಂದಿಬೆಟ್ಟವು ಬೆಂಗಳೂರು ಪೇಟೆಯ ಚೌಕಕ್ಕೆ ಯಾವಾಗ ಬರುವದು ?' ಇಲ್ಲಿ ಪ್ರಶ್ನೆಯು ಸಂಖ್ಯೆ, ಕಾಲ– ಇವುಗಳ ವಿಷಯವನ್ನು ಕುರಿತದ್ದೆಂಬುದನ್ನು ಅವನು ಸರಿಯಾಗಿ ಊಹಿಸಿದನು ; ಆದರೆ ವಸ್ತುವೃತ್ತಕ್ಕೆ ತರ್ಕವು ಹೊಂದುಗೆಯಾಗಿರ ಲಿಲ್ಲ. ವಸ್ತುಸ್ವಭಾವ, ತರ್ಕ– ಇವುಗಳು ಒಂದಕ್ಕೊಂದು ವಿರುದ್ಧವಾದರೆ ವಸ್ತು ಸ್ವಭಾವಕ್ಕೇ ಹೆಚ್ಚು ಬೆಲೆ ; ತರ್ಕವನ್ನು ಹೇಗೋ ಮಾಡಿ ಅದಕ್ಕೇ ಹೊಂದಿಸಿ ಕೊಳ್ಳಬೇಕು. ಆದ್ದರಿಂದಲೇ "ನ ಹಿ ದೃಷ್ಟೇ ಅನುಪಪನ್ನಂ ನಾಮ" ಕಂಡಿರು ವದಕ್ಕೆ ಹೊಂದುವದಿಲ್ಲವೆಂಬುದೇ ಇಲ್ಲ– ಎಂಬ ನ್ಯಾಯವನ್ನು ಬಲ್ಲವರು ಕಲ್ಪಿಸಿ ಕೊಂಡಿರುತ್ತಾರೆ.

ಜೀವನು ಬ್ರಹ್ಮದಿಂದ ಹುಟ್ಟಿದಾನೆಂದರೆ ಅವನು ನಿಜವಾಗಿ ಈಗಲೂ ಬ್ರಹ್ಮವೇ ಆಗಿರುತ್ತಾನೆ ಎಂದು ಅಭಿಪ್ರಾಯ. ಇದನ್ನು ವೇದಾಂತಿಗಳು 'ಪಂಚ ಕೋಶಪ್ರಕ್ರಿಯೆಯಿಂದಲೂ ತಿಳಿಸಿಕೊಡುತ್ತಾರೆ. ಪಂಚಕೋಶಪ್ರಕ್ರಿಯೆ, ಅವಸ್ಥಾತ್ರಯ– ಎಂಬ ಮಾತು ವೇದಾಂತದ ಮಾತನ್ನಾಡುವವರೆಲ್ಲರ ಬಾಯಿ ಯಲ್ಲಿಯೂ ನಲಿದಾಡುತ್ತಿರುತ್ತದೆ ; ವೇದಾಂತ, ಜ್ಯೋತಿಷ, ವೈದ್ಯ, ಸಂಗೀತ– ಇವುಗಳನ್ನು ಅರಿಯೆನೆಂಬವನು ಯಾವನಿದಾನೆ? ಅನೇಕ ವೇದಾಂತಿಗಳು 'ಆತ್ಮನು ಪಂಚಕೋಶವಿಲಕ್ಷಣನು; ಅವಸ್ಥಾತ್ರಯಸಾಕ್ಷಿ'–ಎಂದು ಸರಾಗವಾಗಿ ಹೇಳುತ್ತಿರು ತ್ತಾರೆ. 'ನಾಲ್ಕು ವೇದಗಳನ್ನು ಬಲ್ಲವನಿಗೆ ಈ ದಾನ' ಎಂದಾಗ ನನಗೆ ಚತು ರ್ವೇದದ ತಿಳಿವಳಿಕೆಯಿದೆ ; ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ– ಇವೇ ನಾಲ್ಕು ವೇದಗಳು ಎಂದು ಒಬ್ಬನು ಹೇಳಿದನಂತೆ ! ಹಾಗೆಯೇ ಅನ್ನಮಯಾದಿಪಂಚಕೋಶಗಳ ಹೆಸರನ್ನು ಹೇಳಿದರೆ ಸಾಲದು; ಅವುಗಳ ಸ್ವರೂಪ ವನ್ನೂ ಆ ಕೋಶಗಳಿಂದ ಆತ್ಮನ ಪರಮಾರ್ಥರೂಪವನ್ನು ಹೇಗೆ ವಿವೇಚಿಸಿಕೊಳ್ಳ

ಬೆ ಕೆಂಬುದನ್ನೂ ಅನುಭವಕ್ಕೆ ತಂದುಕೊಂಡಿರಬೇಕು ; ಆಗ ಈ ಪ್ರಕ್ರಿಯೆಯ ಮಹತ್ತ್ವವು ನಮಗೆ ಚೆನ್ನಾಗಿ ಮನವರಿಕೆಯಾಗುವದು.

ತೈತ್ತಿರೀಯೋಪನಿಷತ್ತಿನಲ್ಲಿ ಈ ಪ್ರಕ್ರಿಯೆಯಿಂದ ಆತ್ಮಸ್ವರೂಪವನ್ನು ತಿಳಿಸಿಕೊಟ್ಟಿರುತ್ತದೆ. ಬ್ರಹ್ಮದಿಂದ ಆಕಾಶ, ವಾಯು, ಅಗ್ನಿ, ಅಪ್ಪು, ಪೃಥಿವಿ, ಭೂಮಿ, ಮರಗಿಡಗಳು, ಪೈರು ಪಚ್ಚೆ, ಅನ್ನ, ಮನುಷ್ಯ– ಈ ಕ್ರಮದಲ್ಲಿ ಮನು ಷ್ಯನು ಹುಟ್ಟಿರುತ್ತಾನೆ. ಈ ಮನುಷ್ಯನೆಂಬುವನು ಯಾರು? ಕೈಕಾಲು, ಎಡಬಲ ಪಕ್ಕಗಳು– ಇವುಗಳಿಂದ ಕೂಡಿರುವಾತನೇ. ಇವನನ್ನು ಅನ್ನಮಯ (ಅನ್ನದ ವಿಕಾರವಾಗಿರುವಾತನು) ಎನ್ನಬಹುದು. ಅನ್ನವನ್ನೇ ತಿಂದು ಅನ್ನದಿಂದ ಬೆಳೆದು ಕೊಂಡಿರುತ್ತಾನೆ. ಎಷ್ಟೋ ಜನ ಊಟದ ವೇಳೆಯಲ್ಲಿ ಅದು, ಇದು– ಹರಟೆಹೊಡೆ ಯುತ್ತಿದ್ದು ತಮಗೆ ಬಡಿಸಿದ ಅನ್ನವನ್ನು ತಿಂದು ಕೈತೊಳೆದುಕೊಳ್ಳುತ್ತಾರಷ್ಟೆ? ಅವರು ಊಟಮಾಡುವದಕ್ಕಿಂತ ಮೊದಲು ಎಲೆಯಮೇಲೆ ಬಡಿಸಿದ ಅನ್ನವು ಅನಾತ್ಮ, ಅವರ ಸ್ವರೂಪವಲ್ಲ; ಆದರೆ ಊಟವಾದ ಬಳಿಕ ಅವರನ್ನು ಆ ಭಕ್ಷ್ಯದ ಸಮೇತವಾಗಿಯೇ 'ಒಬ್ಬ ಮನುಷ್ಯ' ಎಂದು ಭಾವಿಸುತ್ತೇವೆ. ಉಂಡವನು ಭಕ್ಷ್ಯ ಭೋಜ್ಯಗಳನ್ನು ಸಾತ್ಮ್ಯವಾಗಿ ಮಾಡಿಕೊಂಡು ದೇಹವು ನಾನೇ, ನಾನೇ ದೇಹವು– ಎಂದುಕೊಳ್ಳುತ್ತಾನೆ. ಇದೆಲ್ಲ ಅನ್ನವು ಮಾತ್ರವೇ–ಎಂಬುದು ಮಾತ್ರ ವ್ಯವಹಾರ ದಲ್ಲಿ ಹೊಳೆಯುವದಿಲ್ಲ. ಅದೇ ಮನುಷ್ಯನು ಕೆಲವು ಕಾಲ ಬದುಕಿದ್ದು, ಅಚಲ ನಾಗಿ ಬಿದ್ದು ಉಸಿರಾಡದೆ ಇರುವಾಗ ಅದನ್ನು 'ಶವ' ಎನ್ನುತ್ತೇವೆ. ಹೀಗೆ ನಮ್ಮ ಶರೀರಗಳು ಅನ್ನದಿಂದ ಹುಟ್ಟಿ, ಅನ್ನದಲ್ಲಿಯೇ ಬೆಳೆದು ಅನ್ನವನ್ನೇ ಸೇರು ತ್ತವೆ ; ಅನ್ನವೇ ಅನ್ನವನ್ನು ತಿನ್ನುತ್ತದೆ. ಆದ್ದರಿಂದ ಅದು ಅತ್ತೃವೂ ಆದ್ಯವೂ ಆಗಿರುತ್ತದೆ, ಆದ್ದರಿಂದಲೇ ಅದಕ್ಕೆ ಅನ್ನವೆಂದು ಹೆಸರು. ಇಲ್ಲಿ ನಿಜವೇನು ? ನಾನು, ನೀನು, ಅವನು– ಎಂಬ ಭೇದಭಾವನೆಯು ತಪ್ಪು ; ನಿಜವಾಗಿ ಅನ್ನದ ರಾಶಿಯು ಎಲ್ಲೆಲ್ಲಿಯೂ ಇದೆ, ಅನ್ನಕ್ಕೆ ಇಲ್ಲಿಯವರೆಗೆ ಎಂಬ ಎಲ್ಲೆಕಟ್ಟೇ ಇರುವ ದಿಲ್ಲ. ಒಂದು ಮರದ ಕೊಂಬೆಯನ್ನು ಮಾತ್ರ 'ಮರ'ವೆಂದು ತಿಳಿಯುವದು ಹೇಗೆ ಸರಿಯಲ್ಲವೋ ಹಾಗೆಯೇ ಒಂದೇ ಶರೀರದಲ್ಲಿ 'ನಾನು' ಎಂಬ ಬುದ್ಧಿ ಬರುವದಕ್ಕೆ ಕಾರಣವಿಲ್ಲ. ಇಡಿಯ ಭೌತಿಕಸಮುದ್ರದಲ್ಲಿ ಒಬ್ಬೊಬ್ಬನೂ ಒಂದು ದ್ವೀಪದಂತೆ ಇದ್ದಾನೆ, ಒಬ್ಬೊಬ್ಬನಿಗೂ ಹೇಗೋ ಅದರ ಒಂದು ಭಾಗದಲ್ಲಿ ಯೇ 'ನಾನು' ಎಂಬ ಪರಿಚ್ಛಿನ್ನವಾದ ಅಭಿಮಾನವುಂಟಾಗಿಬಿಟ್ಟಿರುತ್ತದೆ. ಸರಿಯಾಗಿ ನೋಡಿದರೂ, ನಾವೆಲ್ಲರೂ ಅನ್ನಜರು, ಅನ್ನದಿಂದ ಜೀವಿಸುತ್ತಿರುವೆವು; ಕೊನೆಯಲ್ಲಿ ಅನ್ನವನ್ನು ಸೇರಿಕೊಳ್ಳುವೆವು. ನಮ್ಮ ಆತ್ಮನು ಈ ಒಟ್ಟು ಅನ್ನದ ರಾಶಿಗೇ ಆತ್ಮನು. ಆದ್ದರಿಂದ ಈ ಶರೀರದಲ್ಲಿ 'ನಾನು' ಎಂಬ ಬುದ್ಧಿಯಿರುವಂತೆ, ಮತ್ತೊಂದು ಶರೀರದಲ್ಲಿಯೂ ಅದೇ ಬುದ್ಧಿಯುಂಟಾದರೆ ನಿಜಕ್ಕೆ ಹತ್ತಿರವಾದೇವು

ವಿವೇಕಾನಂದರಿಗೆ ರಾಮತೀರ್ಥರು ತಮ್ಮ ಪೂರ್ವಾಶ್ರಮದಲ್ಲಿ ಒಂದು-ಚಿನ್ನದ ಗಡಿಯಾರವನ್ನು ಕೊಟ್ಟರಂತೆ ; 'ಇದನ್ನು ಈ ಜೇಬಿನಲ್ಲಿಯೇ ಇಟ್ಟುಕೊಂಡು ಭೋಗಿಸುವೆನು' ಎಂದು ವಿವೇಕಾನಂದರು ರಾಮತೀರ್ಥರ ಜೇಬಿನಲ್ಲಿಯೇ ಅದನ್ನು ಇಟ್ಟರಂತೆ ! ಹೀಗೆ ಸ್ಥೂಲಸಮಷ್ಟ್ಯುಪಾಧಿಕನಾದ ಆತ್ಮನೇ ನಾನು –ಎಂಬ ಬುದ್ಧಿಯನ್ನು ಸಂಪಾದಿಸಿಕೊಂಡರೆ ಅನ್ನಮಯಾತ್ಮನ ಅರಿವಾದಂತೆ ಆಯಿತು. ಈ ದೃಷ್ಟಿಯಿಂದ ಅನ್ನವೇ ಬ್ರಹ್ಮವು. 'ಅನ್ನಬ್ರಹ್ಮವನ್ನು ಉಪಾಸನೆ ಮಾಡಿರಿ ! ನಿಮಗೆ ಪ್ರಬಲವಾದ ಅನ್ನವು ಸಿಕ್ಕುವದು, ದೀಪ್ತಾಗ್ನಿಯುಳ್ಳ ಅನ್ನಾದರಾಗುವಿರಿ' ಎಂದು ಶ್ರುತಿಯಲ್ಲಿ ಅನ್ನಬ್ರಹ್ಮೋಪಾಸನೆಯನ್ನು ಕೊಂಡಾಡಿದೆ.

ಈಗ ಈ ಸ್ಥೂಲದೃಷ್ಟಿಯನ್ನು ಬಿಟ್ಟು, ಇನ್ನೂ ಸ್ವಲ್ಪ ಒಳಹೊಕ್ಕು ವಿಚಾರಮಾಡಬಹುದು. ಈ ಅನ್ನಮಯವಾದ ಶರೀರಗಳಲ್ಲಿ–ಮನುಷ್ಯಮಾತ್ರದವರ ಶರೀರದಲ್ಲಿ ಎಂದಲ್ಲ, ಎಲ್ಲಾ ಜೀವರುಗಳ ಶರೀರದಲ್ಲಿಯೂ–ಪ್ರಾಣಶಕ್ತಿಯು ಓತಪ್ರೋತವಾಗಿದೆ–ಎಂಬುದನ್ನು ಲಕ್ಷಿಸಿದರೆ ನಾವು ಅನ್ನಮಯರೆಂಬುದಕ್ಕಿಂತ ಪ್ರಾಣಮಯರೆಂಬುದೇ ಹೆಚ್ಚು ನಿಜವೆಂದು ಮನವರಿಕೆಯಾಗುತ್ತದೆ. ಮೇಲು ಮೇಲೆ ಕಾಣುವ ಶರೀರವನ್ನು ನಾನೆಂದು ತಿಳಿಯುವದಕ್ಕಿಂತಲೂ ಇದರಲ್ಲಿ ತುಂಬಿರುವ ಕ್ರಿಯಾಪ್ರಧಾನವಾದ ಪ್ರಾಣವೇ ನಾನೆಂದು ತಿಳಿಯುವವರು ಹೆಚ್ಚು ಸೂಕ್ಷ್ಮದೃಷ್ಟಿಯುಳ್ಳವರಾಗಿರುತ್ತಾರೆ. ಪ್ರಾಣವೆಂದರೆ ಈ ನನ್ನ ಶರೀರದ ಒಳಗಿರುವ ಆಧ್ಯಾತ್ಮಿಕವಾಯು ಎಂದು ಬಗೆಯಬಾರದು. ಏಕೆಂದರೆ ಪ್ರಾಣವು ಎಲ್ಲಾ ಪ್ರಾಣಿಗಳಿಗೂ ಸಮಾನವಾಗಿರುತ್ತದೆ. ಆ ಪ್ರಾಣವೇ ನಾನು, ಪ್ರಾಣವೆಂಬ ಉಪಾಧಿಯುಳ್ಳ ಆತ್ಮನೇ ನಾನು–ಎಂಬುದನ್ನು ಮನಸ್ಸಿನಲ್ಲಿ ಹೊರಳಾಡಿಸಿದರೆ ಹೊರಗಿನ ಅನ್ನಮಯಶರೀರದಲ್ಲಿ ಆತ್ಮಬುದ್ಧಿಯು ಹೋಗಿಬಿಡುವದು. ಇಡಿಯ ಜಗತ್ತೇ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ–ಎಂಬ ಪಂಚವೃತ್ತಿಗಳುಳ್ಳ ಪ್ರಾಣಮಯವಾಗುವದು. ಪ್ರಾಣವೇ ನಿಜವಾಗಿ ಬ್ರಹ್ಮವು ; ಏಕೆಂದರೆ, ಅದು ಶರೀರಗಳಿಗೆಲ್ಲ ಆಯುಸ್ಸು, ಪಶುಪಕ್ಷಿಗಳು, ದೇವತೆಗಳು–ಎಲ್ಲಾ ಪ್ರಾಣದಿಂದಲೇ ಹುಟ್ಟಿ, ಪ್ರಾಣದಿಂದಲೇ ಬದುಕಿದ್ದು ಪ್ರಾಣದಲ್ಲಿಯೇ ಕೊನೆಗೆ ಸೇರಿಹೋಗುವರು.

ಶರೀರವು ನಾನು ಎಂಬ ಅಭಿಮಾನವು ಇರುವಂತೆ, ಪ್ರಾಣವೇ ನಾನು ಎಂಬ ಅಭಿಮಾನವು ನಮಗೆ ಬೇಗನೆ ಬರುವದಿಲ್ಲ. ಅದಕ್ಕೆ ಒಳಹೊಕ್ಕು ಸೂಕ್ಷ್ಮವಾಗಿ ನೋಡುವ ಶಕ್ತಿಯು ಬೇಕಾಗುತ್ತದೆ, ನೋಡುವದೆಂಬುದು ಕಣ್ಣಿನಿಂದ ಅಲ್ಲ. ನಮ್ಮ ಶರೀರದಲ್ಲೆಲ್ಲ, ಇಂದ್ರಿಯಗಳಲ್ಲಿಕೂಡ, ಈ ಪ್ರಾಣಶಕ್ತಿಯಿರುವದರಿಂದಲೇ ಇವಕ್ಕೆ ಜೀವಕಳೆ ಬಂದಿರುತ್ತದೆ. ಹೃದಯದಿಂದ ಒಳಹೊಕ್ಕು

ನೋಡಬೇಕು, ಪ್ರಾಣಶಕ್ತಿಯು ಹೇಗೆ ನಮ್ಮೊಳಗೆಲ್ಲ ಹರಿದಾಡುತ್ತಿದೆ; ನಮ್ಮ ಒಂದೊಂದು ಅವಯವವೂ ಪ್ರಾಣದ ಬಲದಿಂದ ಹೇಗೆ ಸ್ಥೂಲಸೂಕ್ಷ್ಮಕ್ರಿಯೆಗಳನ್ನು ಮಾಡುತ್ತಿದೆ–ಎಂಬುದನ್ನು ಮನದಟ್ಟುಮಾಡಿಕೊಳ್ಳಬೇಕು. ಚೈತ್ರ ಮಾಸದಲ್ಲಿ ಎಲ್ಲೆಲ್ಲಿಯೂ ಗಿಡಮರಗಳು ಚಿಗುರಿ, ಹೂಹಣ್ಣುಗಳನ್ನು ಬಿಟ್ಟುಕೊಂಡು ಪ್ರಾಣದಿಂದ ನಳನಳಿಸುತ್ತಿರುವದನ್ನು ಕಂಡು ಭಾವನೆಯಿಂದ ಅವುಗಳ ಒಳಹೊಕ್ಕು ಪ್ರಾಣಮಯಾತ್ಮನನ್ನು ಕಂಡುಕೊಳ್ಳಬೇಕು. ಈ ಜಗತ್ತಿನಲ್ಲಿ ಕ್ರಿಯಾಮಯವಾಗಿಲ್ಲದ, ಪ್ರಾಣನ ವ್ಯಾಪಾರವಿಲ್ಲದೆ ಇರುವ ಯಾವ ಭಾಗವು ತಾನೆ ಇದೆ? ಜಗತ್ತೆಂಬುದೆಲ್ಲವೂ ಪ್ರಾಣನ ಲೀಲೆಯೇ. ಪ್ರಾಣವಿಲ್ಲದಿದ್ದರೆ ಯಾವದು ತಾನೆ ಬದುಕಿದ್ದೀತು? ಇದನ್ನು ಮನಗಂಡವರಿಗೆ ಎಲ್ಲೆಲ್ಲಿಯೂ ಪ್ರಾಣಮಯರೂಪದಿಂದ ನಾನೇ ತುಂಬಿತುಳುಕಾಡುತ್ತಿರುವೆನು ಎಂಬ ಭಾವನೆಯು ಬರುವದು.

ಭೌತಿಕಶಾಸ್ತ್ರಜ್ಞರ ದೃಷ್ಟಿಯಲ್ಲಿಕೂಡ ಈ ಜಗತ್ತು ಸ್ಥಿರವಾಗಿ ತಾನು ಇದ್ದಂತೆ ಇರುವ ಒಂದು ಭೌತಿಕವಾದ ಮುದ್ದೆಯಲ್ಲ. ಇದರ ವಿಶ್ಲೇಷಣವನ್ನು ಮಾಡಿದರೆ ಅತ್ಯಂತಸೂಕ್ಷ್ಮವಾದ ವಿದ್ಯುತ್ಕಣಗಳು ನಿಂತಲ್ಲಿ ನಿಲ್ಲದೆ ಗಿರ್ರೆಂದು ತಿರುಗುತ್ತಿರುವವು; ಜಗತ್ತೆಲ್ಲವೂ ಸ್ಪಂದಮಯವಾಗಿರುತ್ತದೆ. ಇದೆಲ್ಲವೂ ಪ್ರಾಣನೇ ಆಗಿರುತ್ತದೆ.

ಹಾಗಾದರೆ ಈ ಪ್ರಾಣಶಕ್ತಿಯೇ ಜಗತ್ತಿನ ತತ್ತ್ವವೆ? ನಮ್ಮ ಶರೀರವು ಪ್ರಾಣಾತ್ಮಕವಾಗಿರುವದೆಂಬುದು ನಿಜ: ಅದು ಚಲನಾತ್ಮಕವಾಗಿಯೂ ವ್ಯಕ್ತಾವ್ಯಕ್ತಕ್ರಿಯಾತ್ಮಕವಾಗಿಯೂ ಇದೆ ಎಂಬುದೂ ನಿಜ. ಆದರೆ ಇದೆಲ್ಲ ಹೀಗಿದೆ ಎಂಬುದು ಯಾವ ತತ್ತ್ವಕ್ಕೆ ಗೋಚರವಾಗುವದೋ ಅದಕ್ಕೆ ಮನಸ್ಸು ಎಂದು ಹೆಸರು. ಆ ದೃಷ್ಟಿಯಿಂದ ನೋಡಿದಾಗ ಜಗತ್ತೆಲ್ಲವೂ ಪ್ರಾಣಮಯವಾಗಿರುತ್ತದೆ ಎನ್ನುವದಕ್ಕಿಂತ ಅದು ಮನೋಮಯವಾಗಿದೆ ಎಂಬುದೇ ಹೆಚ್ಚು ಒಪ್ಪುತ್ತದೆ. ಮನಸ್ಸೆಂಬುದು ಎಂಥ ವಸ್ತು, ಮನಸ್ಸೆಂದರೆ ಏನು?– ಎಂಬ ಪ್ರಶ್ನೆಯನ್ನು ನಿಮಗೆ ನೀವೇ ಹಾಕಿಕೊಳ್ಳಿರಿ. ಹೊರಗೆ ಯಾರನ್ನೂ ಕೇಳಬೇಡಿರಿ. ಈ ಪ್ರಶ್ನೆಯನ್ನು ಕೇಳುವಂತೆ ಪ್ರೇರಿಸುವ ಮನಸ್ಸಿನ ಸ್ವಭಾವವೇನೆಂದು ನಿಮ್ಮೊಳಗೆ ನೀವೇ ವಿಚಾರಮಾಡಿರಿ. ಆಗ ಅದರ ಮಹಿಮೆಯು ಗೊತ್ತಾಗುವದು. 'ಮನಸ್ಸು' ಎಂಬ ಮೂರು ಅಕ್ಷರಗಳನ್ನು ಉಚ್ಚರಿಸುವದರೊಳಗೆ ಅದು ಎಷ್ಟು ದೂರ ಎಲ್ಲೆಲ್ಲಿಗೆ ಓಡಿರುತ್ತದೆ! ಈ ಮನಸ್ಸಿನಲ್ಲಿ ಎಷ್ಟು ಅಲೆಗಳು ಎಷ್ಟು ವೇಗದಿಂದ ಏಳುತ್ತಿರುತ್ತವೆ! ಎಚ್ಚರವಾಗಿರುವಾಗ ಮನಸ್ಸಿನ ಓಟವು ನಿಂತದ್ದೇ ಇಲ್ಲ. ಮನುಷ್ಯನೆಂದರೆ ಮನಸ್ಸು, ಮನುಷ್ಯನೆಂಬ ಶಬ್ದವು 'ಮನ್' (ಯೋಚಿಸು) ಎಂಬ ಧಾತುವಿನಿಂದ ಬಂದಿದೆ ಎಂದರೂ ಒಪ್ಪುವಂತೆ ಇದೆ. ಮನಸ್ಸೇ ಮನುಷ್ಯ

ನಿಗೆ ಬಾವುಟ. 'ಇಡಿಯ ಪ್ರಪಂಚದಲ್ಲೀ ಮನುಷ್ಯನಷ್ಟು ದೊಡ್ಡ ವಸ್ತು ಬೇರೆ ಇಲ್ಲ. ಅವನಲ್ಲಿ ಮನಸ್ಸಿಗಿಂತ ಹೆಚ್ಚಾದದ್ದು ಮತ್ತೆ ಬೇರೆಯಿಲ್ಲ- ಎಂದು ಒಬ್ಬ ಪಾಶ್ಚಾತ್ಯತತ್ತ್ವಜ್ಞನು ಎಂದಿರುತ್ತಾನೆ. ಆದ್ದರಿಂದ ಪ್ರಾಣಮಯನಿಗಿಂತಲೂ ಮನೋಮಯಾತ್ಮನು ಹೆಚ್ಚಿನವನು, ಪ್ರಾಣಮಯನಿಂದ ಅನ್ನಮಯಾತ್ಮನು ಹೇಗೆ ಪೂರ್ಣನಾಗಿರುವನೋ ಹಾಗೆಯೇ ಮನೋಮಯಾತ್ಮನಿಂದ ಪ್ರಾಣಮಯನು ತುಂಬಿಕೊಂಡಿಂತ್ತಾನೆ. ಈ ಮನೋಮಯನನ್ನು ಕುರಿತು ಇನ್ನಷ್ಟು ವಿವರವಾಗಿ ಈಗ ವಿಚಾರಮಾಡೋಣ.

---

## ೧೭. ಪಂಚಕೋಶಪ್ರಕ್ರಿಯೆ (ಮುಂದುವರಿದದ್ದು)

( 3-8-62 )

ಶರೀರಾದಿಗಳ ನಿಜವನ್ನು ಗೊತ್ತುಮಾಡುವದಕ್ಕೆ ಯಾವ ದೃಷ್ಟಿವಿಶೇಷವನ್ನು ಅನುಸರಿಸಬೇಕೆಂಬುದನ್ನು ಇಲ್ಲಿ ತಿಳಿದಿರುವದು ಒಳ್ಳೆಯದು. ಶರೀರವನ್ನು ಪರೀಕ್ಷಿಸುವದೆಂದರೆ ಸತ್ತ ಬಳಿಕ ಶಸ್ತ್ರವೈದ್ಯನು ಕೊಯ್ದು ಪರೀಕ್ಷಿಸುವ ಶರೀರವನ್ನಲ್ಲ, ಬದುಕಿರುವ ಶರೀರವನ್ನು. ಶರೀರ, ಇಂದ್ರಿಯ, ಮನಸ್ಸು-ಇವುಗಳಲ್ಲಿ ಯಾವದೊಂದರ ತತ್ತ್ವವನ್ನೂ ನಿಶ್ಚಯಿಸಿಕೊಳ್ಳದೆ 'ಪಂಚಕೋಶವಿವೇಕ' ಎಂಬ ಮಾತನ್ನು ಉಚ್ಚರಿಸುವವರಿಗೆಲ್ಲ 'ಪಂಚಕೋಶವಿವೇಕಪ್ರಕ್ರಿಯೆ'ಯು ದಕ್ಕಲಾರದು. 'ಬನ್ನಿ' ಎಂದು ಕೈಯಿಂದ ಅಭಿನಯಿಸಿ ಕರೆಯುವವರು ನಿಜವಾಗಿ ಮನುಷ್ಯರೊ, ಅಥವಾ ಅದೊಂದು ಮನುಷ್ಯಾಕಾರದ ಗೊಂಬೆಯೊ ?- ಎಂದು ದನ್ನು ತಿಳಿಯಬೇಕಾಗಿದೆ. ಏಕೆಂದರೆ ಹೀಗೆ ಮನುಷ್ಯರಂತೆಯೇ ಮಾತಾಡಬಲ್ಲ ಯಂತ್ರಗಳನ್ನುಕೂಡ ಈಗ ನಿರ್ಮಿಸುತ್ತಿದಾರೆ. ಒಂದು ಅಂಗಡಿಯಲ್ಲಿ ಎರಡು ಜಪಾನಿನ ಗೊಂಬೆಗಳು ಒಂದಕ್ಕೊಂದು ಮುತ್ತುಕೊಡುವಂತೆ ಏರ್ಪಡಿಸಿದ ಕೀಲು ಗೊಂಬೆಗಳಾಗಿದ್ದವು; ಅದನ್ನು ನೋಡಿದವರು 'ಇವಕ್ಕೆ ಪರಸ್ಪರಪ್ರೀತಿಯಿದೆ' ಎನ್ನಬಹುದೇನು ? ನಾಟಕದಲ್ಲಿ ರಾಮಸೀತೆಯರ ವೇಷವನ್ನಾಕಿಕೊಂಡ ಇಬ್ಬರು ಗಂಡಸರನ್ನು ನಿಜವಾಗಿ ದಂಪತಿಗಳೆಂದು ಅವರ ಅಭಿನಯದಿಂದ ಊಹಿಸಿದರೆ ಸರಿಯಾದೀತೆ ? ಶರೀರ, ಇಂದ್ರಿಯ, ಮನಸ್ಸು-ಇವು ನಿಜವಾದ ಶರೀರಾದಿಗಳಾಗಿರಬೇಕಷ್ಟೆ ? ಇಲ್ಲದಿದ್ದರೆ ಅವು ಬರಿಯ ಶರೀರಾದ್ಯಾಭಾಸ, ಅಷ್ಟೆ.

ಹೊರಗೆ ನೋಡುವವರ ಶರೀರವು ಕಂಡಮೇಲೂ ಅವರ ಮನಸ್ಸು ನಮಗೆ ಅನುಮಿತವಾಗಿಯೇ ಇರುತ್ತದೆ. ಆದರೆ ನಮ್ಮ ಮನಸ್ಸು ನಮಗೆ ಅನುಭವ [illegible]. ಹೊರಗೆ ಅರ್ಥಗಳನ್ನು ನೋಡುತ್ತೇವಾದ್ದರಿಂದ ಅದನ್ನು ತಿಳಿಯುವ

ಜ್ಞಾನವಿರಬೇಕು ಎಂದು ಕೆಲವರು ವಾದಿಗಳು ಎನ್ನುತ್ತಾರೆ; ಜ್ಞಾನವೇ ಪ್ರತ್ಯಕ್ಷ, ಅರ್ಥವು ಬೇಕಾದರೆ ಅನುಮಿತ ಎಂದಾಗಲಿ–ಎಂದು ಮತ್ತೆ ಕೆಲವರು ವಾದಿಸಿರುತ್ತಾರೆ! ಇವೆರಡರಲ್ಲಿ ಯಾವದು ಸರಿ ? ಎಲ್ಲವನ್ನೂ ಜ್ಞಾನವೇ ತಿಳಿಸಿಕೊಡಬೇಕಾಗಿರುವದರಿಂದ ಜ್ಞಾನವೇ ಮೊದಲು ಬರಬೇಕು-ಎಂದು ಒಬ್ಬರು ; ವಸ್ತು ವಿದ್ದರೆ ತಾನೆ ಜ್ಞಾನವು ತಿಳಿದೀತು ?– ಎಂದು ಮತ್ತೊಬ್ಬರು.

ಇದುವರೆಗೆ ಹೇಳಿದ್ದು ಜ್ಞೇಯಪ್ರಧಾನವಾದ ದೃಷ್ಟಿ. ಈ ದೃಷ್ಟಿಯು ವ್ಯವಹಾರಕ್ಕೆ ಅವಶ್ಯವಾಗಿದೆ. ಎಲ್ಲರಿಗೂ ಒಂದೇ ರೀತಿಯಿಂದ ತಿಳಿದುಬರುವ ವಿಷಯಗಳನ್ನೇ ಸತ್ಯವೆಂದು ನಾವು ಭಾವಿಸುವದು ಸ್ವಾಭಾವಿಕ. ಆದರೆ ನಮ ನಮಗೆ ಹೊರಗಿನ ಪ್ರಪಂಚವೂ ಅದರಲ್ಲಿರುವ ಚೇತನಾಚೇತನಪದಾರ್ಥಗಳೂ ನಮ್ಮನಮ್ಮ ಮನಸ್ಸಿನಿಂದಲೇ ಗೊತ್ತಾಗಬೇಕಾಗಿದೆ. ನನ್ನ ಹೊಟ್ಟೆಯ ನೋವನ್ನು ಮತ್ತೊಬ್ಬರು ನನ್ನಂತೆ ಎಂದಿಗೂ ನೇರಾಗಿ ಅನುಭವಿಸಲಾರರು. ನನಗೆ ಶರೀರವಿರುವದು, ಇಂದ್ರಿಯಗಳಿರುವದು, ಪ್ರಾಣವಿರುವದು– ಇದೆಲ್ಲವೂ ನನಗೇ ನೇರಾಗಿ ತಿಳಿಯುತ್ತದೆ ; ಮಿಕ್ಕವರಿಗೆ ನನ್ನ ಇಂದ್ರಿಯಾದಿಗಳು ಅನುಮಿತವಾಗಿಯೇ ಇರುತ್ತವೆ. ಇದು ಜ್ಞಾತೃಪ್ರಧಾನವಾಗಿರುವ ದೃಷ್ಟಿ. ಈ ದೃಷ್ಟಿಯಿಂದಲೇ ನಾವು ಈಗ ಪಂಚಕೋಶವಿವೇಕವನ್ನು ಮಾಡುತ್ತಿರುವದು. ಜ್ಞಾನವಾಗಲಿ ಅಜ್ಞಾನವಾಗಲಿ, ಬಂಧವಾಗಲಿ ಮೋಕ್ಷವಾಗಲಿ–ಈ ದೃಷ್ಟಿಯಿಂದಲೇ ಸಿದ್ಧಿಸಬೇಕಾಗಿದೆ ; ಇದನ್ನು ಬಹುಜನರ ಮತದಾನದಿಂದ ಗೊತ್ತುಪಡಿಸುವಹಾಗಿಲ್ಲ.

ಆದ್ದರಿಂದ ಪ್ರಾಣ, ಮನಸ್ಸು– ಮುಂತಾದವುಗಳನ್ನು ಭೌತಿಕಶಾಸ್ತ್ರದ ಬಾಹ್ಯಪ್ರಧಾನವಾದ ದೃಷ್ಟಿಯಿಂದ ನೋಡುವದು ಸಾಕ್ಷಾಜ್ಜ್ಞಾನಕ್ಕೆ ಸಾಧನವಲ್ಲ. ಪ್ರಾಣವೆಂದರೇನು ? ಮನಸ್ಸೆಂದರೇನು ?– ಎಂಬುದನ್ನು ನಿಶ್ಚಯಿಸುವದು ಭೌತಿಕಶಾಸ್ತ್ರಜ್ಞರಿಗೆ ಕಷ್ಟಸಾಧ್ಯವಾಗಿರುವದಕ್ಕೆ ಅವರು ಅನುಸರಿಸುತ್ತಿರುವ ಬಾಹ್ಯಪ್ರಧಾನದೃಷ್ಟಿಯೇ ಹೊಣೆಗಾರನಾಗಿದೆ. ಉಪಾಧ್ಯಾಯರು ಶಿಶುಮನಶ್ಶಾಸ್ತ್ರ, ರಾಜಕಾರಣಿಗಳು ಜನಸಾಮಾನ್ಯಮನಶ್ಶಾಸ್ತ್ರ–ಇವುಗಳನ್ನು ಬಳಸಿಕೊಂಡು ವ್ಯವಹಾರದಲ್ಲಿ ಲಾಭವನ್ನು ಪಡೆಯುತ್ತಿರಬಹುದು. ಆದರೆ ಪಂಚಕೋಶವಿವೇಕದಲ್ಲಿ ಉಪಯೋಗಿಸಿರುವದು ಈ ದೃಷ್ಟಿಯ ಭೌತಿಕಜ್ಞಾನವಲ್ಲ, ಪ್ರಾಣಜ್ಞಾನವಲ್ಲ, ಮನೋವಿಜ್ಞಾನವೂ ಅಲ್ಲ ; ದೇಹವೆಂದರೆ, ನನಗೇ ಅನುಭವಕ್ಕೆ ಬರುವ ದೇಹ, ಪ್ರಾಣವೆಂದರೆ ನನಗೇ ಅನುಭವಕ್ಕೆ ಬರುತ್ತಿರುವ ಪ್ರಾಣ ಮನಸ್ಸೆಂದರೂ ನನಗೇ ಅನುಭವಕ್ಕೆ ಬರುತ್ತಿರುವ ಮನಸ್ಸು.

ಈ ದೃಷ್ಟಿಯಿಂದ ನೋಡಿದಾಗ ಭೌತಿಕವಾದ ಶರೀರವೂ ವಸ್ತುಗಳೂ ಪ್ರಾಣಕ್ರಿಯಾಮಾತ್ರವಾಗಿರುತ್ತವೆ. ಒಂದು ಪ್ರಾಣಿಯು ಕ್ರಿಯೆಯನ್ನು

ವ್ಯಕ್ತಗೊಳಿಸಿದಾಗ ಅದಕ್ಕೆ ಪ್ರಾಣವಿದೆಯೆಂದೂ ಒಬ್ಬರು ಹೇಳಿದ್ದನ್ನು ನಾವು ವಿಚಾರಪೂರ್ವಕವಾಗಿಯೇ 'ಹೌದು', 'ಅಲ್ಲ' ಎಂದು ಪ್ರತಿಕ್ರಿಯಾರೂಪವಾದ ಮಾತನ್ನಾಡಿದಾಗ ನಮ್ಮ ಮನಸ್ಸಿನಂತೆಯೇ ಅವರಿಗೂ ಮನಸ್ಸು ಇದೆಯೆಂದೂ ಕಲ್ಪಿಸುವದು ಒಂದು ದೃಷ್ಟಿ. ನಮ್ಮ ಪ್ರಾಣವೇ ಎಲ್ಲರಿಗೂ ಸಾಧಾರಣವಾಗಿರುವ ಪ್ರಾಣವು; ನಮ್ಮ ಮನಸ್ಸೇ ಎಲ್ಲರಿಗೂ ಸಾಧಾರಣವಾಗಿರುವ ಮನಸ್ಸು. ಇವುಗಳಲ್ಲಿ ತೋರುವ ತಾರತಮ್ಯವು ಉಪಾಧಿಕೃತವಾದದ್ದು ಎಂಬುದು ಇನ್ನೊಂದು ದೃಷ್ಟಿ. ವೇದಾಂತಶಾಸ್ತ್ರಜ್ಞರು ಈ ಎರಡನೆಯ ದೃಷ್ಟಿಯನ್ನೇ ಸರಿಯೆಂದಿಟ್ಟುಕೊಂಡಿರುತ್ತಾರೆ. ಏಕೆಂದರೆ ನಮಗೆ ಗೊತ್ತಿರುವದೆಲ್ಲ ನೇರಾಗಿ ನಮ್ಮ ಅನುಭವದಲ್ಲಿರಬೇಕು, ಸುಮ್ಮನೆ ಕಲ್ಪಿಸಿಕೊಂಡದ್ದು ನಿಜವಾಗಿಯೂ ಇರಬಹುದು, ಸುಳ್ಳಾಗಿಯೂ ಇರಬಹುದು. ಈ ಎರಡನೆಯ ದೃಷ್ಟಿಯಿಂದಲೇ ವಿಚಾರಮಾಡಿದಾಗ ಅನ್ನಮಯವಾಗಿರುವದೆಲ್ಲವೂ ಕ್ರಿಯಾಮಾತ್ರ ಪ್ರಾಣಮಾತ್ರ-ಎಂದು ನಿಶ್ಚಯವಾಗುತ್ತದೆ ; ಪ್ರಾಣಮಯವಾಗಿರುವದೆಲ್ಲ ಮನೋಮಯಮಾತ್ರ ಎಂದು ನಿಶ್ಚಯವಾಗುತ್ತದೆ. ಪ್ರಾಣ ಮನಸ್ಸು-ಎಂಬ ಉಪಾಧಿಗಳನ್ನು ಆತ್ಮನಿಗೆ ಇಟ್ಟುಕೊಂಡೇ ಶ್ರುತಿಯು 'ಅನ್ಯೋಽನ್ತರ ಆತ್ಮಾ ಪ್ರಾಣಮಯಃ | ತೇನೈಷ ಪೂರ್ಣಃ, ಅನ್ಯೋಽನ್ತರ ಆತ್ಮಾ ಮನೋಮಯಃ | ತೇನೈಷ ಪೂರ್ಣಃ'|| ಈ ಅನ್ನಮಯಾತ್ಮನಿಗಿಂತ ಪ್ರಾಣಮಯನೆಂಬ ಬೇರೊಬ್ಬ ಆತ್ಮನಿದಾನೆ ; ಅವನಿಂದ ಈ ಅನ್ನಮಯನು ಪೂರ್ಣನಾಗಿರುತ್ತಾನೆ, ವ್ಯಾಪ್ತನಾಗಿರುತ್ತಾನೆ. ಈ ಪ್ರಾಣಮಯ ಆತ್ಮನಿಗಿಂತ ಇನ್ನೊಬ್ಬ ಮನೋಮಯನೆಂಬ ಆತ್ಮನಿದಾನೆ ; ಅವನಿಂದ ಈ ಪ್ರಾಣಮಯನು ವ್ಯಾಪ್ತನಾಗಿರುತ್ತಾನೆ-ಎಂದಿದೆ. ಶರೀರವನ್ನು ಪ್ರಾಣವು ವ್ಯಾಪಿಸಿಕೊಂಡಿರುವಂತೆ ಪ್ರಾಣವನ್ನು ಮನಸ್ಸು ವ್ಯಾಪಿಸಿಕೊಂಡಿರುತ್ತದೆ. ಶರೀರವೇ ಪ್ರಧಾನವಾದ ಉಪಾಧಿಯೆಂದಿಟ್ಟುಕೊಂಡಾಗ ಆತ್ಮನು ಅನ್ನಮಯನಾಗಿ ತೋರುವಂತೆ, ಪ್ರಾಣನನ್ನು ಪ್ರಧಾನವಾಗಿಟ್ಟುಕೊಂಡಾಗ ಪ್ರಾಣಮಯನಾಗಿ ತೋರುತ್ತಾನೆ; ಆಗ ಅನ್ನಮಯವೆಂಬುದು ಬರಿಯ ಶರೀರವು, ಕತ್ತಿಗೆ ಒರೆಯಿರುವಂತೆ ಪ್ರಾಣಮಯಾತ್ಮನನ್ನು ಮುಸುಕಿಕೊಂಡಿರುವ ಕೋಶಮಾತ್ರ. ಹೀಗೆಯೇ ಮನಸ್ಸನ್ನು ಪ್ರಧಾನವಾಗಿಟ್ಟುಕೊಂಡಾಗ ಆತ್ಮನು ಮನೋಮಯನೆನಿಸಿರುತ್ತಾನೆ; ಆಗ ಪ್ರಾಣಮಯವೆಂಬುದು ಬರಿಯ ಶರೀರವು, ಕೋಶಮಾತ್ರ.

ಇಲ್ಲಿ ಅನ್ನಮಯ. ಅದರೊಳಗೆ ಪ್ರಾಣಮಯ, ಅದರೊಳಗೆ ಮನೋಮಯ –ಎಂದು ಕೋಶಗಳನ್ನು ಒಂದರೊಳಗೊಂದು ಇರುವದೆಂದು ಭಾವಿಸುವದು ಸರಿಯಲ್ಲ. ಏಕೆಂದರೆ ಅನ್ನಮಯವು ಪ್ರಾಣಮಯದಿಂದ ಪೂರ್ಣವಾಗಿ ವ್ಯಾಪ್ತವಾಗಿರುತ್ತದೆ. ಮಂಜಿನಗಡ್ಡೆಯು ನೀರಿನಿಂದ ವ್ಯಾಪ್ತವಾಗಿರುವಂತೆ ಅದೆಲ್ಲವೂ

ಪ್ರಾಣಮಯವೇ ಆಗಿರುತ್ತದೆ. ಹೀಗೆಯೇ ಪ್ರಾಣಮಯಕೋಶವೂ ಸೂಕ್ಷ್ಮ ದೃಷ್ಟಿಯಿಂದ ನೋಡಿದಾಗ ಮನೋಮಯವೇ ಆಗಿಬಿಡುತ್ತದೆ. ಮನೋಮಯಕ್ಕಿಂತ ಬೇರೆಯಾಗಿ ಪ್ರಾಣಮಯವೆಂಬುದೊಂದು ಬೇರೆಯಿರುವದೇ ಇಲ್ಲ, ಇದೆಲ್ಲವೂ ಆಧ್ಯಾತ್ಮಿಕವಾದ ಜ್ಞಾತೃಪ್ರಧಾನವಾದ ದೃಷ್ಟಿಯಿಂದ (Subjective view) ಅನುಭವಕ್ಕೆ ಬರಬೇಕು. ಅನ್ನಮಯವೆಂಬುದನ್ನು ಸಮಷ್ಟಿಯಾದ ಅನ್ನ, ಅಥವಾ ವಿರಾಟ್ಪುರುಷನ ಶರೀರವಾದ ಉಪಾಧಿಯೆಂದು ತಿಳಿದಂತೆಯೇ, ಪ್ರಾಣವನ್ನು ಸೂತ್ರಾತ್ಮನ ಉಪಾಧಿಯೆಂದೇ ಮನಗಾಣಬೇಕು. ಹೀಗೆಯೇ ಮನೋಮಯನೆಂಬ ಆತ್ಮನನ್ನು ಸಮಷ್ಟಿಮನಉಪಾಧಿಕನಾದ ಹಿರಣ್ಯಗರ್ಭನೆಂದೇ ತಿಳಿಯಬೇಕು. ಮನೋಮಯಾತ್ಮನನ್ನು ಕಂಡುಕೊಂಡಾಗ ಹಿಂದಿನ ಎರಡೂ ಅದರಲ್ಲಿ ಲಯವಾಗಿಬಿಡಬೇಕು. ತುಪ್ಪದಗಡಿಗೆಯಲ್ಲಿ ಮೇಲುಭಾಗದ ತುಪ್ಪವು ಹೆತ್ತುಕೊಂಡು ಕೆಳಭಾಗದ್ದು ಅರ್ಧಘಹೆತ್ತಿರುವಲ್ಲಿ ಕೆಳಗಡೆಯಿರುವ ಭಾಗವು ಇನ್ನೂ ನೀರಾಗಿರಬಹುದಲ್ಲವೆ? ಆದರೂ ಅದೆಲ್ಲವೂ ತುಪ್ಪವೇ ಅಷ್ಟೆ? ಆದರಂತೆ ಇದೆಲ್ಲವನ್ನೂ ಮನಸ್ಸೇ ಎಂದು ಮನದಟ್ಟುಮಾಡಿಕೊಳ್ಳಬೇಕು.

ನಮ್ಮ ಅಂತಃಕರಣದಲ್ಲಿ ಮನಸ್ಸು, ಬುದ್ಧಿ—ಎಂಬ ಎರಡು ಭಾಗಗಳನ್ನು ಇಟ್ಟುಕೊಳ್ಳುವದು ಅವಶ್ಯವಾಗಿದೆ. ಅಂತಃಕರಣವು ಒಂದು ಕೊಪ್ಪರಿಗೆಯೆಂದೂ ಮನಸ್ಸು, ಬುದ್ಧಿ—ಎಂಬಿವೆರಡೂ ಎರಡು ಹೋಳುಗಳಾಗಿದ್ದು ಬೆಸಗೆಯಿಂದ ಆ ಕೊಪ್ಪರಿಗೆಯಾಗಿರುವದೆಂದೂ ಕಲ್ಪಿಸಬಾರದು. ಅಂತಃಕರಣವೇ ವೃತ್ತಿಭೇದದಿಂದ ಮನಸ್ಸು, ಬುದ್ಧಿ—ಎಂಬ ಎರಡು ಪ್ರಕಾರದಿಂದ ವಿಚಾರಕ್ಕೆ ವಿಷಯವಾಗಿರುತ್ತದೆ. ಅಷ್ಟೆ. ಪ್ರಕೃತದಲ್ಲಿ ಮನಸ್ಸೆಂದರೆ ಏನು? ಕಾದ ಎಣ್ಣೆಯುಳ್ಳ ಬಾಂಡಲಿಯಲ್ಲಿ ಹಪ್ಪಳವನ್ನು ಹಾಕಿದಾಗ ಅದರಲ್ಲಿ ಸೊಳ್! ಎಂದು ಗುಳ್ಳೆಗಳು ಏಳುವಂತೆ, ನಮ್ಮ ಅಂತಃಕರಣದಲ್ಲಿ ಬಗೆಬಗೆಯ 'ವಿಕಲ್ಪ'ಗಳೆಂಬ ಅಲೆಗಳು ಏಳುತ್ತಿರುವವು. ವಿಕಲ್ಪಾತ್ಮಕವಾದ ಅಂತಃಕರಣಕ್ಕೆ ಮನಸ್ಸೆಂದು ಹೆಸರು. ಈ ಮನಸ್ಸೇ ಕೇಳುವಾಗ ಶ್ರೋತ್ರವೆಂದೂ ನೋಡುವಾಗ ಚಕ್ಷುಸ್ಸೆಂದೂ ಮುಟ್ಟಿ ಅನುಭವಿಸುವಾಗ ತ್ವಗಿಂದ್ರಿಯವೆಂದೂ ಸವಿಯುವಾಗ ರಸನೆಯೆಂದೂ ಮೂಸಿ ಅರಿಯುವಾಗ ಘ್ರಾಣವೆಂದೂ ಇಂದ್ರಿಯಗಳಾಗುತ್ತಿರುವದು—ಎಂದು ಭಾರತದಲ್ಲಿ ಹೇಳಿದೆ. ಮನಸ್ಸಿನಲ್ಲಿ ಉಂಟಾಗಬಹುದಾದ ಉತ್ತಮವಿಕಲ್ಪಕ್ಕೆ 'ವೇದ'ವೆಂದು ಸಂಜ್ಞೆ. ಸಮಷ್ಟಿಮನಸ್ಸೆಂಬ ಉಪಾಧಿಯುಳ್ಳ ವೇದಾತ್ಮನಿಗೆ ಹಿರಣ್ಯಗರ್ಭನೆಂದು ಹೆಸರು. ಮನಸ್ಸು ಮನುಷ್ಯರಲ್ಲಿಯೂ ದೇವತೆಗಳಲ್ಲಿಯೂ ಋಷಿಗಳಲ್ಲಿಯೂ ಇರುವದಾದರೂ ಅತಿಶುದ್ಧವಾದ ಹಿರಣ್ಯಗರ್ಭನ ಮನಸ್ಸನ್ನೇ ಇಲ್ಲಿ ಮುಖ್ಯವಾಗಿಟ್ಟುಕೊಂಡು ಶ್ರುತಿಯಲ್ಲಿ ವರ್ಣಿಸಿರುತ್ತದೆ. 'ಮನೋಮಯಾತ್ಮನಿಗೆ ಯಜುಸ್ಸೇ ತಲೆ, ಋಕ್ಕೇ ಬಲಪಕ್ಕ, ಸಾಮವೇ ಎಡಪಕ್ಕ, ವೇದದ

ಬ್ರಾಹ್ಮಣಭಾಗವೇ ಆತ್ಮ, ಅಥರ್ವಾಂಗಿರಸನು ಸಾಕ್ಷಾತ್ಕರಿಸಿಕೊಂಡ ಮಂತ್ರ ಗಳೇ ಪ್ರತಿಷ್ಠೆ' ಎಂದು ಶ್ರುತಿಯು ಕಲ್ಪಿಸಿದೆ. ಇಲ್ಲಿ ಯಜುಸ್ಸೇ ಮುಂತಾದವು ಗಳು ಶಬ್ದರೂಪವಲ್ಲ; ಮನಸ್ಸಿನ ವೃತ್ತಿವಿಶೇಷಗಳವು. ಇಂಥ ಪರಿಶುದ್ಧವೃತ್ತಿ ಗಳುಳ್ಳ ಮನಸ್ಸನ್ನು ಉಪಾಧಿಯಾಗುಳ್ಳ ಹಿರಣ್ಯಗರ್ಭನೇ ನಾನು ಎಂಬ ಅರಿ ವನ್ನು ಸಂಪಾದಿಸಿಕೊಂಡವನು ಮನೋಮಯಾತ್ಮನಾಗುವನು : ಆ ಹಿರಣ್ಯ ಗರ್ಭನ ಆನಂದವು ಅವನದಾಗುವದು. ಅಂಥನನಿಗೆ ಎಂದಿಗೂ ಭಯವಿರುವದಿಲ್ಲ. ಏಕೆಂದರೆ ತತ್ತ್ವಜ್ಞಾನವೇ ಅವನ ವಶವಾಗಿರುತ್ತದೆ; ಅವನಿಗಿಂತ ಬೇರೆಯಾಗಿ ರುವ ಭಯಹೇತುವೂ ಯಾವದೊಂದೂ ಇರುವದಿಲ್ಲ- ಎಂದು ಶ್ರುತಿಯಲ್ಲಿ ಮನೋಮಯಾತ್ಮಜ್ಞಾನವನ್ನು ಕೊಂಡಾಡಿರುತ್ತದೆ.

ವೇದವನ್ನು ವಶಪಡಿಸಿಕೊಂಡವನಿಗಿಂತಲೂ ವೇದಾರ್ಥಜ್ಞಾನವನ್ನುಪ ಯೋಗಿಸಿಕೊಂಡು ಶಾಸ್ತ್ರದಲ್ಲಿ ಹೇಳಿರುವಂತೆ ಕರ್ಮವನ್ನು ಮಾಡುವವನು ಇನ್ನೂ ಹೆಚ್ಚಿನ ಅಂತಸ್ತಿನವನಷ್ಟೆ ? ಮನೋಮಯಾತ್ಮನಿಗಿಂತ ಬುದ್ಧ್ಯಾತ್ಮ ಅಥವಾ ವಿಜ್ಞಾನಾತ್ಮನು ಇನ್ನೂ ಸೂಕ್ಷ್ಮನೆಂದೂ ಅವನು ಮನೋಮಯನನ್ನು ವ್ಯಾಪಿಸಿ ಕೊಂಡಿರುವನೆಂದೂ ವರ್ಣಿಸಿರುವದಕ್ಕೆ ಇದೇ ಕಾರಣ. ಸಮಷ್ಟಿವಿಜ್ಞಾನಮಯ ನೂ ಹಿರಣ್ಯಗರ್ಭನೇ. ಇವನಿಗೆ 'ಶ್ರದ್ಧೆಯೇ ಶಿರಸ್ಸು ; ಋತವು-ಎಂದರೆ ಕರ್ತವ್ಯವೆಂದು ಮನಸ್ಸಿನಲ್ಲಿ ನಿಶ್ಚಯಿಸುವ ಜ್ಞಾನವು- ಬಲಪಕ್ಕ, ಸತ್ಯವು-ಎಂದರೆ ನಿಶ್ಚಯಿಸಿದಂತೆ ಆಚರಣೆಮಾಡುವದು- ಎಡಪಕ್ಕ ; ಯೋಗವು ಎಂದರೆ ಚಿತ್ತ ಸಮಾಧಾನವು, ಆತ್ಮನು ; ಮಹತ್ತತ್ತ್ವವೇ- ಸಮಷ್ಟಿಬುದ್ಧಿತತ್ತ್ವವೇ- ಪ್ರತಿಷ್ಠೆ, ಆಧಾರ' ಎಂದು ಶ್ರುತಿಯಲ್ಲಿ ವಿವರಣೆಯಿದೆ. ವ್ಯಷ್ಟ್ಯಾತ್ಮರು ಕರ್ಮಗಳನ್ನು ಮಾಡುವದು ವಿಜ್ಞಾನವೆಂಬ ಉಪಾಧಿಯಿಂದಲೇ. ಸಮಷ್ಟಿಬುದ್ಧ್ಯಾತ್ಮನೂ ವಿರಾ ಡ್ರೂಪದಿಂದ ಮಾನಸಾಶ್ವಮೇಧವನ್ನು ಮಾಡಿ ಜಗತ್ತನ್ನು ಸೃಷ್ಟಿಮಾಡಿದನೆಂದು (ಬೃ.೧-೨-೬) ಶ್ರುತಿಯಲ್ಲಿವೆಯಾದ್ದರಿಂದ ಅವನೂ ಕರ್ತ್ರಾತ್ಮನೆಂದು ಹೇಳಿದ್ದು ಸರಿಯಾಗಿದೆ. ಈ ವಿಷಯವನ್ನೆಲ್ಲ ಮನಗಂಡುಕೊಂಡ ವಿಚಾರಮಾಡಿದವನಿಗೆ ವಿಜ್ಞಾನಮಯಾತ್ಮನೇ ನಾನೆಂಬ ಬುದ್ಧಿಯು ನೆಲೆನಿಲ್ಲುವದು. 'ಈ ವಿಜ್ಞಾನಾತ್ಮ ನೇ ನಾನೆಂದು ಅರಿತುಕೊಂಡವನು ಸಂಪೂರ್ಣವಾಗಿ ಶರೀರಾಭಿಮಾನವನ್ನು ತೊರೆದು ಹಿರಣ್ಯಗರ್ಭನ ರೂಪದಿಂದ ಸಕಲಕಾಮಗಳನ್ನೂ ಅನುಭವಿಸುವನು' ಎಂದು ಈ ಜ್ಞಾನವನ್ನು ಶ್ರುತಿಯಲ್ಲಿ ಸ್ತುತಿಸಿರುತ್ತದೆ.

ಕರ್ತ್ರಾತ್ಮನಿಗಿಂತ ಭೋಕ್ತ್ರಾತ್ಮನು ಇನ್ನೂ ಒಳಗಿನ ಆತ್ಮನು ಎಂಬುದು ಸ್ಪಷ್ಟವೇ ಆಗಿರುತ್ತದೆ. ಫಲಕ್ಕಾಗಿಯಲ್ಲವೆ, ಕರ್ಮವನ್ನು ಮಾಡುವದು? ಕರ್ಮೋ ಪಾಸನೆಗಳನ್ನು ಮಾಡಿ ಅದರಿಂದುಂಟಾಗುವ ಫಲವನ್ನನುಭವಿಸುವ ಆತ್ಮನೇ ಆನಂದಮಯನು. ಈ ಆತ್ಮನಿಗೆ 'ಪ್ರಿಯವು'- ಎಂದರೆ ಇಷ್ಟವಸ್ತುದರ್ಶನದಿಂದಾ

ಗುವ ಸುಖವು–ಶಿರಸ್ಸು; 'ಮೋದವು' ಎಂದರೆ ತನಗೆ ಪ್ರಿಯವಾದದ್ದು–ದೊರಕಿದರೆ ಆಗುವ ಹರ್ಷವು- ಬಲಪಕ್ಕ ; ಪ್ರಮೋದವು ಎಡಪಕ್ಕ ; ಆನಂದವು, ಎಂದರೆ ಸುಖಸಾಮಾನ್ಯವು, ಆತ್ಮವು'– ಎಂದು ಶ್ರುತಿಯಲ್ಲಿ ವರ್ಣಿಸಿದೆ. ಹಿರಣ್ಯಗರ್ಭನ ವರೆಗೂ ಸಿಕ್ಕುವ ಲೌಕಿಕಾನಂದವು ಆತ್ಮನು. ಆದರೆ ಇವೆಲ್ಲಕ್ಕೂ ಆಧಾರವಾಗಿ ರುವ ಆನಂದಸ್ವರೂಪನೇ ಆಗಿರುವ ಬ್ರಹ್ಮವೇ ಈ ಆತ್ಮನಿಗೆ ಆಧಾರವು. ಪರಮಾತ್ಮನೆಂಬ ಆನಂದವೇ ಲೌಕಿಕಾನಂದವಾಗಿ ಆಗಾಗ ಪುಣ್ಯವಶದಿಂದ ತೋರಿ ಕೊಳ್ಳುವದಾದರೂ ಅದು ಕ್ಷಣಿಕವಾಗಿರುತ್ತದೆ ; ಕಲ್ಪಿತಾನಂದಗಳಿಗೆಲ್ಲ ಆಧಾರ ವಾಗಿರುವ ಆನಂದವೆಂದರೆ ನಮ್ಮ ನಿಜವಾದ ಆತ್ಮನಾಗಿರುವ ಬ್ರಹ್ಮವೇ. ಈ ತತ್ತ್ವವು ಗೊತ್ತಿಲ್ಲದವರಿಗೆ ಸುಖವು ವಿಷಯಗಳಿಂದಲೇ ಬರುತ್ತದೆ ಎಂಬ ಭ್ರಾಂತಿ ಯುಂಟಾಗುತ್ತದೆ.

ಈ ಕೋಶವಿವೇಕದಿಂದ ನಮಗೆ ದೊರಕುವ ಫಲವೇನು ?– ಎಂದರೆ, ಅನ್ನ, ಪ್ರಾಣ, ಮನಸ್ಸು, ಬುದ್ಧಿ, ಭೋಕ್ತೃತ್ವೋಪಾಧಿ–ಎಂಬ ಉಪಾಧಿಗಳನ್ನು ಒಂದರ ಲ್ಲೊಂದನ್ನು ಜ್ಞಾನದಿಂದ ವಿಲಯಮಾಡಿಕೊಂಡು, ನಮಗೆ ಉಪಾಧಿಯಿಂದ ತೋರುವ ಮಿಥ್ಯಾಭೋಕ್ತೃತ್ವದ ಹಂಗಿಲ್ಲದೆ ನಮ್ಮ ಸ್ವರೂಪದಲ್ಲಿಯೇ ನಾವು ನೆಲೆನಿಂತರೆ ನಾವು ಎಂದೆಂದಿಗೂ ನಿತ್ಯಾನಂದಸ್ವರೂಪರೇ ಎಂಬ ನಿಜವು ಮನದಟ್ಟಾಗುವದು. ಐದು ಕೋಶಗಳು ನಿಜವಾಗಿ ನಮಗೆ ಮುಸುಕಿಕೊಂಡಿರು ವದಿಲ್ಲ ; ಅವೆಲ್ಲ ಆತ್ಮಾಜ್ಞಾನದಿಂದ ನಿಜವೆಂತ ತೋರುತ್ತಿರುತ್ತವೆ. ಒಳಒಳಕ್ಕೆ ಹೊಕ್ಕು ಮನನಮಾಡಿ ನಿಜವನ್ನು ಅನುಭವಕ್ಕೆ ತಂದುಕೊಂಡಂತೆಲ್ಲ ಈ ಉಪಾಧಿ ಗಳು ಒಂದೊಂದಾಗಿ ಕರಗಿ 'ನಿರುಪಾಧಿಕನಾದ ಆನಂದಾತ್ಮನೇ ನಾನು' ಎಂಬ ಅರಿವು ಗಟ್ಟಿಯಾಗುವದು. ಕಾರ್ಯಕಾರಣವಿವೇಕಪ್ರಕ್ರಿಯೆಗಿಂತ ಈ ಕೋಶ ವಿವೇಕಪ್ರಕ್ರಿಯೆಯು ಅನುಭವಕ್ಕೆ ಹೆಚ್ಚು ಸಮೀಪವಾಗಿರುತ್ತದೆ. ಇನ್ನು ಇದಕ್ಕಿಂತಲೂ ಅನುಭವಕ್ಕೆ ಸಮೀಪವಾಗಿರುವ ಪ್ರಕ್ರಿಯೆಯಿದೆಯೆ?-ಎಂಬುದನ್ನು ನಾವು ಈಗ ವಿಚಾರಕ್ಕೆ ತೆಗೆದುಕೊಳ್ಳಬೇಕಾಗಿದೆ.

---

## ೧೮. ಅವಸ್ಥಾತ್ರಯಪ್ರಕ್ರಿಯೆ
(4—8—62)

ಶರೀರಾದಿಗಳನ್ನು ಎರಡು ಬೇರೆಬೇರೆಯ ದೃಷ್ಟಿಗಳಿಂದ ಪರೀಕ್ಷಿಸಬಹುದು. ಹೊರಗಣ್ಣಿನ ಪರಾಗ್ದೃಷ್ಟಿಯಿಂದ ನೋಡಿದರೆ ಇವುಗಳ ತತ್ತ್ವವು ನಿಜವಾಗಿ ನಮಗೆ ಎಂದಿಗೂ ಗೊತ್ತಾಗಲಾರದು. ಭೌತಿಕವಿಜ್ಞಾನಶಾಸ್ತ್ರವು ಈ ದೃಷ್ಟಿ

ಯನ್ನೇ ಅನುಸರಿಸಿರುವದರಿಂದ ಅದರಿಂದ ವ್ಯವಹಾರಕ್ಕೆ ಎಷ್ಟೇ ಪ್ರಯೋಜನಪ್ರ ವಾಗಿದ್ದರೂ ವಸ್ತುತತ್ತ್ವವನ್ನು ನಿರ್ಧರಿಸುವದಕ್ಕೆ ಮಾತ್ರ ಆಗುವಂತಿಲ್ಲ. ಮತ್ತೊಬ್ಬರ ಶರೀರವನ್ನು ನೋಡುವದು, ಅವರ ಅಭಿನಯಗಳಿಂದ ಅವರ ಮನಸ್ಸಿನ ಸ್ವಭಾವವನ್ನು ಊಹಿಸಿ ನಿಶ್ಚಯಿಸಿಕೊಳ್ಳುವದು- ಇಷ್ಟೇ ಆ ದೃಷ್ಟಿಯಿಂದ ಆಗುವ ಫಲ. ನಿರೀಕ್ಷಣಪರೀಕ್ಷಣಸಂವಾದೀಕರಣಗಳಿಂದ ವಸ್ತುತತ್ತ್ವವನ್ನು ಕಲ್ಪಿಸುವದು ನಮ್ಮ ನಿತ್ಯಜೀವನಕ್ಕೆ ಬೇಕಾಗಿರುವ ವಸ್ತುಗಳ ತೋರಿಕೆಯನ್ನು ಮಾತ್ರ ವ್ಯವಸ್ಥೆಗೊಳಿಸಿಕೊಳ್ಳುವದಕ್ಕೆ ಪ್ರಯೋಜನವಾದೀತೇ ಹೊರತು ನೇರಾಗಿ ವಸ್ತುವನ್ನು ಇದ್ದದ್ದು ಇದ್ದಂತೆ ತಿಳಿಯುವದಕ್ಕೆ ಆಗಲಾರದು ಎಂದು ತಿಳಿದುಕೊಂಡದ್ದಾಗಿದೆ. ನಮ್ಮ ಮನಸ್ಸನ್ನೂ ನಮ್ಮ ಬುದ್ಧಿಯನ್ನೂ ನಮ್ಮ ವೇದನೆಗಳನ್ನೂ ನಾವೇ ನೇರಾಗಿ ಅರಿತುಕೊಳ್ಳಬೇಕು, ಇದಕ್ಕೆ ಮನಸ್ಸು ಬಹಿರ್ಮುಖವಾಗುವದಕ್ಕೆ ಬದಲಾಗಿ ಅಂತರ್ಮುಖವಾಗಬೇಕು. ಏಕೆಂದರೆ ಹೊರಗೆ ವಿಷಯ ಪ್ರಪಂಚವನ್ನು ಲಕ್ಷ್ಯವಿಟ್ಟು ನೋಡಿದಂತೆಲ್ಲ ನಮ್ಮ ಆತ್ಮನ ತತ್ತ್ವವು ನಮಗೆ ದೂರವಾಗಿಬಿಡುತ್ತದೆ, ಜಗತ್ತಿನಲ್ಲಿ ಆತ್ಮನು ಮುಳುಗಿಹೋಗುತ್ತಾನೆ. ಇದಕ್ಕೆ ಬದಲ ಪ್ರತ್ಯಗ್ದೃಷ್ಟಿಯಿಂದ ನಮ್ಮ ಸ್ವರೂಪವನ್ನು ನಾವೇ ಅನುಭವದಿಂದ ಅರಿತುಕೊಳ್ಳುವದಕ್ಕೆ ಹೊರಟರೆ ಆಗ ಆತ್ಮನ ಹತ್ತಿರಕ್ಕೆ ಹೋದಂತೆಲ್ಲ ಜಗತ್ತು ಮರೆಯಾಗುತ್ತಾ ಹೋಗುತ್ತದೆ. ಆತ್ಮನನ್ನು ಕಂಡುಕೊಂಡಾಗ ಜಗತ್ತೇ ಕರಗಿ ಹೋಗುತ್ತದೆ. ವಿಜ್ಞಾನಾತ್ಮ(ಕರ್ತ್ರಾತ್ಮ), ಆನಂದಮಯಾತ್ಮ(ಭೋಕ್ತ್ರಾತ್ಮ)- ಇವರಿಬ್ಬರ ಪರೀಕ್ಷೆಯಿಂದ ಈ ನಿಜವನ್ನು ತೋರಿಸಿದ್ದಾಗಿದೆ. ಕರ್ತೃತ್ವಭೋಕ್ತೃತ್ವಗಳು ಉಪಾಧಿಗಳ ಕ್ಷಯದಿಂದ ನಾಶವಾಗುವವು; ಆಗ ಸರ್ವಕ್ಕೂ ಸಾರವಾಗಿರುವ ಜ್ಞಾನಾನಂದಸ್ವರೂಪವೇ ನಮ್ಮ ಆತ್ಮನೆಂಬುದು ಮನದಟ್ಟಾಗುವದು.

ಇಲ್ಲಿ ಪಂಚಕೋಶಗಳ ಅಧ್ಯಾರೋಪವನ್ನು ಮಾಡಿಕೊಂಡು ಮುಂದು ಮುಂದಿನ ಕೋಶದಲ್ಲಿ ಆತ್ಮಬುದ್ಧಿಯನ್ನು ಉಪದೇಶಿಸುವ ಮೂಲಕವಾಗಿ ಅನಾತ್ಮವಾದ ಕೋಶಗಳಲ್ಲಿ ಉಂಟಾಗಿರುವ ಆತ್ಮಬುದ್ಧಿಯನ್ನು ಕಳೆದುಹಾಕಿ ಕೊನೆಯಲ್ಲಿ ಸರ್ವಕೋಶಾತೀತವಾದ ಆನಂದಸ್ವರೂಪವಾದ ಬ್ರಹ್ಮವೇ ಎಲ್ಲದರ ಸಾರವಾದ ತತ್ತ್ವವೆಂಬುದನ್ನು ತಿಳಿಸಿಕೊಟ್ಟದೆ. ಇದೇ ಅಧ್ಯಾರೋಪಾಪವಾದಪ್ರಕ್ರಿಯೆಯನ್ನು ಇನ್ನೊಂದು ಬಗೆಯಿಂದ ಉಪಯೋಗಿಸಿಕೊಂಡು ಪರಮಾರ್ಥತತ್ತ್ವವನ್ನು ಕಂಡುಕೊಳ್ಳುವ ರೀತಿಯನ್ನು ಈಗ ನಿರ್ದೇಶಿಸಲಾಗುವದು.

ಅವಸ್ಥಾತ್ರಯದ ಪರೀಕ್ಷೆಯನ್ನು ಮಾಡುವದರಿಂದ ಇದೇ ಆತ್ಮನನ್ನು ಮುಟ್ಟಬಹುದು. ಅವಸ್ಥಾತ್ರಯದಲ್ಲಿ ಪರೀಕ್ಷೆಮಾಡುವದೇನಿದೆ? ಎಚ್ಚರ, ಕನಸು, ತನಿನಿದ್ರೆ- ಎಂಬ ಅವಸ್ಥೆಗಳು ಯಾರಿಗೆತಾನೆ ಅನುಭವದಲ್ಲಿಲ್ಲ? -ಎಂದು ನೀವು ಕೇಳಬಹುದು. ನಿಜ, ನಮ್ಮೆಗಳಿಗೆಲ್ಲ ಈ ಅವಸ್ಥೆಗಳ ಅನುಭವವಿದೆ.

ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಅನುಭವವಿಲ್ಲದಿದ್ದರೆ ನಾವೇ ಇಲ್ಲ. ಈ ಅವಸ್ಥೆಗಳು ಒಂದರಹಿಂದೊಂದು ಬರುವದೇ ಅಲ್ಲವೆ, ನಮ್ಮ ಜೀವನವೆಂಬುದು ? ಈ ಅವಸ್ಥೆಗಳು ಒಂದು ಸುತ್ತು ಸುತ್ತಿದರೆ ಒಂದು ದಿನ; ಇನ್ನೊಂದು ಸುತ್ತು ಸುತ್ತಿದರೆ ಇನ್ನೊಂದು ದಿನ. ಹೀಗೆ ಮುನ್ನೂರರವತ್ತು ಸುತ್ತುಗಳಾದರೆ ಒಂದುವರ್ಷ. ನಮಗೆ ಎಷ್ಟುವರ್ಷ ವಯಸ್ಸಾಗಿದೆಯೋ ಲೆಕ್ಕಕ್ಕನುಗುಣವಾಗಿ ಅಷ್ಟುಸಲ ಅವಸ್ಥೆಗಳು ಸುತ್ತಾಡಿರುತ್ತವೆ. ಅಲ್ಲವೆ ?-ಎಂಬುದು ನಿಮ್ಮ ಪ್ರಶ್ನೆ. ನಿಜ, ಅವಸ್ಥೆಗಳು ಎಲ್ಲರ ಅನುಭವದಲ್ಲಿಯೂ ಇವೆ. ಆದರೆ ಅವುಗಳ ಸ್ವರೂಪವೇನು ? -ಎಂಬುದು ನಮಗೆ ಯಾರಿಗೂ ತಿಳಿದಿರುವದಿಲ್ಲ. ನಾವೆಲ್ಲರೂ ವಾಯುಮಂಡಲದಲ್ಲಿಯೇ ಇರುತ್ತೇವೆ ; ಅಷ್ಟುಮಾತ್ರದಿಂದ ನಮ್ಮಗಳಲ್ಲಿ ಎಷ್ಟುಜನರಿಗೆ ವಾಯುವಿನ ಸ್ವರೂಪವು ತಿಳಿದಿದೆ ? ಗಂಗಾಯಮುನೆಗಳಲ್ಲಿ ಹರಿದಾಡುವ ಮೀನು, ಕಪ್ಪೆಗಳು, ಆಮೆಗಳು - ಇವಕ್ಕೆ ಆ ನದಿಗಳ ಮಾಹಾತ್ಮ್ಯೆ ಏನಾದರೂ ತಿಳಿದಿದೆ ಎನ್ನಬಹುದೇನು ? ಅವಸ್ಥೆಗಳು ಎಷ್ಟು ? ಅವುಗಳಿಗೆ ಇರುವ ಪರಸ್ಪರಸಂಬಂಧವೇನು ? ಅವಸ್ಥೆಗಳು ನಮಗೆ ನಿಜವಾಗಿ ಅಂಟಿಕೊಂಡಿವೆಯೆ ? ಇಲ್ಲದಿದ್ದರೆ ನಮ್ಮ ನಿಜವಾದ ಸ್ವರೂಪವು ಯಾವದು ? ಇವುಗಳಲ್ಲಿ ಯಾವದೊಂದೂ ನಮಗೆ ಸರಿಯಾಗಿ ಗೊತ್ತಾಗಿಲ್ಲ. ನಮಗೆ ಆಗುತ್ತಿರುವ ಅನುಭವದ ಸ್ವರೂಪವೇ ನಮಗೆ ಯಥಾರ್ಥವಾಗಿ ತಿಳಿದಿಲ್ಲ.

ಮೊಟ್ಟಮೊದಲು ಅವಸ್ಥೆ ಎಂದರೇನು ? 'ವಿಶೇಷಃ ಕಾಲಿಕೋಽವಸ್ಥಾ' ಕಾಲದಲ್ಲಿ ವಸ್ತುಗಳಿಗೆ ಆಗುವ ವಿಶೇಷವೇ ಅವಸ್ಥೆ-ಎಂದು ಕೋಶವು ಹೇಳುತ್ತಿದೆ. ನಾವು ಹುಡುಗರಾಗಿದ್ದು ತರುಣರಾಗಿ ಬೆಳೆದು ಮುದುಕರಾಗುತ್ತಿದೇವೆ. ಇವೆಲ್ಲ ಒಂದೇ ಕಾಲದಲ್ಲಿ ನಮ್ಮ ಶರೀರಕ್ಕೆ ಆಗುತ್ತಿರುವ ಅವಸ್ಥೆಗಳು. ಈ ದೃಷ್ಟಿಯಿಂದ ಜಾಗ್ರತ್ಸ್ವಪ್ನಗಳೂ ಅವಸ್ಥೆಗಳೆನ್ನಬಹುದೆ ? ಎಚ್ಚರ, ಕನಸು, ಗಾಢನಿದ್ರೆ- ಇವುಗಳು ಒಂದೇ ಕಾಲದ ಆಧಾರದಿಂದ ನಮಗೆ ಆಗುತ್ತಿರುವ ವಿಶೇಷಗಳು ಎನ್ನಬಹುದೆ ? ಹಾಗೆ ತೋರುತ್ತಿಲ್ಲ. ಇದಿರಲಿ. ಎಚ್ಚರವೆಂಬುದಾಗಲಿ, ಕನಸೆಂಬುದಾಗಲಿ, ಕಾಲದಲ್ಲಿ ಆಗುತ್ತಿರುವದೇನು? ಎಚ್ಚರದೊಳಗೆ ಒಂದು ಕಾಲಪ್ರವಾಹವು ಕಾಣುತ್ತಿದೆ. ಕನಸಿನಲ್ಲಿ ಮತ್ತೊಂದು ಕಾಲವು ಕಾಣುತ್ತಿದೆ ; ಆದರೆ ಎಚ್ಚರವಾಗುತ್ತಲೂ ನನಗೆ ನಿದ್ರೆಹತ್ತಿ ಕನಸುಕಾಣಿಸಿತು- ಎನ್ನುತ್ತಿರುವೆವಲ್ಲ ! ಇದು ಹೇಗೆ ಸರಿಯಾದೀತು ? ಕಂಬಿಗಳಮೇಲೆ ರೈಲುಗಾಡಿ ಸಾಗುತ್ತಿರುವಂತೆ ಒಂದೇ ಕಾಲ ಪ್ರವಾಹದ ಆಧಾರದಿಂದ ಈ ಅವಸ್ಥೆಗಳು ಸಾಗುತ್ತಿವೆಯೆ ? ಒಬ್ಬನು ರಾತ್ರೆ ಗಡಿಯಾರದಲ್ಲಿ ಒಂಭತ್ತು ಹೊಡೆಯುವ ಹೊತ್ತಿಗೆ ಮಲಗಿಕೊಂಡು ಕಾಲುಘಂಟೆ ನಿದ್ರೆಯನ್ನು ಅನುಭವಿಸುತ್ತಾನೆ; ಅಷ್ಟರೊಳಗೆ ಅವನಿಗೊಂದು ಕನಸು ಬೀಳುತ್ತದೆ, ಆಗ ಮಧ್ಯಾಹ್ನ ಹನ್ನೆರಡು ಘಂಟೆಯಾಗಿರಬೇಕೆಂದು ಅವನ ಊಹೆ. ಅದಕ್ಕೆ

ಸ್ವಪ್ನದ ಗಡಿಯಾರದಂತೆ ಕಂಡ ಕಾಲ. ರಾತ್ರಿಯಲ್ಲಿ ಬಿಸಿಲು ಹೇಗೆ ಬಂತು ? ಎಚ್ಚರದ ಕಾಲವು ನಿಜವೊ, ಕನಸಿನ ಕಾಲವು ನಿಜವೊ ? ಹೀಗೆ ನೋಡಿದರೆ ಎಚ್ಚರಕನಸುಗಳನ್ನು 'ಅವಸ್ಥೆಗಳು' ಎಂದು ಕರೆಯುವದು ಸರಿಯೆನಿಸೀತೇನು?

ಒಬ್ಬನು ಮಲಗಿಕೊಳ್ಳಲು ಅವನಿಗೆ ಗಾಢನಿದ್ರೆ ಹತ್ತಿರುತ್ತದೆ. ಈಗ ಅವನು ಎಚ್ಚರದಲ್ಲಿ ಅನುಭವಿಸಿದ್ದ ಪ್ರಪಂಚವು ಎಲ್ಲಿರುತ್ತದೆ ? ಈ ಪ್ರಶ್ನೆಗೆ ಉತ್ತರವಾಗಿ ನೀವು ಹೀಗೆನ್ನಬಹುದು: ನಾವು ನಿದ್ರಿಸಿದಮಾತ್ರದಿಂದ ಪ್ರಪಂಚವೆಲ್ಲ ಹಾಳಾದೀತೆ? ಈ ಪ್ರಪಂಚದೊಳಗೇ ನಾವು ಒಂದು ಭಾಗದಲ್ಲಿರುವ ಇಂಥ ದೇಶದ ಇಂಥ ಊರಿನಲ್ಲಿರುವ ಒಂದು ಮನೆಯ ಮೂಲೆಯಲ್ಲಿರುವ ಒಂದು ಹಾಸಿಗೆಯಲ್ಲಿ ಮಲಗಿರುತ್ತೇವೆ. ಇಂದ್ರಿಯಗಳು ಕೆಲಸಮಾಡದೆ ವಿಶ್ರಾಂತಿಯನ್ನು ಹೊಂದಿರುವದರಿಂದ ನಮಗೆ ಏತರ ಅರಿವೂ ಇರುವದಿಲ್ಲ, ಅಷ್ಟೆ ಅಷ್ಟುಮಾತ್ರದಿಂದ ಜಗತ್ತೆಲ್ಲವೂ ನಾಶವಾಗಿ ಹೋದೀತೇನು ? ವ್ಯವಹಾರದ ದೃಷ್ಟಿಯಿಂದ ಈ ಉತ್ತರವು ಸಾಕಾದೀತೆನ್ನುವದಕ್ಕೆ ಸಂಶಯವಿಲ್ಲ ; ಏಕೆಂದರೆ ನಾವು ಯಾವ ಜಗತ್ತಿನಲ್ಲಿದ್ದು ಮಲಗಿಕೊಂಡೆವೋ ಅದೇ ಜಗತ್ತನ್ನೆ ಎಚ್ಚರುತ್ತಲೂ ನೋಡುತ್ತಿರುತ್ತೇವೆ. ಇದು ಎಲ್ಲರ ಅನುಭವದಲ್ಲಿಯೂ ಇದೆ. ಆದರೆ ಇಲ್ಲಿ ಒಂದು ಪ್ರಶ್ನೆ : ಪ್ರಪಂಚವೆಂದರೆ ಏನು ? ನಮಗೆ ಕಾಣುತ್ತಿರುವ, ನಮ್ಮ ಇಂದ್ರಿಯಗಳಿಗೆ ಗೋಚರವಾಗುತ್ತಿರುವ, ಪ್ರಪಂಚವೇ. ಇಂದ್ರಿಯಕ್ಕೆ ಗೋಚರವಾಗದೆ ಇರುವಾಗಲೂ ಪ್ರಪಂಚವಿದೆ ಎಂಬ ಮಾತಿಗೆ ಅರ್ಥವೇನಿದೆ ? ಜಾಗ್ರದವಸ್ಥೆ, ಎಚ್ಚರವಾಗಿರುವ ಅವಸ್ಥೆ, ಎಂದರೆ ಇಂದ್ರಿಯಗಳಿಂದ ವಿಷಯಗಳನ್ನು ಅರಿಯುತ್ತಿರುವದೇ. ಎಚ್ಚರದಲ್ಲಿ ನಾವು ನೋಡುವದಲ್ಲದೆ ಬೇರೊಂದು ಪ್ರಪಂಚವಿರಬಹುದೆನ್ನುವದಕ್ಕೆ ಪ್ರಮಾಣವೇನಿದೆ ? ಈ ಪ್ರಶ್ನೆಗೂ ನೀವು ಹೀಗೆಂದು ಉತ್ತರವನ್ನು ಕೊಡಬಹುದು : ನಾನೊಬ್ಬನು ಗಾಢನಿದ್ರೆಯನ್ನನುಭವಿಸುತ್ತಿದ್ದರೆ, ಮತ್ತೆ ಯಾರೂ ಎಚ್ಚರವಾಗಿರಕೂಡದೆಂಬ ನಿಯಮವೇನೂ ಇಲ್ಲ. ಆದ್ದರಿಂದ ನಾನು ನಿದ್ರಿಸುತ್ತಿರುವಾಗಲೂ ಮಿಕ್ಕವರಿಗೆ ಕಾಣುತ್ತಾ ಅದೇ ಪ್ರಪಂಚವು ಇರಬಹುದಲ್ಲವೆ ? 'ನೀನು ನಿದ್ರಿಸುತ್ತಿದ್ದಾಗ ನಾವೆಲ್ಲರೂ ಈ ಪ್ರಪಂಚದಲ್ಲಿಯೇ ವ್ಯವಹರಿಸುತ್ತಿದ್ದೆವು' ಎಂದು ಅವರು ಹೇಳುತ್ತಾರೆ; ನಾನು ಎಚ್ಚತ್ತಾಗ ನನಗೂ ನಿನ್ನಿನ ಪ್ರಪಂಚವೇ ಮತ್ತೂ ಕಾಣಿಸುತ್ತದೆ. ಹೀಗಿರುವದರಿಂದ ನಿದ್ರಾವ್ಯವಧಾನಮಾತ್ರದಿಂದ ಪ್ರಪಂಚಕ್ಕೇನೂ ಚ್ಯುತಿಯಾಗಲಾರದು– ಎಂಬುದೇ ಯುಕ್ತವಲ್ಲವೆ ? ಈ ಉತ್ತರವು 'ಎಚ್ಚರ'ವೆಂಬ ಮಾತಿನ ಅರ್ಥವನ್ನು ಸರಿಯಾಗಿ ಮಾಡಿಕೊಳ್ಳದ್ದರಿಂದ ಬಂದಿರುತ್ತದೆ. ಏಕೆಂದರೆ ಎಚ್ಚರವಾಗಿರುವದೆಂದರೇನು ? ನೋಡುವದು, ಕೇಳುವದು, ಮೂಸುವದು, ಮುಟ್ಟುವದು, ಸವಿಯುವದು– ಇವಿಷ್ಟೇ ಅಲ್ಲ, ಇವೆಲ್ಲ ಪ್ರತ್ಯಕ್ಷಜ್ಞಾನವೆಂಬ ಮಾತಿನಲ್ಲಿ ಸೇರಿವೆ. ಪ್ರತ್ಯಕ್ಷಕ್ಕೆ ಗೋಚರವಾಗಿರುವದೆಂದರೆ, ಊರುಕೇರಿ,

ಕಾಡು, ಬೆಟ್ಟ, ನದಿ, ಸಮುದ್ರ, ಗಿಡಮರಗಳು, ಪ್ರಾಣಿಗಳು, ಮನುಷ್ಯರು– ಇಷ್ಟುಮಾತ್ರವೇ ಅಲ್ಲದೆ ವಾಯು, ಆಕಾಶ, ಸೂರ್ಯ, ಚಂದ್ರ, ನಕ್ಷತ್ರಾದಿಗಳು ಎಲ್ಲವೂ ಸೇರಿರುತ್ತವೆ. ಎಚ್ಚರದಲ್ಲಿ ಈ ಪ್ರತ್ಯಕ್ಷಜ್ಞಾನವೇ ಅಲ್ಲದೆ ಇದರ ಬಲದಿಂದ ನಾವು ಊಹಿಸುವ, ಹೋಲಿಕೆಯಿಂದ ತಿಳಿದುಕೊಳ್ಳುವ, ಶಬ್ದಪ್ರಮಾಣ ದಿಂದ ಅರಿತುಕೊಳ್ಳುವ, ಸ್ಮರಿಸಿಕೊಳ್ಳುವ, ಮನಸ್ಸಿನಿಂದ ಸಪ್ರಮಾಣವಾಗಿ ಯೋ ಅಪ್ರಮಾಣವಾಗಿಯೋ ಕಲ್ಪಿಸಿಕೊಳ್ಳುವ– ಎಲ್ಲಾ ಪ್ರಪಂಚವೂ ಎಚ್ಚರದ ಪ್ರಪಂಚದಲ್ಲಿಯೇ ಸೇರಿಕೊಂಡಿರುತ್ತದೆ. ಎಚ್ಚರದ ಪ್ರಪಂಚವು ಎಚ್ಚರಕ್ಕೇ ಸೇರಿರುತ್ತದೆ. ಎಚ್ಚರದ ಪ್ರಪಂಚಕ್ಕೂ ಎಚ್ಚರಕ್ಕೂ ಅವಿನಾಭಾವಸಂಬಂಧವಿರು ತ್ತದೆ. ಎಚ್ಚರವನ್ನು ಬಿಟ್ಟು ಎಚ್ಚರದ ಪ್ರಪಂಚದ ಜನರಾಗಲಿ, ಪ್ರಾಣಿಗಳಾಗಲಿ ವಸ್ತುಗಳಾಗಲಿ ಯಾವದೊಂದೂ ನಮ್ಮ ಕನಸಿಗೇ ಬರುವಂತಿಲ್ಲ ; ಹೀಗಿರುವಲ್ಲಿ ಎರಡನೆಯ ವಸ್ತುವನ್ನು ಕಾಣುವ ಸಂಭವವೇ ಇಲ್ಲದ ನಿನಿದ್ರೆಯಲ್ಲಿ ಪ್ರಪಂಚ ವು ಇನ್ನೂ ಇರುತ್ತದೆಯೆಂದು ಏತರ ಆಧಾರದಿಂದ ನಾವು ನಂಬಬೇಕು ?

ಈ ವಿಚಾರದಿಂದ ಪ್ರಯೋಜನವೇನು ? ಎಂದರೆ, ಜಾಗ್ರದವಸ್ಥೆ ಎಂಬುದು ಇಷ್ಟು ವ್ಯಾಪಕವಾಗಿರುತ್ತದೆ. ನಾವು ಭಾವಿಸಿಕೊಂಡಿರುವಂತೆ ಪ್ರಪಂಚದೊಳಗೆ ಒಂದು ಭಾಗದಲ್ಲಿ ನಾವು ಎಚ್ಚರವಾಗಿರುವದಿಲ್ಲ; ನಾವು ಪ್ರಪಂಚವೆನ್ನುತ್ತಿರುವದೆಲ್ಲ ನಮ್ಮ ಎಚ್ಚರಕ್ಕೆ ಸೇರಿಕೊಂಡು ಅದರೊಳಗೇ ಅಡಕವಾಗಿರುತ್ತದೆ. 'ನಾನು ಹುಟ್ಟಿ ಇಂತಿಷ್ಟುವರ್ಷವಾಯಿತು' ಎಂದು ಈ ಶರೀರದ ದೃಷ್ಟಿಯಿಂದ ನಾವು ಹೇಳಿಕೊಳ್ಳುತ್ತಿರುವದು ನಿಜ ; ಆದರೆ ಶರೀರೇಂದ್ರಿಯಾದಿಯಾದ ಆಧ್ಯಾತ್ಮಿಕ ಪ್ರಪಂಚವೂ ಎಚ್ಚರಕ್ಕೇ ಸೇರಿರುತ್ತದೆ, ಈ ಕಾಲವೂ ಎಚ್ಚರದೊಳಗೇ ಇದ್ದು ಕೊಂಡಿದೆ. ಕೃಷ್ಣನು ಮಗುವೆಂದು ತಿಳಿದುಕೊಂಡಿದ್ದ ನಂದನಿಗೆ ಗರ್ಗರು ಅವನು ಸಮಸ್ತರನ್ನೂ ಕಾಪಾಡುತ್ತಿರುವ ಪರಮಾತ್ಮನೇ ಎಂಬುದನ್ನು ತಿಳಿಸಿಕೊಟ್ಟಂತೆ, 'ನಾವು ಪ್ರಪಂಚದೊಳಗೆ ದೇಶಕಾಲಪರಿಚ್ಛಿನ್ನರಾಗಿರುತ್ತೇವೆ' ಎಂಬ ತಪ್ಪುಭಾವನೆ ಯನ್ನು ಬಿಡಿಸಿ, ನಿಜವಾಗಿ ನಾವು ಸಮಸ್ತಪ್ರಪಂಚಕ್ಕೂ ಸಾಕ್ಷಿಯಾಗಿರುವ ಸರ್ವರ ಆತ್ಮನಾದ ವೈಶ್ವಾನರನೇ ಎಂಬ ತತ್ತ್ವವನ್ನು ಶ್ರುತಿಯು ನಮಗೆ ತಿಳಿಸಿ ಕೊಡುತ್ತಿದೆ. ಇದೇ ಜಾಗ್ರತ್ತಿನ ನಿಜವಾದ ಸ್ವರೂಪ, ಜಾಗರಿತಾವಸ್ಥೆಯಲ್ಲಿ ರುವ ಆತ್ಮನ ನಿಜವಾದ ಸ್ವರೂಪ.

ಇನ್ನು ಕನಸಿನ ವಿಚಾರಕ್ಕೆ ಹೊರಡೋಣ. ಅದರ ವಿಷಯದಲ್ಲಿ ತಿಳಿದು ಕೊಳ್ಳತಕ್ಕದ್ದೇನಿದೆ ? ಕನಸೆಂದರೆ ನಿದ್ರಾದೋಷದಿಂದ ಏನೇನೊ ಸುಳ್ಳುಸುಳ್ಳಾಗಿ ಯೇ ಕಂಡಂತೆ ಕಲ್ಪಿಸಿಕೊಳ್ಳುವದು– ಎಂದು ಬಹುಜನರು ಅದನ್ನು ಅಸಡ್ಡೆಯಿಂದ ಕಾಣುತ್ತಿರುತ್ತಾರೆ. ಇದು ಸರಿಯಲ್ಲ. ಐದೇ ನಿಮಿಷ ಕನಸಾಯಿತು– ಎಂದು ಇಟ್ಟುಕೊಳ್ಳಿ. ಆಗ 'ಈಗತಾನೆ ಎಚ್ಚರದಿಂದ ಈ ಅವಸ್ಥೆಗೆ ಬಂದಿರುತ್ತೇನೆ' ಎಂದೇನೂ ನಮಗೆ ಅರಿವಾಗುವದಿಲ್ಲ. 'ಎಚ್ಚರವಾಗಿದೇನೆ' ಎಂದೇ ಎಲ್ಲರಿಗೂ

ಆಗಿರುವ ಭಾವನೆ. 'ಎಚ್ಚರವು ಎಲ್ಲರಿಗೂ ಸೇರಿದ ಪ್ರಪಂಚವನ್ನು ತೋರಿಸುತ್ತದೆ ; ಅದು ಸರ್ವಸಾಧಾರಣವಾದದ್ದು ; ಆದರೆ ಕನಸು ಹಾಗಲ್ಲ, ನಮನಮಗೇ ಬೇರೆಯಾಗಿ ಆಗುವ ಅವಸ್ಥೆಯದು' ಎಂಬುದು ನಮ್ಮ ಸ್ವಾಭಾವಿಕವಾದ ತಿಳಿವಳಿಕೆ. ಆದರೆ ನಿಜವೇನು ? ಕನಸಿನಲ್ಲಿಯೂ ಎಚ್ಚರದಂತೆಯೇ ಒಂದು ಪ್ರಪಂಚವು ಕಾಣಿಸುತ್ತಿರುತ್ತದೆ ; ಅದೂ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ –ಎಂಬ ಪ್ರಪಂಚವಿಭಾಗಗಳುಳ್ಳದ್ದಾಗಿಯೇ ಕಾಣುತ್ತಿರುತ್ತದೆ. ನಮ್ಮ ಹೊರಗೆ ಎಚ್ಚರದಲ್ಲಿ ಅನೇಕರು ಮನುಷ್ಯರೂ ಪ್ರಾಣಿಗಳೂ ಗಿಡಮರಗಳೂ ಇರುವಂತೆಯೇ ಇಲ್ಲಿಯೂ ಇರುವವೆಂಬ ಭಾವನೆಯಿರುತ್ತದೆ. ಅಲ್ಲಿಯೂ ಭೂತಭವಿಷ್ಯದ್ವರ್ತಮಾನಕಾಲಗಳ ವಿಭಾಗವು ಕಾಣುತ್ತಿರುತ್ತದೆ. ಅಲ್ಲಿಯೂ ನಮಗೆ ಮನೆ, ಬಾಗಿಲು, ನೆಂಟರಿಷ್ಟರು, ಪರಿವಾರ–ಎಲ್ಲವೂ ಎಚ್ಚರದಂತೆಯೇ ಕಾಣಿಸುತ್ತಿರುತ್ತದೆ. ಅಲ್ಲಿಯೂ ನಮ್ಮ ಯೋಗಕ್ಷೇಮಗಳಿಗಾಗಿ ಎಚ್ಚರದಲ್ಲಿ ಹೇಗೋ ಹಾಗೆಯೇ ಕಷ್ಟಪಡುತ್ತಿರುತ್ತೇವೆ. 'ಅದೆಲ್ಲ ಬರಿಯ ಕನಸಿನ ವಿಕಲ್ಪಮಾತ್ರ' ಎಂದು ಜರಿಯುವ ಹಾಗಿಲ್ಲ. ಏಕೆಂದರೆ ಇನ್ನುಮೇಲಾದರೂ 'ಇದು ಕನಸು' ಎಂದು ಯಾರಾದರೂ ಕನಸನ್ನು ಗುರುತಿಸುವದಕ್ಕೆ ಪ್ರಯತ್ನಿಸಿರಿ, ನೋಡೋಣ ! ಅದು ಆಗದ ಮಾತು. ಎಂದಿಗೂ ನಾವು ಕನಸನ್ನು 'ಕನಸು' ಎಂದು ತಿಳಿಯುವದಿಲ್ಲ; 'ಈಗ ಎಚ್ಚರವಾಗಿದ್ದೇನೆ' ಎಂದು ಭಾವಿಸಿಕೊಳ್ಳುವದು, ಬಾಧಿತವಾದ ಬಳಿಕ 'ಅದೆಲ್ಲ ಕನಸು' ಎನ್ನುವದು , ಇದೇ ಅಲ್ಲವೆ- ಕನಸಿನ ಸ್ವಭಾವ ? ಅಂತೂ ಕನಸೂ ಎಚ್ಚರದಷ್ಟೇ ವ್ಯಾಪಕವಾಗಿದೆ ; ಆದ್ದರಿಂದ ಶ್ರುತಿ ಅಲ್ಲಿಯೂ ನಮ್ಮ ಆತ್ಮನು 'ಸಪ್ತಾಂಗ ಏಕೋನವಿಂಶತಿಮುಖಃ' | ಸರ್ವಪ್ರಪಂಚದ ಆತ್ಮನೇ ಆಗಿರುತ್ತಾನೆ ಎನ್ನುತ್ತಿದೆ. ಅವೆಲ್ಲವೂ ಬರಿಯ ಮನಸ್ಸಿನ ಕಲ್ಪನೆ ಎನ್ನುವದಾದರೆ ಈ ಎಚ್ಚರವು ಹಾಗಲ್ಲ–ಎನ್ನುವದಕ್ಕೆ ನಮಗೆ ಯಾವ ಆಧಾರವೂ ಇಲ್ಲ. ಅನುಭವದಲ್ಲಿ ಎರಡು ಅವಸ್ಥೆಗಳೂ ಆಯಾ ಕಾಲಕ್ಕೆ ಒಂದೇ ಆಗಿರುತ್ತವೆ. ಎಚ್ಚರ ಕನಸುಗಳು ಒಂದೇ ಎಂಬುದು ಯುಕ್ತಿಯಲ್ಲ, ಅನುಭವದ ಪರೀಕ್ಷೆಯಿಂದಾದ ಸಿದ್ಧಾಂತ ಎಂಬುದನ್ನು ನೆನಪಿನಲ್ಲಿಡಬೇಕು.

ಇನ್ನು ಸುಷುಪ್ತಿ ಅಥವಾ ಕನಸಿಲ್ಲದ ಎರಡನೆಯದರ ಅರಿವಿಲ್ಲದ್ದ ಅವಸ್ಥೆ. ಸಾಮಾನ್ಯಜನರು ಕನಸಿಗೆ ಕೊಡುವಷ್ಟು ಬೆಲೆಯನ್ನು ಕೂಡ ಈ ಅವಸ್ಥೆಗೆ ಕೊಡುತ್ತಿಲ್ಲ. ಏಕೆಂದರೆ ತನಿನಿದ್ರೆಯ ವಿಷಯಕ್ಕೆ ಅವರಿಗೆ ಯಾವ ಸಂಶಯವೂ ಇಲ್ಲ. 'ಅದನ್ನು ವಿಚಾರಿಸತಕ್ಕದ್ದೇನೂ ಇಲ್ಲ. ಅಲ್ಲಿ ಕೊರಡಿನಂತೆ ಬಿದ್ದಿರುತ್ತಾರೆ, ಅಷ್ಟೆ' ! ಎನ್ನುತ್ತಿದಾರೆ. ಆದರೂ ನಿದ್ರೆ ಎಂಬುದು ಬಹಳ ಬೆಲೆಯುಳ್ಳ ಅನುಭವ. ಮಕ್ಕಳಿಗೂ ಮುದುಕರಿಗೂ ಈ ಅನುಭವವೇ ಬಹುಭಾಗದ ಕಾಲವನ್ನು ಆಕ್ರಮಿಸಿಕೊಂಡಿರುತ್ತದೆ. ಯಾವದಾದರೂ ಕಾರಣದಿಂದ ನಿದ್ರೆಕಡಿಮೆಯಾದರೆ ಶರೀರದ ಸ್ವಾಸ್ಥ್ಯವೇ ಕೆಡುತ್ತದೆ; ಬುದ್ಧಿಯು ಅವ್ಯವಸ್ಥಿತವಾಗು

ತ್ತದೆ. ಆದ್ದರಿಂದ ಅದರಲ್ಲಿರುವ ವಿಶೇಷವೇನೆಂಬುದನ್ನು ವಿಚಾರಿಸತಕ್ಕದ್ದು ಅವಶ್ಯ. ಎಚ್ಚರಕನಸುಗಳಿಗೆ ಹೋಲಿಸಿದರೆ ಅದೊಂದು ಏನೂ ಬರೆಯದ ಬರಿಯ ಸ್ಲೇಟಿನಂತೆ ಇರುತ್ತದೆ ಎನ್ನಬಹುದು. ಎಚ್ಚರದಲ್ಲಿಯಾಗಲಿ ಕನಸಿನಲ್ಲಿಯಾಗಲಿ ನಾವು ಕಂಡ ದೃಶ್ಯಗಳು ಒಂದಿಷ್ಟೂ ಉಳಿಯದಂತೆ ಅದೆಲ್ಲವನ್ನೂ ಅಳಿಸಿಹಾಕಿರುವ ಅವಸ್ಥೆಯದು. "ಎಚ್ಚರದಲ್ಲಿ ನಮ್ಮ ತಿಳಿವಳಿಕೆಯಲ್ಲಿ ಕೊರಿತೆಯಿರಬಹುದು. ಅಜ್ಞಾನವು ಬಹಳವಾಗಿರುತ್ತದೆ; ಕನಸಿನಲ್ಲಿ ಅವ್ಯವಸ್ಥಿತವಾಗಿರುತ್ತದೆ, ಆದರೆ ತನಿನಿದ್ರೆಯ ವಿಷಯಕ್ಕೆ ನಮ್ಮ ಭಾವನೆ ಏನು ? ಅಲ್ಲಿ ತಿಳಿವಳಿಕೆಯಲ್ಲಿ ಕೊರತೆಯಿಲ್ಲ, ಸಂಶಯವಿಲ್ಲ, ನಿಶ್ಚಯವೂ ಇಲ್ಲ. ಅಲ್ಲಿ 'ನಾನು ಒಬ್ಬನೇ ಇರುತ್ತೇನೆ' ಎಂಬ ಗಟ್ಟಿಯಾದ ನಂಬಿಕೆ ಪ್ರತಿಯೊಬ್ಬನಿಗೂ ಇರುತ್ತದೆ. ಅಲ್ಲಿ ನಾವೇ ಇರುವದಿಲ್ಲ-ಎಂಬ ಶಂಕೆಯಾದರೂ ಜನರಿಗೆ ಇದ್ದಿದ್ದರೆ ಆಗ ನಿದ್ರಿಸುವದಕ್ಕೆಂದು ಹಾಸಿಗೆಯೇ ಮುಂತಾದವುಗಳನ್ನು ಅಷ್ಟು ಉತ್ಸಾಹದಿಂದ ಯಾರೊಬ್ಬರೂ ಸಜ್ಜುಗೊಳಿಸುತ್ತಿರಲಿಲ್ಲ. ಸುಷುಪ್ತಿಯ ವಿಷಯಕ್ಕೆ ನಮಗೆ ಯಾವ ಅಂಜಿಕೆಯೂ ಇಲ್ಲವೆಂಬುದು ಮಾತ್ರವಲ್ಲ ; ಅದು ಬೇಕು ಎಂದು ಹಾತುವರಿಯುತ್ತಿರುತ್ತೇವೆ. ಅಲ್ಲಿ ಆಗುವ ಸುಖವು ಹೇಗಿರುತ್ತದೆ?-ಎಂದರೆ ಅದನ್ನು ಬಣ್ಣಿಸುವದು ಯಾವ ಕವಿಗೂ ಸಾಧ್ಯವಲ್ಲ. ಎಚ್ಚರಕನಸುಗಳಲ್ಲಿರುವಂತೆ ಅಲ್ಲಿ ಯಾವ ವಿಶೇಷಾನುಭವವೂ ಇರುವದಿಲ್ಲ. ಆದರೂ ಸುಷುಪ್ತಿಯ ಅನುಭವವೇ ನಮಗೆ ಇಲ್ಲ ಎಂಬುದನ್ನು ನಾವು ಯಾರೂ ಒಪ್ಪೆವು. ಅಲ್ಲಿ ಆಗುವ ಅನುಭವವು ಇಂದ್ರಿಯಜನ್ಯವಾದ ಅನುಭವಕ್ಕಿಂತಲೂ ಮನೋಜನ್ಯವಾದ ಅನುಭವಕ್ಕಿಂತಲೂ ಅತ್ಯಂತ ವಿಲಕ್ಷಣವಾಗಿರುತ್ತದೆ. ಯೋಗಾದಿಸಾಧನಗಳಿಲ್ಲದೆ, ಶಾಸ್ತ್ರಾದಿಗಳಿಂದ ಜ್ಞಾನವನ್ನು ಪಡೆದುಕೊಳ್ಳದೆ, ನಮ್ಮ ಸ್ವರೂಪವನ್ನೇ ನಾವು ಅನುಭವಿಸುತ್ತಿರುವ ವಿಲಕ್ಷಣಾನುಭವವದು. ಅದನ್ನು ನಿರ್ವಿಕಲ್ಪಾನುಭವ ಎನ್ನುತ್ತಾರೆ. ಇಂಥದ್ದು, ಅಂಥದ್ದು-ಎಂಬ ವಿಶೇಷದ ಅರಿವಿಲ್ಲದೆ ಆಗುವ ಅನುಭವಮಾತ್ರವದು.

ಈ ನಿರ್ವಿಕಲ್ಪಾನುಭವವು ನಮಗೆ ಎಚ್ಚರದಲ್ಲಿಯೂ ಇದೆಯೆ ? ಇದೆ. ಏಕೆಂದರೆ ಸುಷುಪ್ತಿಯಲ್ಲಿರುವ ನಮ್ಮ ಸ್ವರೂಪವು ಇಲ್ಲಿಯೂ ಇದ್ದೇ ಇರಬೇಕು. ಇಂದ್ರಿಯದಿಂದ ಹೊರಗಿನ ವಿಷಯಗಳನ್ನು ನಾವು ಬಿಡಿಬಿಡಿಸಿ ಅರಿತುಕೊಳ್ಳುತ್ತಿದೇವೆ ; ಮನಸ್ಸಿನಲ್ಲಿ ಒಳಗೆ ಆಗುವ ಸುಖದುಃಖಾದಿಗಳನ್ನು ಅನುಭವಿಸುತ್ತಿದೇವೆ. ಆದರೆ ಇಂದ್ರಿಯಗಳು, ಮನಸ್ಸು-ಎಲ್ಲವನ್ನೂ ಸೇರಿಸಿಕೊಂಡ ಒಟ್ಟು ಎಚ್ಚರವನ್ನೇ ನಾವು ಅರಿಯುವದು ಹೇಗೆ ? ನಮಗೆ ಒಟ್ಟು ಎಚ್ಚರದ ಅರಿವು ಆಗುತ್ತಿರುವದು ಏತರಿಂದ ? ಇದೇ ನಿರ್ವಿಕಲ್ಪಾನುಭವದಿಂದಲೇ. ನಾನು ಎಚ್ಚರವನ್ನು ಅನುಭವಿಸುತ್ತೇನೆ, ಕನಸನ್ನು ಅನುಭವಿಸುತ್ತೇನೆ, ತನಿನಿದ್ರೆಯನ್ನು

ಅನುಭವಿಸುತ್ತೇನೆ–ಎಂದು ಹೇಳುವದು ಯಾವ ಅನುಭವದ ಆಧಾರದಿಂದ ? ಈ ನಿರ್ವಿಕಲ್ಪಾನುಭವದ ಆಧಾರದಿಂದಲೇ ಅಲ್ಲವೆ ? ಹೀಗೆ 'ಅವಸ್ಥಾತ್ರಯವನ್ನು ಅನುಭವಿಸುತ್ತೇನೆ' ಎನ್ನುವಾಗ ನಾನು ಎಂದರೆ ಯಾವದೆಂದು ತಿಳಿಯಬೇಕು ? ಅದು ಶರೀರೇಂದ್ರಿಯಮನಸ್ಸುಗಳಿಂದೊಡಗೂಡಿರುವ ಭೋಕ್ತ್ರಾತ್ಮನೇನು? ಅಲ್ಲ, ಏಕೆಂದರೆ ಕನಸುತನಿನಿದ್ರೆಗಳಲ್ಲಿ ಈ ಶರೀರಾದಿಗಳ ಅರಿವು ನಮಗೆ ಆಗುವಂತೆಯೇ ಇಲ್ಲ. ಆದ್ದರಿಂದ ಇಲ್ಲಿ ನಮಗೆ ಭೋಕ್ತ್ರಾತ್ಮನಿಗಿಂತ ವಿಲಕ್ಷಣನಾದ ಬೇರೆಯಾದ "ನಾನು" ಇಲ್ಲಿ ಅನುಭವಕ್ಕೆ ಬರುತ್ತಿದೆ. ಪಂಚಕೋಶವಿವೇಕದಲ್ಲಿ ಶರೀರಾದಿಗಳನ್ನು ಕ್ರಮಕ್ರಮವಾಗಿ ಪ್ರವಿಲಯಮಾಡಿಕೊಂಡು ಕೊನೆಗೆ ಆನಂದಮಯನೆಂಬ ಭೋಕ್ತ್ರಾತ್ಮನನ್ನು ಕಂಡುಕೊಂಡೆವು. ಆ ಆತ್ಮನಿಗೆ ಪುಚ್ಛವೆಂದು ತಿಳಿಸಿದ ಆನಂದಸ್ವರೂಪವಾದ ಬ್ರಹ್ಮವೇ ಈ ನಾನು.

ಈ ಆತ್ಮನ ಅನುಭವವನ್ನು ಮನಸ್ಸಿಗೆ ತಂದುಕೊಡುವದಕ್ಕಾಗಿ 'ಶ್ರುತಿಯು 'ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷ್ವಜಾತೇ' ‖ (ಮುಂ.) ಎಂದು ಎರಡು ಹಕ್ಕಿಗಳ ದೃಷ್ಟಾಂತವನ್ನು ಉದಾಹರಿಸಿದೆ. ಶರೀರವೆಂಬ ವೃಕ್ಷವನ್ನು ಅವಲಂಬಿಸಿರುವ ಇಬ್ಬರು ಆತ್ಮರುಗಳಲ್ಲಿ ಭೋಕ್ತ್ರಾತ್ಮನು ಒಬ್ಬನು ; ಅವನು ಇಲ್ಲಿ ಬಗೆಬಗೆಯ ಕ್ರಿಯಾಫಲಗಳನ್ನು ಅನುಭವಿಸುತ್ತಿರುವನು. ಅವನನ್ನುಕೂಡ ನೇರಾಗಿ ನೋಡುತ್ತಿರುವ ಸಾಕ್ಷಿಯು ಇನ್ನೊಬ್ಬನು. ಅವನೇ ಈ ಅವಸ್ಥಾತ್ರಯಸಾಕ್ಷಿಯಾದ ನಮ್ಮ ನಿಜವಾದ ಆತ್ಮನು. ಅವನ ಸ್ವರೂಪವೂ ಈ ನಿರ್ವಿಕಲ್ಪಕಾನುಭವದಿಂದಲೇ ಆಗಬೇಕಾಗಿದೆ.

---

## ೧೯. ಅವಸ್ಥಾತ್ರಯಪ್ರಕ್ರಿಯೆ (ಮುಂದುವರಿದದ್ದು)

### ( 5 8–62 )

ಅವಸ್ಥೆಗಳ ಸ್ವರೂಪವನ್ನು ವಿಚಾರಮಾಡುವದಕ್ಕೆ ಹೊರಟಾಗ ಎಚ್ಚರವೆಂಬ ಅವಸ್ಥೆಯು ಪ್ರಪಂಚದೊಳಗಿಲ್ಲ, ಪ್ರಪಂಚವೇ ಆ ಅವಸ್ಥೆಯೊಳಗೆ ತೋರುತ್ತಿದೆ ಎಂದು ತಿಳಿದದ್ದಾಯಿತು. ಎಚ್ಚರಕ್ಕೂ ಎಚ್ಚರದ ಪ್ರಪಂಚಕ್ಕೂ ಅವಿನಾಭಾವಸಂಬಂಧವಿದೆ ; ಒಂದನ್ನೊಂದು ಬಿಟ್ಟು ಇರುವಂತೆಯೇ ಇಲ್ಲ ಎಂದೂ ತಿಳಿಯಿತು. ಎಚ್ಚರದೊಳಗೇ ಕಾಲದೇಶನಿಮಿತ್ತಗಳು ವಸ್ತುಗಳಿಗೆ ಕಟ್ಟುಬಿದ್ದಿರುತ್ತವೆ. ಎಚ್ಚರವು ಕಾಲದಲ್ಲಿಲ್ಲ ಎಂದೂ ಗೊತ್ತಾಯಿತು. ಇದರಂತೆಯೇ ಸ್ವಪ್ನದ ವಿಷಯದಲ್ಲಿಯೂ ತಿಳಿಯಬೇಕು. ಅದರೊಳಗೂ ಒಂದು ಪ್ರಪಂಚವಿದೆ ; ಸ್ವಪ್ನಕ್ಕೂ ಸ್ವಾಪ್ನಪ್ರಪಂಚಕ್ಕೂ ಅವಿನಾಭಾವಸಂಬಂಧವಿದೆ.

ಆ ಪ್ರಪಂಚವೊಳಗೇ ಅದಕ್ಕೆ ಅಸಾಧಾರಣವಾಗಿರುವ ಕಾಲದೇಶನಿಮಿತ್ತಗಳೂ ಕಾಣುತ್ತವೆ, ಅದೂ ಕಾಲದೊಳಗಿಲ್ಲ-ಎಂದು ನಿಶ್ಚಯವಾಗಿರುತ್ತದೆ. ಹೀಗೆ ಈ ಎರಡು ಅವಸ್ಥೆಗಳ ವಿಷಯದಲ್ಲಿಯೂ ನಮ್ಮ ಸ್ವಾಭಾವಿಕವಾದ ಅಭಿಪ್ರಾಯವನ್ನು ಮಾರ್ಪಡಿಸಿಕೊಳ್ಳಬೇಕಾಗಿರುತ್ತದೆ. ಸುಷುಪ್ತಿಯಲ್ಲಿಯೋ ಎಂದರೆ ಯಾವ ಪ್ರಪಂಚದ ಜ್ಞಾನವೂ ಇಲ್ಲ ; ಸುಷುಪ್ತಿಯಿರುವಾಗ ಅದಕ್ಕಿಂತ ಹೊರಗ್ಯಾಗಿ ಜಾಗ್ರತ್ಸ್ವಪ್ನಗಳ ಪ್ರಪಂಚಗಳು ಎಲ್ಲಿಯೂ ಇರುವ ಸಂಭವವೇ ಇಲ್ಲ-ಎಂದೂ ನಿಶ್ಚಿತವಾಯಿತು.

ಸುಷುಪ್ತಿವಿಷಯಕವಾದ ಅನುಭವವು ಮಾತ್ರ ನಮ್ಮೆಲ್ಲರಿಗೂ ಇರುವದರಿಂದ ಆಗಲೂ ನಮ್ಮ ಆತ್ಮನು ಅಚ್ಚಳಿಯದೆ ಇರುತ್ತಾನೆ. ಅದೇ ಆತ್ಮನೇ ಎಚ್ಚರಕನಸುಗಳಲ್ಲಿಯೂ ಇರುತ್ತಾನೆ. ಆ ಆತ್ಮನಿಗೇ ಎಚ್ಚರಕನಸುಗಳಲ್ಲಿ ಎಲ್ಲಾ ಪ್ರಪಂಚವೂ ವಿಷಯವಾಗಿ ತೋರುತ್ತಿರುತ್ತದೆ- ಎಂದು ಹೇಳಬೇಕಾಗಿರುತ್ತದೆ. ಎಚ್ಚರದಲ್ಲಿ ನಾನು, ನಾನಲ್ಲದ್ದು-ಎಂಬ ವಿಭಾಗವ ಅರಿವು ಇದೆ. ಈ ಎರಡು ಅವಸ್ಥೆಗಳಲ್ಲಿಯೂ ಕನ್ನಡಿಯಲ್ಲಿ ಪ್ರತಿಬಿಂಬವು ತೋರುವಂತೆ ದೇಹೇಂದ್ರಿಯಗಳ ಸಂಬಂಧದಿಂದ ಆತ್ಮನಿಗೆ "ನಾನು" ಎಂಬ ಪ್ರಮಾತೃವಿನ ವೇಷವು ತೋರುತ್ತದೆ. ಈ ಎರಡು ಅವಸ್ಥೆಗಳಿಗೂ ಹೀಗೆ ಸಾಮ್ಯವು ತೋರುತ್ತಿದ್ದರೂ ಇವೆರಡನ್ನೂ ನಿರ್ವಿಕಲ್ಪಕಾನುಭವದಿಂದ ಬೆಳಗುತ್ತಿರುವ ಆತ್ಮನು ಇವೆರಡಕ್ಕಿಂತಲೂ ವ್ಯಾಪಕನಾಗಿ ಅವುಗಳಿಗಿಂತ ವಿಲಕ್ಷಣನಾಗಿರುತ್ತಾನೆ, ಆದ್ದರಿಂದಲೇ ಶ್ರುತಿಯು ಹೀಗೆನ್ನುತ್ತಿದೆ :

'ಸ್ವಪ್ನಾಂತಂ ಜಾಗರಿತಾಂತಂ ಚ ಉಭೌ ಯೇನಾನುಪಶ್ಯತಿ | ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ' || ಕಾ. ೨-೧-೪.

ಸ್ವಪ್ನಾವಸ್ಥೆಯನ್ನೂ ಜಾಗರಿತಾವಸ್ಥೆಯನ್ನೂ ಏತರಿಂದ ನೋಡುತ್ತಿರುತ್ತಾನೋ ಆ ಮಹಾವ್ಯಾಪಕವಾದ ಆತ್ಮಸ್ವರೂಪವನ್ನು ಅರಿತುಕೊಂಡನು ಶೋಕಿಸುವದಿಲ್ಲ-ಎಂಬುದು ಶ್ರುತಿಯ ಅರ್ಥ, ಈ ಎರಡು ಅವಸ್ಥೆಗಳಿಗೂ ಒಂದೊಂದು ಅದಕ್ಕದಕ್ಕೆ ಅಸಾಧಾರಣವಾಗಿರುವ 'ನಾನು' ಎಂಬ ಅವಸ್ಥಾಭಿಮಾನಿರೂಪವು ಇರುತ್ತದೆ. ಆ ರೂಪಕ್ಕೆ ಪ್ರಮಾತೃ ಎಂದು ಹೆಸರು. ಒಂದೊಂದು ಅವಸ್ಥೆಯಲ್ಲಿಯೂ ಒಂದೊಂದು ಶರೀರೇಂದ್ರಿಯಮನಸ್ಸುಗಳ ಸಂಘಾತವನ್ನು ತನ್ನದೆಂದಿಟ್ಟುಕೊಂಡಿರುವ ಅಭಿಮಾನಿಯಿರುತ್ತಾನೆ, ಅವುಗಳಿಗೂ ಆತ್ಮನಿಗೂ ಅನ್ಯೋನ್ಯಾಧ್ಯಾಸವಾಗಿರುವದರಿಂದ ಈ ಅಭಿಮಾನಿರೂಪವು ಎದ್ದುತೋರುತ್ತದೆ. ಆ ಅಭಿಮಾನಿಗೆ 'ಈ ಅವಸ್ಥೆಯು ನನಗೆ ಸಂಬಂಧಪಟ್ಟದ್ದು ; ಇದರಲ್ಲಿ ನನಗೆ ಲಾಭನಷ್ಟಗಳು ಆಗುತ್ತಿರುತ್ತವೆ' ಎಂಬ ಬುದ್ಧಿಯು ಬಲವಾಗಿದ್ದುಕೊಂಡು ಬಿಟ್ಟಿರುತ್ತದೆ. ಆದ್ದರಿಂದ ಆ ಪ್ರಮಾತೃವಿಗೆ ಅಲ್ಲಿಯ ಅನುಭವಗಳಿಂದ ಅಜ್ಞಾನನಿಮಿತ್ತವಾದ ಶೋಕವಾಗುತ್ತಿರುತ್ತದೆ. ಆದರೆ ಅವೆರಡನ್ನೂ ತನ್ನ ಚೈತನ್ಯಾನು

ಭವದಿಂದ ಬೆಳಗುತ್ತಿರುವ ಆತ್ಮನಿಗೆ ಯಾವ ಶೋಕವೂ ಇರುವದಿಲ್ಲ. ಕನ್ನಡಿ ಯಲ್ಲಿ ತೋರುವ ಪ್ರತಿಬಿಂಬದ ಸೋಂಕು ಮುಖಕ್ಕೆ ಎಳ್ಳಷ್ಟೂ ಇಲ್ಲದಿರುವಂತೆ ಆಯಾ ಅವಸ್ಥೆಗಳಲ್ಲಿಕೂಡ ನಿಜವಾದ ಆತ್ಮನಿಗೆ ಅವಸ್ಥೆಯ ಯಾವ ಸೋಂಕೂ ಇರುವದಿಲ್ಲ. ಒಂದೊಂದು ಅವಸ್ಥೆಯಲ್ಲಿಯೂ ಒಬ್ಬೊಬ್ಬ ಪ್ರಮಾತೃವು ಕಾಣು ತ್ತಿರುತ್ತಾನೆ. ಕನಸೆಂಬುದು ಎಚ್ಚರದ ಪೂರ್ಣವಾದ ಪ್ರತಿಲಿಪಿಯಂತೆ ಇರುತ್ತದೆ; ಆದರೆ ಎಚ್ಚರವಿರುವಾಗ ಕನಸಿಲ್ಲ, ಕನಸಿರುವಾಗ ಎಚ್ಚರವಿರುವದಿಲ್ಲ. ಇಷ್ಟೇ ಅಲ್ಲ. ಈ ಒಂದೊಂದು ಅವಸ್ಥೆಯೂ ತನ್ನತನ್ನ ಕಾಲಕ್ಕೆ ಎಚ್ಚರವೆಂದೇ ತೋರು ತ್ತಿರುತ್ತದೆ. ಸ್ವಪ್ನದೊಳಗೂ ಸ್ವಪ್ನದ ಪರಾಮರ್ಶವಾಗಬಹುದು. ಒಬ್ಬನು ತನ್ನ ಸ್ವಪ್ನದಲ್ಲಿಯೇ ಕನಸುನಿದ್ರೆಗಳನ್ನು ಅನುಭವಿಸಿ ಎಚ್ಚತ್ತು, ಆ ಅನುಭವ ವನ್ನು ಮತ್ತೊಬ್ಬರಿಗೆ ವರ್ಣಿಸಿದಂತೆಯೇ ಮೂರು ಅವಸ್ಥೆಗಳನ್ನೂ ತಿಳಿಯ ಬೇಕೆಂದು ಭಾಗವತದಲ್ಲಿದೆ. ಚೀನದ ಒಬ್ಬ ತತ್ತ್ವಜ್ಞಾನಿಯು ತಾನು ಚಿಟ್ಟೆ ಯಾಗಿರುವಂತೆ ಕನಸನ್ನು ಕಂಡು, ಚಿಟ್ಟೆಯು ಈಗಿನ ನಾನಾಯಿತೊ, ನಾನೇ ಚಿಟ್ಟೆಯಾಗಿದ್ದೆನೊ ?– ಎಂದು ವಿಚಾರಿಸತೊಡಗಿದನಂತೆ ! ಈ ಎರಡನ್ನೂ ಬೆಳಗುತ್ತಿದ್ದವನೇ ಆತ್ಮನೆಂಬುದು ಮಾತ್ರ ಅವನಿಗೆ ಹೊಳೆಯಲಿಲ್ಲ ! ಎರಡು ಅವಸ್ಥೆಗಳನ್ನೂ ತಕ್ಕಡಿಯಲ್ಲಿಟ್ಟು ತೂಗುವ ಸ್ಥಾನದಲ್ಲಿರುತ್ತಾನೆ, ಆ ಆತ್ಮನು ! ಅವನಿಗೆ ಎರಡರಲ್ಲಿ ಯಾವದೊಂದರ ಪಕ್ಷಪಾತವೂ ಇಲ್ಲದ್ದರಿಂದ ಈ ಎರಡರ ಲೇಪವೂ ಇಲ್ಲ. ಇದನ್ನು ಅರಿತುಕೊಂಡವನೇ ಆ ಜ್ಞಾನವಾದಮಾತ್ರದಿಂದ ಆ ಆತ್ಮನಾಗಿಬಿಟ್ಟಿರುವದರಿಂದ ಅವನಿಗೆ ಅವಸ್ಥಾನುಭವಕೃತವಾದ ಶೋಕಮೋಹ ಗಳಿಲ್ಲ. ಮಾನಾಪಮಾನಗಳಿಲ್ಲ, ನಿಂದಾಸ್ತುತಿಗಳಿಂದ ಏನೂ ಆಗುವಂತಿಲ್ಲ. ಅವನು 'ಆತ್ಮನ್ಯವಸ್ಥಿತಃ' ತನ್ನ ಆತ್ಮನಲ್ಲಿಯೇ ಇದ್ದುಕೊಂಡ ಬಿಟ್ಟಿರುತ್ತಾನೆ.

ಎಚ್ಚರದ ಪ್ರಪಂಚವು ಹೇಗೆ ಆಗುತ್ತದೆ ? ಬೈಬಲ್ ಮುಂತಾದ ಅವೈದಿಕ ಗ್ರಂಥಗಳಲ್ಲಿ ದೇವರು ಆರು ದಿನಗಳಲ್ಲಿ ಸೃಷ್ಟಿಮಾಡಿ ಏಳನೆಯ ದಿನ ವಿಶ್ರಾಂತಿ ಯನ್ನು ಪಡೆದನೆಂದಿದೆ. ವೇದದಲ್ಲಿ ಧಾತೃವು ಮುನ್ನಿನಂತೆಯೇ ಸೂರ್ಯಚಂದ್ರರೇ ಮುಂತಾದವುಗಳನ್ನು ಸೃಷ್ಟಿಸಿದನು–ಎಂದಿದೆ. ಆದರೆ ಕಾಲವನ್ನು ಯಾರು ಯಾವಾಗ ಹೇಗೆ ಸೃಷ್ಟಿಸಿದರು ? ಶ್ರುತಿಯಲ್ಲಿ ಹೇಳಿರುವ ಸೃಷ್ಟಿಯು ಸೃಷ್ಟಿಯಲ್ಲಿ ತಾತ್ಪರ್ಯವಿಟ್ಟುಕೊಂಡು ಹೊರಟದ್ದಲ್ಲ ; ವೇದಾಂತಾರ್ಥವಾದ ಆತ್ಮೈಕ್ಯವನ್ನು ಹೇಳುವದಕ್ಕೆ ಹೊರಟದ್ದು– ಎಂದು ಶ್ರೀಗೌಡಪಾದರು ಬರೆದಿರುತ್ತಾರೆ. ಇದೇ ನಿಜವೆಂಬುದಕ್ಕೆ ನಮ್ಮ ಜಾಗರಿತಾದ್ಯವಸ್ಥೆಗಳ ಅನುಭವವು ಆಧಾರವಾಗಿರುತ್ತದೆ. ಏಕೆಂದರೆ ಎಚ್ಚರವನ್ನು ಬಿಟ್ಟು ಅಲ್ಲಿ ಕಾಣುವ ಪ್ರಪಂಚವು ಬೇರೆ ಇರುವದಕ್ಕೆ ಆಗುವಂತೆಯೇ ಇಲ್ಲ. ಅವಸ್ಥೆಗಳ ಸಾಕ್ಷಿಯಾಗಿರುವ ಮಹಾವ್ಯಾಪಕನಾದ ಆತ್ಮನು ಮಹಾವ. ಯಾವಿಯಂತೆ ಎಚ್ಚರಕನಸುಗಳಲ್ಲಿ ಆಯಾ ಪ್ರಪಂಚವನ್ನು ಸೃಷ್ಟಿಮಾಡಿ, ಸುಷುಪ್ತಿಯಲ್ಲಿ ಎಲ್ಲವನ್ನೂ ನಿಃಶೇಷವಾಗಿ ತನ್ನಲ್ಲಿ ಅಡಕಮಾಡಿ

ಕೊಂಡಿರುತ್ತಾನೆ. 'ಅನಶ್ನನ್ನನ್ಯೋ ಅಭಿಚಾಕಶೀತಿ' ಎಂಬಂತೆ ಯಾವ ಪ್ರಪಂಚದ ಬಂಧದ ಸುಖದುಃಖಗಳನ್ನೂ ಅನುಭವಿಸದೆ ಶೋಕಮೋಹರಹಿತನಾಗಿರುತ್ತಾನೆ ಎಂಬುದು ಅನುಭವದಿಂದ ಗೊತ್ತಾಗುತ್ತಿದೆ ಸ್ವಪ್ನಜಾಗರಿತಗಳಲ್ಲಿ ಪ್ರಮಾತೃಗಳಾಗಿ ಸುಖದುಃಖಗಳೆಂಬ ಅಲೆಗಳ ಹೊಡೆತಕ್ಕೆ ಸಿಕ್ಕಿರುವವರೇ ಬಹಳ; ನಾನು ಪ್ರಮಾತೃವಲ್ಲ ಎಂದು ತಿಳಿದುಕೊಂಡಿರುವವರು ಬಹುವಿರಳ. ಮಹಾತ್ಮರಾದವರು ಸಾಕ್ಷಿಭಾವವನ್ನು ಅಳವಡಿಸಿಕೊಂಡು ಶೋಕಮೋಹಗಳಿಲ್ಲದೆ ಶಾಂತರಾಗಿರುತ್ತಾರೆ. ಕೆಲವರ ಅಭಿಪ್ರಾಯದಲ್ಲಿ ಪ್ರಮಾತೃತ್ವವೇ ಹೆಚ್ಚಿನ ಪುರುಷಾರ್ಥವಾಗಿರುತ್ತದೆ. ಕಷ್ಟಸುಖಗಳಿದ್ದರಲ್ಲವೆ, ಜೀವನ ? ಅವಿಲ್ಲದಿದ್ದರೆ ಏನು ಸ್ವಾರಸ್ಯವಿರುತ್ತದೆ? –ಎಂದು ಅವರು ಕೇಳುತ್ತಿರುತ್ತಾರೆ. ಬಂದಿಖಾನೆಗೆ ಬಂದು ಬಂದು ಪಳಗಿರುವ ದರಿದ್ರರಿಗೆ ಮನೆಗಿಂತ ಸೆರೆಮನೆಯೇ ಸುಖವೆಂದು ತೋರುವಂತೆ, ಮತ್ತೆಮತ್ತೆ ಹುಟ್ಟಿ ಸತ್ತು ಶೋಕಮೋಹಗಳನ್ನು ಅನುಭವಿಸುವದೇ ಸುಖವೆಂದು ಅವರಿಗೆ ತೋರಬಹುದು. ಆದರೆ ನಿಜವೇನು ? ಅವರಿಗೆ ಸುಷುಪ್ತಿಯಿಂದಾಗುವ ನಿರ್ವಿಕಲ್ಪಕ ಸುಖವು ಬೇಡವೆ? ಸಾಕ್ಷಿಯಾಗಿ ಎಲ್ಲವನ್ನೂ ನೋಡುತ್ತಿರುವೆನೆಂಬ ಜ್ಞಾನದಿಂದಾಗುವ ನಿತ್ಯತೃಪ್ತಿಯು ಅವರಿಗೆ ನಿಷ್ಪ್ರಯೋಜನವೆನಿಸೀತೇನು ?

ಕನಸಿಗೂ ಎಚ್ಚರಕ್ಕೂ ಸಂಬಂಧವೇನು? –ಎಂಬ ಪ್ರಶ್ನೆಗೆ ಸುಲಭವಾಗಿ ಉತ್ತರವನ್ನು ಹೇಳಬಹುದೆಂತ ತಟ್ಟನೆ ಕಾಣುತ್ತದೆ. ಆದರೆ ಈವರೆಗೂ ಅದು ಅಷ್ಟೇನೂ ಸುಲಭವಾಗಿರುವದಿಲ್ಲ. ಮನಸ್ಸಿನ ವಾಸನೆಗಳಿಂದ ಕನಸು ಆಗುತ್ತದೆ ಎಂದು ಕೆಲವರು : ಮನುಷ್ಯನು ತನ್ನ ಕಾಮಕ್ರೋಧಾದಿಗಳನ್ನು ಒತ್ತಿಟ್ಟದ್ದರಿಂದ ಅದರ ಫಲವಾಗಿ ಕನಸಿನಲ್ಲಿ ಅವು ರೂಪುಗೊಳ್ಳುತ್ತವೆ ಎಂದು ಕೆಲವರು ಮನಃಶಾಸ್ತ್ರಜ್ಞರು ಹೇಳುತ್ತಾರೆ. ಆದರೆ ಬರಿಯ ವಾಸನೆಗಳು ವಸ್ತುಗಳ ರೂಪವನ್ನು ತಳೆಯುವದು ಹೇಗೆ ? –ಎಂಬುದನ್ನು ಯಾರೂ ಬಿಡಿಸಿಹೇಳುವದಿಲ್ಲ. ಮೊದಲು ಮನಸ್ಸೆಂದರೆ ಯಾವದು ? ಶಾರೀರಶಾಸ್ತ್ರಜ್ಞರು ಅದನ್ನು ಮೆದುಳಿನ ವೃತ್ತಿಯೆಂದೇ ಭಾವಿಸಿರುತ್ತಾರೆ. ಆದರೆ ಈ ಅಭಿಪ್ರಾಯವು ಕೂಡ ಈಚೆಗೆ ಸಡಿಲವಾಗುತ್ತಿದೆ. ಭೌತಿಕಶಾಸ್ತ್ರಜ್ಞರೇ ಇದನ್ನು ಖಂಡಿಸುತ್ತಿದಾರೆ, ಚಾರ್ಲ್ಸ್ ಫಾಕ್ಸ್ ಎಂಬಾತನು ಹೀಗೆಂದು ಬರೆದಿದಾನಂತೆ :

We may safely conclude that so far as mind is concerned, its function is not in any intelligent sense dependent upon brain-structure, for when the structure collapses, the mind is still able to accomplish its purposes.

*Charles Fox ''Mind and its Body''*

ಮೆದುಳು ಕೆಟ್ಟರೂ ಮನಸ್ಸು ಕೆಲಸಮಾಡುತ್ತಲೇ ಇರುವದುಂಟೆಂದು ಈ ವಾಕ್ಯದ ಅಭಿಪ್ರಾಯ. ಆದರೆ ಇದು ಭೌತಿಕಶಾಸ್ತ್ರದ ವಿಷಯವೇ ಅಲ್ಲ ; ಸಾರ್ವತ್ರಿಕವಾದ ಅನುಭವವನ್ನು ನೋಡಿ. ಕನಸಿಗೆ ಎಚ್ಚರದ ಶರೀರವಾಗಲಿ, ಮನಸ್ಸಾಗಲಿ ಬರುವಹಾಗಿದೆಯೆ? ಜಾನ್ಸನ್‌ನು ತನ್ನ ಕನಸಿನಲ್ಲಿ ಯಾವನಿಂದಲೋ ವಾದದಲ್ಲಿ ಜಿತನಾಗಿಬಿಟ್ಟನಂತೆ ; ಆಗ ಆವನಿಗೆ ಅದೇ ಮನಸ್ಸು ಇದ್ದಿತೆಂದು ಹೇಳಬಹುದೆ? 'ಸೈಕೋ ಅನ್ಯಾಲಿಸಿಸ್' (psycho-analysis) ಎಂಬ ಮನೋವಿಶ್ಲೇಷಣ ಶಾಸ್ತ್ರಜ್ಞರು ಕನಸಿನಲ್ಲಿ ಆಗುವ ಅನುಭವವನ್ನು ರೋಗಿಯಿಂದ ತಿಳಿದುಕೊಂಡು ಅದಕ್ಕೆ ಔಷಧಿಮಾಡುತ್ತಾರೆ. ಕೆಲವು ಕನಸುಗಳಲ್ಲಿ ಕಂಡ ದೃಶ್ಯಗಳ ಸಹಾಯದಿಂದ ಮುಂದೆ ಆಗುವದನ್ನು ಈಗಲೆ ಹೇಳಿಬಿಡಬಹುದೆರದು ಒಬ್ಬ ಪಾಶ್ಚಾತ್ಯತತ್ತ್ವ ಶಾಸ್ತ್ರಜ್ಞನು ತಾನು ಮಾಡಿದ ಕೆಲವು ಶೋಧನೆಗಳಿಂದ (An Experiment with Time T. W. Dunne) ನಿರ್ಣಯಿಸಿರುತ್ತಾನೆ. ಕೆಲವು ಸೂಚಕ ಸ್ವಪ್ನಗಳಿವೆಯೆಂದು 'ಸ್ವಪ್ನಾಧ್ಯಾಯ'ವೇ ಮುಂತಾದವುಗಳ ಪ್ರಮಾಣದಿಂದ ನಮ್ಮವರೂ ಅಭಿಪ್ರಾಯಪಡುತ್ತಿದಾರೆ. ಆದರೆ ಈ ಸೂಚಕಸ್ವಪ್ನಗಳಿಂದ ಕನಸಿಗೂ ಎಚ್ಚರಕ್ಕೂ ಸಂಬಂಧವಿದೆ ಎಂದು ನಿರ್ಣಯಿಸಬಹುದೆ ? ಇದು ಬಹುಜನರ ನಂಬಿಕೆಯಾಗಿರಬಹುದು. ಆದರೆ ಕನಸನ್ನು ಆಗ್ಗೆ ಎಚ್ಚರವೆಂದೇ ಜನರು ಭಾವಿಸುತ್ತಾರೆ ; ಅಲ್ಲಿಯೂ ಅದರೊಳಗಿನ ಕನಸಿನಲ್ಲಿ ತಾವು ಕಂಡ ಬಲದಿಂದ ದೃಶ್ಯಗಳ 'ಭವಿಷ್ಯ'ವನ್ನು ಹೇಳಿ ಅದರಂತೆ ಆಯಿತೆಂದು ಬಹುಜನರು ಒಪ್ಪಿದರೆ, ಅಷ್ಟುಮಾತ್ರದಿಂದ ನಿಜವಾಗಿಯೂ ಅಲ್ಲಿ ಅನುಭವಿಸಿದ ಎಚ್ಚರಕನಸುಗಳು ಎರಡು ಬೇರೆಬೇರೆಯ ಅವಸ್ಥೆಗಳೆಂದೂ ಅವುಗಳಿಗೂ ಕಾಲಕೃತಸಂಬಂಧವು ಇತ್ತೆಂದೂ ಹೇಳಬಹುದೇನು? ಸಲ್ಲದ ನಾಣ್ಯವನ್ನು ಜನರೆಲ್ಲರೂ ಒಪ್ಪಿ ಚಲಾವಣೆಯಲ್ಲಿಟ್ಟುಕೊಂಡರೂ ಅದು ಸರಕಾರದ ದೃಷ್ಟಿಯಿಂದ ಸಲ್ಲದ ನಾಣ್ಯವೇ ತಾನೆ ? ಹೀಗೆಯೇ ಇಲ್ಲಿ 'ಅನುಭವ'ವೆಂಬ ಸರಕಾರದ ದೃಷ್ಟಿಯಿಂದ ಈ ಶೋಧನೆಗಳೂ ವ್ಯವಹಾರಗಳೂ ಸಲ್ಲದ ನಾಣ್ಯಗಳೇ ಸರಿ. ಕನಸು ನಮ್ಮ ಶರೀರದ ಒಳಗೆ ಆಗುವದೆಂದೂ ಕನಸು 'ಆದಮೇಲೆ' ಎಚ್ಚರವಾಗಿ ಅದು ಬಾಧಿತವಾಗುವದೆಂದೂ ನಾವು ಎಷ್ಟೇ ಗಟ್ಟಿಯಾಗಿ ನಂಬಿಕೊಂಡಿದ್ದರೂ ಈ ಎರಡು ಅವಸ್ಥೆಗಳ ಅನುಭವವು ನಿಜವಾಗಿ ಹೇಗಿದೆ ? ಜಾಗ್ರತ್ಸ್ವಪ್ನಗಳು ಒಂದರ ಪಕ್ಕದಲ್ಲೊಂದಿಲ್ಲ, ಒಂದಾಗುತ್ತಲೂ ಒಂದು ಆಗುವದಿಲ್ಲ ; ಅವೆರಡಕ್ಕೂ ದೇಶ, ಕಾಲ, ಕಾರ್ಯಕಾರಣಭಾವಕೃತವಾದ ಯಾವ ಸಂಬಂಧವೂ ಇಲ್ಲವೇ ಇಲ್ಲ. ಅವುಗಳೆರಡರಲ್ಲಿಯೂ ಒಂದೊಂದು ಬೇರೆಬೇರೆಯ ಅಸಾಧಾರಣವಾದ ಪ್ರಪಂಚವಿದೆ ; ಆ ಪ್ರಪಂಚದಲ್ಲಿ ಬೇರೆಬೇರೆಯ ದೇಶಕಾಲಗಳಿವೆ. ಆಯಾ ಅವಸ್ಥೆಗೆ ತಕ್ಕ ಕಾರ್ಯಕಾರಣಭಾವ ಸಂಬಂಧವಿದೆ. ಶ್ರೀಗೌಡಪಾದಾಚಾರ್ಯರು ಹೇಳಿರುವಂತೆ ;

ಸ್ವಪ್ನದೃಕ್‌ಚಿತ್ತದೃಶ್ಯಾಸ್ತೇ ನ ವಿದ್ಯಂತೇ ತತಃ ಪೃಥಕ್ |
ತಥಾ ತದ್ದೃಶ್ಯಮೇವೇದಂ ಸ್ವಪ್ನದೃಕ್ಚಿತ್ತಮಿಷ್ಯತೇ ||
ಜಾಗ್ರಚ್ಚಿತ್ತೇಕ್ಷಣೀಯಾಸ್ತೇ ನ ವಿದ್ಯನ್ತೇ ತತಃ ಪೃಥಕ್ |
ತಥಾ ತದ್ದೃಶ್ಯಮೇವೇದಂ ಜಾಗ್ರತಶ್ಚಿತ್ತಮಿಷ್ಯತೇ ||

ಸ್ವಪ್ನದಲ್ಲಿಯೂ ಎಚ್ಚರದಲ್ಲಿಯೂ ಕಾಣುವ ದೃಶ್ಯಗಳು ಆಯಾ ಅವಸ್ಥೆಯಲ್ಲಿರುವ ಚಿತ್ತಕ್ಕೆ ಮಾತ್ರ ಕಾಣುವವುಗಳಾಗಿವೆ, ಆಯಾ ಚಿತ್ತವನ್ನು ಬಿಟ್ಟು ಆ ದೃಶ್ಯಗಳು ಬೇರೆಹೋಗುವಂತೆಯೇ ಇಲ್ಲ. ಆಯಾ ಚಿತ್ತವೂ ಆಯಾ ಅವಸ್ಥೆಯ ಆತ್ಮನಿಗೇ ಕಟ್ಟುಬಿದ್ದು ಕಾಣತಕ್ಕದ್ದಾಗಿರುತ್ತದೆ ; ಆ ಅವಸ್ಥೆಯನ್ನು ಬಿಟ್ಟು ಬೇರೆಕಡೆಗೆ ಹೋಗುವಂತೆಯೇ ಇಲ್ಲ. ಆಯಾ ಪ್ರಪಂಚವೂ ಅಲ್ಲಲ್ಲಿಯೇ ತೋರಿಹಾರತಕ್ಕದ್ದು, ಅಷ್ಟೆ.

---

## ೨೦. ದ್ರಷ್ಟೃದೃಶ್ಯವಿವೇಕ
### ( 6-8-62 )

ಜಾಗ್ರತ್ಸ್ವಪ್ನಗಳಲ್ಲಿ ಪ್ರಮಾತೃಗಳು ಬೇರೆಬೇರೆ ಎಂಬುದನ್ನು ಕಂಡುಕೊಂಡದ್ದಾಯಿತು. ಅವೆರಡು ಅವಸ್ಥೆಗಳಲ್ಲಿಯೂ ಆತ್ಮನು ಒಬ್ಬನೇ ; ಅವನಿಗೆ ಪ್ರಮಾತೃತ್ವದ ವೇಷಗಳು ಮಾತ್ರ ಎರಡು. ಕನಸು, ಎಚ್ಚರ–ಎಂದು ಎರಡು 'ಅವಸ್ಥೆ'ಗಳು– ಎಂದು ನಮ್ಮ ವ್ಯವಹಾರ; ಆದರೆ ಬಹುವಚನವು ಒಂದೇ ದೇಶದಲ್ಲಿ ಇರುವ ಎರಡು ವಸ್ತುಗಳಿಗೆ ಅಥವಾ ಒಂದೇ ಕಾಲದಲ್ಲಿ ಒಂದಾದ ಮೇಲೊಂದು ಆಗುವ ಎರಡು ಘಟನೆಗಳಿಗೆ ಅನ್ವಯಿಸುತ್ತದೆ. ಎಚ್ಚರಕನಸುಗಳು ಹಾಗಿಲ್ಲ ; ಅವುಗಳಲ್ಲಿ ಒಂದನ್ನು ಅಳಿಸಿಹಾಕಿಯೇ ಇನ್ನೊಂದು ಬರುತ್ತದೆ. ಇದಲ್ಲದೆ ಎರಡವಸ್ಥೆಗಳನ್ನೂ ನೋಡುತ್ತಿರುವ ಆತ್ಮನಿಗೆ ದೂರದಲ್ಲಿ ಅವನಿಗಿಂತ ಬೇರೆಯಾಗಿ ಈ ಎರಡು ಅವಸ್ಥೆಗಳಿರುವದಿಲ್ಲ. ಆತ್ಮನಿಗೆ ಹತ್ತಿಕೊಂಡೇ ಅವು ತೋರಬೇಕು, ಒಂದೊಂದೇ ತೋರಬೇಕು. ಅವುಗಳನ್ನು 'ಒಂದು', 'ಎರಡು' ಎಂಬ ಸಂಖ್ಯೆಯನ್ನು ಕೊಟ್ಟು ವ್ಯವಹರಿಸುವದಕ್ಕೂ ಬರುವಂತಿಲ್ಲ. ಏಕೆಂದರೆ ಅವು ಒಂದೇ ದೇಶಕಾಲಗಳಲ್ಲಿ ಇಲ್ಲ. ಅವು ಆತ್ಮನಿಗಿಂತ ಬೇರೆ ಎಂದಾಗಲಿ, ಆತ್ಮನೇ ಎಂದಾಗಲಿ ಹೇಳುವದಕ್ಕೆ ಬರುವದಿಲ್ಲ. ಅವುಗಳ ತೋರಿಕೆಯ ಸ್ವರೂಪವು ಅದೃಷ್ಟದೃಷ್ಟನಷ್ಟ–ತೋರದೆ ಇದ್ದು ತೋರಿ ಹಾರುವ–ಸ್ವಭಾವದ್ದು ; ಆದ್ದರಿಂದ ಆತ್ಮನಿಗಿಂತ ಬೇರೆಯಾಗಿ ಅವು ಇಲ್ಲವೇಇಲ್ಲ, ಎನ್ನುವದೇ ಸರಿ.

ವ್ಯವಹಾರದಲ್ಲಿ ಎಚ್ಚರ, ಕನಸು-ಎಂಬ ಎರಡು ಮಾತುಗಳಿರುವದು ನಿಜ. ಆದರೆ ಯಾವದು ಕನಸು, ಯಾವದು ಎಚ್ಚರ ?– ಎಂದು ಗೊತ್ತುಮಾಡಿ ಹೇಳುವದಕ್ಕೆ ಬರುವಂತಿಲ್ಲ. ಅದು ಕನಸು, ಇದು ಎಚ್ಚರ– ಎಂದು ನಮಗೆ ಭಾವನೆಯಾಗುತ್ತಿರುವದೂ ನಿಜ; ಆದರೆ ಕಾಲದಲ್ಲಿ ಅಥವಾ ದೇಶದಲ್ಲಿ ದೂರದಲ್ಲಿದ್ದದ್ದನ್ನು 'ಅದು' ಎಂದೂ ಹತ್ತಿರವಿದ್ದರೆ 'ಇದು' ಎಂದೂ ಕರೆಯಬೇಕಷ್ಟೆ ? ಈ ಅವಸ್ಥೆಗಳಿಗೆ ಸಮಾನವಾಗಿರುವ ದೇಶಕಾಲಗಳೇ ಇಲ್ಲ. 'ಇವು' ಎಂಬ ಬಹುವಚನದ ಶಬ್ದವನ್ನು ಉಪಯೋಗಿಸದೆ ತಿಳಿಯಿಸುವದಕ್ಕೆ ಬರುವಂತಿಲ್ಲವೆಂಬುದೊಂದೇ ಕಾರಣದಿಂದ ಈ ಶಬ್ದವನ್ನುಪಯೋಗಿಸಬೇಕಾಗಿದೆ. ಇದಲ್ಲದೆ ದ್ವಿತೀಯವಸ್ತುವನ್ನು ಕಾಣುವ ಯಾವ ಯಾವ ಅವಸ್ಥೆಯು ನಮ್ಮ ಅನುಭವದಲ್ಲಿರುವದೋ ಅದನ್ನೆಲ್ಲ ಎಚ್ಚರವೆಂದೇ ನಾವು ಭಾವಿಸಿರುತ್ತೇವಾದ್ದರಿಂದ ಇದು ಎಚ್ಚರ, ಇದು ಕನಸು–ಎಂದು ಗುರುತಿಸುವದಕ್ಕೆ ಆಗುವಂತೆಯೇ ಇಲ್ಲ. 'ಕನಸು' ಎಂಬುದೊಂದು ಜನರಿಗೆ ಮಂಕುಬೂದಿಯನ್ನು ತಳಿಯುವ ಯಕ್ಷಿಣಿ ಎನ್ನಬಹುದು. ನಾವು ಅದನ್ನು 'ಬರಿಯ ಕನಸು' ಎಂದು ಎಷ್ಟೇ ಆಸಡ್ಡೆಯಿಂದ ಕಂಡರೂ ಅದು ಬಂದಾಗಲೆಲ್ಲ ಅದನ್ನು 'ಎಚ್ಚರ'ವೆಂದೇ ಭಾವಿಸಬೇಕಾಗಿರುತ್ತದೆ ; ಅದರ ಮಹಿಮೆ ಇಂಥದ್ದು ! ಹೀಗೆ ಎರಡು ಅವಸ್ಥೆಗಳೆಂಬುದೇ ಸುಳ್ಳು, ಇನ್ನು ಮೂರನೆಯದೆಂಬುದೆಲ್ಲಿ ಬಂದೀತು ? ಅವಸ್ಥೆಗಳೆಂಬುದೊಂದು ಯುಕ್ತಿಹೀನಪ್ರಕಾಶ ; ಅವು ತೋರುತ್ತವೆ. ಅದಕ್ಕೆ ಯುಕ್ತ್ಯನುಭವಗಳ ಬೆಂಬಲವಿಲ್ಲ. ಅವುಗಳನ್ನೆಲ್ಲ ಬೆಳಗುತ್ತಿರುವ ಆತ್ಮನೊಬ್ಬನೇ ನಿತ್ಯಚೈತನ್ಯಸ್ವರೂಪನಾಗಿರುವ ಪರಮಾರ್ಥ. ವಾರ್ತಿಕಕಾರರೆಂದಿರುವಂತೆ :

ನಾಸ್ಯ ಸ್ವಾಪಃ ಪ್ರಬೋಧೋ ವಾ ಕುತಃ ಸ್ವಪ್ನಸ್ಯ ಸಂಭವಃ |
ಪ್ರತ್ಯಕ್ಸ್ವಭಾವ ಏವಾಸ್ಯ ಜಾಗ್ರತ್ಸ್ವಪ್ನಸುಷುಪ್ತಯಃ ||

ಸುಪ್ತಃ ಪ್ರಬುದ್ಧ ಇತ್ಯೇವಂ ಸ್ವಪ್ನಂ ಪಶ್ಯತಿ ಚೇತಿ ಯಃ |
ವಿಕಲ್ಪ ಏಷ ಭೂತಾನಾಮವಿದ್ಯಾರಾತ್ರಿಶಾಯಿನಾಮ್ ||

ಎಚ್ಚರಕನಸುಕನಿಸ್ರೆಗಳೆಂಬಿವು ಅವಿದ್ಯಾರಾತ್ರಿಯಲ್ಲಿ ನಿದ್ರಿಸುತ್ತಿರುವವರ ಕನವರಿಕೆಗಳು. ಅವು ನಿಜವಾಗಿಲ್ಲವೇ ಇಲ್ಲ.

ಈಗ ಇದೇ ತತ್ತ್ವವನ್ನು ಮತ್ತೊಂದು ಬಗೆಯಿಂದ ಪರಿಶೀಲನೆಮಾಡೋಣ. ಜಾಗ್ರದವಸ್ಥೆಯಲ್ಲಿ ನಾವು ಪ್ರಮಾತೃಗಳಾಗಿರುತ್ತೇವೆ ಎಂದರೇನು ? ಕಣ್ಣಿನಿಂದ ರೂಪವನ್ನು ನೋಡುವ, ಕಿವಿಯಿಂದ ಶಬ್ದವನ್ನು ಕೇಳುವ, ಮೈಯಿಂದ ಸ್ಪರ್ಶವನ್ನು ಮುಟ್ಟಿ ತಿಳಿಯುವ, ನಾಲಗೆಯಿಂದ ಸವಿಯನ್ನು ತಿಳಿದುಕೊಳ್ಳುವ, ಮೂಗಿನಿಂದ ಮೂಸಿ ವಾಸನೆಯನ್ನು ನಿಶ್ಚಯಿಸುವ ಸ್ವರೂಪದವರು. ವಿಷಯ

ವನ್ನು ನೋಡುವ ತಾನು ದ್ರಷ್ಟೃ, ಶ್ರೋತ್ರಾದಿಗಳೆಂಬ ಕರಣದಿಂದ ಅರಿತು ಕೊಳ್ಳುವ ನೋಟವೆಂಬ ಕ್ರಿಯೆ ಮತ್ತು ದರ್ಶನ, ಹಾಗೆ ನೋಡಿಕೊಳ್ಳುವ ವಿಷಯವು ದೃಶ್ಯ. ಇದನ್ನು ದ್ರಷ್ಟೃದರ್ಶನದೃಶ್ಯಾನುಭವ –ಎಂದು ಕರೆಯುಬಹುದು.

ಈ ಅನುಭವವನ್ನು ಸ್ವಲ್ಪ ಬಿಡಿಸಿನೋಡೋಣ. ನನುಗೆ ಸದ್ದು ಕೇಳುವದೆಂಬ ಮನೋವೃತ್ತಿ ಯಾಗುವಾಗ ಮತ್ತೆ ಬೇರೆಯ ವೃತ್ತಿಗಳಿರುವದಿಲ್ಲ. ವಸ್ತುವನ್ನು ನೋಡುವಾಗ ಅದರ ಶಬ್ದಸ್ಪರ್ಶಾದಿಗಳ ಅನುಭವವಿರುವದಿಲ್ಲ. ಹೀಗೆಯೇ ಅದನ್ನು ಮುಟ್ಟುವ ವೃತ್ತಿ ಎದ್ದಾಗ ಬೇರೆಯ ವೃತ್ತಿಗಳಿರುವದಿಲ್ಲ. ಆದರೂ ನಮ್ಮ ಮನಸ್ಸು ಈ ವಿಕಲ್ಪಗಳನ್ನೆಲ್ಲ ಕೂಡಿಸಿ ಉಂಡೆಮಾಡಿ 'ಮಾವಿನಹಣ್ಣು', 'ಕಲ್ಲು', 'ಕುರ್ಚಿ', 'ಮನೆ' ಎಂದು ಒಂದೊಂದು ವಿಷಯವನ್ನು ಅನುಭವಿಸಿದಂತೆ ಮಾಡಿಕೊಳ್ಳುತ್ತಿರುತ್ತದೆ. ಒಂದೊಂದು ವಿಕಲ್ಪವು ಆಗುವಾಗ ಮಿಕ್ಕ ವಿಕಲ್ಪಗಳು ಇಲ್ಲದಿದ್ದರೂ, ಅವನ್ನೆಲ್ಲ ಕೇವಲ ಕಲ್ಪನಾಮಾತ್ರದಿಂದ ಕೂಡಿಸಿಕೊಂಡು 'ಒಂದು ವಿಷಯ' ಎಂತ ವಿಕಲ್ಪಿಸಿಕೊಳ್ಳುವ ಈ ಅನುಭವವು ಎಂಥ ವಿಚಿತ್ರವಾದದ್ದು ! ನಮ್ಮ ಜಾಗ್ರದಾದ್ಯವಸ್ಥೆಗಳೆಂಬಿವು ಇಂಥ ವಿಕಲ್ಪದ ಸಿವುಡುಗಳ ಒಂದೊಂದು ಬಂಡಿ ಎನ್ನಬಹುದು

ಇಲ್ಲಿ ವಿಕಲ್ಪಿಸುವವನು ದ್ರಷ್ಟೃ. ಇವನನ್ನು ನಾವು ಹೇಗೆ ಅರಿತುಕೊಳ್ಳುತ್ತೇವೆ ? ಇವನನ್ನು ಅರಿಯುವ ನಮ್ಮ ಸ್ವರೂಪವನ್ನು ನಿರ್ವಿಕಲ್ಪಕದ್ರಷ್ಟೃ ಎನ್ನಬಹುದು. ದೃಷ್ಟಿದರ್ಶನದೃಶ್ಯಗಳೆಲ್ಲವನ್ನೂ ಆ ಸಾಕ್ಷಾದ್ದ್ರಷ್ಟೃವೇ ತನ್ನ ಚೈತನ್ಯದ ಬೆಳಕಿನಿಂದ ಬೆಳಗುತ್ತಿರುತ್ತಾನೆ. ಹಾಗೆ ಬೆಳಗುತ್ತಿರುವಾಗ ಇವನು ಪ್ರಮಾತೃರೂಪನಾದ ದ್ರಷ್ಟೃವಿನಂತೆ ತಾನೂ ವ್ಯಾಪಾರಮಾಡುವದಿಲ್ಲ ; ಅನಿತ್ಯವಾದ ದೃಷ್ಟಿಯು ಅವನಿಗೆ ಆಗಾಗ್ಗೆ ಉಂಟಾಗಿ ಹೋಗುತ್ತಿರುವದಿಲ್ಲ. 'ಈಗ ನೋಡುತ್ತಾನೆ, ಈಗ ನೋಡುವದಿಲ್ಲ' ಎಂದು ಆ ದ್ರಷ್ಟೃವು ನೋಡುವಂತೆ ಇವನು ಹುಟ್ಟುಹೊಂದುಗಳನ್ನು ಅನುಭವಿಸುವ ದೃಷ್ಟಿಯನ್ನುಪಯೋಗಿಸಿ ನೋಡುತ್ತಿರುವದಿಲ್ಲ. 'ಸೂರ್ಯನು ಬೆಳಗುತ್ತಾನೆ, ಎಲ್ಲವನ್ನೂ ಬೆಳಗಿತೋರಿಸುತ್ತಾನೆ, ಎಂಬಂತೆ ತನ್ನ ನಿತ್ಯಸ್ವರೂಪವಾದ ದೃಷ್ಟಿಯಿಂದಲೇ ದ್ರಷ್ಟೃದರ್ಶನದೃಶ್ಯಗಳನ್ನೆಲ್ಲ ಬೆಳಗುತ್ತಿರುತ್ತಾನೆ ಎನ್ನಬಹುದು. ಪ್ರಶಾಂತಸಾಗರದಲ್ಲಿ ಹುಟ್ಟಿತೋರಿ ಅಡಗುವ ಅಲೆಗಳಂತೆ ಈ ದ್ರಷ್ಟ್ರಾದಿಗಳು ತೋರಿ, ಇದ್ದು, ಅಡಗುತ್ತವೆ ; ಅಥವಾ ಇವನ ಚೈತನ್ಯರೂಪದೃಷ್ಟಿಯಿಂದ ವ್ಯಾಪ್ತವಾಗಿಯೇ ಅವುಗಳು ತಲೆದೋರಬೇಕಾಗಿರುವದರಿಂದ ಇವನೇ ಅವುಗಳ ಆಕಾರದಿಂದ ತೋರುತ್ತಿದಾನೆ ಎಂದರೂ ಸಲ್ಲುತ್ತದೆ, ಶ್ರುತಿಯಲ್ಲಿ–

ಯತೋ ವಾ ಇಮಾನಿ ಭೂತಾನಿ ಜಾಯಂತೇ | ಯೇನ ಜಾತಾನಿ ಜೀವನ್ತಿ |
ಯತ್ಪ್ರಯನ್ತ್ಯಭಿಸಂವಿಶನ್ತಿ | ತದ್ವಿಜಿಜ್ಞಾಸಸ್ವ | ತದ್ಬ್ರಹ್ಮೇತಿ | ತೈ. ೩–೧.

ಎಂದು ಹೇಳಿರುವದಕ್ಕೆ, ಎಲ್ಲವೂ ಆವನಿಗಿಂತ ವ್ಯತಿರಿಕ್ತವಾಗಿಲ್ಲದಿದ್ದರೂ ಸ್ವತಂತ್ರ ವಾಗಿ ಇದ್ದ ಹಾಗೆ ತೋರುತ್ತದೆ– ಎಂಬುದೇ ಅಭಿಪ್ರಾಯ. ಕನಸಿನಲ್ಲಿಯೂ ಹೀಗೆಯೇ ; ಅಲ್ಲಿಯೂ ಕಾಣುವ ದೃಶ್ಯಾದಿಗಳನ್ನೆಲ್ಲ ಆ ದ್ರಷ್ಟೃವೊಬ್ಬನೇ ವ್ಯಾಪಿಸಿಕೊಂಡಿರುತ್ತಾನೆ, ಅವನೇ ಎಲ್ಲವೂ ಆಗಿರುತ್ತಾನೆ. ಎಚ್ಚರದಲ್ಲಿ ನಮ್ಮ ಆತ್ಮನು ಹೇಗೆ ದ್ರಷ್ಟೃವಾಗಿರುತ್ತಾನೆನ್ನುವದನ್ನು ಭಗವದ್ಗೀತೆಯಲ್ಲಿ ಹೀಗೆಂದು ವರ್ಣಿಸಿರುತ್ತದೆ :

ಉಪದ್ರಷ್ಟಾಽನುಮನ್ತಾ ಚ ಭರ್ತಾ ಭೋಕ್ತಾ ಮಹೇಶ್ವರಃ |
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ||ಗೀ. ೧೩–೨೨

'ಈ ನಮ್ಮ ದೇಹದಲ್ಲಿರುವ ಪರಮಪುರುಷನು ಉಪದ್ರಷ್ಟೃ, 'ಹತ್ತಿರವಿದ್ದು ನೋಡುವವನು' ; ಅನುಮಂತೃ (ಒಪ್ಪುವವನು); ಭರ್ತೃ (ಚೈತನ್ಯವ್ಯಾಪ್ತಿಯಿಂದ ಪೋಷಿಸುವವನು) ; ಭೋಕ್ತೃ (ಚೈತನ್ಯದಿಂದ ಅರಿಯುವವನು) ; ಮಹೇಶ್ವರನು (ಎಲ್ಲವನ್ನೂ ವಶದಲ್ಲಿಟ್ಟುಕೊಂಡಿರುವವನು); ಪರಮಾತ್ಮನು (ದೇಹಾದಿಬುದ್ಧ್ಯಂತ ವಾಗಿ ಅವಿದ್ಯಾಕಲ್ಪಿತವಾಗಿರುವ ಆತ್ಮರುಗಳಿಗೆ ಹೋಲಿಸಿದರೆ ಎಲ್ಲಕ್ಕೂ ಹೆಚ್ಚಿನ ಆತ್ಮನು) –ಎಂಬುದು ಶ್ಲೋಕದ ಅರ್ಥ. ಇಲ್ಲಿರುವ ಒಂದೊಂದು ವಿಶೇಷಣವೂ ಆತ್ಮಸ್ವರೂಪವನ್ನು ಮನದಟ್ಟುಮಾಡಿಕೊಡುವದಕ್ಕೆ ಉತ್ತಮಸಾಧನವಾಗಿರುತ್ತದೆ ಯಾದರೂ ಪ್ರಕೃತಕ್ಕೆ 'ಉಪದ್ರಷ್ಟೃ' ಎಂಬ ವಿಶೇಷಣವನ್ನು ಶ್ರೀಶಂಕರಾ ಚಾರ್ಯರು ವಿವರಿಸುವ ಬಗೆಯನ್ನು ಮನದಂದುಕೊಳ್ಳುವದರಿಂದ ಲಾಭವುಂಟು.

(೧) ಹೇಗೆ ಯಜ್ಞದಲ್ಲಿ ಋತ್ವಿಜರೂ ಯಜಮಾನನೂ ತವತಮ್ಮ ಕರ್ಮದಲ್ಲಿ ವ್ಯಾಪೃತರಾಗಿರುವಲ್ಲಿ 'ಉಪದ್ರಷ್ಟೃ' ಎಂಬಾತನು ಇವರೆಲ್ಲರಿಗಿಂತ ವಿಲಕ್ಷಣನಾಗಿ ಯಜ್ಞವಿದ್ಯಾಕುಶಲನಾಗಿ ಇವರು ಮಾಡುವದರ ಗುಣದೋಷಗಳನ್ನು ನೋಡುತ್ತಿರು ವನೋ ಹಾಗೆ ಶರೀರೇಂದ್ರಿಯಗಳ ವ್ಯಾಪಾರಕ್ಕೆ ಸಂಬಂಧಿಸದೆ ಅವುಗಳನ್ನೂ ಅವು ಗಳ ವ್ಯಾಪಾರವನ್ನೂ ಹತ್ತಿರದಲ್ಲಿದ್ದುಕೊಂಡು ನೋಡುತ್ತಿರುವದರಿಂದ ಆತ್ಮನು 'ಉಪದ್ರಷ್ಟೃ.'

(೨) ದೇಹವು ಹೊರಗೆ, ಇಂದ್ರಿಯಗಳು ಒಳಗೆ, ಮನಸ್ಸು ಇನ್ನೂ ಒಳಗೆ, ಬುದ್ಧಿ– ಇನ್ನೂ ಒಳಗೆ ಇರುವ ದ್ರಷ್ಟೃಗಳು ; ಇವುಗಳೆಲ್ಲಕ್ಕಿಂತ ತೀರ ಒಳಗೆ ಇದ್ದು ತನಗಿಂತ ಒಳಗಿನ ಮತ್ತೊಬ್ಬ ದ್ರಷ್ಟೃವಿಲ್ಲದವನಾದ್ದರಿಂದ ಆತ್ಮನು 'ಉಪದ್ರಷ್ಟೃ'.

(೩) ಯಜ್ಞದಲ್ಲಿರುವ ಉಪದ್ರಷ್ಟೃವಿನಂತೆ ಎಲ್ಲವನ್ನೂ ವಿಷಯೀಕರಿಸಿ ಕೊಂಡಿರುವದರಿಂದ ಆತ್ಮನು 'ಉಪದ್ರಷ್ಟೃ'.

ಈ ಮೂರು ವ್ಯಾಖ್ಯಾನಗಳಿಗೂ ಒಂದೇ ಅಭಿಪ್ರಾಯವಿದೆ. ನಮ್ಮ ತೀರ ಒಳಗಿರುವ ಆತ್ಮನೇ ಎಲ್ಲವನ್ನೂ ತನ್ನ ಚೈತನ್ಯದೃಷ್ಟಿಯಿಂದ ನೋಡುತ್ತಿರುವ ನಿಜವಾದ ದ್ರಷ್ಟೃವು. ಎಚ್ಚರದಲ್ಲಿ ಎಲ್ಲಕ್ಕೂ ದ್ರಷ್ಟೃವಾಗಿರುವ ಈ ಆತ್ಮನೇ

ಸ್ವಪ್ನದಲ್ಲಿಯೂ ಎಲ್ಲಕ್ಕೂ ದ್ರಷ್ಟೃ. ಎರಡು ಅವಸ್ಥೆಗಳಲ್ಲಿಯೂ ಎಲ್ಲವನ್ನೂ ವ್ಯಾಪಿಸಿಕೊಂಡಿರುವದರಿಂದ ಅವನು ಅದ್ವಿತೀಯನಾಗಿರುತ್ತಾನೆ. ಸುಷುಪ್ತಿಯಲ್ಲಂತೂ ಚೈತನ್ಯವೊಂದೇ ಇದ್ದುಕೊಂಡಿರುತ್ತದೆಯಾದ್ದರಿಂದ ಅವನು ಅದ್ವಿತೀಯನೆಂದು ಬಹುಸುಲಭವಾಗಿ ತಿಳಿದುಕೊಳ್ಳಬಹುದು. ಆ ಅವಸ್ಥೆಯಲ್ಲಿ ಆತ್ಮನು ಮತ್ತೆ ಯಾವದನ್ನೂ ಅರಿಯುತ್ತಿಲ್ಲವೇಕೆಂಬುದನ್ನು ಶ್ರುತಿಯು ಹೀಗೆಂದು ತಿಳಿಸುತ್ತಿದೆ :

ಯದ್ವೈ ತನ್ನ ಪಶ್ಯತಿ ಪಶ್ಯನ್ ವೈ ತನ್ನ ಪಶ್ಯತಿ । ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾತ್ । ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ ಪಶ್ಯೇತ್ ॥

ಅಲ್ಲಿ ಆತ್ಮನು ಏನನ್ನೂ ಕಾಣುತ್ತಿಲ್ಲವೆಂಬುದು ನಿಜ. ಆದರೂ ಅವನು ಅಲ್ಲಿಯೂ ದ್ರಷ್ಟೃಸ್ವಭಾವದವನಾಗಿದ್ದುಕೊಂಡೇ ಇದ್ದು ಏನನ್ನೂ ಅರಿಯದೆ ಇರುತ್ತಾನೆ. ಏಕೆಂದರೆ ಆ ದ್ರಷ್ಟೃವಿನ ದೃಷ್ಟಿಗೆ ಲೋಪವಿಲ್ಲ, ಅದು ಅವಿನಾಶಿ. ಆದರೆ ಅಲ್ಲಿ ಅವನಿಗಿಂತ ಬೇರೆಯಾಗಿ ಅವನಿಂದ ವಿಂಗಡವಾಗಿರುವ ಎರಡನೆಯದು ಯಾವದೂ ಇರುವದಿಲ್ಲ ; ಹಾಗಿದ್ದರಲ್ಲವೆ, ಅದನ್ನು ಅವನು ಕಾಣಬೇಕಾಗಿತ್ತು ?

ಈಗಲೂ ಅದೇ ಅದ್ವಿತೀಯಚೈತನ್ಯರೂಪನಾದ ಆ ದ್ರಷ್ಟೃವೊಬ್ಬನೇ ಇರುತ್ತಾನೆ. ಆದರೂ ತಪ್ಪುತಿಳಿವಳಿಕೆಯಿಂದ ಅವನಲ್ಲಿ ದ್ರಷ್ಟೃ, ದರ್ಶನ, ದೃಶ್ಯ –ಎಂಬ ಭೇದವನ್ನು ಕಲ್ಪಿಸಿಕೊಂಡಿರುತ್ತೇವೆ. ನಿಜವಾಗಿ ನೋಡಿದರೆ ಎಲ್ಲವನ್ನೂ ಆತ್ಮಚೈತನ್ಯವೇ ವ್ಯಾಪಿಸಿಕೊಂಡಿರುವದರಿಂದ ನಿತ್ಯದೃಗ್ರೂಪನಿಗಿಂತ ಬೇರೆಯಾಗಿ ಏನೊಂದೂ ಇರುವದೇ ಇಲ್ಲ, ಅವಸ್ಥಾತ್ರಯಪ್ರಕ್ರಿಯೆಯ ಸಾರವನ್ನು ಶ್ರೀಸುರೇಶ್ವರಾಚಾರ್ಯರು ತಮ್ಮ ವಾರ್ತಿಕದಲ್ಲಿ ಹೀಗೆಂದು ಸಂಗ್ರಹಿಸಿರುತ್ತಾರೆ :

ಅಲುಪ್ತದೃಷ್ಟಿರಾತ್ಮಾಯಂ ಯಥೋಕ್ತಃ ಸ್ವಪ್ನಬೋಧಯೋಃ ।
ಪ್ರಾಜ್ಞೋಽಪಿ ಚ ತಥೈವಾಯಂ ಯದ್ವೈ ತದಿತಿ ವಾಕ್ಯತಃ ॥
ಅತಿಕಾರಕಹೇತುಶ್ಚ ಯಥಾತ್ಮಾಽಯಂ ಸುಷುಪ್ತಗಃ ।
ಕೂಟಸ್ಥದೃಷ್ಟಿಮಾತ್ರತ್ವಾತ್ ತಥಾ ಸ್ವಪ್ನಪ್ರಬೋಧಯೋಃ ॥

ಬೃ. ವಾ. ೪-೩-೧೯೦೭, ೮

ಎಚ್ಚರಕನಸುಗಳಲ್ಲಿ ಈ ಆತ್ಮನು ಹೇಗೆ ತನ್ನ ಚೈತನ್ಯದೃಷ್ಟಿಯ ಲೋಪವಿಲ್ಲದವನಾಗಿರುತ್ತಾನೋ ಹಾಗೆಯೇ ಸುಷುಪ್ತಿಯಲ್ಲಿ ಅಲುಪ್ತದೃಷ್ಟಿಯಾಗಿರುತ್ತಾನೆ ; ಆದ್ದರಿಂದಲೇ ಶ್ರುತಿಯು 'ಯದ್ವೈ ತನ್ನ ಪಶ್ಯತಿ' ಎಂದು ಮುಂತಾಗಿ ಹೇಳುತ್ತಿದೆ. ಸುಷುಪ್ತಿಯಲ್ಲಿ ಹೇಗೆ ಕ್ರಿಯಾಕಾರಕಫಲಗಳು ಇಲ್ಲದೆ

ನಿಷ್ಪ್ರಪಂಚನಾಗಿರುತ್ತಾನೋ ಹಾಗೆಯೇ ಸ್ವಪ್ನಜಾಗರಿತಾವಸ್ಥೆಗಳಲ್ಲಿಯೂ ನಿಷ್ಪ್ರಪಂಚನಾಗಿರುತ್ತಾನೆ. ಏಕೆಂದರೆ ಅವನು ಎಂದೆಂದಿಗೂ ಕೂಟಸ್ಥದೃಕ್ಸ್ವ ಮಾತ್ರಸ್ವರೂಪನಾಗಿರುತ್ತಾನೆ. ಅವನು 'ಸರ್ವದೃಗ್ರೂಪನು' ಎಂದರೆ ಎಲ್ಲವನ್ನೂ ನೋಡುತ್ತಿರುವಾತನು ಎಂದಲ್ಲ, ಸರ್ವವೂ ಅವನೇ–ದೃಕ್ಚೈತನ್ಯಮಾತ್ರಸ್ವರೂಪನು –ಎಂದರ್ಥ. ಜಾಗ್ರತ್ಸ್ವಪ್ನಸುಷುಪ್ತಿಗಳೆಂಬೀ ಅವಸ್ಥೆಗಳು ವಿಕಲ್ಪಗಳು ಮಾತ್ರ. ಇವೆಲ್ಲವೂ ವಿಚಾರದಿಂದ ಚಿತ್ರಸಾಪದಲ್ಲಿ ಕೊಚ್ಚಿಕೊಂಡುಹೋಗಿಬಿಟ್ಟಿರುತ್ತವೆ. ಅವಸ್ಥೆಗಳಿವೆಯೆಂದು ತಿಳಿಯುವದು ಒಂದು ಶಿಶುಗಳ ಆಟ (Kindergarten)- ಇವೆಲ್ಲವನ್ನೂ ನೋಡುತ್ತಾ ವ್ಯಾಪಿಸಿಕೊಂಡು ತಾನೇ ತಾನಾಗಿರುವ ಮಹಾದ್ರಷ್ಟೃವೊಬ್ಬನೇ ಪರಮಸತ್ಯ.

ಕಾರ್ಯಕಾರಣ, ಪಂಚಕೋಶವಿವೇಕ, ಅವಸ್ಥಾತ್ರಯ, ದೃಗ್ದೃಶ್ಯವಿವೇಕ– ಇವೆಲ್ಲ ಪ್ರಕ್ರಿಯೆಗಳ ಗುರಿಯೂ ಒಂದೇ. 'ಉಪದೇಶಾದಯಂ ವಾದಃ' ಎಂಬಂತೆ ತತ್ತ್ವವನ್ನು ತಿಳಿಸುವದಕ್ಕೆ ಅಧ್ಯಾರೋಪವನ್ನು ಮಾಡಿ ಅಪವಾದಮಾಡುವ ಪ್ರಕಾರಗಳಿವು. ಅದ್ವಿತೀಯವಸ್ತುವೊಂದಿದೆ ; ಅದರಲ್ಲಿಯೇ ಜನರು ಬಗೆಬಗೆಯ ಕಲ್ಪನೆಗಳನ್ನು ಮಾಡುತ್ತಿದಾರೆ. ಆ ತತ್ತ್ವವೇ ನಾವು. 'ಹಲಗೆ ಮರ, ಕಂಠ ಕಬ್ಬಿಣ, ಕೆರೆಯೆಂಬುದು ಮಣ್ಣುಕಟ್ಟೆ ; ಎಲ್ಲಾ ಬಲ್ಲರು' ಎಂಬ ಸೂಕ್ತಿಯಂತೆ ಅದನ್ನೇ ನಾವು ವಿಧವಿಧವಾಗಿ ವಿಕಲ್ಪಿಸಿಕೊಂಡಿದೇವೆಂದು ತಿಳಿದು 'ಸಕಲಮಿದ ಮಹಂ ಚ ವಾಸುದೇವಃ' ಇದೆಲ್ಲವೂ ನಾನೂ ಆ ಪರವಾಸುದೇವತತ್ತ್ವವೇ ಎಂಬುದನ್ನು ಮನದಟ್ಟುಮಾಡಿಕೊಂಡು ತತ್ತ್ವನಿಷ್ಠರಾಗಬೇಕು.

---

## ೨೧. ಲೌಕಿಕರ ಕೆಲವು ಶಂಕೆಗಳು

(7 8 92)

ಈಗ ಸಾಮಾನ್ಯಜಿಜ್ಞಾಸುಗಳ ಕೆಲವು ಶಂಕೆಗಳನ್ನು ನಮ್ಮ ಮುಂದೆ ಇಟ್ಟುಕೊಳ್ಳಬೇಕಾಗಿದೆ. ವೇದಾಂತವನ್ನು ತಮ್ಮ ಮೂಗಿನ ನೇರಕ್ಕೆ ಹೇಳುವವರು ಇರಬಹುದು ; ಆದರೆ ಅದು ಜೀವಂತದರ್ಶನವಾಗಬೇಕಾದರೆ ಮನುಷ್ಯನ ಜೀವನಕ್ಕೆ ಸಂಬಂಧಿಸಿರಬೇಕಷ್ಟೆ ? ಒಬ್ಬ ಜೋಯಿಸನು ಆಕಾಶವನ್ನು ಸಂಶೋಧಿಸುತ್ತಾ ನಡೆಯುತ್ತಿರುವಲ್ಲಿ ಒಂದು ಗುಂಡಿಯೊಳಕ್ಕೆ ಕಾಲುಜಾರಿ ಬಿದ್ದನಂತೆ. ಆಗ ಅಲ್ಲಿಗೆ ಬಂದವನೊಬ್ಬನು ನಡೆದದ್ದನ್ನು ವಿಚಾರಿಸಿ 'ಖಗೋಳವನ್ನು ಪರೀಕ್ಷಿಸುವ ಸಡಗರದಲ್ಲಿ ಭೂಗೋಳವನ್ನೇಕೆ ಮರೆತಿರಿ, ಸ್ವಾಮಿ ?' ಎಂದು ಕೇಳಿದನಂತೆ !

ಹೀಗಾಗಿದೆ, ವೇದಾಂತಿಗಳ ವಿಚಾರಧಾರೆ ! ನಮ್ಮ ಮುಂದೆ ಇರುವ ಪ್ರಪಂಚವು ಹೇಗೆ ಇದೆ ? ನಮ್ಮ ಸುಖದುಃಖಗಳು,ಆಶಾಪ್ರತೀಕ್ಷೆಗಳು, ಮನೋರಥಭಂಗ- ಇವೆಲ್ಲವನ್ನೂ ಇದ್ದದ್ದು ಇದ್ದಂತೆ ಪರೀಕ್ಷೆಮಾಡದೆ, |ಇದೆಲ್ಲ ಮಿಥ್ಯೆ! ಎಂದು ಸಾರಿದರೆ ಜೀವಂತದರ್ಶನವಾದೀತೆ ? ಜೀವಂತದರ್ಶನವು ಮನುಷ್ಯಮಾತ್ರಕ್ಕೆ ಇರಬೇಕು. ಮನುಷ್ಯನ ಎಲ್ಲಾ ಸ್ವಭಾವಕಕ್ಕೂ ಅನ್ವಯಿಸಬೇಕು. ಅವನ ಕರ್ತವ್ಯವನ್ನು ನಿರ್ಣಯಿಸಬೇಕು, ಅದಕ್ಕೆ ಆಧಾರವನ್ನು ಗೊತ್ತುಪಡಿಸಬೇಕು- ಎಂದು ಪ್ರಾರಂಭಮಾಡಿ 'ಏಕಮೇವಾದ್ವಿತೀಯಮ್', 'ನೇತಿ ನೇತಿ' ಎಂದು ಮುಂತಾಗಿ ಹೇಳಿದರೆ ಅದು ಎಂದಿಗೂ ಮನುಷ್ಯಮಾತ್ರಕ್ಕೆ ಹೇಳಿದ್ದೆಂದು ಒಪ್ಪಲಾಗದು. ನಮ್ಮ ಅನುಭವದಲ್ಲಿರುವದನ್ನು ವಿಚಾರಮಾಡದೆ, 'ಇದೆಲ್ಲ ಹುಸಿ' -ಎಂದಿಷ್ಟೇ ಹೇಳಿ ಮುಗಿಸಿದರೆ ಅದು 'ದರ್ಶನ'ವೆನಿಸೀತೆ ?ಕೆಲವು ದಿನಗಳಲ್ಲಿಯೇ ಅದು ಅದರ್ಶನವಾಗದೆ ?

(೧) ನಾವಿದೇವೆ, ನಮ್ಮ ಮುಂದೆ ಪ್ರಪಂಚವಿದೆ. ನಮ್ಮಿಬ್ಬರ ಸಂಬಂಧವನ್ನಾಗಲಿ, ನಮಗೆ ಈ ಸಂಬಂಧದಿಂದ ಆಗುತ್ತಿರುವ ಹರ್ಷ, ವಿಷಾದ,ಆಶ್ಚರ್ಯ, ಭಯ, ಕುತೂಹಲ-ಮುಂತಾದವುಗಳನ್ನಾಗಲಿ ಅಲ್ಲಗಳೆಯುವದು ಯಾರಿಂದಲೂ ಆಗಲಾರದು.

(೨) ಮನುಷ್ಯನು ಸ್ವಾರ್ಥಪರನಾಗಿರುತ್ತಾನೆ. ತನಗೆ ಹೊಂದಿದಾಗ ಒಂದುನೀತಿ, ಹೊಂದದಿದ್ದಾಗ ಮತ್ತೊಂದು ನೀತಿ-ಹೀಗೆ ದ್ವಿಮುಖನೀತಿಯನ್ನು ಅನುಸರಿಸುತ್ತಿದಾನೆ. ಇದಕ್ಕೇನು ಮಾಡಬೇಕು ? ಮನುಷ್ಯರು ಎಲ್ಲಾ ಕಡೆಗಳಲ್ಲಿಯೂ ಇದಾರೆ. ಬೇರೆಬೇರೆಯ ಹವ, ಬೇರೆಬೇರೆಯ ಆಹಾರವಿಹಾರಗಳು, ಬೇರೆಬೇರೆಯ ವಿದ್ಯಾಭ್ಯಾಸಕ್ರಮ, ಬೇರೆಬೇರೆಯ ರಾಜನೀತಿಗಳು, ಬೇರೆಬೇರೆಯ ಜೀವನಸಮಸ್ಯೆಗಳು- ಇವಕ್ಕೊಳಗಾಗಿದ್ದಾರೆ. ಅವರ ಕಷ್ಟನಷ್ಟಗಳು, ಸುಖದುಃಖಗಳು, ಅವರ ಪರಿಸ್ಥಿತಿಯಂತೆ ಬಗೆಬಗೆಯ ಕಾರಣದಿಂದ ಆಗುತ್ತಿವೆ. ಇದನ್ನೆಲ್ಲ 'ಮಿಥ್ಯೆ' ಎಂಬ ಒಂದೇ ಮಾತಿನಲ್ಲಿ ತಳ್ಳಿಹಾಕುವದು ಸರಿಯೆ ?

(೩) ನಮ್ಮ ದೇಶದ ಸ್ಥಿತಿ ಹೇಗಿದೆ? ಬರುಬರುತ್ತಾ ಆಹಾರದ ದಿನಸುಗಳೂ ಬಟ್ಟೆಬರೆ ಮುಂತಾದ ಆವಶ್ಯಕತೆಗಳೂ ಜನರಿಗೆ ಸಿಕ್ಕುವದು ಕಷ್ಟವಾಗುತ್ತಿದೆ; ಪದಾರ್ಥಗಳ ಬೆಲೆ ಏರುತ್ತಲೇ ಇದೆ. ಒಬ್ಬನ ಮನೆಯಲ್ಲಿ ಎಂಟುಜನ ಮಕ್ಕಳು. ಅವರಿಗೆ ಅನ್ನಬಟ್ಟೆಗಳಾಗಬೇಕು, ವಿದ್ಯಾಭ್ಯಾಸವಾಗಬೇಕು, ಹೆಣ್ಣುಮಕ್ಕಳ ಮದುವೆಗೆ ವರದಕ್ಷಿಣೆ ಬೇಕು ; ಕೆಲಸವು ಸಿಕ್ಕುವದು ಕಷ್ಟವಾಗಿದೆ. ಜನರ ಹಸಿವುಬಾಯಾರಿಕೆ, ರೋಗರುಜಿನಗಳು-ಇವುಗಳು ಯಾವವೂ ನಿಜವಾಗಿಲ್ಲವೆನ್ನಬಹುದೆ ?

(೪) ಸಮಾಜದ ಸ್ಥಿತಿ ಹೇಗಿದೆ ? ಇಲ್ಲಿ ಬಗೆಬಗೆಯ ಮತಗಳ, ಬಗೆಬಗೆಯ ಆಚಾರವ್ಯವಹಾರಗಳ ಜನರು ಇದಾರೆ. 'ಸನಾತನಧರ್ಮ'ವೆಂದು ಕೂಗುತ್ತಿರುವ ಜನರೂ ಆಚಾರದಲ್ಲಿ ಪರರ ಅನುಕೃತಿಯನ್ನೇ ಮಾಡುತ್ತಿದಾರೆ. ವರ್ಣಾಶ್ರಮಧರ್ಮಗಳು ಮಣ್ಣುಮುಕ್ಕುತ್ತಿವೆ. ಸ್ವಾರ್ಥಪರರಾದ ಜನರು ಒಬ್ಬರನ್ನೊಬ್ಬರು ಮತಾಂತರಗೊಳಿಸುತ್ತಿದಾರೆಂಬುದು ನಿಜವಾದರೂ ಮತವೆಂಬುದು ಎಲ್ಲರಿಗೂ ಅನಭಿಮತ. ಜನ್ಮಾಂತರ, ಲೋಕಾಂತರ– ಇವುಗಳು ಕೆಲವರ ಬಾಯಿ ಮಾತಿನಲ್ಲಿ ಉಳಿದಿವೆ; ಅವನ್ನು ನಂಬುತ್ತಿರುವವರು ಯಾರೂ ಕಾಣುವದಿಲ್ಲ. ಇನ್ನು ದೇವರೊ ? ಎಂದರೆ ದುಡ್ಡೇ ದೊಡ್ಡ ದೇವರು. ಈ ಸಮಾಜಕ್ಕೆ ಎಲ್ಲರಿಗೂ ನಿಮ್ಮ ವೇದಾಂತವನ್ನು ಹೇಗೆ ಹೊಂದಿಸಬೇಕು ?– ಇದೇ ಸಮಾಜವು ದುಃಖದಿಂದ ಬಾಳುತ್ತಿದ್ದರೂ ವಿನೋದಕ್ಕಾಗಿ ಆಟಪಾಟಗಳು, ಸಂತೋಷಕೂಟಗಳು, ಸಂಗೀತ, ನಾಟಕ– ಮುಂತಾದವುಗಳಲ್ಲಾದರೂ ಅಲ್ಪಸ್ವಲ್ಪ ಸುಖವನ್ನು ಹೊಂದಬಹುದೆಂಬ ಆಶೆಯನ್ನು ಜನರು ಇಟ್ಟುಕೊಂಡಿರುತ್ತಾರೆ. ಪ್ರತ್ಯಕ್ಷವಾಗಿರುವ ಈ ಸುಖವನ್ನು ಅಲ್ಲಗಳೆದು ಯಾರಿಗೂ ಕೈಗೆ ಎಟುಕದ ನಿಮ್ಮ ವೇದಾಂತದ ಆನಂದವು ಯಾರಿಗೆ ಬೇಕಾದೀತು ?

(೫) ಇನ್ನು ಸರಕಾರ. ಅವರು ಜನ್ಮಕರ, ಮರಣಕರ, ಆಹಾರದಮೇಲೆ ಕರ, ವಿದ್ಯಾಭ್ಯಾಸದ ಕರ, ಆದಾಯಕರ, ಮಾರಾಟದ ಕರ, ಪ್ರಯಾಣದ ಕರ, ದೇಶಾಂತರಗಳಿಂದ ಬರುವ ವಸ್ತುಗಳಮೇಲೆ ಕರ–ಎಂದು ಕಾರ್ತವೀರ್ಯಾರ್ಜುನನಂತೆ ನೂರಾರು ಕರಗಳನ್ನು ಚಾಚಿ ತೆರಿಗೆಗಳನ್ನು ಬಾಚಿಕೊಳ್ಳುತ್ತಿದಾರೆ; ಸುಳ್ಳು ಹೇಳಿಯಾದರೂ ತೆರಿಗೆಗಳನ್ನು ತಪ್ಪಿಸಿಕೊಳ್ಳಬೇಕೆಂಬಿಚ್ಛೆ ಜನರಿಗೆ! ಅಷ್ಟಾದರೂ ಸರಕಾರಕ್ಕೆ ಆದಾಯವು ಸಾಲದು. ಪಾಕಿಸ್ತಾನದವರೂ ಚೀನಾದೇಶದವರೂ ನಮ್ಮ ದೇಶದ ಭಾಗಗಳನ್ನು ನುಂಗುತ್ತಿದಾರೆ–ಎಂತ ಜನರ ಮನಸ್ಸನ್ನು ಎತ್ತೆತ್ತಿ ಎಳೆದರೂ ಇಲ್ಲಿ ಜನರ ಗೋಳುಕರೆಯೇನೂ ತಪ್ಪುವಹಾಗಿಲ್ಲ. ರಕ್ಷಣಾಸೇನೆಯನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಇದರಮೇಲೆ ಉದ್ಯೋಗಗಳು, ಅಣೆಕಟ್ಟು, ಸೇತುವೆ, ರೈಲು ಮುಂತಾದವುಗಳ ನಿರ್ಮಾಣ.ಮುಂತಾದ ಯೋಜನೆಗಳು ಬೇರೆ. ಹಿಂದಿನಕಾಲದ ರಾಜರ ಆಡಳಿತವು ಮುಕ್ತಾಯವಾಗಿ ರಾಷ್ಟ್ರೀಯಪಕ್ಷವಿಪಕ್ಷಗಳ ಸ್ಪರ್ಧೆಯೂ, ಲಂಚ, ವ್ಯರ್ಥವಾಗಿ ಹಣದ ವ್ಯಯ–ಮುಂತಾದದ್ದೂ ಹೆಚ್ಚುತ್ತಿರುವದು ಜನರ ನೆಮ್ಮದಿಗೆ ಭಂಗವನ್ನು ತರುತ್ತಿದೆ. ಪ್ರಜೆಗಳನ್ನು ಕಾಪಾಡಲಾರದ ಸರಕಾರದವರು 'ಮಿತಸಂತಾನವಾದರೆ ಒಳ್ಳೆಯದು' ಎಂದು ಜನರಿಗೆ ಭ್ರೂಣಹತ್ಯೆಮಾಡುವ ಉಪಾಯವನ್ನು ಬೇರೆ ಕಲ್ಪಿಸಿಕೊಡುತ್ತಿದಾರೆ ! ಜನರಿಗೆ ಒಟ್ಟಾಗಿಬರುವ ಸಾಂಕ್ರಾಮಿಕರೋಗಗಳು, ಕ್ಷಾಮಡಾಮರಗಳು, ಭೂಕಂಪಗಳು, ಅತಿವೃಷ್ಟ್ಯನಾವೃಷ್ಟಿಗಳು, ಮಳೆಬೆಳೆಗಳ ಅಭಾವ, ನದೀಸಮುದ್ರಗಳು ಉಕ್ಕೇ

ರುವದು, ಬೆಟ್ಟಗಳು ಉರುಳುವದು, ಮರುಭೂಮಿಗಳ ವಿಸ್ತರಣ, ಕ್ರಿಮಿಕೀಟ ಗಳ ಹಾವಳಿ–ಇವುಗಳನ್ನೆಲ್ಲ ಆನಂದವಿಭೂತಿಗಳೆನ್ನಬಹುದೆ ! "ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ" ಎಂಬ ಶ್ರುತಿಯನ್ನು ಹೇಳುವದು ಹಸಿ ವನ್ನು ಇಂಗಿಸುವದಕ್ಕೆ ಪಿಟೀಲುಬಾರಿಸಿದಂತೆ ಅಲ್ಲವೆ ?

(೬) ಮನುಷ್ಯನು ಬದುಕಿರುವದಕ್ಕೆ ಮರಗಿಡಗಳನ್ನು ಕೆಡವಬೇಕು, ಒಣಗಿಸಬೇಕು, ಕತ್ತರಿಸಬೇಕು, ಪೈರನ್ನು ಬೆಳೆದು ಕೊಯಿದು, ಕುಟ್ಟಿ, ಬೇಯಿಸಿ ತಿನ್ನಬೇಕು. ಸ್ಥಾವರಗಳೂ ಪ್ರಾಣಿಗಳೇ ಎಂಬವರ ಮತದಂತೆ ಇದು ಹಿಂಸೆಯೇ ತಾನೆ ? ಅಹಿಂಸೋಪದೇಶಕ್ಕೆ ಏನುಗತಿ ! ಮನುಷ್ಯನಿಗೆ ಬರಿಯ ಸಸ್ಯವರ್ಗವೇ ಆಹಾರಕ್ಕೆ ಸಾಲದು ; ಮದ್ಯಮಾಂಸಗಳು ಅವನಿಗೆ ಬೇಕು. ಅದಕ್ಕಾಗಿಯಾದರೂ ಜಂಗಮಪ್ರಾಣಿಗಳನ್ನು ಕೊಲ್ಲಲೇಬೇಕಲ್ಲವೆ ? ದುಷ್ಟಮೃಗಗಳಾದ ಹುಲಿ, ಸಿಂಹ, ಹಾವು, ಚೇಳು– ಮುಂತಾದವುಗಳನ್ನು ಕೊಲ್ಲದೆ ಇದ್ದರೆ ಆದೀತೆ ? 'ಅಹಿಂಸಾ ವ್ರತವನ್ನು ಆಚರಿಸಿ ; ಎಲ್ಲರಿಗೂ ಒಬ್ಬನೇ ಆತ್ಮ' ಎಂದು ಬೋಧಿಸಿದರೆ ಹೇಗೆ ?

(೭) ಲೋಕದಲ್ಲಿ ನ್ಯಾಯಾನ್ಯಾಯಗಳು ಹೇಗಿವೆ ? ವ್ಯಾಪಾರದಲ್ಲಿಯೂ ನೌಕರಿಯಲ್ಲಿಯೂ ಜನರಿಗೆ ಅನುಕೂಲವಾದರೆ ವ್ಯಾಪಾರಿಗಳಿಗೂ ನೌಕರಿಯಲ್ಲಿರು ವವರಿಗೂ ಕಷ್ಟ ; ವ್ಯಾಪಾರಿಗಳಿಗೂ ನೌಕರರಿಗೂ ಅನುಕೂಲವಾದರೆ ಜನರಿಗೆ ಅನ್ಯಾಯವಾಗುತ್ತದೆ. ಮ್ಯಾಜಿಸ್ಟ್ರೇಟರು, ಪೋಲಿಸರು, ಲಾಯರುಗಳು– ಇವರ ಜೀವನಕ್ಕೆ ಜನರು ಒಬ್ಬರೊಡನೊಬ್ಬರು ಕಚ್ಚಾಡುತ್ತಿರುವದೇ ಬೇಕು. ಡಾಕ್ಟರು ಗಳಿಗೆ ರೋಗಿಗಳಿರಬೇಕು. ಕ್ಷಾಮಗಳು ಆಗಾಗ್ಗೆ ಬಂದರೆ ವ್ಯಾಪಾರಿಗಳಿಗೂ ಪೈರುಬೆಳೆಯುವವರಿಗೂ ಸ್ವಲ್ಪ ಆರ್ಥಿಕವಾಗಿ ಆದಾಯವಿರುತ್ತದೆ. ಆದರೆ ಜಗಳ, ರೋಗ, ಕ್ಷಾಮ– ಇವನ್ನು ಯಾರು ಬಯಸುತ್ತಾರೆ ? ಯೋಗ್ಯರಿಗೇ ಅಧಿಕಾರವೂ ಗೌರವವೂ ಬರುತ್ತದೆ ಎಂಬ ನಿಯಮವೇನೂ ಇಲ್ಲ. ಸಾಮಾನ್ಯಜನರಿಗೆಲ್ಲ ಕಷ್ಟನಿವಾರಣೆಮಾಡುವದಕ್ಕೆಂದೇ ಹುಟ್ಟಿದ ಕಮ್ಯೂನಿಸ್ಟರ ಲೆನಿನ್ ಎಂಬಾತನು ೨೮ ಜನ ಬಿಷಪರನ್ನೂ ೧೨೧೯ ಮತೋಪದೇಶಕರನ್ನೂ ೬೦೦೦ ಉಪಾಧ್ಯಾಯ ರನ್ನೂ ೯೦೦೦ ಡಾಕ್ಟರುಗಳನ್ನೂ ೫೪೦೦೦ ಸರಕಾರಿ ಉದ್ಯೋಗಸ್ಥರನ್ನೂ ೨೬೦,೦೦೦ ಶಿಪಾಯಿಗಳನ್ನೂ ೭೦೦೦೦ ಪೋಲೀಸರನ್ನೂ ೩,೫೫,೨೫೦ ಕುಶಲ ವಿದ್ಯೆಯವರನ್ನೂ ೧೯೩,೦೦೦ ಕೂಲಿಯವರನ್ನೂ ೮,೧೫೦೦೦ ರೈತರನ್ನೂ ಕೊಂದನೆಂದು ಲೆಕ್ಕಹಾಕಿದಾರೆ ! ಅವನ ಸಮಾಧಿಯ ದರ್ಶನಕ್ಕೆ ಇಂದಿಗೂ ನೂರಾರು ಜನರು ಬರುತ್ತಿದಾರಂತೆ ! ಲೋಕದಲ್ಲಿ ಅನ್ಯಾಯಗಳಿಲ್ಲವೆಂದು ಯಾರು ಹೇಳುತ್ತಿದಾರೆ !

(೮) ಈ ಸ್ಥಿತಿಯಲ್ಲಿ ವೇದಾಂತದ ಪ್ರಯೋಜನವೇನು ? ಅವಿದ್ಯಾವಂತ ರಿಗೆ ಸ್ಕೂಲುಗಳಾಗಬೇಕು ; ಬಡವರಿಗೆ ಕ್ಷಾಮಡಾಮರಗಳನ್ನು ತಪ್ಪಿಸುವದು ಬೇಕು ; ಭೌತಿಕವಿಜ್ಞಾನದವರು ಮಾಡುತ್ತಿರುವ ಶೋಧನೆಗಳಿಂದಾಗುತ್ತಿರು

ವಂಥ ಜೀವನ ಸೌಕರ್ಯಗಳು ಬೇಕು. ಇವನ್ನೆಲ್ಲ ವೇದಾಂತವು ಕೊಡುತ್ತದೆಯೆ ? ಇಲ್ಲದಿದ್ದರೆ ಅದು ಜೀವಂತದರ್ಶನವೆನಿಸೀತೆ ? ಈ ಬಗೆಯ ಶಂಕೆಗಳಿಗೆ ಉತ್ತರ ವನ್ನು ಹೇಳುವದು ಅತ್ಯವಶ್ಯವಾಗಿರುತ್ತದೆ.

ಇದುವರೆಗೆ ಒಡ್ಡಿರುವ ಪ್ರಶ್ನೆಗಳೆಲ್ಲ ವ್ಯವಹಾರದೃಷ್ಟಿಯಿಂದ ಎದ್ದು ಕೊಂಡಿರುತ್ತವೆ. ವ್ಯವಹಾರವೆಂದರೆ ಸ್ವಾಭಾವಿಕವಾಗಿ ಯೋಚಿಸುವದು, ಮಾತ ನಾಡುವದು, ನಡೆಯುವದು- ಇವುಗಳು. ಮನುಷ್ಯನಿಗೆ 'ಮನಸ್ಸಿನಲ್ಲಿ ಏತರ ಕಾಮ ವುಂಟಾಗುವದೋ ಅದರಂತೆ ಸಂಕಲ್ಪಿಸಿ ಹೀಗೆಹೀಗೆ ಮಾಡುತ್ತೇನೆಂದು ನಿಶ್ಚಯಿಸು ತ್ತಾನೆ ; ಹೇಗೆ ನಿಶ್ಚಯಿಸಿಕೊಳ್ಳುವನೋ ಹಾಗೆಯೇ ಕರ್ಮವನ್ನು ಮಾಡುತ್ತಾನೆ' ಹೀಗೆ ಮನೋವಾಕ್ಕಾಯಗಳಿಂದ ಆಗುವ ವ್ಯಾಪಾರವನ್ನೇ ವ್ಯವಹಾರವೆಂದು ಶಾಸ್ತ್ರಜ್ಞರು ಕರೆಯುತ್ತಾರೆ. ವೇದಾಂತದಲ್ಲಿ ತತ್ತ್ವವನ್ನು ನಿಶ್ಚಯಿಸುವಾಗ ಅನುಸರಿಸುವದು ಪಾರಮಾರ್ಥಿಕದೃಷ್ಟಿ. ವಸ್ತುವು ಇದ್ದಂತೆ ತಿಳಿಸುವ ಜ್ಞಾನ ವನ್ನು 'ವಿದ್ಯೆ' ಎಂತಲೂ ಅದನ್ನು ತಪ್ಪಾಗಿ ತಿಳಿದುಕೊಂಡಿರುವದನ್ನು 'ಅವಿದ್ಯೆ' ಎಂತಲೂ ಕರೆಯುತ್ತಾರೆ; ಆದ್ದರಿಂದ ಪಾರಮಾರ್ಥಿಕದೃಷ್ಟಿಯನ್ನು 'ವಿದ್ಯಾದೃಷ್ಟಿ' ಎಂದೂ ಕರೆಯಬೇಕಾಗಿದೆ. ಇದು ಶಾಸ್ತ್ರದ ಉಪದೇಶದಿಂದ ಉಂಟಾಗುವದ ರಿಂದ ಇದನ್ನು ಶಾಸ್ತ್ರೀಯದೃಷ್ಟಿ ಎಂದೂ ಕರೆಯುವರು. ವ್ಯವಹಾರದ ದೃಷ್ಟಿ ಯಿಂದ ಕೇಳಿದ ಪ್ರಶ್ನೆಗಳಿಗೆ ಪಾರಮಾರ್ಥಿಕದೃಷ್ಟಿಯಿಂದ ಉತ್ತರವನ್ನು ಕೊಟ್ಟರೆ ಸರಿಯಾಗಲಾರದೆಂಬುದು ಸ್ಪಷ್ಟವೇ ಆಗಿರುತ್ತದೆ.

ವ್ಯವಹಾರವನ್ನು ಮಾಡುವಾಗಲೂ ಜನರು ತಮ್ಮತಮ್ಮ ಹೃದಯದ ವೃತ್ತಿಗೆ ಅನುಸಾರವಾಗಿ ಬೇರೆಬೇರೆಯ ದೃಷ್ಟಿಯನ್ನು ಅನುಸರಿಸುತ್ತಿರುತ್ತಾರೆ. ಮನೆಯಲ್ಲಿ ಮಗು ಅಳುತ್ತಿರುವಾಗ ಅದನ್ನು ತಡೆಯಲಾರದೆ ತಂದೆಯು ತನ್ನ ಬೆರಳಿನಲ್ಲಿರುವ ಉಂಗುರವನ್ನು ಮಾರಿಯಾದರೂ ಅದಕ್ಕೆ ಹಾಲನ್ನು ತಂದುಕೊಡುತ್ತಾನೆ ; ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಎಷ್ಟಾದರೂ ಕಷ್ಟಪಟ್ಟು ಹಣವನ್ನು ಸಂಪಾದಿಸಿ ಅವರಿಗೆ ಬೇಕಾದ ಪುಸ್ತಕಾದಿಗಳನ್ನು ತಂದುಕೊಡುತ್ತಾನೆ. ಇದು ವಾತ್ಸಲ್ಯ ದೃಷ್ಟಿಯ ಗುರುತು. ಮಕ್ಕಳ ಯೋಗಕ್ಷೇಮಕ್ಕಿಂತ ತನ್ನ ಹಣವೇ ಮುಖ್ಯ ವೆಂತ ತಿಳಿಯುವವನದು ಆರ್ಥಿಕದೃಷ್ಟಿ. ತನ್ನ ಬಳಿಗೆ ಬಂದ ಕಕ್ಷಿದಾರನು ನಿಷ್ಕಾರಣವಾಗಿ ತೊಂದರೆಗೆ ಸಿಕ್ಕಿಕೊಂಡಿದಾನೆಂದು ತನ್ನ ಫೀ (ದಕ್ಷಿಣೆ) ಇಲ್ಲದಿದ್ದ ರೂ ಕೋರ್ಟಿನಲ್ಲಿ ವಾದಿಸಿ ಆವನನ್ನು ಬಿಡಿಸುವ ಲಾಯರ ದೃಷ್ಟಿಯು, ಕರುಣಾ ದೃಷ್ಟಿ ; ಅದೇ ಸಂದರ್ಭದಲ್ಲಿ ಇಷ್ಟು ದುಡ್ಡು ಕೊಟ್ಟಹೊರತು ವಾದಿಸಲಾರೆನೆಂದು ಹೇಳುವ ದೃಷ್ಟಿ ಸ್ವಾರ್ಥದ ನಿಷ್ಕರುಣದೃಷ್ಟಿ. ಇಬ್ಬರು ವ್ಯವಹಾರವನ್ನು ಮಾಡು ತ್ತಿರುವಾಗ ಇಬ್ಬರಿಂದಲೂ ಲಾಭವನ್ನು ಪಡೆದು ಅವರಿಗೆ ಆಗುವ ಲಾಭನಷ್ಟಗಳನ್ನು [illegible] ಸ್ಸಿಗೆ ತಾರದೆ ಇರುವದು ದಲ್ಲಾಳಿಯ ಸ್ವಾರ್ಥದೃಷ್ಟಿ ; ಅವರಿಬ್ಬರಿಗೂ

ಪ್ರಯೋಜನವನ್ನುಂಟುಮಾಡಿಕೊಟ್ಟು ತನ್ನ ಲಾಭವನ್ನು ಪಡೆಯುವದು ಕರ್ತವ್ಯ ದೃಷ್ಟಿ ; ಹೇಗಾದರೂ ಅವರ ವ್ಯವಹಾರವನ್ನು ಮಾಡಿಕೊಡುವದು 'ಧರ್ಮ ದೃಷ್ಟಿ'. ದೇವರ ದರ್ಶನವನ್ನು ಮಾಡಿಸಿಕೊಟ್ಟು ಯಾತ್ರಿಕರಿಗೆ ಸಹಾಯವನ್ನು ಮಾಡುವ ಪುರೋಹಿತನದು ಪರೋಪಕಾರದೃಷ್ಟಿ; ಅವರು ಇಂತಿಷ್ಟು ಹಣವನ್ನು ಕೊಟ್ಟಲ್ಲದೆ ದೇವರ ದರ್ಶನವು ಸಿಕ್ಕಲಾರದೆಂದು ಹೇಳಿಬಿಡುವ ನಿಷ್ಠುರವಾಕ್ಕಿನ ಪೂಜಾರಿಯದು ಅಧರ್ಮದ ಸ್ವಾರ್ಥದೃಷ್ಟಿ ; ಹೀಗೆ ಕುತೂಹಲ, ಆಶ್ಚರ್ಯ, ಭಯ , ಪ್ರೇಮ, ರೋಷ- ಮುಂತಾದ ಹೃದಯದ ವೃತ್ತಿಗಳಿಗನುಸಾರವಾಗಿ ಮನುಷ್ಯರ ವ್ಯವಹಾರದಲ್ಲಿ ದೃಷ್ಟಿಭೇದಗಳಿರುತ್ತವೆ. ದೃಷ್ಟಿಭೇದದಿಂದ ವ್ಯವಹಾರವೂ ಭಿನ್ನಭಿನ್ನವಾಗುತ್ತದೆ.

ಪ್ರಕೃತದಲ್ಲಿ ವೇದಾಂತಿಗಳನ್ನು ಪ್ರಶ್ನೆಮಾಡುವವರು ಪರೀಕ್ಷೆಮಾಡುವದಕ್ಕಾಗಿ ಪ್ರಶ್ನೆಗಳನ್ನು ಹಾಕುತ್ತಿರಬಹುದು, ಅಥವಾ-ವೈದ್ಯರನ್ನು ಕಂಡರೆ ಔಷಧಿಯನ್ನೂ, ಜೋಯಿಸರನ್ನು ಕಂಡರೆ ನಷ್ಟವಸ್ತುವನ್ನೂ, ಸಂಗೀತಗಾರರನ್ನು ಕಂಡರೆ ರಾಗವನ್ನೂ ಕುರಿತ ಪ್ರಶ್ನೆಗಳನ್ನು ಸ್ವಭಾವದಿಂದಲೇ ಕೇಳುತ್ತಿರುವವರಂತೆ-ಯಾವ ಪ್ರಯೋಜನವೂ ಇಲ್ಲದೆ ಸುಮ್ಮನೆ ಪ್ರಶ್ನೆಗಳನ್ನು ಹಾಕುತ್ತಿರಬಹುದು. ಇವೆರಡೂ ಇಲ್ಲದೆ ತನಗೆ ಬೇಕಾದದ್ದನ್ನು ಕೇಳಿ, ವಿಚಾರಮಾಡಿ, ಅದರಂತೆ ನಡೆಯಬೇಕು-ಎಂಬ ಜಿಜ್ಞಾಸುದೃಷ್ಟಿಯಿಂದಲೂ ಪ್ರಶ್ನೆಗಳನ್ನು ಕೇಳಿರಲೂಬಹುದು. ನಿಜವಾದ ವೇದಾಂತಿಗಳು ಈ ಮೂರನೆಯ ದೃಷ್ಟಿಯಿಂದ ಕೇಳಿದ ಪ್ರಶ್ನೆಗಳಿಗೇ ಉತ್ತರವನ್ನು ಹೇಳಬೇಕು-ಎಂಬುದನ್ನು ತಿಳಿಸುವದಕ್ಕಾಗಿ 'ನಾಪೃಷ್ಟಃ ಕಸ್ಯಚಿದ್ ಬ್ರೂಯಾನ್ನ ಚಾನ್ಯಾಯೇನ ಪೃಚ್ಛತಃ' ಎಂಬ ಸ್ಮೃತಿ ವಚನವು ಬಂದಿರುತ್ತದೆ. ತನ್ನನ್ನು ಯಾರೂ ಕೇಳದಿದ್ದರೂ ಬರಿಯ ಬಾಯಿಯ ಚಟದಿಂದ ಏನನ್ನಾದರೂ ವಿವರಿಸಿ ಹೇಳುವದು ಸರಿಯಲ್ಲ; ಸುಮ್ಮನೆ ಕಾಲಹರಣ ಮಾಡುವದಕ್ಕಾಗಿ ಅಥವಾ ಪರೀಕ್ಷೆಗೆಂದು ಕೇಳುವವರ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವದೂ ಸರಿಯಲ್ಲ ; ಜಿಜ್ಞಾಸುಗಳು ಶ್ರದ್ಧೆಯಿಂದ ಕೇಳುವ ಪ್ರಶ್ನೆಗಳಿಗೆ ಮಾತ್ರ ಉತ್ತರವನ್ನು ಹೇಳಬೇಕು-ಎಂಬುದು ವಚನದ ಅಭಿಪ್ರಾಯ.

ವೇದಾಂತವನ್ನು ಆಧಾರವಾಗಿಟ್ಟುಕೊಂಡು ವ್ಯವಹಾರದಲ್ಲಿ ಹೇಗೆ ನಡೆಯಬೇಕು ? ವೇದಾಂತವು ವ್ಯವಹಾರಕ್ಕೆ ಎಷ್ಟರಮಟ್ಟಿಗೆ ಪ್ರಯೋಜನಕಾರಿ ?-ಎಂಬುದನ್ನು ತಿಳಿಯಬೇಕೆಂಬ ಜಿಜ್ಞಾಸುಗಳಿಗಾಗಿ ಇಲ್ಲಿ ಎತ್ತಿರುವ ಪ್ರಶ್ನೆಗಳಿಗೆ ಕ್ರಮವರಿತು ಉತ್ತರವನ್ನು ಹೇಳುವದಕ್ಕೆ ಪ್ರಯತ್ನಿಸುವೆನು.

---

# ೨೨. ಕೆಲವು ಪ್ರಶ್ನೆಗಳಿಗೆ ಸಂಕ್ಷಿಪ್ತೋತ್ತರಗಳು
( 8-8-62 )

ಜನರು ವ್ಯವಹಾರದಮೇಲೆ ಆಗುವ ಪರಿಣಾಮದಿಂದಲೇ ಒಂದು ದರ್ಶನದ ಬೆಲೆಯನ್ನು ಕಟ್ಟುತ್ತಾರೆ. ಜೀವನದಲ್ಲಿ ಯಾವ ಪ್ರಯೋಜನವನ್ನೂ ಕೊಡದ ದರ್ಶನವೇತಕ್ಕೆ ?-ಎನ್ನುವ ದು ಅವರ ಪ್ರಶ್ನೆ. ಆದರೆ ವ್ಯವಹಾರದೃಷ್ಟಿ ಎಂಬುದು ಏಕದೇಶದ ದೃಷ್ಟಿ, ಅದು ಪೂರ್ಣದೃಷ್ಟಿಯಲ್ಲ-ಎಂಬುದನ್ನು ಮರೆಯಲಾಗದು. ಜನರು ನಮ್ಮ ಪರಿಚ್ಛಿನ್ನದೃಷ್ಟಿಯಿಂದ ಕಂಡುಕೊಂಡದ್ದನ್ನೇ 'ಜೀವನ' ಎನ್ನುತ್ತಾರೆ ; ಅದರಲ್ಲಿ ತಮಗೆ ಆಗುವ ಅರಿವು, ತಾವು ಮಾಡುವ ಸಂಭಾಷಣೆ, ಕಾರ್ಯ-ಇವನ್ನೇ ವ್ಯವಹಾರವೆನ್ನುವರು. ಆದ್ದರಿಂದ ಈ ದರ್ಶನದಿಂದ ವ್ಯವಹಾರಕ್ಕೆ ಯಾವ ಪ್ರಯೋಜನವಾಗುತ್ತದೆ ?-ಎಂದು ಕೇಳುತ್ತಿರುವರು. ಆದರೆ ತತ್ತ್ವವು ನಮ್ಮ ಮನಸ್ಸಿನಲ್ಲಿರುವಂತೆ ಪ್ರಯೋಜನವನ್ನುಂಟುಮಾಡಬೇಕೆಂಬುದು ಯಾವ ನ್ಯಾಯ? ತತ್ತ್ವವೆಂದರೆ ವಸ್ತು ಹೇಗೆ ಇದೆಯೋ ಆ ಇರವು. ಇದ್ದದ್ದನ್ನು ಇದ್ದಂತೆ ಅರಿತುಕೊಳ್ಳಬೇಕು; ಅದು ಹೀಗಿರಬೇಕು, ಹೀಗಿರಬಾರದು-ಎಂಬುದಕ್ಕೆ ಯಾರಿಗೂ ಹಕ್ಕಿಲ್ಲ. ತತ್ತ್ವವು ಒಂದು ವೇಳೆ ನಮ್ಮ ವ್ಯವಹಾರದಲ್ಲಿ ಉಪಯೋಗಕ್ಕೆ ಬಾರದೆಇದ್ದರೂ ಅದರ ಮೇಲೆ ನಾವು ಆಕ್ಷೇಪವನ್ನು ಮಾಡುವಂತೆ ಇಲ್ಲ. ನಮ್ಮ ಇಚ್ಛೆಯಂತೆ ಮಾರ್ಪಡುವದು 'ತತ್ತ್ವ'ವೆನಿಸೀತೆ ? ಹೀಗಿದ್ದರೂ ವೇದಾಂತಜ್ಞಾನದಿಂದ ವ್ಯವಹಾರಕ್ಕೂ ಪ್ರಯೋಜನವಾಗಿದೆ. ಪರಮಾರ್ಥವನ್ನಂತೂ ಅಂಗೈನೆಲ್ಲಿಕಾಯಿಯಂತೆ ತೋರಿಸಿಕೊಡುತ್ತದೆ. ಆದ್ದರಿಂದ ವೇದಾಂತದ ಮೇಲೆ ಹೇಗೂ ಆಕ್ಷೇಪವು ಎದ್ದುಕೊಳ್ಳುವಂತಿಲ್ಲ. ಆದ್ದರಿಂದ ಲೋಕದ ಜನರು ವ್ಯವಹಾರದೃಷ್ಟಿಯಿಂದ ಮಾಡುತ್ತಿರುವ ಕೆಲವು ಆಕ್ಷೇಪಗಳನ್ನು ಈಗ ಪರೀಕ್ಷಿಸಿ ವೇದಾಂತದೃಷ್ಟಿಯಿಂದ ಅವಕ್ಕೆ ಪರಿಹಾರವೇನೆಂಬುದನ್ನು ಕಂಡುಕೊಳ್ಳುವದಕ್ಕೆ ಯತ್ನಿಸೋಣ.

ಮೊಟ್ಟಮೊದಲನೆಯ ಆಕ್ಷೇಪವಿದು : ನಾನು ಇದೇನೆ, ಪ್ರಪಂಚವೂ ಇದೆ. ಪ್ರಪಂಚವೆಂದರೆ ನಮ್ಮ ಮುಂದೆ ಹರಡಿಕೊಂಡಿರುವ ದೃಶ್ಯರಾಶಿ, ಅದು ಇದ್ದಂತೆ ಇರುವದಿಲ್ಲ; ಹೊಸಹೊಸದಾದ ರೂಪಗಳನ್ನು ತಳೆಯುತ್ತಾ ಇರುತ್ತದೆ. ನಾನೂ ಮಾರ್ಪಡುತ್ತಲೇ ಇದೇನೆ. ಶರೀರ, ಇಂದ್ರಿಯ, ಮನಸ್ಸು-ಇವುಗಳಲ್ಲಿ ಯಾವದು ತಾನೆ ಇದ್ದಂತೆ ಇರುತ್ತದೆ ? ಹೀಗೆ ದೃಶ್ಯವಾದ ಪ್ರಪಂಚವೂ ನೋಡುತ್ತಿರುವ ನಾವೂ ಇಬ್ಬರೂ ಮಾರ್ಪಡುತ್ತಿರುವೆವಾದ್ದರಿಂದ ಮುಂದೆ ಏನೋ ಯಾರು ಬಲ್ಲರು ? ಹೀಗಿರುವಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ' ಇದೆಲ್ಲವೂ ಅದ್ವೈತವೇ ಎನ್ನಬಹುದೆ ?

ಆಕ್ಷೇಪವನ್ನು ಕೇಳಿದಾಗ ದುಷ್ಪರಿಹರವೆಂದೇ ಕಾಣುತ್ತಿದೆ. ಆದರೆ 'ಪ್ರಪಂಚವು ಇದೆ' ಎಂಬ ವಾಕ್ಯಕ್ಕೆ ಏನರ್ಥ ? 'ನದಿ ಇದೆ' ಎಂದರೆ ಅದು ಹರಿಯುತ್ತಿದೆ ಎಂದೇ ಅರ್ಥ; ಅದರಲ್ಲಿ ಒಂದುತೊಟ್ಟು ನೀರೂ ಸ್ಥಿರವಾಗಿ ಇದ್ದಲ್ಲಿ ಇರುವದಿಲ್ಲ ; ಹರಿಯುತ್ತಿದೆ- ಎಂಬುದನ್ನೇ ನಾವು 'ನದಿ' ಎಂಬ ಹೆಸರಿನಿಂದ ಕರೆಯುತ್ತಿದೇವೆ ಅಷ್ಟೆ. ಇದರಂತೆ ಪ್ರಪಂಚವು ಇದೆ ಎಂದರೂ ಅದು ಎಡೆಬಿಡದೆ ಮಾರ್ಪಡುತ್ತಿದೆ ಎಂದೇ ಅಭಿಪ್ರಾಯ. ಆದರೆ 'ನಾನು ಇದೇನೆ' ಎಂದರೆ ನನ್ನ ನಿಜವಾದ ಸ್ವರೂಪವು ಇದ್ದಂತೆಯೇ ಇದೆ ಎಂದು ಅಭಿಪ್ರಾಯ. ಯಾವ ಯಾವದು ಮಾರ್ಪಡುತ್ತಿರುವದೋ ಅದೆಲ್ಲವನ್ನೂ ತನ್ನ ಅರಿವಿನಿಂದ ಬೆಳಗಿ ತೋರಿಸುತ್ತಾ ಇರುವದು ನನ್ನ ಸ್ವರೂಪ.

ಪ್ರಪಂಚವು ಮಾರ್ಪಡುತ್ತಿದೆ ಎನ್ನುವಾಗ ಅದನ್ನು ನಾವು ಕಾಲದಲ್ಲಿಟ್ಟು ಮಾತಾಡುತ್ತಿದೇವೆಂಬುದನ್ನು ಮರೆಯಬಾರದು. 'ಕಾಲೋಽಸ್ಮಿ ಲೋಕಕ್ಷಯಕೃತ್' ಎಂದು ಭಗವಂತನೆಂದಂತೆ-ಕಾಲವು ಲೋಕವನ್ನೆಲ್ಲ ಮಾರ್ಪಡಿಸಿ ಕ್ಷಯಿಸುವಂತೆ ಮಾಡುತ್ತಿರುತ್ತದೆ. ಕಾಲದೊಳಗಿರುವ ಜಗತ್ತೆಲ್ಲವೂ ಮೃತ್ಯುವಿನ ದವಡೆಗೆ ಸಿಕ್ಕಿಕೊಂಡು ನರಳುತ್ತಿದೆ. ಆದರೆ ಕಾಲಸಹಿತವಾದ ಈ ಜಗತ್ತಿನ ಆಧಾರವು ಸತ್ಸ್ವರೂಪನಾದ ಆತ್ಮನೇ ಆಗಿರುತ್ತದೆ. ಯಾವದು ಆಗುತ್ತಿದೆ, ವಿಕಾರವನ್ನು ಪಡೆಯುತ್ತಿದೆ-ಎನ್ನುವರೋ ಅದು 'ಇದೆ' ಎಂಬ ಭ್ರಾಂತಿಯನ್ನು ಉಂಟುಮಾಡುತ್ತಿರುವದಕ್ಕೆ ನಿಜವಾದ ಅರ್ಥದಲ್ಲಿಯೂ ಇದ್ದುಕೊಂಡಿರುವ ಆತ್ಮನೇ ಕಾರಣ. ಸನ್ಮಾತ್ರನಾದ ಆತ್ಮನಲ್ಲಿಯೇ ಈ ವಿಕಾರಾತ್ಮಕವಾದ ಜಗತ್ತು ತೋರಿಕೊಳ್ಳುತ್ತಿದೆ. 'ಎಲ್ಲವೂ ಆಗುತ್ತಿದೆ, ಎಲ್ಲವೂ ವಿಕಾರವೇ, ಎಲ್ಲವೂ ಚಲನೆಯೇ' ಎಂಬುದೊಂದು ಪಾಶ್ಚಾತ್ಯರ ದರ್ಶನವುಂಟು. ಆದರೆ ವಿಕಾರವಾಗಲಿ ಚಲನೆಯಾಗಲಿ ಕೂಟಸ್ಥನಿತ್ಯವಾದ ಆಸ್ಪದವೊಂದಿಲ್ಲದೆ ಕಲ್ಪಿಸುವದಕ್ಕೂ ಬರುವಂತಿಲ್ಲ. ವಿಕಾರವನ್ನೂ ಚಲನವನ್ನೂ ನೋಡುತ್ತಿರುವ ನಿತ್ಯಸಾಕ್ಷಿಯನ್ನು ಇಲ್ಲವೆನ್ನುವದು ಯಾರಿಂದಲೂ ಆಗಲಾರದು ; ಏಕೆಂದರೆ ಹಾಗೆ ಇಲ್ಲವೆನ್ನುವವನ ಪರಮಾರ್ಥರೂಪವೇ ಆ ಸಾಕ್ಷಿಯೆಂಬುದನ್ನು ವೇದಾಂತಿಗಳು ಅನುಭವದ ಆಧಾರದಿಂದ ತೋರಿಸಿಕೊಡುತ್ತಾರೆ. ಆದ್ದರಿಂದ ನಾನು, ಪ್ರಪಂಚ- ಎಂಬ ವಿಭಾಗವು ಎಂದೆಂದಿಗೂ ತನ್ನ ಸ್ವರೂಪವನ್ನು ಮಾರ್ಪಡಿಸಿಕೊಳ್ಳದೆ ಇರುವ ತತ್ತ್ವವನ್ನು ಆಧಾರಮಾಡಿಕೊಂಡೇ ತೋರುತ್ತಿದೆ. ಯಾವ ಆಧಾರದಲ್ಲಿ ಅದು ತೋರುತ್ತಿರುವದೋ ಆ ತತ್ತ್ವವು ಸ್ವಪ್ನಜಾಗರಿತಗಳಲ್ಲಿ ಎರಡರಲ್ಲಿಯೂ ತನ್ನ ರೂಪದಿಂದಲೇ ಇದ್ದುಕೊಂಡಿರುತ್ತದೆ. ಮಾರ್ಪಡುತ್ತಿರುವ ವಿಭಕ್ತಪ್ರಪಂಚವು ಕನಸಿನಲ್ಲಿ ಹೇಗೋ ಹಾಗೆ ಎಚ್ಚರದಲ್ಲಿಯೂ ವಿಕಲ್ಪಮಾತ್ರ. ವಿಕಲ್ಪಗಳು ತಮಗೆ ಆಸ್ಪದವಾಗಿರುವ ತತ್ತ್ವರೂಪದಿಂದಲೇ ನಿಜವಾಗಿರುತ್ತವೆ. ಸುಷುಪ್ತಿ

ಯಲ್ಲಿ ಯಾವ ವಿಕಲ್ಪವೂ ಇಲ್ಲದ ಆತ್ಮವಸ್ತುವೊಂದೇ ನಿರುವ ಅನುಭವವಿರುವದೇ ಈ ಯುಕ್ತಿಗೆ ಆಧಾರ. ಆದ್ದರಿಂದ 'ಏಕಮೇವಾದ್ವಿತೀಯಮ್' ತನಗೆರಡನೆಯು ದಿಲ್ಲದ ಒಂದೇ ತತ್ತ್ವವೇ ಎಲ್ಲವೂ ಎಂಬುದು ಯಾವ ಅನುಭವಕ್ಕೂ ವಿರುದ್ಧ ವಲ್ಲ.

ಈಗ ಇನ್ನೊಂದು ಪ್ರಶ್ನೆ ನಮಗೆ ಪ್ರಪಂಚದ ಜ್ಞಾನವು ಅನುಭವದಲ್ಲಿದೆ. ಇದರಲ್ಲಿ ಕಾಣುವ ದೃಶ್ಯಗಳು ಇಚ್ಛೆ ದ್ವೇಷ, ಸುಖ, ದುಃಖ– ಇವುಗಳನ್ನು ಉಂಟುಮಾಡುತ್ತಿರುವದೂ ಅನುಭವದಲ್ಲಿದೆ ಅಲ್ಲವೆ ? ನಿರಂತರವಾಗಿ ಇಚ್ಛೆ, ಅಥವಾ ದ್ವೇಷವು ಎಲ್ಲಾ ಪ್ರಾಣಿಗಳಿಗೂ ಆಗುತ್ತಿದೆ ; ಆದ್ದರಿಂದ ಈ ಪ್ರಪಂಚ ದಲ್ಲಿದ್ದುಕೊಂಡು ಸುಖದುಃಖಗಳನ್ನು ಅನುಭವಿಸುವದು ಯಾರಿಗೂ ಬಿಟ್ಟಿದ್ದಲ್ಲ ವೆಂದೇ ಹೇಳಬೇಕಾಗಿದೆ. 'ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ | ಸರ್ವಭೂತಾನಿ ಸಂಮೋಹಂ ಸರ್ಗೇ ಯಾನ್ತಿ ಪರಂತಪ ||' (ಗೀ. ೭–೨೭) ಹುಟ್ಟಿದ ಪ್ರಾಣಿಮಾತ್ರಕ್ಕೆ ಈ ಇಚ್ಛಾದ್ವೇಷಗಳು ಸ್ವಭಾವದಿಂದಲೇ ಉಂಟಾಗುತ್ತಿವೆ ಎಂಬುದಕ್ಕೆ ಭಗವದ್ಗೀತೆಯು ಪ್ರಮಾಣವೂ ಇದೆ. ಈ ಅನು ಭವವು ಸ್ವಾಭಾವಿಕವಾಗಿರುವಲ್ಲಿ ಇದನ್ನು ವಿಾರಿದ ಪರಮಾರ್ಥತತ್ತ್ವವೊಂದಿದೆ ಎಂಬ ತಿಳಿವಳಿಕೆಯು ನಮ್ಮ ನಿತ್ಯಜೀವನಕ್ಕೆ ಯಾವ ಪ್ರಯೋಜನವನ್ನುಂಟು ಮಾಡೀತು ?

ಈ ಪ್ರಶ್ನೆಗೆ ಒಂದು ಉತ್ತರವಿದೆ : ಇಚ್ಛಾದ್ವೇಷಾದಿಗಳು ಜೀವನದಲ್ಲಿ ಎಲ್ಲಾ ಪ್ರಾಣಿಗಳಿಗೂ, ಮುಖ್ಯವಾಗಿ ಎಲ್ಲಾ ಮನುಷ್ಯರಿಗೂ ಇವೆ ಎಂಬುದು ನಿಜ. ಆದರೆ ಅವು ಇವೆ ಎಂದಮಾತ್ರಕ್ಕೆ ಅವಕ್ಕೆ ವಶವಾಗಿಯೇ ನಡೆಯ ಬೇಕೆಂದೇನೂ ಸಿದ್ಧವಾಗುವದಿಲ್ಲ. ಮನುಷ್ಯನಿಗೆ ಪೌರುಷಾವಲಂಬನೆಗೂ ಅವಕಾಶವಿದೆ. ಚಿನ್ನದಲ್ಲಿ ಬೇರೆಯ ಲೋಹದ ಬೆರಕೆಯಾಗಿದ್ದರೆ ಅಕ್ಕಸಾಲಿಯು ಆದನ್ನು ಒರೆಗೆ ಹಚ್ಚಿ, ಸುತ್ತಿಗೆಯಿಂದ ಬಡಿದು ನೋಡಿ, ಬೆಂಕಿಯಲ್ಲಿ ಕಾಯಿಸಿ, ಪುಟವಿಟ್ಟು, ಕೊನೆಗೆ ಚೊಕ್ಕಚಿನ್ನವನ್ನು ಮಾಡುವಂತೆ, ಮನುಷ್ಯನೂ ಸ್ವಪ್ರ ಯತ್ನದಿಂದ ಈ ಇಚ್ಛಾದಿಗಳನ್ನು ಸರಿಯಾಗಿ ವಶಕ್ಕೆ ತೆಗೆದುಕೊಂಡು ಶುದ್ಧನಾಗ ಬೇಕು. ಜ್ಞಾನ, ಇಚ್ಛೆ, ಕರ್ಮ–ಇವುಗಳು ಸ್ವಭಾವದಿಂದ ಅಶುದ್ಧವಾಗಿರು ತ್ತವೆ. ಶಾಸ್ತ್ರದೃಷ್ಟಿಯನ್ನು ಅವಲಂಬಿಸಿಕೊಂಡು ಸತ್ಸಹವಾಸದಿಂದ ಅವುಗಳನ್ನು ಶುದ್ಧಿಮಾಡಿಕೊಂಡು ಧೀರನಾಗಿ ಜೀವನವನ್ನು ಮಾಡಬೇಕು. ಜ್ಞಾನೇಚ್ಛಾ ಕ್ರಿಯೆಗಳ ತತ್ತ್ವವೇನು ?– ಎಂಬುದನ್ನು ಅರಿತುಕೊಳ್ಳುವದಕ್ಕೆ ಪ್ರಯತ್ನಿಸ ಬೇಕು. ಅದ್ವೈತತತ್ತ್ವವನ್ನು ಅವಲಂಬಿಸಿಕೊಂಡೇ ಇವುಗಳು ತೋರಿಕೊಳ್ಳು ತ್ತಿರುತ್ತವೆ. ಆ ತತ್ತ್ವವನ್ನವಲಂಬಿಸಿಕೊಂಡು ಇವುಗಳನ್ನು ಶುದ್ಧಿಗೊಳಿಸಿ ಕೊಳ್ಳಬೇಕು ಎಂಬುದನ್ನು ಈ ಜ್ಞಾನೇಚ್ಛಾದಿಗಳು ನಮಗೆ ಸೂಚಿಸುತ್ತಿವೆ.

ಅವಿವೇಕಿಗಳು ಇವಕ್ಕೆ ವಶರಾಗುತ್ತಾರೆ ; ವಿವೇಕಿಗಳಾದವರು ಇವನ್ನು ಶುದ್ಧಿಗೊಳಿಸಿಕೊಂಡು ಜೀವನದ ಆನಂದವನ್ನು ಸಂಪಾದಿಸಿಕೊಳ್ಳುತ್ತಾರೆ.

ಮೂರನೆಯದಾಗಿ ಇನ್ನೊಂದು ಪ್ರಶ್ನೆ. ಈ ಪ್ರಪಂಚದಲ್ಲಿ ಇಷ್ಟೊಂದು ದುಃಖವಿರುವದೇಕೆ ? ಇದಕ್ಕೆ ಉತ್ತರವನ್ನು ಹೇಳುವ ಮುಂಚೆ ದುಃಖಗಳು ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ– ಎಂದು ಮೂರು ವಿಧವಾಗಿರುತ್ತವೆ– ಎಂಬುದನ್ನು ಲಕ್ಷ್ಯಕ್ಕೆ ತಂದುಕೊಳ್ಳಬೇಕು. ಆಧ್ಯಾತ್ಮಿಕದುಃಖವು ಸಾಮಾನ್ಯವಾಗಿ ಎಲ್ಲರಿಗೂ ಆದರೂ ವಿಶೇಷವಾಗಿ ಷಡೂರ್ಮಿಗಳೆನಿಸಿದ ಹಸಿವುಬಾಯಾರಿಕೆ, ಜರಾಮರಣ, ಶೋಕಮೋಹ–ಇವುಗಳು ಮತ್ತೆಮತ್ತೆ ಆಗುತ್ತಿರುವವು. ಹಸಿವು ಬಾಯಾರಿಕೆಗಳನ್ನು ಇಲ್ಲದಂತೆ ಮಾಡಿಕೊಳ್ಳುವದು ಜನರಿಗೆ ಆಗುವದಿಲ್ಲ: ಅವುಗಳಿಂದಾಗವ ದುಃಖವನ್ನು ತಾತ್ಕಾಲಿಕವಾಗಿ ಉಪಶಮನಮಾಡಿಕೊಳ್ಳುವದಕ್ಕೆ ಪ್ರಯತ್ನಪಟ್ಟರೂ ಜನರ ರಾಗದ್ವೇಷಾದಿಗಳಿಂದಾಗುವ ಸ್ವಾರ್ಥಬುದ್ಧಿಯ ಫಲವಾಗಿ ಎಷ್ಟೋ ಜನರು ಕಷ್ಟಪಡುತ್ತಿರುವರು. ಬರಗಾಲ, ಅನಾವೃಷ್ಟಿ, ಕೆರೆಭಾವಿಗಳು ಬತ್ತಿಹೋಗುವದು– ಮುಂತಾದ ಕಾರಣದಿಂದ ಪೈರುಪಚ್ಚೆಗಳು ಒಣಗಿ ಕುಡಿಯುವದಕ್ಕೆ ನೀರೂ ಸಿಕ್ಕದಂಥ ಬರಗಾಲಗಳು ಆಗಾಗ್ಗೆ ತೋರಿಕೊಳ್ಳುವವು. ಮನುಷ್ಯನಿಗೆ ಜರಾಮರಣಗಳು ಅವಶ್ಯವಾಗಿ ಆಗುವದು ನಿಜ ; ಅಜರಾಮರಣಸ್ಥಿತಿಯೊಂದು ಇದೆಯೆ ? –ಎಂಬ ವಿಚಾರವನ್ನು ಮನಸ್ಸಿಗೆ ತಂದುಕೊಳ್ಳದೆ ಇರುವದು ಮಾತ್ರ ಆಶ್ಚರ್ಯ. ಆಧ್ಯಾತ್ಮಿಕವಲ್ಲದ ಹೊರಗಿನ ದುಃಖಗಳಲ್ಲಿ ಕೆಲವು–ಪ್ರಾಣಿಗಳಿಂದಲೂ ಮನುಷ್ಯರಿಂದಲೂ ಒಬ್ಬರಿಂದೊಬ್ಬರಿಗೆ ಆಗುತ್ತಿರುವವು. ಪ್ರಾಣಿಗಳು ಅನ್ನಾನ್ನಾದಭಾವದಿಂದ ಒಂದರಲ್ಲೊಂದು ವರ್ತಿಸುತ್ತಿವೆ; ಅವಕ್ಕೆ ವಿಚಾರವಿಲ್ಲದ್ದರಿಂದ ಈ ಸ್ವಭಾವವನ್ನು ಮೀರುವದು ಅವುಗಳಿಂದ ಆಗದೆ ಇದೆ. ಆದರೆ ಮನುಷ್ಯರಿಗೆ ವಿಚಾರವಿವೇಕಗಳು ವಶದಲ್ಲಿವೆಯಾದರೂ ಅವರು ಇಚ್ಛಾದ್ವೇಷಗಳ ಉಪಟಳಕ್ಕೆ ಒಳಗಾಗಿ ಒಬ್ಬರನ್ನೊಬ್ಬರು ಬಗೆಬಗೆಯಿಂದ ಪೀಡಿಸುತ್ತಿರುವರು. ಮನುಷ್ಯರು ಪ್ರಯತ್ನಿಸಿದರೆ ಈ ದುಃಖವನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಿಕೊಳ್ಳಬಹುದು. 'ನ್ಯಾಯವರ್ತನೆಯನ್ನೂ ಧರ್ಮನೀತಿಗಳನ್ನೂ ಕಲಿತುಕೊಳ್ಳಿರಿ' ಎಂದು ಈ ದುಃಖಗಳು ಮನುಷ್ಯರಿಗೆ ಸೂಚನೆಕೊಡುತ್ತಿವೆ. ಆದರೆ ಜನರ ದೃಷ್ಟಿವೈಷಮ್ಯದಿಂದ ಈ ಸೂಚನೆಗಳಿಗೆ ಅವರು ಅಷ್ಟು ಮನಸ್ಸುಕೊಡುತ್ತಿಲ್ಲ. ಇನ್ನು ಮಿಡತೆ ಮುಂತಾದವುಗಳ ಹಾವಳಿ, ನದಿ, ಬಿರುಗಾಳಿ. ಸಮುದ್ರಗಳು ಉಕ್ಕೇರುವದು, ಬೆಟ್ಟಗಳು ಉರುಳುವದು, ಸಿಡಿಲುಬಡಿಯುವದು– ಮುಂತಾದ ಉತ್ಪಾತಗಳು ಜನರ ಪ್ರಯತ್ನಕ್ಕೆ ಹೊರಗೆ ಇರುವವು ಎಂದು ತಟ್ಟನೆ ಕಾಣುತ್ತದೆ. ಆದರೆ ಪ್ರಯತ್ನದಿಂದ ಅವನ್ನೂ ಕಡಿಮೆಮಾಡಿಕೊಳ್ಳಬಹುದೆಂಬುದು ನಾಗರಿಕ ಜನರ ಪ್ರಯತ್ನದಿಂದ ಗೊತ್ತಾಗುತ್ತದೆ. ವಿಜ್ಞಾನಶಾಸ್ತ್ರದ ಬಲದಿಂದ ಎಷ್ಟೋ

ಬಾಹ್ಯದುಃಖಗಳನ್ನು ತಪ್ಪಿಸಿಕೊಳ್ಳಬಹುದು. ಜೀವನವನ್ನು ಸುಖಮಯವಾಗಿ ಯೂ ಮಾಡಿಕೊಳ್ಳಬಹುದು– ಎಂಬುದು ಗೊತ್ತಾಗುತ್ತದೆ ; ಆದರೆ ಮನುಷ್ಯನು ಅಜ್ಞಾನದಿಂದಲೂ ಸ್ವಾರ್ಥಬುದ್ಧಿಯಿಂದಲೂ ಆ ಶಾಸ್ತ್ರದ ತಿಳಿವಳಿಕೆಯನ್ನೇ ದುರುಪಯೋಗಮಾಡಿಕೊಂಡು ದುಃಖಕ್ಕೆ ಈಡಾಗುತ್ತಿದಾನೆ

ಒಟ್ಟಿನಲ್ಲಿ ದುಃಖಗಳು ಏನನ್ನು ಸೂಚಿಸುತ್ತವೆ ? ಮನುಷ್ಯನಿಗೆ ಈಮೇಲು ಮೇಲಿನ ಜೀವನದಲ್ಲಿ ತೋರುವ ದುಃಖವು ಅಸಹ್ಯವಾಗಿರುವದೇಕೆ ? ಇವುಗಳನ್ನು ಮೀರಿದ ಆನಂದಸ್ಥಿತಿಯೊಂದು ಇದೆ ಎಂಬುದು ಇವನ ಲಕ್ಷ್ಯಕ್ಕೆ ಆಗಾಗ್ಗೆ ಬರುತ್ತಿದೆ. ಆದರೆ ಆದನ್ನು ಮರೆತು ಸಂಸಾರದಲ್ಲಿ ಆಗುವ ಸುಖದುಃಖಗಳನ್ನೇ ಹೆಚ್ಚಾಗಿ ಮನಸ್ಸಿಗೆ ತಂದುಕೊಳ್ಳುತ್ತಿರುವದೇ ಜನರ ಸ್ವಾಭಾವಿಕಪ್ರವೃತ್ತಿ ಯಾಗಿರುತ್ತದೆ. ತನ್ನ ದುಃಖವನ್ನೂ ಜನರ ದುಃಖವನ್ನೂ ಕುರಿತು ಮತ್ತೆ ಮತ್ತೆ ಯೋಚಿಸುತ್ತಿರುವದೇ ದುಃಖಕ್ಕೆ ಮೂಲಹೇತುವಾಗಿರುತ್ತದೆ ಎನ್ನಬಹುದು. ದುಃಖವು ನಮಗೆ ಆಗಾಗ್ಗೆ ಎಚ್ಚರಿಕೆಯನ್ನು ಕೊಡುತ್ತಲೇ ಇದೆ. ಹೊರಗಿನ ಪ್ರಪಂಚದಲ್ಲಿ ಯಾವಾಗಲೂ ಸುಖವೇ ಸಿಕ್ಕುವದೆಂಬ ಭರವಸೆಯಿಲ್ಲ ; ನಿಮ್ಮ ನಿಮ್ಮೊಳಗಿನ ಆನಂದವನ್ನು ಕಂಡುಕೊಳ್ಳುವದಕ್ಕೆ ಪ್ರಯತ್ನಿಸಿ– ಎಂಬುದೇ ಆ ಎಚ್ಚರಿಕೆ. ಲೋಕದಲ್ಲಿ ಕೆಲವು ಶುಭದೃಷ್ಟಿಯ ಜನರು ಇದಾರೆ; ಅವರು ದುಃಖವು ಬಂದೊದಗಿದಾಗಲೂ 'ಇನ್ನೂ ಹೆಚ್ಚಿನ ಕಷ್ಟವು ನಮಗೆ ಬರಲಿಲ್ಲವಲ್ಲ! ಈ ಕಷ್ಟವು ಬಂದದ್ದರಿಂದ ನಾನು ಕೆಟ್ಟಮಾರ್ಗಕ್ಕೆ ಇಳಿಯದಂತೆ ಎಚ್ಚರಿಕೆ ಬಂದಿತು' ಎಂದು ಸಮಾಧಾನಪಟ್ಟುಕೊಳ್ಳುತ್ತಾರೆ. ಮತ್ತೆ ಕೆಲವರು ಅಶುಭ ದೃಷ್ಟಿಯವರು. ಈ ಪ್ರಪಂಚವೆಲ್ಲ ದುಃಖಮಯವೇ, ನಮಗೆ ಯಾರೂ ಒಳ್ಳೆಯದನ್ನು ಮಾಡುವವ ರಿಲ್ಲ ; ನಮ್ಮ ಗೋಳನ್ನು ಕೇಳುವವರು ಯಾರು?' ಎಂದು ಯಾವದಾದರೊಂದು ನೆಪದಿಂದ ತಮ್ಮ ದುಃಖವನ್ನು ಜನರ ಮುಂದೆ ತೋಡಿಕೊಳ್ಳುತ್ತಲೇ ಇರುತ್ತಾರೆ. ಒಟ್ಟಿನಲ್ಲಿ ಸುಖವು ಬರಲಿ, ದುಃಖವು ಬರಲಿ, ಎರಡೂ ನಿತ್ಯಾನಂದದ ಕಡೆಗೆ ನಮ್ಮನ್ನು ತಿರುಗಿಸುವದಕ್ಕೆಂದೇ ಬರುತ್ತಿವೆ. ಆದರೆ ನಾವು ಮಾತ್ರ ಅವು ಕಲಿಸುವ ಪಾಠವನ್ನು ಕಲಿಯುತ್ತಿಲ್ಲ. ಮನುಷ್ಯನು ಎಡೆಬಿಡದೆ ಕೆಲಸಮಾಡುತ್ತಿರುತ್ತಾನೆ ; ಯಾವದೋ ಒಂದು ಸುಖವು ದೊರಕುವದೆಂಬ ಆಶೆಯಿಂದ ಹಗಲೂ ಇರುಳೂ ದುಡಿದರೂ ಅದು ದುಃಖವೆಂದು ಅವನು ಬಗೆಯುತ್ತಿಲ್ಲ. ಇಂಥ ಕಷ್ಟಗಳು ಬಂದರೂ ಎಷ್ಟೋ ವಯಸ್ಸಾಗಿದ್ದರೂ ಎಷ್ಟೋ ಬಲವಾದ ರೋಗಗಳಿಂದ ನರಳು ತ್ತಿದ್ದರೂ, ಸಾಯಬೇಕೆಂದು ಯಾವನೊಬ್ಬನೂ ಇಚ್ಛಿಸುತ್ತಿಲ್ಲ. ಇದೇಕೆ ? 'ಆನಂದವು ನಿಜವಾಗಿದೆ, ಬದುಕಿದ್ದರೆ ಒಂದಿಲ್ಲದಿದ್ದರೆ ಒಂದು ದಿನ ಅದು ದೊರೆ ತೀತು' ಎಂಬ ಬಲವಾದ ನಂಬಿಕೆ ಜನರಿಗೆ ಸ್ವಭಾವದಿಂದಲೇ ಇದೆ. ಇದಕ್ಕೆ ಕಾರಣ ವೇನು? ವೇದಾಂತವೊಂದೇ ಇದಕ್ಕೆ ಸರಿಯಾದ ಉತ್ತರವನ್ನು ಕೊಡುತ್ತದೆ. ಕೆಲವು ಮತಗಳಲ್ಲಿ ಸುಖವು ಈಶ್ವರನಿಂದಲೂ ದುಃಖವು ಸೈತಾನನಿಂದಲೂ ಆಗುತ್ತವೆ

ಎಂಬ ನಂಬಿಕೆಯಿದೆ. ಆದರೆ ಸುಖದುಃಖಗಳೆರಡೂ ಆನಂದದಲ್ಲಿ ಕೊನೆಗಾಣುವದಕ್ಕೆ ಬರುತ್ತಿರುವವು ; ಲೋಕದಲ್ಲಿ ನಿಜವಾಗಿ ಈ ಜಗತ್ತೆಲ್ಲವೂ ಆನಂದಭರಿತವಾಗಿರ ದಿದ್ದರೆ ಯಾರುತಾನೆ ಬದುಕಿರಲಪೇಕ್ಷಿಸುತ್ತಿದ್ದರು ? ಯಾರುತಾನೆ ದುಡಿಯುತ್ತಿದ್ದರು? 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್' | ( ತೈ. ೨-೭ ) ಎಂದು ಶ್ರುತಿಯು ನಮ್ಮ ಜೀವನದಲ್ಲಿ ನಿತ್ಯಾನಂದವೊಂದಿದೆ ಎಂಬುದನ್ನು ಸಾರುತ್ತಿದೆ. ಮನುಷ್ಯನಿಗೆ ಜನ್ಮಮೃತ್ಯುಜರಾದಿಗಳು ಬರುತ್ತಿರುವದು ನಿಜ; ಆದರೆ ನಿಜವಾಗಿ ಅವನು ಸ್ವಭಾವ ದಿಂದಲೇ 'ಸ ವಾ ಏಷ ಮಹಾನಜ ಆತ್ಮಾ ಅಜರೋಽಮರೋಽಮೃತೋಽಭಯೋ ಬ್ರಹ್ಮ.' (ಬೃ. ೪-೪-೨೫) ಪರಮಾತ್ಮನು, ಮಹಾ ವ್ಯಾಪಕನು, ಜನ್ಮರಹಿತನು ಮುಪ್ಪಿಲ್ಲದವನು, ಮರಣರಹಿತನು, ವಿನಾಶವಾಗುವ ಸ್ವಭಾವವಿಲ್ಲದವನು, ನಿರ್ಭಯನಾದ ಬ್ರಹ್ಮಸ್ವರೂಪನು- ಎಂಬುದು ವೇದಾಂತದ ಡಂಗುರವಾಗಿದೆ. ಇದನ್ನು ತಿಳಿಯುವದಕ್ಕೆ ಮನುಷ್ಯನನ್ನು ಪ್ರವರ್ತಿಸುವಂತೆ ಮಾಡುವದೇ ದುಃಖ ಗಳ ಉದ್ದೇಶ.

---

## ೨೩. ಮನುಷ್ಯನ ಸ್ಥಿತಿಯ ಪರೀಕ್ಷೆ

( 9-8-62 )

ಲೌಕಿಕದೃಷ್ಟಿಯಿಂದ ವೇದಾಂತದರ್ಶನದ ವಿಷಯಕ್ಕೆ ತೋರುವ ಶಂಕೆ ಗಳನ್ನು ತಿಳಿಸಿ ಅವುಗಳಿಗೆ ಪರಿಹಾರದ ರೂಪರೇಖೆಯನ್ನು ಹೇಳಿದ್ದಾಯಿತು. ಈಗ ಆ ಪರಿಹಾರವನ್ನೇ ವಿಸ್ತರಿಸಿ ತಿಳಿಸಿಕೊಡಬೇಕಾಗಿದೆ. ಸಮಾಸವ್ಯಾಸಪದ್ಧತಿ (Concentric Method)ಯಿಂದ ವಿಷಯದ ವಿವೇಚನೆಯನ್ನು ಮಾಡಿ ದರೆ ಅದು ಸುಲಭವೇದ್ಯವಾಗುತ್ತದೆ.

ಭೌತಿಕಶಾಸ್ತ್ರವೇ ಮುಂತಾದವುಗಳ ಸಹಾಯವಿಲ್ಲದೆ ನೋಡುವವನ ಕಣ್ಣಿಗೆ ಈ ಪ್ರಪಂಚದ ಕೇಂದ್ರವು ತಾನಾಗಿರುವಂತೆಯೂ ಹೊರಗಿನ ವಸ್ತುಗಳು, ಪ್ರಾಣಿ ಗಳು, ಮನುಷ್ಯರು-ಮುಂತಾದ ದೃಶ್ಯಗಳನ್ನು ನೋಡಿದಾಗ ತನಗೆ ಅವುಗಳಲ್ಲಿ ಕುತೂಹಲ, ಆಶ್ಚರ್ಯ, ಕಾಮ, ಕ್ರೋಧ, ಪ್ರವೃತ್ತಿ, ನಿವೃತ್ತಿ-ಹೀಗೆ ಆಗುತ್ತಿ ರುವಂತೆಯೂ ಕಾಣುತ್ತದೆ. ಸಾಮಾನ್ಯವಾದ ಕಲ್ಲು, ಮಣ್ಣು, ಲೋಹ- ಮುಂತಾದ ಅಚೇತನಪದಾರ್ಥಗಳೂ ಸ್ವಲ್ಪಮಟ್ಟಿಗೆ ಚೈತನ್ಯವು ಹೊರತೋರುವ ಗಿಡ, ಮರ, ಬಳ್ಳಿ-ಮುಂತಾದವೂ ಚೈತನ್ಯವೂ ಸಂಚಾರವೂ ತೋರುವ ಜಂಗಮ ಪ್ರಾಣಿಗಳೂ ತನ್ನಂತೆಯೇ ಈ ಪ್ರಪಂಚದಲ್ಲಿ ವ್ಯವಹರಿಸುತ್ತಿರುವ ಬೇರೆಯ

ಅನೇಕ ಮನುಷ್ಯರೂ ಇರುವಂತೆ ಕಾಣುತ್ತದೆ. 'ನಾನು ಯಾರು ? ಎಲ್ಲಿಂದ ಬಂದೆನು ? ನನಗೂ ಈ ಪ್ರಪಂಚಕ್ಕೂ ಸಂಬಂಧವೇನು ? ಇದು ನನಗೆ ಅನು ಕೂಲವಾದದ್ದೊ, ಪ್ರತಿಕೂಲವಾದದ್ದೊ ? ಇದನ್ನು ನಾನು ಹೇಗೆ ಬಳಸಿಕೊಳ್ಳ ಬೇಕು ?' ಎಂದು ಅವನು ತನಗೆತಾನೇ ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಾನೆ. ಈ ವಿಚಾರಕ್ಕೆ ಮೊದಲು ಇಂದ್ರಿಯಗಳನ್ನು ಉಪಯೋಗಿಸಿಕೊಂಡು ವಸ್ತು ಗಳನ್ನು ಪರೀಕ್ಷಿಸಿ ಅವುಗಳಿಂದಾಗುವ ಸುಖದುಃಖಗಳಿಂದ ಇಚ್ಛಾದ್ವೇಷಗಳನ್ನು ಬೆಳೆಯಿಸಿಕೊಳ್ಳುತ್ತಾನೆ. ಇಷ್ಟು ಸ್ವಾಭಾವಿಕಜ್ಞಾನ ಮತ್ತು ಅತ್ಯಂತಸ್ವಲ್ಪ ವಾದ ಸ್ವಪ್ರಯತ್ನದಿಂದ ಪಡೆದುಕೊಂಡ ಜ್ಞಾನ. ಕಾಡುಜನರು ಹೇಗೋ ಚಕ್ಕಮುಕ್ಕಿಯ ಕಲ್ಲಿನಿಂದ ಬೆಂಕಿಯಾಗುವದನ್ನು ಮೊದಲು ಕಂಡುಕೊಂಡರು ; ಮುಂದೆ ತಾವೇ ಬೆಂಕಿಯನ್ನು ಬೇರೆಯ ರೀತಿಯಿಂದ ಏರ್ಪಡಿಸಿಕೊಂಡು, ಬೆಂಕಿ, ಬೆಳಕು, ಬಿಸಿಲು, ಗಾಳಿ, ಚಳಿ-ಇವುಗಳಿಂದ ರಕ್ಷಣೆಮಾಡಿಕೊಳ್ಳುವದಕ್ಕೆ ವಸ್ತ್ರ, ಗುಡಿಸಲು-ಇವುಗಳನ್ನು ಏರ್ಪಡಿಸಿಕೊಂಡರು. ಹೀಗೆಯೇ ಹೊರಗಿನ ಪ್ರಪಂಚದ ಜ್ಞಾನವೂ ಅದರಲ್ಲಿ ಇಚ್ಛಾದ್ವೇಷಗಳೂ ಬೆಳೆಯುತ್ತಾಬಂದಂತೆಲ್ಲ ವಿಚಾರವೂ ಬೆಳೆಯುತ್ತಾಬಂದು ಮನುಷ್ಯನು 'ನಾಗರಿಕ'ನೆನಿಸಿಕೊಂಡನು.

ಮನುಷ್ಯನ ವಿಚಾರಶಕ್ತಿಯು ಬೆಳೆದಂತೆಲ್ಲ ತನ್ನ ಇಚ್ಛೆಯನ್ನು ಪೂರ್ತಿ ಮಾಡಿಕೊಳ್ಳುವದಕ್ಕೆ ವಸ್ತುಗಳ, ಮರಗಿಡಗಳ, ಪ್ರಾಣಿಗಳ ಮತ್ತು ಮನುಷ್ಯರ ಸ್ವಭಾವವನ್ನು ಪರೀಕ್ಷೆಮಾಡಿ ಅವರಿಂದ ತನಗೆ ಆಗುವ ಇಷ್ಟಾನಿಷ್ಟಗಳನ್ನು ಅರಿತುಕೊಂಡು, ಇಷ್ಟವನ್ನು ಸಂಪಾದಿಸಿಕೊಂಡು ಭೋಗಿಸುವದಕ್ಕೂ ಅನಿಷ್ಟ ವನ್ನು ದೂರವಿಟ್ಟು, ಅಥವಾ ತಾನೇ ಅದರಿಂದ ದೂರನಾಗಿ, ಅದರಿಂದಾಗುವ ದುಃಖವನ್ನು ಪರಿಹರಿಸಿಕೊಳ್ಳುವದಕ್ಕೂ ವ್ಯ ವ ಸ್ಥಿ ತ ವಾ ದ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳುತ್ತಾ ಜ್ಞಾನರಾಶಿಯನ್ನು ಅವನು ಕೂಡಿಹಾಕಿಕೊಳ್ಳುತ್ತಿದಾನೆ. ಸಸ್ಯಗಳನ್ನೂ ಪ್ರಾಣಿಗಳನ್ನೂ ತನ್ನ ವಶದಲ್ಲಿಟ್ಟುಕೊಳ್ಳುವ ವಿದ್ಯೆ, ಉಳಿದ ಜನರನ್ನು ಆಳುತ್ತಾ ತಾನು ಹೇಳಿದಂತೆ ಕೇಳುವಹಾಗೆ ಮಾಡಿಕೊಳ್ಳುವ ವಿದ್ಯೆ- ಇವನ್ನು ಸಂಪಾದಿಸಿಕೊಳ್ಳುತ್ತಾ ಇರುತ್ತಾನೆ. ಶಕ್ತಿಗಳ ಬೆಳವಣಿಗೆಯೇ ನಾಗರಿ ಕತೆ ; ಮನುಷ್ಯನಿಗೆ ನಾಗರಿಕತೆಯಿಂದ ಒಂದಾನೊಂದು ಶಕ್ತಿಯು ವಶವಾಗಿರು ತ್ತದೆ ; ಇದೇ ಆಧಿಭೌತಿಕವಿಜ್ಞಾನದಿಂದಾಗಿರುವ ಲಾಭ. ಒಬ್ಬ ಮನುಷ್ಯನು ತಾನೊಬ್ಬನೇ ಇಷ್ಟು ಸಾಹಸವನ್ನು ಮಾಡಬಲ್ಲನಾದರೆ ಅನೇಕ ಮನುಷ್ಯರ ಬಲವುಳ್ಳ ಸಾವಿರಾರು ಕೈಕಾಲುಗಳುಳ್ಳ ರಾಕ್ಷಸನಂತಿರುವ ಯಂತ್ರವನ್ನು ಸಂಪಾ ದಿಸಿಕೊಂಡದ್ದರಿಂದ ಅವನ ಬಲವು ಎಷ್ಟು ಹೆಚ್ಚಿದಂತಾಯಿತು ! ವಿಜ್ಞಾನಶಾಸ್ತ್ರ ವು ಜ್ಞಾನ, ಇಚ್ಛೆ, ಕ್ರಿಯೆ-ಎಂಬ ಮೂರು ಶಕ್ತಿಗಳನ್ನು ಬೆಳೆಯಿಸಿಕೊಳ್ಳುವ ದಕ್ಕೆ ಹೇಳಿಕೊಡುತ್ತಿದೆ. ಆದರಿಂದ ಅವನಿಗೆ ಆಶೆಯೂ ಬೆಳೆಯುತ್ತಿದೆ. ತಂತಿಯ ಸುದ್ದಿ, ದೂರಧ್ವನಿವಾಹಕ, ರೈಲು, ಹಡಗು, ವಿಮಾನ- ಮುಂತಾದ ಉಪ

ಕರಣಗಳನ್ನು ಕಂಡುಹಿಡಿದುಕೊಂಡು ಅವನು ಭೂಜಲವಾಯುಗಳನ್ನು ವಶ ಪಡಿಸಿಕೊಂಡಿರುತ್ತಾನೆ ; ಇಷ್ಟರಲ್ಲಿಯೇ ಆಕಾಶವೆಲ್ಲವನ್ನೂ ವ್ಯಾಪಿಸುವೆನೆಂಬ ಹುಮ್ಮು ಅವನಿಗೆ ಬರುತ್ತಿದೆ. ಚಂದ್ರಗ್ರಹವನ್ನೂ ಮುಟ್ಟುವೆನೆಂದು ಜನರು ಪೈಪೋಟಿಯಿಂದ ರಾಕೆಟುಗಳನ್ನು ಬಿಡುತ್ತಿದ್ದಾರೆ !

ಇಷ್ಟು ಅಭಿವೃದ್ಧಿಯ ಗಡಿಬಿಡಿಯಲ್ಲಿ ಮನುಷ್ಯನ ಜೀವನವು ಹಲವು ಅಪಾಯಗಳಿಗೆ ಒಳಗಾಗುವ ಸ್ಥಿತಿ ಬಂದುಬಿಟ್ಟಿರುತ್ತದೆ. ಪ್ರತಿದಿನವೂ ಎದ್ದ ಕೂಡಲೆ ಇಂದು ರೋಗ, ಅಪಾಯ, ಮರಣ– ಇವುಗಳಲ್ಲಿ ಯಾವದು ಬಂದೊದ ಗುವದೊ !–ಎಂದು ಚಿಂತಿಸುವಹಾಗೆ ಆಗಿಬಿಟ್ಟಿರುತ್ತದೆ. ಬೆಳಗ್ಗೆ ಎದ್ದ ಒಬ್ಬರು ಮತ್ತೊಬ್ಬರನ್ನು 'ಎದ್ದಿರಾ ? ಕ್ಷೇಮವೆ ?' ಎಂದು ಕೇಳುವದಕ್ಕೂ ಕಾಲದ ಅವ ಕಾಶವು ಸಿಕ್ಕದಷ್ಟು ಚಟುವಟಿಕೆಯು ಹೆಚ್ಚುತ್ತಲಿದೆ. ವಿಜ್ಞಾನಶಾಸ್ತ್ರವು ಮಾನವನ ತಿಳುವಳಿಕೆಯನ್ನು ಹೆಚ್ಚಾಗಿ ಕ್ರಮಪಡಿಸಿ ಅನೇಕ ಉಪಶಾಸ್ತ್ರಗಳನ್ನು ಪ್ರತಿಷ್ಠೆಮಾಡಿರುತ್ತದೆ. ಹವದ ಶಾಸ್ತ್ರ, ಶರೀರಶಾಸ್ತ್ರ, ಮನಃಶಾಸ್ತ್ರ, ಖನಿಜ ಶಾಸ್ತ್ರ, ವೈದ್ಯಶಾಸ್ತ್ರ, ಶಿಲ್ಪಶಾಸ್ತ್ರ, ಪಾಕಶಾಸ್ತ್ರ–ಎಷ್ಟು ಶಾಸ್ತ್ರಗಳಿಲ್ಲ ! ಅಟ್ಟಿನ ವಿದ್ಯೆ, ಚಿತ್ರವಿದ್ಯೆ, ಕೈಗಾರಿಕೆಗಳು–ಮುಂತಾದ ಕಲಾಕೌಶಲಗಳೂ ಬೆಳೆದಿವೆ. ಎಲ್ಲಾ ಕಲಾಕೌಶಲಗಳ ಎಲ್ಲಾ ಶಾಸ್ತ್ರಗಳ ಪರಿಚಯವೂ ಇರುವ ಮನುಷ್ಯನು ಈಗ ಯಾವನುತಾನೆ ಇದ್ದಾನೆ ? ಅವುಗಳ ನೆರವಿನಿಂದ ಕಂಡುಹಿಡಿದಿರುವ ಯಂತ್ರ ಗಳು, ವಾಹನಗಳು, ಜೀವನಕ್ಕೆ ಬೇಕಾಗಿರುವ ಆವಶ್ಯಕತೆಗಳನ್ನು ಸುಲಭವಾಗಿ ಸಂಪಾದಿಸುವ ಬಗೆಗಳು, ವಿನೋದಸಾಮಗ್ರಿಗಳು– ಇವೆಲ್ಲ ಎಷ್ಟು ವಿದ್ಯುದ್ವೇಗ ದಿಂದ ತಯಾರಾಗುತ್ತಿವೆ! ಆದರೆ 'ಬಹೂತ್ ವಿದ್ಯಾ ಭಾತ್ ನಾಹಿ' ಬಹಳ ವಿದ್ಯೆ ಗಳು ಹೆಚ್ಚಿದಂತೆ, ಹೊಟ್ಟೆಗೆ ಅನ್ನವಿಲ್ಲ– ಎಂಬಂತಾಗಿ ಮನುಷ್ಯನಿಗೆ ರಾಗದ್ವೇಷ ಗಳು ಹೆಚ್ಚುತ್ತಿವೆ, ಜೀವನದ ಸಾಮಗ್ರಿಗಳು ಹೆಚ್ಚಿದಂತೆಲ್ಲ ಆಶೆಗಳು ಒಂದಕ್ಕೆ ಹತ್ತುಪಟ್ಟಾಗಿ ಬೆಳೆಯುತ್ತಿವೆ, ಬರಗಾಲವೂ ರೋಗಗಳೂ ಹೆಚ್ಚುತ್ತಿವೆ; ಜನರಿಗೆ ಒಬ್ಬರ ವಿಷಯದಲ್ಲೊಬ್ಬರಿಗೆ ಸಂಶಯ, ಈರ್ಷ್ಯೆ, ಮಾತ್ಸರ್ಯಗಳು ಹೆಚ್ಚು ಹೆಚ್ಚಾಗಿ ಉಂಟಾಗುತ್ತಿವೆ. ವಿಜ್ಞಾನಶಾಸ್ತ್ರವು ನಮಗೆ ಕಷ್ಟವನ್ನು ಕಡಿಮೆಮಾಡಿ ಭೋಗಸಾಮಗ್ರಿಗಳನ್ನು ಹೆಚ್ಚುಮಾಡಿ ಊಡುತ್ತಿರುವಹಾಗೆಯೇ ಒಂದು ಜನಾಂ ಗವನ್ನೊಂದು ಜನಾಂಗವು ನಾಶಮಾಡುವ ವಿನಾಶಕಶಸ್ತ್ರಾಸ್ತ್ರಗಳನ್ನೂ ತೋರಿಸಿ ಕೊಡುತ್ತಿದೆ. ಜನರು "ವಿಜ್ಞಾನಶಾಸ್ತ್ರದ ತಿಳುವಳಿಕೆ ಬಂತು, ಇನ್ನು ಗೆದ್ದೆವು !" –ಎಂದು ಹರ್ಷದಿಂದ ಉಬ್ಬುತ್ತಿರುವ ಕಾಲಕ್ಕೇ 'ಸೂರ್ಯನ ಮದುವೆಗೆ ಉತ್ಸವ ಮಾಡುವ ಕಪ್ಪೆಗಳಂತೆ ಹೀಗೆ ಹಿಗ್ಗದಿರಿ ! ಸೂರ್ಯನಿಗೆ ಮಕ್ಕಳಾದರೇನು ಗತಿ? ಜಲಾಶಯಗಳೆಲ್ಲ ಬತ್ತಿ ಜಲಚರಗಳೆಲ್ಲ ಸಾಯುವದಿಲ್ಲವೆ ? ಹಾಗೆ ನೀವು ವಿಜ್ಞಾನ ಶಾಸ್ತ್ರದಿಂದ ಹುಟ್ಟಿದ ಘಾತುಕಶಸ್ತ್ರಗಳಿಂದಲೇ ವಿನಾಶವಾಗುವಿರಿ !' ಎಂದು ವಿವೇಕಿಗಳ ಮನಸ್ಸು ಎಚ್ಚರಿಕೆಯನ್ನು ಕೊಡುತ್ತಾ ಬರುತ್ತಿದೆ. ಮಲೆನಾಡಿನಲ್ಲಿ

ಸಾಕಿದ ಚೌಡಿಗಳೊಳಗೆ ಕೆಲವು ಅವಕ್ಕೆ ಸರಿಯಾದ ಆಹಾರವನ್ನು ಕೊಡದಿದ್ದರೆ ಮನೆಯ ಯಜಮಾನನನ್ನೇ ತಿಂದುಬಿಡುವವಂತೆ ! ಹಾಗೆಯೇ ಯಂತ್ರಗಳೂ ತಮ್ಮನ್ನು ನಿರ್ಮಿಸಿದ ಮಾನವನನ್ನೇ ತಿನ್ನುವ ಶಂಕೆಯು ತೋರಹತ್ತಿದೆ ! ಮನುಷ್ಯನು ತನ್ನೊಳಗೆ ಔದಾರ್ಯ, ಪ್ರೇಮ, ಶ್ರದ್ಧಾದರಗಳು– ಮುಂತಾದ ಸದ್ಭಾವಗಳನ್ನು ಕಳೆದುಕೊಂಡು ಅಸತ್ಯ, ಹಿಂಸೆ, ಭೋಗಲಾಲಸೆಗಳಿಂದ ಕಾಮ ಕ್ರೋಧಲೋಭಾದಿಗಳನ್ನು ಬೆಳೆಯಿಸಿಕೊಳ್ಳುತ್ತ ಅವಕ್ಕೆ ವಶನಾಗುತ್ತಾ ಬರುತ್ತಿದಾನೆ.

ವಿಜ್ಞಾನಶಾಸ್ತ್ರದ ವರಗಳನ್ನು ಉಪಯೋಗಿಸಿಕೊಂಡ ಜನಾಂಗಗಳು ಹೀಗೆ ಪರಸ್ಪರವಿಧ್ವಂಸಕಕಾರ್ಯದಲ್ಲಿ ತೊಡಗಿರುವಾಗ ಇನ್ನೂ ಪ್ರಬುದ್ಧವಾಗಿಲ್ಲದ ಜನಾಂಗಗಳು ಕಕ್ಕಾಬಿಕ್ಕಿಯಾಗಿವೆ. ಎಲ್ಲೆಲ್ಲಿಯೂ ಹಗಲುದರೋಡೆ ನಡೆದಿದೆ. ಮರದ ಮೇಲೆ ತಾನು ಕುಳಿತಿರುವ ಕೊಂಬೆಯನ್ನೇ ಕತ್ತರಿಸುವ ಜಾಣತನವನ್ನು ವಿಜ್ಞಾನಶಾಸ್ತ್ರವು ನಮಗೆ ಕಲಿಸಿಕೊಡುತ್ತಿದೆ. 'ಅಯ್ಯೋ,ದಡ್ಡರೆ! ಹೀಗೆ ನನ್ನನ್ನು ದುರುಪಯೋಗಮಾಡಿಕೊಳ್ಳುತ್ತಿರುವಿರಲ್ಲ ! ಎನ್ನುತ್ತಾ ವಿಜ್ಞಾನಶಾಸ್ತ್ರವನ್ನರಿಯದವರನ್ನು ಕಂಡು ಕನಿಕರವನ್ನು ತೋರುತ್ತಿರುವವರನ್ನು ಕುರಿತು 'ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ'– ನಿನ್ನ ಗತಿಯೇನೆಂಬುದನ್ನು ತಿಳಿಯದೆ ಪಾಂಡಿತ್ಯದ ಮಾತುಗಳನ್ನಾಡುತ್ತಿರುವೆಯಲ್ಲ ?– ಎನ್ನುತ್ತಿದೆ, ವಿಜ್ಞಾನಶಾಸ್ತ್ರ. ಇದು ನಿಜವಾದ ಶಾಸ್ತ್ರದೃಷ್ಟಿಯಲ್ಲ ; ಬರಿಯ ವಿಜ್ಞಾನ ಶಾಸ್ತ್ರದ ತಿಳಿವು ಜಾಣತನವಾಗಿರಬಹುದು. ಆದರೆ ಅದು ಅಭ್ಯುದಯನಿಃಶ್ರೇಯಸಗಳನ್ನು ಕೊಡುವ ಸಚ್ಛಾಸ್ತ್ರಜನ್ಯಜ್ಞಾನವಲ್ಲ.

---

## ೨೪. ವೇದಾಂತವಾದಕ್ಕೆ ಸಂಭಾವನಾಯುಕ್ತಿಗಳು

(10–8–62)

ಲೌಕಿಕದೃಷ್ಟಿಯಿಂದ ಪ್ರಪಂಚಸ್ಥಿತಿಯನ್ನು ಪರೀಕ್ಷಿಸಿನೋಡಿದ್ದಾಯಿತು. ಜ್ಞಾನ, ಇಚ್ಛೆ, ಫಲ. ಭೋಗ– ಇವುಗಳು ಬೆಳೆಯುತ್ತಲೇಹೋಗುತ್ತಿವೆ. ಆದರೆ ವಿಜ್ಞಾನಶಾಸ್ತ್ರವು ಹೊಸಹೊಸ ಶೋಧಗಳನ್ನು ಮಾಡುತ್ತಲೇ ಇದೆ. ಎಣ್ಣೆಯಿಲ್ಲದ ಅನಿಲಜ್ಯೋತಿ, ವಿದ್ಯುದ್ದೀಪ-ಇವುಗಳನ್ನು ಕಂಡುಹಿಡಿದು ಕತ್ತಲೆಯನ್ನು ಹಿಮ್ಮೆಟ್ಟಿಸಿದ್ದಾಗಿದೆ ; ಕುದುರೆಯಿಲ್ಲದ ರೈಲುಗಾಡಿಗಳ ಸಾಲನ್ನು ಓಡಿಸಿ ನೂರಾರು ಜನರಿಗೆ ಪ್ರಯಾಣಸೌಕರ್ಯವನ್ನು ಕೊಟ್ಟಿದ್ದಾಗಿದೆ. ಜನರು

ಸೈಕಲ್, ಮೋಟಾರ್, ಬಸ್, ಟ್ರಾಮ್-ಮುಂತಾದ ಯಾನಸೌಕರ್ಯಗಳನ್ನು ಪಡೆದುಕೊಂಡಿದ್ದಾರೆ. ಮರುಭೂಮಿಗಳಿಗೂ ನೀರುಹಾಯಿಸಿ ಕೃಷಿಕರ್ಮವನ್ನು ಮುಂದುವರಿಸಲಾಗಿದೆ; ಆಕಾಶದಲ್ಲಿ ವಾಯುವಿಮಾನಗಳನ್ನೂ ರಾಕೆಟ್‌ಗಳನ್ನೂ ಹಾರಬಿಡಲಾಗಿದೆ ; ಹಿಂದೆ ಅಪರಿಹರಣೀಯವೆಂದು ಬಗೆದಿದ್ದ ಮಹಾರೋಗ ಗಳಿಗೂ ಚಿಕಿತ್ಸೆಯನ್ನು ಕಂಡುಹಿಡಿಯಲಾಗಿದೆ. ಹಿಂದಿನ ಕಾಲದ ಚಕ್ರವರ್ತಿ ಗಳಿಗೂ ದುರ್ಲಭವಾಗಿದ್ದ ಭೋಗೈಶ್ವರ್ಯಗಳು ಸಾಮಾನ್ಯಜನರಿಗೆ ಲಭಿಸು ತ್ತಿವೆ. ವಿಜ್ಞಾನಶಾಸ್ತ್ರವು ಬೆಳೆದಂತೆಲ್ಲ ಮನುಷ್ಯನಿಗೆ ಇಡಿಯ ಜಗತ್ತೇ ವಶ ವಾದೀತೇನೊ, ಸ್ವರ್ಗವನ್ನು ನರಕವಾಗಿಯೂ ನರಕವನ್ನು ಸ್ವರ್ಗವಾಗಿಯೂ ಮಾಡುವ ಯುಕ್ತಿಯೂ ಹೊಳೆದೀತೇನೊ-ಎನಿಸುತ್ತಿದೆ. ಮನುಷ್ಯನ ಸಕಲ ಆಶೆಗಳೂ ಏಕೆ ಒಂದಾನೊಂದು ಕಾಲಕ್ಕೆ ಪರಿಪೂರ್ತಿಯಾಗಬಾರದು ?– ಇದು ಲೌಕಿಕದೃಷ್ಟಿಯನ್ನು ವ್ಯವಸ್ಥೆಗೊಳಿಸಿರುವ ವಿಜ್ಞಾನಶಾಸ್ತ್ರದವರ ಪ್ರತೀಕ್ಷೆ.

ಆದರೆ ಸ್ವಲ್ಪ ಶಾಂತಮನಸ್ಸಿನಿಂದ ನೋಡೋಣ. ಈ ಅಭಿವೃದ್ಧಿಗೆ ಕೊನೆ ಎಂದಿಗೆ? ಜ್ಞಾನೇಚ್ಛಾದಿಗಳ ಬೆಳವಣಿಗೆಗೆ ಪರಿಮಿತಿಯುಂಟೆ! ಕತ್ತಲೆಯಲ್ಲಿ ದೀಪವನ್ನು ತಂದರೆ ಸ್ವಲ್ಪಭಾಗದ ಕತ್ತಲೆ ಹೋಗುವದು ನಿಜ ; ಆದರೆ ಕತ್ತಲೆ ಯಿರುವ ವಿಶಾಲಪ್ರದೇಶಕ್ಕೆ ಹೋಲಿಸಿದರೆ ಅದು ಎಷ್ಟು ಸ್ವಲ್ಪ! ಹೀಗೆಯೇ ಜ್ಞಾನವು ಬೆಳೆದಷ್ಟೂ ಅಜ್ಞಾನದ ಕ್ಷೇತ್ರವು ಇನ್ನಷ್ಟು ವಿಸ್ತೀರ್ಣವಾಗಿರುವದು ಅನುಭವಕ್ಕೆ ಬರುತ್ತಲಿದೆ. ಇಚ್ಛೆಗಳ ಪರಿಪೂರ್ತಿಯು ಆದಂತೆಲ್ಲ ಅವುಗಳು ಇನ್ನಷ್ಟು ಉದ್ದೀಪಿತವಾಗುತ್ತಿವೆ. ಕ್ರಿಯಾಫಲಗಳು ಕೈಗೂಡಿದಂತೆಲ್ಲ, ಹೊಸಹೊಸ ಭೋಗ್ಯವಸ್ತುಗಳ ಮತ್ತು ಭೋಗಪ್ರಕಾರಗಳ ಚಿತ್ರವು ಮನಸ್ಸಿನ ಮುಂದೆ ಚಿತ್ರಿಸಿ ದಂತೆ ಕಾಣಿಸಿಕೊಳ್ಳುತ್ತದೆ. 'ಪ್ರಯತ್ನಮಾಡಿದರೆ ಯಾವದುತಾನೆ ಅಸಾಧ್ಯ? ಈಗ ಸಿದ್ಧಿಸದೆಹೋಗಬಹುದಾದದ್ದು ಮುಂದೆ ಮಾಡುವ ಪ್ರಯತ್ನಕ್ಕೆ ಅದೇ ಇನ್ನಷ್ಟು ಉತ್ತೇಜಕವಾಗುತ್ತದೆ ; ಆದ್ದರಿಂದ ಕ್ರಿಯಾಶೀಲತೆಯೂ ಹೆಚ್ಚುತ್ತದೆ. ಅಲ್ಲವೆ ?' ಎಂದು ವಿಜ್ಞಾನಶಾಸ್ತ್ರಜ್ಞನು ಕೇಳುತ್ತಿದಾನೆ. ಅವನ ಧೈರ್ಯವೂ, ಉತ್ಸಾಹವೂ ಮೆಚ್ಚತಕ್ಕದ್ದೇ ಸರಿ ; ಆದರೆ ಜ್ಞೇಯವೂ ಕರ್ತವ್ಯವೂ ಅವಶಿಷ್ಟ ವಾಗಿಲ್ಲವೆಂಬ ಕಾಲವನ್ನು ಎಂದಿಗೂ ಯಾರಿಂದಲೂ ಕಲ್ಪಿಸುವದಕ್ಕಾಗುವದಿಲ್ಲ ವೆಂಬುದು ಮಾತ್ರ ನಿಶ್ಚಯ. ಜ್ಞೇಯರಾಶಿಗೂ ಕರ್ತವ್ಯಶೇಷಕ್ಕೂ ಮಿತಿಯನ್ನು ಕಲ್ಪಿಸುವದಕ್ಕೆ ಯಾವ ವಿಜ್ಞಾನಶಾಸ್ತ್ರಜ್ಞನಿಂದಲೂ ಸಾಧ್ಯವಿಲ್ಲ– ಎನ್ನುತ್ತಾನೆ' ವೇದಾಂತಿ.

ಹಾಗಾದರೆ ನಮ್ಮ ದೃಷ್ಟಿಯು ದೋಷಯುಕ್ತವೆಂದೇ ಆಗಲಿ, ನೀವು ಹೇಳುವ ದೇನು ? ಮನುಷ್ಯನು ಹೇಡಿಯಾಗಿ ಕೈಮುದುರಿಕೊಂಡು ಕೂತುಕೊಳ್ಳಬೇಕೆನು ವಿರೇನು? ನಿಮ್ಮ ವೇದಾಂತವು ಒಂದೇ ಒಂದು ಹೊಸ ಶೋಧವನ್ನು ಮಾಡಿದೆಯೆ?

ಹಸಿದವನಿಗೆ ಅನ್ನ, ನರಳುತ್ತಿರುವವರಿಗೆ ನೆರಳು, ಆಶೆಯಿಂದ ಏನಾದರೂ ತನಗೆ ಬೇಕೆನ್ನುವವನಿಗೆ ಒಂದಿಷ್ಟಾದರೂ ಅದನ್ನು ಪರಿಪೂರ್ತಿಗೊಳಿಸುವ ಉಪಾಯ-- ಇವೇನಾದರೂ ನಿಮ್ಮ ಆಸರೆಯಲ್ಲಿ ಸಿಕ್ಕೀತೆ ? -ಎಂದು ಲೌಕಿಕದೃಷ್ಟಿಯ ಶಾಸ್ತ್ರಜ್ಞನು ಕೇಳಬಹುದು. ಇದಕ್ಕೆ ವೇದಾಂತದೃಷ್ಟಿಯಿಂದ ಉತ್ತರವನ್ನು ಹೇಳುವ ಮೊದಲು ವೇದಾಂತವಾದದ ಪರವಾಗಿ ಸಂಭಾವನಾಯುಕ್ತಿಯನ್ನು ಮೊದಲು ಮುಂದೊಡ್ಡುವದು ಅವಶ್ಯ. ಸದ್ಯಕ್ಕೆ ವಿಜ್ಞಾನಶಾಸ್ತ್ರದ ದೃಷ್ಟಿಯಿಂದ ಜ್ಞಾನಾಭಿವೃದ್ಧಿಯಾಗುವದೆಂಬುವದನ್ನು ಯಾರೂ ಅಲ್ಲಗಳೆಯುವಂತಿಲ್ಲವಾದರೂ ಆ ಜ್ಞಾನವು ಬೆಳೆದಂತೆಲ್ಲ ಮನುಷ್ಯನ ಇಚ್ಛೆಗಳೂ ಕಷ್ಟಗಳೂ ಕರ್ತವ್ಯಗಳೂ ಕಡಿಮೆಯಾಗುವ ಬದಲು ಹೆಚ್ಚುತ್ತಲೇ ಇವೆ- ಎಂಬುದನ್ನು ಇಬ್ಬರೂ ಒಪ್ಪಿಕೊಳ್ಳಬೇಕಾಗಿದೆ. 'ವಿಷಯಗಳ ಭೋಗದಿಂದ ಆಗುವ ಸುಖ, ಪರಲೋಕದಲ್ಲಾಗುವ ಅಪ್ರಾಕೃತವಾದ ಮಹಾಸುಖ- ಇವೆರಡಕ್ಕಿಂತಲೂ ತೃಷ್ಣಾಕ್ಷಯಸುಖವು ಎಷ್ಟೋಪಾಲು ಹೆಚ್ಚಿನದು' ಎಂದು ವೇದಾಂತಿಗಳು ಹೇಳುತ್ತಾರೆ. ವೇದಾಂತಜನ್ಯಜ್ಞಾನವಾದ ಮೇಲೆ ಅದು ಅನುಭವಕ್ಕೇ ಬರುತ್ತದೆ. 'ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ । ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ' (ಕ. ೨-೩-೧೪) ಹೃದಯದ ಕಾಮಗಳೆಲ್ಲವೂ ಹೋಗಿರುವಾಗ ಮರ್ತ್ಯನು ಅಮೃತನಾಗಿರುತ್ತಾನೆ. ಇಲ್ಲಿಯೇ ಬ್ರಹ್ಮವನ್ನು ಪಡೆದುಕೊಂಡಿರುತ್ತಾನೆ. ತನ್ನ ಪರಮಾರ್ಥರೂಪಕ್ಕೂ ಬ್ರಹ್ಮಕ್ಕೂ ಯಾವ ವೈಲಕ್ಷಣ್ಯವೂ ಇಲ್ಲ ಎಂಬುದನ್ನು ಕಂಡುಕೊಂಡಿರುತ್ತಾನೆ -ಎಂದು ವೇದಾಂತವು ಸಾರುತ್ತಿದೆ. ಆ ಅನುಭವವು ಬಂದಾಗ ಯಾವ ಪ್ರತಿತರ್ಕವನ್ನೂ ಒಡ್ಡುವದಕ್ಕೆ ಆಗುವದೇ ಇಲ್ಲವೆಂಬುದು ಸ್ಪಷ್ಟವಾಗಿದೆ. 'ನ ಹಿ ದೃಷ್ಟೇಽನುಪಪನ್ನಂ ನಾಮ' ಕಂಡದ್ದರಲ್ಲಿ ಅಯುಕ್ತವೆಂಬುದು ಯಾವದೂ ಇರುವದಿಲ್ಲವಷ್ಟೆ ? ಆದ್ದರಿಂದ ವೇದಾಂತವು ಹೇಳುವ ಅನುಭವವು ಯಾರಿಗೂ ಬರುವದೇಇಲ್ಲ- ಎಂಬುದನ್ನು ತೋರಿಸಿಕೊಡಬೇಕೇ ಹೊರತು, ಸುಮ್ಮನೆ ತರ್ಕವನ್ನು ಮುಂದಕ್ಕೆ ತರುವದರಿಂದ ಯಾವ ಲಾಭವೂ ಇಲ್ಲ.

ಆದರೆ ಅಲ್ಲಿಯವರೆಗೆ ಸುಮ್ಮನೆ ವೇದಾಂತಿಗಳ ಮಾತನ್ನು ನಂಬಿಕೊಂಡಿರಬೇಕೆಂದೇನೂ ಇಲ್ಲ. ಈಗಲೂ ವೇದಾಂತದ ಕಡೆಗೆ ಸಂಭಾವನಾಯುಕ್ತಿಯ ಒಲವು ಇದೆ ಎಂಬುದನ್ನು ಮನಗಾಣಬಹುದಾಗಿದೆ. ಅದು ಹೇಗೆಂದರೆ (೧) ಪ್ರತಿಯೊಬ್ಬನಿಗೂ ಬದುಕಿರಬೇಕೆಂಬ ಆಶೆಯಿದೆ. ತನಗೆ ಎಂಥ ದಾರಿದ್ರ್ಯವು ಬಂದಿರಲಿ, ಎಂಥ ಅನಿವಾರ್ಯವಾದ ರೋಗವು ತನ್ನನ್ನು ನರಳಿಸುತ್ತಿರಲಿ, ಮತ್ತೆ ಮತ್ತೆ ಪ್ರಯತ್ನಿಸಿದರೆ ಕರ್ಮಕ್ಕೆ ತಕ್ಕಂತೆ ಫಲವಾಗಿಯೇತೀರುತ್ತದೆ ಎಂಬ ದೃಢವಾದ ನಂಬಿಕೆಯಿದೆ. ಸಾಯುವಹಾಗಿರುವಾಗಲೂ ಮನುಷ್ಯನ ಆಶೆ ನಿಲ್ಲುವದಿಲ್ಲ ; ಅಂಥವರುಕೂಡ ಮತ್ತೆ ಬದುಕಿ, ಮದುವೆಯಾಗಿ, ಮಕ್ಕಳನ್ನು ಹಡೆದು, ಯಜ್ಞಾದಿಗಳನ್ನು ಮಾಡಿದ ಅದ್ಭುತಚರಿತ್ರೆಗಳು ಈ ಕಲಿಯುಗದಲ್ಲಿಯೂ ಕಂಡು

ಬಂದಿವೆ. ಕರ್ಮಗಳಿಗೆ ಫಲವು ಆಗಿಯೇತೀರಬೇಕು ಎಂಬ ದೃಢವಾದ ವಿಶ್ವಾಸವು ಮನುಷ್ಯನಲ್ಲಿದೆ. ಇದರಿಂದ ಆತ್ಮನು ನಿತ್ಯನು, ಮನುಷ್ಯನಿಗೆ ಸರ್ವಕಾಮಗಳೂ ಸಿಕ್ಕುವದಕ್ಕೆ ಯಾವದೋ ಒಂದು ಉಪಾಯವಿರಬೇಕು– ಎನ್ನಿಸುತ್ತದೆ. ಇನ್ನು ಈಶ್ವರಾಸ್ತಿತ್ವಕ್ಕೂ ಸಂಭಾವನೆಯಿದೆ :

'ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತ ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋ ರಾತ್ರಾಣ್ಯರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠನ್ತ್ಯೇ ತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯನ್ದನ್ತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾ ಯಾಂ ಯಾಂ ಚ ದಿಶಮನ್ವೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃಪ್ರಶಂಸನ್ತಿ ಯಜಮಾನಂ ದೇವಾ ದರ್ವೀಂ ಪಿತರೋಽನ್ವಾಯತ್ತಾಃ | ಬೃ. ೩-೮-೯.

ಸೂರ್ಯಚಂದ್ರರ ನಿಯತವಾದ ಗತಿ, ಗ್ರಹಗಳ ನಿಯಮ, ಕಾಲನಿಯಮ, ನದೀನದಾದಿಗಳ ಸ್ವಭಾವ, ಇವೆಲ್ಲವೂ ಯಾವದೋ ಒಂದು ಶಕ್ತಿವಿಶೇಷಕ್ಕೆ ಕಟ್ಟು ಬಿದ್ದಿವೆ ಎಂಬುದು ಈಶ್ವರಾಸ್ತಿತ್ವಕ್ಕೆ ಸಂಭಾವನೆಯನ್ನು ಕೊಡುತ್ತವೆ. ಜಗತ್ತಿನಲ್ಲಿ ಸೃಷ್ಟವಾಗಿರುವ ಸಸ್ಯಗಳ ಮತ್ತು ಪ್ರಾಣಿಗಳ ಶರೀರರಚನೆ, ಅವುಗಳಲ್ಲಿರುವ ಸ್ವಾಭಾವಿಕವಾದ ಶಕ್ತಿವಿಶೇಷಗಳು, ಮನುಷ್ಯನಲ್ಲಿ ಉತ್ಕೃಷ್ಟವಾದದ್ದನ್ನು ಮೆಚ್ಚುವ ಶಕ್ತಿ, ಉತ್ತಮಕಾರ್ಯಗಳನ್ನು ಅನುಸರಿಸಬೇಕೆಂಬ ಆಶೆ, ಸಂಗೀತ, ಚಿತ್ರ, ಶಿಲ್ಪಾದಿವಿದ್ಯೆಗಳನ್ನು ಸ್ವಭಾವದಿಂದಲೇ ಮೆಚ್ಚುವ ಶಕ್ತಿ– ಇವೆಲ್ಲವೂ ಸೃಷ್ಟಿಕರ್ತನಾದ ಒಬ್ಬ ಸರ್ವಜ್ಞಸರ್ವಶಕ್ತನು ಇರಬೇಕೆಂಬ ನಂಬಿಕೆಯನ್ನುಂಟು ಮಾಡುತ್ತವೆ.

ಪ್ರಾಮಾಣಿಕತನ[1], ಸತ್ಯ, ಸ್ವಾರ್ಥತ್ಯಾಗ, ಪರೋಪಕಾರ–ಇವುಗಳು ಮನುಷ್ಯನ ಸ್ವಭಾವದಲ್ಲಿ ಬೇರೂರಿಕೊಂಡಿವೆ. ಅದನ್ನು ಜನರು ಹೊಗಳುವದೂ

---

1. 'ಹಿಂದೂ' ಎಂಬ ಇಂಗ್ಲಿಷ್ ಪತ್ರಿಕೆಯಲ್ಲಿ ತಾ||3–8–62ರಲ್ಲಿ ಪ್ರಕಟಿಸಿದ್ದ Remember India (ಭಾರತವನ್ನು ಮರೆಯದಿರು)ಎಂಬ ಪ್ರಾಮಾಣಿಕತನದ ಶ್ಲಾಘನೆಯ ಪ್ರಕಟನೆಯೊಂದನ್ನು ಶ್ರೀಗಳು ಈ ಸಂದರ್ಭದಲ್ಲಿ ಓದಿದರು. ಜರ್ಮನ್ ಏಂಜಸಿಯರೊಬ್ಬನು ಲಕ್ಷರೂಪಾಯಿಗಳ ಹಣದ ಸೂಟ್‌ಕೇಸನ್ನು ಕಳೆದುಕೊಂಡಿದ್ದನು. ಆ ಹಣವನ್ನು ಹಿಂದಕ್ಕೆ ಕೊಟ್ಟ ಒಬ್ಬ ಮಾನಭೂಮ್‌ಜಿಲ್ಲೆಯ ಗಂಗೂರುಗ್ರಾಮದ ಸಾಮಾನ್ಯಭಾರತದೇಶೀಯನಿಗೆ ನೂರುರೂಪಾಯಿಗಳ ಪಾರಿತೋಷಕವನ್ನು ಆವನು ಕೊಡುವದಕ್ಕೆ ಬಂದಾಗ 'ನಿಮ್ಮ ದೆ ಶಕ್ಕೆ ಹೋದಾಗ ಭಾರತದೇಶವನ್ನು ನೆನಪಿನಲ್ಲಿಟ್ಟಿರು ; ಅದೇ ನನಗೆ ಪಾರಿತೋಷಕ'– ಎಂದು ಉತ್ತರವಿತ್ತನೆಂದು ಆ ಲೇಖನದಲ್ಲಿ ಬರೆದಿತ್ತು.

ಉಂಟು. ಇವರಿಂದ ಇಹಲೋಕವನ್ನು ಮೀರಿದ ಪರಲೋಕವೂ ಇರಬಹು ದೆನಿಸುತ್ತದೆ. ಮನುಷ್ಯರಲ್ಲಿ ಹೀಗೆ ಶರೀರೇಂದ್ರಿಯಸಂಘಾತವನ್ನು ಮೀರಿದ ಒಂದು ಸ್ವಭಾವವಿರುವದರಿಂದಲೂ ಅವನಿಗೆ ಬೆಳೆಯುತ್ತಲೇ ಬಂದಿರುವ ಜ್ಞಾನ ಶಕ್ತಿಯು ಕಾಣಬರುತ್ತಿರುವದರಿಂದಲೂ ಅವನಿಗೆ ಸಂಸಾರಿತ್ವವನ್ನು ಮೀರಿದ ಸ್ವಭಾವವೂ ಇರುವ ಸಂಭವವಿದೆ ಎಂದು ತೋರುತ್ತಿದೆ. ಎಲ್ಲವನ್ನೂ ತಿಳಿಯ ಬೇಕು, ಎಲ್ಲವನ್ನೂ ಮಾಡಬೇಕು, ಎಲ್ಲಾ ಕಾಮಗಳೂ ಪೂರ್ತಿಯಾಗಬೇಕು– ಎಂಬ ಹಿಡಿಯದಾಸೆಯು ಮನುಷ್ಯನ ಹೃದಯದಲ್ಲಿದ್ದುಕೊಂಡಿರುತ್ತದೆ. ಇದನ್ನೆಲ್ಲ ನೋಡಿದರೆ 'ಜೀವೇಶ್ವರೈಕ್ಯ' ಎಂಬುದೂ ಅಸಂಭಾವಿತವಲ್ಲ ಎನಿಸುತ್ತದೆ.

ಮನುಷ್ಯನ ಮನಸ್ಸಿಗೆ ಒಂದಕ್ಕೊಂದು ವಿರುದ್ಧವಾದ ಎರಡು ಮನಸ್ಸಿನ ಒಲವುಗಳಿವೆ. ಅವುಗಳಲ್ಲಿ ಒಂದು 'ಎಲೊ, ನೀನು ಕಲ್ಪನಾತರಂಗಗಳಿಂದ ಕೊಚ್ಚಿಹೋಗದಿರು. ಈ ಶರೀರವು ಗಟ್ಟಿಯಾಗಿರುವಾಗಲೇ ಭೋಗಗಳನ್ನು ಅನುಭವಿಸಬೇಕು ; ಆಮೇಲೆ ಇದರ ಶಕ್ತಿಯು ಕುಗ್ಗಿದರೆ, ಅಥವಾ ಇದು ಬಿದ್ದೇ ಹೋದರೆ, ಆಗ ಜನ್ಮವು ವ್ಯರ್ಥವಾಗುವದು. ಈಗ ಉಂಡದ್ದೇ ಬಂತು. ನಿನ್ನ ಸುಖಕ್ಕಾಗಿ ಏನನ್ನು ಮಾಡಿದರೂ ಚಿಂತೆಯಿಲ್ಲ ; ಸಾಲಮಾಡಿಯಾದರೂ ಭೋಗಗಳನ್ನು ಅನುಭವಿಸು' ಎಂದು ಹೇಳಿಕೊಡುತ್ತಿದೆ ಇನ್ನೊಂದು "ಈ ಶರೀರವೇನೂ ಶಾಶ್ವತವಲ್ಲ ; ಇದೇನಿನ್ನನ್ನು ಉದ್ಧಾರಮಾಡುವ ಸ್ವರ್ಗವೆಂದು ಕೊಳ್ಳದಿರು. ಶರೀರಭಾವವನ್ನು ಮರೆತು ಪರೋಪಕಾರವನ್ನು ಮಾಡು, ಹತ್ತು ಜನರ ಕಷ್ಟಸುಖಗಳಲ್ಲಿ ಭಾಗಿಯಾಗು, ವಿಶಾಲಜೀವನದ ಆನಂದವನ್ನು ಪಡೆದು ಕೊ!' ಎನ್ನುತ್ತದೆ. ಮನುಷ್ಯನಲ್ಲಿ ಒಂದು ದೈವಪ್ರಕೃತಿಯೂ ಇದೆ, ಇನ್ನೊಂದು ದೆವ್ವದ ಪ್ರಕೃತಿಯೂ ಇದೆ. ದಮ, ದಾನ, ದಯೆ, ಅಹಿಂಸೆ, ಸತ್ಯ, ಅಕ್ರೋಧ, ಶಾಂತಿ–ಮುಂತಾದವುಗಳನ್ನು ಮೆಚ್ಚುವ, ಜೀವನವು ಸುಖಮಯವಾಗಿರುವದಕ್ಕೆ ಒದಗುವ ಪ್ರಕೃತಿಯೊಂದು. ವಿಷಯಲೋಲುಪತೆ, ಜಿಪುಣತನ, ಕಲ್ಲುಹೃದಯ, ಹಿಂಸೆ, ಸುಳ್ಳು, ಸಿಟ್ಟು, ಚಾಂಚಲ್ಯ–ಮುಂತಾದವುಗಳನ್ನು ಮೆಚ್ಚುವ, ಜೀವನ ವನ್ನು ನಿಷ್ಕಾರಣವಾಗಿ ದುಃಖಮಯವಾಗಿ ಮಾಡುವ ಪ್ರಕೃತಿ ಇನ್ನೊಂದು. ದೈವಪ್ರಕೃತಿಯನ್ನು ಅವಲಂಬಿಸಿ ನೋಡಿದಾಗ ಲೌಕಿಕದೃಷ್ಟಿಯಿಂದ ವೇದಾಂ ತದಮೇಲೆ ಮಾಡುವ ಆಕ್ಷೇಪಗಳು ಕ್ಷುಲ್ಲಕವೆಂದು ಮನದಟ್ಟಾಗುತ್ತದೆ. 'ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್' (ಗೀ.)– ಎಂಬ ಗೀತೋಕ್ತಿ ಯಂತೆ ನಮ್ಮಲ್ಲಿರುವಂತೆ ಸಮಸ್ತಭೂತಗಳಲ್ಲಿಯೂ ಒಂದೇ ರೂಪದಿಂದ ಇದ್ದು ಕೊಂಡಿರುವ ಪರಮೇಶ್ವರನಿಗೂ ನಮಗೂ ಇರುವ ಅತಿನಿಕಟಸಂಬಂಧದ ಅರಿವು ಆಗುತ್ತಾಬರುತ್ತದೆ. ಏಳುಗೇಣಿನ ಶರೀರವೇ ಹೆಚ್ಚೆಂಬ ಸ್ವಾಭಾವಿಕಬುದ್ಧಿ ಹೋಗುತ್ತದೆ ; ನಮ್ಮಲ್ಲಿರುವ ಜ್ಞಾನೇಚ್ಛಾಕ್ರಿಯಾಶಕ್ತಿಗಳಿಗೆ ಸಂಕುಚಿತದೃಷ್ಟಿ

ಯಿಂದ ಈ ಶರೀರೇಂದ್ರಿಯಸಂಘಾತವನ್ನು ತೃಪ್ತಿಪಡಿಸಿಕೊಳ್ಳುವದೇ ನಿಜವಾದ ಫಲವಲ್ಲವೆಂಬುದು ಸ್ಪಷ್ಟವಾಗುತ್ತದೆ. ಕ್ಷುದ್ರವಾದ ಕಾಮಗಳನ್ನೆಲ್ಲ ದೂರ ಮಾಡಿಕೊಂಡವನು ಸರ್ವಕಾಮಗಳನ್ನೂ ಒಟ್ಟಿಗೆ ಪಡೆದುಕೊಳ್ಳಬಹುದು, ಇಲ್ಲಿಯೇ ಬ್ರಹ್ಮಸ್ವರೂಪವನ್ನು ಪಡೆದು ಆನಂದಿಸಬಹುದು–ಎಂಬ ಧೈರ್ಯವು ಬರುತ್ತದೆ. ಹೀಗೆ 'ಯಾವ ನಷ್ಟವೂ ಇರದ ಹೆಚ್ಚಿನ ಲಾಭದ ವ್ಯಾಪಾರವೊಂದಿದೆ, ಅದನ್ನು ಅವಲಂಬಿಸಿ ಸುಖಿಗಳಾಗಿರಿ' ಎಂದು ಬೋಧಿಸುವ ವೇದಾಂತಕ್ಕೂ ಒಂದು ಸ್ಥಾನವಿದೆ ಎಂದು ಸಿದ್ಧವಾಗುತ್ತದೆ.



# ೨೫. ಜ್ಞಾನೇಚ್ಛಾಕ್ರಿಯೆಗಳಿಗೆ ಶಾಸ್ತ್ರದೃಷ್ಟಿಯ ಆಧಾರ

( 11–8–62 )

ಜ್ಞಾನೇಚ್ಛಾಕ್ರಿಯಾಶಕ್ತಿಗಳ ಸದುಪಯೋಗವನ್ನು ಮಾಡಿಕೊಳ್ಳುವ ವಿಶಾಲಜೀವನಕ್ಕೆ ಅವಕಾಶವಿದೆ. ಅದನ್ನೇ ವೇದಾಂತವು ತಿಳಿಸಿಕೊಡುತ್ತದೆ ಎಂದು ತಿಳಿಸಿದ್ದಾಯಿತು. ಈಗ ವಿಶಾಲಜೀವನಕ್ಕೆ ಅನುಕೂಲಿಸುವಂತೆ ಜ್ಞಾನಾದಿಗಳನ್ನು ಸಜ್ಜುಗೊಳಿಸುವದನ್ನು ಕುರಿತು ವಿಚಾರಮಾಡಬೇಕಾಗಿದೆ. ಜ್ಞಾನವೆಂದರೇನು ? ಇದು ಮೆದುಳಿನ ಶಕ್ತಿಯೆಂದೇ ಬಹುಜನ ವಿಜ್ಞಾನಶಾಸ್ತ್ರಜ್ಞರ ನಂಬಿಕೆ. ಆದರೆ ಮೆದುಳು ಘಾಸಿಗೊಂಡಮೇಲೂ ಜನರು ಬದುಕಿದ್ದ ನಿದರ್ಶನಗಳಿವೆ ಎಂದು ಪಾಶ್ಚಾತ್ಯರೇ ಹೇಳುತ್ತಿದಾರೆ[1]. ಮನಸ್ಸೆಂಬುದೇ ಇಲ್ಲವೆಂಬ ಮನಃಶಾಸ್ತ್ರಜ್ಞರ ಮತನಂತೂ ಅತ್ಯಂತಹಾಸ್ಯಾಸ್ಪದವಾಗಿರುತ್ತದೆ ; ಹೊರಗೆ ಭೌತಿಕವಸ್ತುವಿದೆ, ಆದರೆ ಅದನ್ನು ಅರಿಯುವ ಜ್ಞಾನವಿಲ್ಲ– ಎನ್ನುವದು ತೀರ ಹಾಸ್ಯಾಸ್ಪದವಾದ ಮಾತು. ಜ್ಞಾನದ ಅಧೀನವೇ ಅಲ್ಲವೆ, ಅದು ? ಮತ್ತೆ

1. 'E. Ferrier. presented to the Academy to Sciences in his lectures of 22nd December 1913. an observation of Dr. Robinson's concerning a man who had lived for nearly a year with almost no suffering and with no apparant mental trouble, with a brain that was nearly reduced to a pulp and no longer anything but a vast purulent abscess' 'Before Death' (p. 58) by Prof. Flammarion. ಇದನ್ನು ಆಯುರ್ವೇದ ವಿದ್ವಾನ್ ಡಾಕ್ಟರ್ ಅಗರಂ ವೆಂಕಟರಾಮ ಪಂಡಿತರ ಭಾಷಣವೊಂದರಿಂದ ಆರಿಸಿಕೊಂಡಿದೆ.

ಬ್ಬರ ಮೆದುಳನ್ನು ಪರೀಕ್ಷಿಸುವದಕ್ಕೂ ಜ್ಞಾನದ ಸಹಾಯವೇ ಬೇಕಷ್ಟೆ ? ಆದ್ದರಿಂದ ಈ ಪರಾಗ್ದೃಷ್ಟಿಯಿಂದ ಜ್ಞಾನದ ತತ್ತ್ವವೇನೂ ನಿಶ್ಚಿತವಾಗುವಂತಿಲ್ಲವೆಂದು ತಿಳಿಯಬೇಕು.

ನಮ್ಮ ದೇಶದ ಶಾಸ್ತ್ರಗಳಲ್ಲೆಲ್ಲ ಅಂತಃಕರಣದ ವೃತ್ತಿಗಳಿಂದಲೇ ಹೊರಗಿನ ಜ್ಞಾನವುಂಟಾಗುತ್ತದೆ ಎನ್ನುತ್ತಾರೆ. ಅಂತಃಕರಣದ ನೆರವಿನಿ ದಲೇ ಹೊರಗಿನ ಕರಣಗಳು ತಮ್ಮ ತಮ್ಮ ವಿಷಯವನ್ನು ಅರಿಯುತ್ತವೆ ; ಇದು ಒಳಗಿದ್ದುಕೊಂಡು ಕೆಲಸಮಾಡುವದರಿಂದ ಮಾತ್ರವಲ್ಲ, ಒಳಗೇ ಇದ್ದು ತನ್ನ ವಿಷಯಗಳಾದ ಸುಖದುಃಖಾದಿಗಳನ್ನು ಅನುಭವಿಸುವದಕ್ಕೂ ಸಾಧನವಾಗಿರುವದರಿಂದಲೂ 'ಅಂತಃಕರಣ' (ಒಳಗಿನ ಕರಣ)ವೆನಿಸಿರುತ್ತದೆ. ಆದರೆ ಅದು ಹೊರಗಿನ ವಿಷಯಗಳಿಂದ ಹಿಮ್ಮೆಟ್ಟಿ, ತನ್ನ ಒಳಗಡೆಗೇ ಸರಿದುಕೊಂಡು ಒಳನೋಟವನ್ನು -ಪ್ರತ್ಯಗ್ದೃಷ್ಟಿಯನ್ನು- ಅಳವಡಿಸಿಕೊಂಡರೆ ಆಗ ಅದಕ್ಕೆ ಅಂತಃಕರಣವೆಂಬ ಹೆಸರು ಅನ್ವರ್ಥವಾಗುತ್ತದೆ.

ಅಂತಃಕರಣವು ಹೊರಗಡೆಗೆ ತಿರುಗಿದಾಗ 'ಅದು ನನಗಿರಲಿ' ಎಂಬ ಇಚ್ಛೆಯು ಸ್ವಭಾವದಿಂದ ಆಗುತ್ತದೆ. ಆ ಇಚ್ಛೆಯಿಂದ 'ಹೀಗೆ ಮಾಡಬೇಕು' -ಎಂಬ ಸಂಕಲ್ಪವು ಉಂಟಾಗುತ್ತದೆ. ಆದರಂತೆ ಕ್ರಿಯೆಯು ಸಾ ಗು ತ್ತ ದೆ. ಬಳಿಕ ತಾನು ಮಾಡಿದ ಕೆಲಸಕ್ಕೆ ಫಲವಾಗಲಿಲ್ಲವಲ್ಲ !- ಎಂದು ದುಃಖವಾಗುತ್ತದೆ. ಹೀಗೆ ಜ್ಞಾನ, ಇಚ್ಛೆ, ಕ್ರಿಯಾ- ಈ ಮೂರು ಶಕ್ತಿಗಳು ಮುಂದು ಮುಂದಕ್ಕೆ ಬೆಳೆಯುತ್ತಲೇ ಇದ್ದು ಇವನ್ನು ಸ್ವಾರ್ಥಕ್ಕೆ ಉಪಯೋಗಿಸುವವರು 'ಅಸುರರು' ಎನಿಸುತ್ತಾರೆ. ತಮ್ಮ ಜ್ಞಾನಕ್ರಿಯೆಗಳ ಕ್ಷೇತ್ರಗಳು ಸೀಮಿತವಾಗಿವೆಯಲ್ಲ !- ಎಂಬ ದುಃಖವೂ ಮತ್ತೆ ಮತ್ತೆ ಸ್ವಾರ್ಥಕ್ಕಾಗಿ ಪ್ರಯತ್ನವೂ ಅಸುರರಲ್ಲಿ ಸಾಗಿರುತ್ತದೆ.

ಕರ್ಮವೆಂಬುದು ಎಷ್ಟೋವೇಳೆ ತನ್ನ ಫಲಗಳನ್ನು ಕೊಡದೆ ಇರುತ್ತದೆ ; ಆದರೆ ಅದು ಫಲವನ್ನು ಕೊಟ್ಟೇಮುಗಿಯುವದು ನ್ಯಾಯ- ಎಂದು ವಿಚಾರಪರರೆಲ್ಲರಿಗೂ ಅನ್ನಿಸುತ್ತದೆ. ಒಂದೇ ಕಾಲದಲ್ಲಿ ಹುಟ್ಟಿದ ಅನೇಕರೊಳಗೆ ಒಬ್ಬೊಬ್ಬರಿಗಿಂತ ಒಬ್ಬೊಬ್ಬರ ಶರೀರ, ಬುದ್ಧಿ, ಇಚ್ಛೆಯ ಬಲವು, ಕರ್ಮ-ಇವುಗಳಲ್ಲಿ ವೈಲಕ್ಷಣ್ಯವೂ ತಾರತಮ್ಯವೂ ಕಂಡುಬರುವದರಿಂದ ಹಿಂದೆ ಮಾಡಿದ ಕರ್ಮದ ಸಂಸ್ಕಾರವೇ ಇದಕ್ಕೆ ಕಾರಣವೆಂದು ಕಲ್ಪಿಸಬಹುದಾಗುತ್ತದೆ. ಶಾಸ್ತ್ರವೂ ಹಾಗೆಂದೇ ಹೇಳುತ್ತದೆ. ಆದ್ದರಿಂದ ಹಿಂದೆ ಮಾಡಿದ ಕರ್ಮದ ಸಂಸ್ಕಾರ ಈ ಜನ್ಮದಲ್ಲಿ, ಈಗ ಮಾಡಿದ ಕರ್ಮದ ಫಲವು ಮುಂದಿನ ಜನ್ಮದಲ್ಲಿ-ಹೀಗೂ ಆಗಬಹುದು ಎಂಬುದು ನ್ಯಾಯವಾಗಿದೆ. ಈ ಕರ್ಮದ ನಿಯಮವನ್ನು ಅಂಗೀ

ಕರಿಸಿದರೆ ನಮ್ಮ ಕರ್ಮವೇ ನಮಗೆ ಫಲವನ್ನು ಕೊಡುವದೆಂಬ ನಿಶ್ಚಯವಾಗಿ ಮತ್ತೊಬ್ಬರಮೇಲೆ ನಮ್ಮಸ್ಥಿತಿಗೆ ಹೊಣೆಗಾರಿಕೆಯನ್ನು ಹೊರಿಸುವ ಮನಸ್ಸಿನ ಒಲವು ಕಡಿಮೆಯಾಗುತ್ತದೆ.

ಸ್ವಾರ್ಥಕರ್ಮಕ್ಕೆ ಕಾರಣವಾಗಿರುವ ಮನಸ್ಸಿನ ವೇದನೆಗಳ ವಿಚಾರವನ್ನು ನಾವು ಹೆಚ್ಚಾಗಿ ಪರೀಕ್ಷಿಸುತ್ತಿಲ್ಲ. ಆದ್ದರಿಂದ ಇವುಗಳು ನಮ್ಮನ್ನು ಹೊರದೂಡಿ ಮಾಡಬಾರದ ಕೆಲಸಗಳನ್ನು ಮಾಡಿಸುತ್ತವೆ- ಎಂಬುದು ನಮಗೆ ತಿಳಿಯದು. ಇವುಗಳನ್ನು ಹೇಗೆ ಸ್ವಾಧೀನದಲ್ಲಿಟ್ಟುಕೊಳ್ಳಬೇಕೆಂಬುದನ್ನು ನಾವು ನಮ್ಮ ಮಕ್ಕಳಿಗೆ ವಿದ್ಯಾಶಾಲೆಗಳಲ್ಲಿ ಕಲಿಸುತ್ತಿಲ್ಲ. ಶಿಷ್ಯರೂ ಗುರುಗಳೂ ಸಮನಾಗಿಯೇ ಈ ದೋಷಗಳಿಗೆ ವಶರಾಗಿರುತ್ತಾರೆ ಬೆಂಗಳೂರಿನಲ್ಲಿ ಒಮ್ಮೆ ಒಬ್ಬ ವಾರದ ಹುಡುಗನು ಮಳೆಬಂದದ್ದರಿಂದ ವಾರದ ಮನೆಯಲ್ಲಿಯೇ ಅವರ ಸಮ್ಮತಿಯಿಂದ ಉಳಿದುಕೊಂಡನಂತೆ. ರಾತ್ರಿ ಅವರ ಮನೆಯಲ್ಲಿ ಕಳವಾಯಿತು ; ಪೋಲೀಸಿನವರು ವಿಚಾರಮಾಡಿದ್ದರಲ್ಲಿ ಆ ಹುಡುಗನು ಕಳ್ಳರೊಡನೆ ಒಳಸಂಚು ಮಾಡಿಕೊಂಡು ಅವರ ಲಂಚಕ್ಕೆ ಒಳಗಾಗಿ ಸರಿಹೊತ್ತಿನಲ್ಲಿ ಅವರನ್ನು ಒಳಕ್ಕೆ ಬಿಟ್ಟಿದ್ದನೆಂದು ತಿಳಿಯಬಂದಿತು. ಕಾಮಕ್ರೋಧಲೋಭಗಳೆಂಬ ದೋಷಗಳೇ ನಮ್ಮನ್ನು ಹೀಗೆ ಅನರ್ಥಕ್ಕೆ ದೂಡುತ್ತಾ ನಮ್ಮೊಳಗೇ ಸೇರಿಕೊಂಡಿರುವ ಹಿತ ಶತ್ರುಗಳಾಗಿವೆ.

ಈ ದೋಷಗಳಿಗೇ ವಶರಾಗಿರುವ ಆಸುರಪ್ರಕೃತಿಯ ಜನರ ಸ್ವಭಾವವನ್ನು ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ವರ್ಣಿಸಿರುತ್ತದೆ ; ಅಸುರರಿಗೆ ಮಾಡತಕ್ಕದ್ದು ಯಾವದು, ಬಿಡತಕ್ಕದ್ದು ಯಾವದು ?- ಎಂಬುದು ತಿಳಿದಿರುವದಿಲ್ಲ. ಶರೀರೇಂದ್ರಿಯಮನಸ್ಸುಗಳನ್ನು ಶುಚಿಯಾಗಿಟ್ಟುಕೊಂಡಿರುವ ಪ್ರಕಾರವೂ ಅವರಿಗೆ ತಿಳಿಯದೆ ಇರುತ್ತದೆ; ಸದಾಚಾರವೆಂದರೇನೆಂಬುದು ಮೊದಲೇ ಅವರಿಗೆ ಗೊತ್ತಿರುವದಿಲ್ಲ. 'ಜನರೆಲ್ಲರೂ ಅನೃತಪ್ರಾಯರೇ, ಧರ್ಮವೆಂಬುದು ಇಲ್ಲವೇಇಲ್ಲ, ಜಗತ್ತಿಗೆ ಈಶ್ವರನು ಒಡೆಯನಲ್ಲ, ಕಾಮದಿಂದಲೇ ಜಗತ್ತಿನ ಉತ್ಪತ್ತಿ'- ಎಂದುಕೊಂಡು ದಂಭಮಾನಮದಾನ್ವಿತರಾಗಿ ದುರ್ಮಾರ್ಗದಿಂದ ನಡೆಯುತ್ತಾ ಕೊನೆಗೂ ಅವರು ಹಾಳಾಗುತ್ತಾರೆ. ಆಸುರೀಮಾರ್ಗದವರ ಸ್ವಭಾವವನ್ನೆಲ್ಲ ಕಾಮ, ಕ್ರೋಧ, ಲೋಭ- ಎಂಬ ಮೂರು ಮಾತಿನಲ್ಲಿ ಸಂಗ್ರಹಿಸಿ ಭಗವಂತನು ಹೀಗೆಂದಿರುತ್ತಾನೆ :

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ |
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ||

ಗೀ. ೧೬-೨೧

ಕಾಮಕ್ರೋಧಲೋಭಗಳೆಂಬಿವೇ ನರಕಕ್ಕೆ ಮೂರು ಹೆಬ್ಬಾಗಿಲುಗಳು. ಆದ್ದರಿಂದ ಇವನ್ನು ಬಿಟ್ಟುಬಿಡಬೇಕು- ಎಂಬುದು ಶ್ಲೋಕದ ಅರ್ಥ. ಒಂದಾನೊಂದು ಕಾಲ ದಲ್ಲಿ ಪ್ರಜಾಪತಿಯ ಸಂತತಿಯವರಾದ ದೇವತೆಗಳೂ ಅಸುರರೂ ಮನುಷ್ಯರೂ ಆತನ ಬಳಿಗೆ ಬಂದು 'ಭಗವಂತನೆ, ನಮಗೆ ಸನ್ಮಾರ್ಗೋಪದೇಶವನ್ನು ಮಾಡ ಬೇಕು- ಎಂದು ಬೇಡಿಕೊಂಡರಂತೆ. ಆಗ ಪ್ರಜಾಪತಿಯು ಆ ಮೂವರಿಗೂ 'ದ' ಎಂಬ ಒಂದೇ ಅಕ್ಷರವನ್ನು ಉಪದೇಶಿಸಿದನು. 'ನನ್ನ ಉಪದೇಶದ ಅರ್ಥವು ತಿಳಿಯಿತೆ ?' ಎಂದು ಕೇಳಲು ದೇವತೆಗಳು 'ತಿಳಿಯಿತು; ದಮವನ್ನು ಸಂಪಾದಿಸಿಕೊಳ್ಳಿರಿ- ಎಂದು ಹೇಳಿರುತ್ತೀಯೆ' ಎಂದರು. ದೇವತೆಗಳು ಸ್ವಭಾವ ವಾಗಿ ಭೋಗಪರವಶರಾದ್ದರಿಂದ ಅವರು ತಮ್ಮ ಆ ದೋಷವನ್ನು ಕಳೆಯುವ ಮಾರ್ಗವನ್ನೇ ಪ್ರಜಾಪತಿಯು ಉಪದೇಶಿಸಿರುತ್ತಾನೆಂದು ತಿಳಿದುಕೊಂಡರು. ಹೀಗೆಯೇ ಅಸುರರು 'ದಯಾವಂತರಾಗಿರಿ- ಎಂದಿದೀಯೆ' ಎಂದರು. ಹಿಂಸಾ ಪ್ರಧಾನರಾದ ಅವರಿಗೆ ಕ್ರೋಧವೇ ಮುಖ್ಯದೋಷವಾದ್ದರಿಂದ ಅದನ್ನು ನಿವಾರಿಸುವದಕ್ಕಾಗಿ ದಯೆ ಎಂಬ ಉಪಾಯವನ್ನು ಪ್ರಜಾಪತಿಯು ಉಪದೇಶಿ ಸಿರುತ್ತಾನೆ ಎನ್ನಿಸಿತು. ಇನ್ನು ಮನುಷ್ಯರಿಗೋ, ಎಂದರೆ ತಮ್ಮಲ್ಲಿರುವ ಲೋಭ ವೆಂಬ ಸ್ವಾಭಾವಿಕದೋಷವನ್ನು ನಿವಾರಿಸಲೋಸುಗ ಪ್ರಜಾಪತಿಯು 'ದಾನ ಮಾಡಿರಿ' ಎಂದು ಉಪದೇಶಿಸಿದ್ದಾನೆಂದು ಹೊಳೆಯಿತು ಹೀಗೆ 'ದ' ಎಂಬ ಒಂದೇ ಅಕ್ಷರದ ಉಪದೇಶದಿಂದ ದೇವತೆಗಳೂ ಅಸುರರೂ ಮನುಷ್ಯರೂ ತಮ್ಮ ತಮ್ಮಲ್ಲಿದ್ದ ದೋಷಗಳನ್ನು ಅವುಗಳ ಪ್ರತಿಪಕ್ಷದ ಅಭ್ಯಾಸದಿಂದ ನಿವಾರಿಸಿಕೊಳ್ಳ ಬೇಕೆಂಬ ಅರ್ಥವನ್ನು ಮಾಡಿಕೊಂಡರು. ನಿಜವಾಗಿ ಮನುಷ್ಯರಲ್ಲಿಯೇ ಈ ದೇವತೆಗಳ ಅಸುರರ ಮತ್ತು ಮನುಷ್ಯರ ದೋಷಗಳು ಮೂರೂ ಇರುತ್ತವೆಯಾದ್ದ ರಿಂದ ಅವರಿಗೇ ಈ ಉಪದೇಶವನ್ನು ಮಾಡಿದೆ ಎಂದು ಶಂಕರಾಚಾರ್ಯರವರು ಬರೆದಿರುತ್ತಾರೆ. ಉಪನಿಷತ್ತಿನಲ್ಲಿ ಈ ಕಥೆಯನ್ನು ಹೇಳಿದ ಬಳಿಕ ಈಗಲೂ ಜನರಿಗೆ ತಮ್ಮಲ್ಲಿರುವ ಪ್ರವರ್ತಕದೋಷಗಳನ್ನು ಪರಿಹರಿಸಿಕೊಳ್ಳುವದಕ್ಕಾಗಿ ಈ ಪ್ರತಿಪಕ್ಷಭಾವನೆಯನ್ನು ಮಾಡಿರೆಂದು ಉಪದೇಶಿಸುವಂತೆ ಗುಡುಗುವಾಗಲೆಲ್ಲ 'ದ, ದ, ದ !' ಎನ್ನುತ್ತಿದೆ- ಎಂದು ಉಪನಿಷತ್ತಿನಲ್ಲಿ ಹೇಳಿದೆ.

ಈ ಮೇಲಿನ ಕಥೆಯಿಂದ ನಮಗೆ ತಿಳಿಯಬರುವದೇನೆಂದರೆ, ಮನುಷ್ಯನಲ್ಲಿ ಸಹಜವಾಗಿಯೇ ಕಾಮ, ಕ್ರೋಧ, ಲೋಭ- ಇವುಗಳ ಬೀಜವು ಇದ್ದು ಕೊಂಡಿರುತ್ತದೆ.

ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।
ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ಗೀ. ೩-೩೩

ಲೌಕಿಕದೃಷ್ಟಿಯುಳ್ಳ ಎಂಥ ವಿವೇಕಿಯೇ ಆಗಿರಲಿ, ಎಷ್ಟೇ ದೂರದೃಷ್ಟಿಯುಳ್ಳವ

ನಾಗಿರಲಿ, ತನ್ನತನ್ನ ಪ್ರಕೃತಿಗೆ ಅನುಗುಣವಾಗಿಯೇ ವ್ಯವಹರಿಸುತ್ತಿರುತ್ತಾನೆ ; ಪ್ರಾಣಿಗಳೆಲ್ಲವೂ ಈ ಪ್ರಕೃತಿಗೇ ವಶವಾಗಿರುತ್ತವೆ, ಹೀಗೆ ಮಾಡಬಾರದು ಎಂದು ಎಷ್ಟು ಅಡ್ಡಿಮಾಡಿದರೂ ಸಾಗುವದೇ ಇಲ್ಲ. ಭೌತಿಕವಿಜ್ಞಾನವು ಬೆಳೆದರೂ ಆ ವಿಜ್ಞಾನಶಾಸ್ತ್ರಜ್ಞರುಕೂಡ ಈ ಕಾಮಕ್ರೋಧಾದಿಗಳಿಗೆ ವಶರಾಗಿಯೇ ನಡೆಯುತ್ತಿರುವದಕ್ಕೆ ಇದೇ ಕಾರಣ.

ಪ್ರಕೃತಿ ಎಂದರೆ ಹಿಂದಿನ ಜನ್ಮದಲ್ಲಿ ಮಾಡಿರುವ ಧರ್ಮಾಧರ್ಮಗಳ ಸಂಸ್ಕಾರವು ; ಈ ಸಂಸ್ಕಾರವಿಲ್ಲದವನು ಯಾವನೊಬ್ಬನೂ ಇರುವದಿಲ್ಲವಾದ್ದರಿಂದ ಎಲ್ಲರೂ ಪ್ರಕೃತಿಗೆ ವಶರಾಗಿಯೇತೀರಬೇಕಲ್ಲವೆ ? ಹೀಗಾದರೆ ಮನುಷ್ಯನ ಸ್ವಪ್ರಯತ್ನಕ್ಕೆ ಅವಕಾಶವೇ ಇಲ್ಲವಾಯಿತಲ್ಲ ! –ಎಂದು ಶಂಕಿಸಬಾರದು. ಈ ಪ್ರಾಕೃತಿಕದೃಷ್ಟಿಯನ್ನು ಬಿಡುವದಕ್ಕೆ ಶಾಸ್ತ್ರದೃಷ್ಟಿಯನ್ನವಲಂಬಿಸುವದೇ ಉಪಾಯ.

ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ |
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ||

ಗೀ. ೧೬–೨೪

ಯಾವದನ್ನು ಮಾಡಬೇಕು, ಯಾವದನ್ನು ಮಾಡಬಾರದು ?– ಎಂಬುದನ್ನು ಗೊತ್ತುಪಡಿಸುವದಕ್ಕೆ ನಮ್ಮ ನಮ್ಮ ಸ್ವಾಭಾವಿಕವಾದ ಮನಸ್ಸಿನ ಒಲವನ್ನು ಅನುಸರಿಸಬಾರದು ; ಏಕೆಂದರೆ ಆ ಒಲವು ಬಲುಮಟ್ಟಿಗೆ ಪ್ರಾಕೃತದೃಷ್ಟಿಯನ್ನು ಅವಲಂಬಿಸಿ ಪ್ರವರ್ತಕದೋಷಗಳಿಗೇ ಒಳಗಾಗಿರುತ್ತದೆ. ಒಂದೊಂದು ಇಂದ್ರಿಯವೂ ತನ್ನತನ್ನ ವಿಷಯದಲ್ಲಿ ರಾಗದ್ವೇಷಪ್ರಯುಕ್ತವಾಗಿಯೇ ತೊಡಗಿರುತ್ತದೆ. ವಿವೇಕಿಯಾದವನು ಶಾಸ್ತ್ರದೃಷ್ಟಿಯನ್ನವಲಂಬಿಸಿ ಅವಕ್ಕೆ ವಶನಾಗದೆಇರಬೇಕು. ಬಾಲ್ಯದಲ್ಲಿ ಬಾಳೆಹಣ್ಣನ್ನು ಕದ್ದ ಹುಡುಗನನ್ನು ಅಗಲೆ ಗದರಿಸಿ ಸನ್ಮಾರ್ಗಕ್ಕೆ ತಂದುಕೊಳ್ಳದೆ ಇದ್ದದ್ದರಿಂದ ಅವನು ಭಾರಿಯ ಕಳ್ಳನಾಗಿ ಪರಿಣಮಿಸಿ ದುಃಖಕ್ಕೆ ಈಡಾದನು–ಎಂಬ ಕಥೆಯನ್ನು ನೀವುಗಳು ಕೇಳಿರಬಹುದು. ಬಾಲ್ಯವೆಂದರೆ ಪ್ರಕೃತಿವಶರಾಗಿರುವ ಅವಸ್ಥೆ ; ಹೊರಗಿನ ಕಾಮಗಳನ್ನು ಬೆನ್ನಟ್ಟುವವರೆಲ್ಲರೂ ಬಾಲಕರೇ. ಪ್ರಕೃತಿವಶವಾದ ಇಂದ್ರಿಯಗಳು ದ್ವಾರಪಾಲಕರಂತೆ ಇರುತ್ತವೆ ; ಸ್ವಾರ್ಥಪರರಾದ ದ್ವಾರಪಾಲಕರು ಲಂಚವನ್ನು ತೆಗೆದುಕೊಂಡು ಒಳಕ್ಕೆ ಬಿಡಬಾರದವರನ್ನೂ ಬಿಟ್ಟುಬಿಡುವಂತೆ ಶಾಸ್ತ್ರಸಂಸ್ಕಾರವಿಲ್ಲದ ಇಂದ್ರಿಯಗಳು ದುಷ್ಟಭೋಗಗಳನ್ನು ನಮ್ಮ ಮನಸ್ಸಿನೊಳಕ್ಕೆ ನುಗ್ಗಿಸಿ ಸ್ವೇಚ್ಛಾಪ್ರವೃತ್ತಿಯಲ್ಲಿಯೇ ಅಭಿರುಚಿಯನ್ನುಂಟುಮಾಡಿಬಿಡುತ್ತವೆ.

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ |
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ || ಗೀ. ೧೬–೨೩.

ಯಾವನು ಶಾಸ್ತ್ರವಿಧಿಗೆ ಅನುಗುಣವಾಗಿ ನಡೆದುಕೊಳ್ಳದೆ ಸ್ವೇಚ್ಛಾಪ್ರವೃತ್ತಿಯಲ್ಲಿ ಆಸಕ್ತನಾಗಿರುವನೋ ಅವನಿಗೆ ಪುರುಷಾರ್ಥಕ್ಕೆ ತಕ್ಕ ಯೋಗ್ಯತೆ ಎಂದಿಗೂ ಬರಲಾರದು ; ಈ ಲೋಕದ ಸುಖವೂ ದಕ್ಕದು, ಇನ್ನು ಪರಲೋಕದ ಸುಖವಾಗಲಿ, ಮೋಕ್ಷವಾಗಲಿ ಅವನಿಗೆ ಹೇಗೆ ದೊರಕೀತು ? ಸ್ವೇಚ್ಛಾಪ್ರವೃತ್ತಿಯುಳ್ಳವರೇ ಆಸುರಸಂಪತ್ತಿನವರು. 'ಅಸುಷು ರಮನ್ತೇ'–ತಮ್ಮತಮ್ಮ ಪ್ರಾಣಗಳಲ್ಲಿಯೇ, ಎಂದರೆ ತಮ್ಮತಮ್ಮ ಇಂದ್ರಿಯಭೋಗಗಳಲ್ಲಿಯೇ ಎಂದೇದಿಗೂ ರತರಾಗಿರುವವರು–ಎಂಬ ಕಾರಣದಿಂದ ಅವರಿಗೆ ಅಸುರರು ಎಂಬ ಹೆಸರು ಬಂದಿರುತ್ತದೆ. ಅಸುರರ ಸ್ವಭಾವವು ಹೇಗಿರುವದೆಂದರೆ ;

ಅಹಙ್ಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ |
ಮಾಮಾತ್ಮಪರದೇಹೇಷು ಪ್ರದ್ವಿಷನ್ತೋಽಭ್ಯಸೂಯಕಾಃ ||
ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ |
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ||
ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ |
ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾನ್ತ್ಯಧಮಾಂ ಗತಿಮ್ ||

ಗೀ. ೧೬–೧೮ ರಿಂದ ೨೦.

ಇರುವ, ಇಲ್ಲದ– ಎಲ್ಲಾ ಗುಣಗಳೂ ತಮ್ಮಲ್ಲಿರುವವೆಂಬ ಅಭಿಮಾನದಿಂದ ಮೆರೆಯುವದೇ ಅಹಂಕಾರವು ; ಶಾಸ್ತ್ರಜ್ಞರು ಇದನ್ನೇ 'ಅವಿದ್ಯೆ' ಎನ್ನುವರು. ಇದು ಸರ್ವಾನರ್ಥಗಳಿಗೂ ಮೂಲವು. ಕಾಮರಾಗಾನ್ವಿತರಾಗಿ ಬಲದಿಂದ ಮತ್ತೊಬ್ಬರನ್ನು ಗೋಳುಗುಟ್ಟಿಸುವ ಬಲವನ್ನೂ, ಧರ್ಮವನ್ನೂ ಮೀರಿ ಗುರುಹಿರಿಯರನ್ನು ಲೆಕ್ಕಿಸದೆ ನಡೆಯುವ ದರ್ಪವನ್ನೂ, ಹೇಗಾದರೂ ವಿಷಯಗಳನ್ನು ಭೋಗಿಸಬೇಕೆಂಬ ಕಾಮವನ್ನೂ ನಿಷ್ಕಾರಣವಾಗಿ ಅಸ್ಥಾನದಲ್ಲಿ ಮಾಡುವ ಕೋಪವನ್ನೂ ಅವಲಂಬಿಸಿಕೊಂಡಿರುವದೇ ಅಸುರರ ಸ್ವಭಾವ. ಸರ್ವಪ್ರಾಣಿಗಳಲ್ಲಿಯೂ ತಮ್ಮಲ್ಲಿಯೂ ಇರುವ ಪರಮೇಶ್ವರನಲ್ಲಿ ಅವರಿಗೆ ಭಕ್ತಿಯಿಲ್ಲ ; ಅವರು ಎಲ್ಲವನ್ನೂ ದ್ವೇಷಿಸುತ್ತಾ ಸನ್ಮಾರ್ಗದಲ್ಲಿರುವವರ ಗುಣವನ್ನು ಸಹಿಸದೆ ಇರುವ ಅಸೂಯೆಯಿಂದ ಕುದಿಯುತ್ತಾ ವಿವೇಕವಿಲ್ಲದೆ ಮಾಡಬಾರದ್ದನ್ನು ಮಾಡುತ್ತಾ ಮತ್ತೆಮತ್ತೆ ಅಸುರಜನ್ಮಗಳನ್ನೇ ಪಡೆಯುತ್ತಿರುವರು ; ಹೆಚ್ಚುಹೆಚ್ಚು ಪಾಪವನ್ನು ಮಾಡುತ್ತಾ ಅಜ್ಞಾನವು ದಟ್ಟವಾಗಲು ಪರಮೇಶ್ವರನನ್ನು ಮುಟ್ಟದೆ, ಆತನು ಉಪದೇಶಿಸಿರುವ ಸನ್ಮಾರ್ಗದಿಂದ ಭ್ರಷ್ಟರಾಗಿ ತೀರ ಅಧಮಗತಿಯನ್ನು ಪಡೆಯುವದೇ ಅವರ ಕೊನೆಯ ಮಜಲು. ಅವರು ವಿಚಾರವಿಲ್ಲದೆ ಅನುಸರಿಸಿದ ಕಲ್ಲುಮುಳ್ಳಿನ ಹಾದಿಗೆ ಕೊನೆಯಲ್ಲಿ ಸಿಕ್ಕಲೇಬೇಕೆಂಬ ಭಗವಂತನ ಸಂಕಲ್ಪದಂತೆ ಆಗುವ ದುಷ್ಫಲವೆಂಬ ಕೊರಕಲು ತಪ್ಪಿದ್ದಲ್ಲ.

ಪ್ರಕೃತಿವಶರಾಗಿರುವವರಲ್ಲಿಯೂ ಜ್ಞಾನೇಚ್ಛಾಕ್ರಿಯಾಶಕ್ತಿಗಳು ಇರುತ್ತವೆ; ಶಾಸ್ತ್ರವಶನಾಗಿ ನಡೆಯುವವನಲ್ಲಿಯೂ ಅವು ಮೂರೂ ಇರುತ್ತವೆ. ಈಶ್ವರನಿಂದಲೇ ಸೃಷ್ಟವಾಗಿರುವ ಈ ಜಗತ್ತಿನಲ್ಲಿ ಪ್ರಕೃತಿವಶರಾಗಿರುವವರಿಗೆ ಮಾತ್ರ ದುಃಖವಾಗುವದೇಕೆ ?–ಎಂದು ನೀವು ಕೇಳಬಹುದು. ಈಶ್ವರನು ಸೃಷ್ಟಿಸಿರುವ ಜಗತ್ತಾದ್ದರಿಂದಲೇ ಇದರಲ್ಲಿ– "ಅನೇಕಕರ್ತೃಭೋಕ್ತೃಸಂಯುಕ್ತಸ್ಯ ಪ್ರತಿನಿಯತದೇಶಕಾಲನಿಮಿತ್ತ ಕ್ರಿಯಾಫಲಾಶ್ರಯಸ್ಯ"ಎಂದು ಶಂಕರಾಚಾರ್ಯರವರು ಹೇಳಿರುವಂತೆ–ತಮ್ಮತಮ್ಮ ಕರ್ಮಕ್ಕನುಸಾರವಾಗಿ ಆಯಾ ಕರ್ಮದ ಫಲಗಳನ್ನು ಅನುಭವಿಸುವ ಹಲವರು ಕರ್ತೃಭೋಕ್ತೃಗಳು ಇರುತ್ತಾರೆ ; ಇಂಥ ದೇಶದಲ್ಲಿ ಇಂಥ ಕಾಲದಲ್ಲಿ ಇಂಥ ನಿಮಿತ್ತಗಳಿಂದ ಕೂಡಿಮಾಡಿದ ಕ್ರಿಯೆಗೆ ಇಂಥಿಂಥ ಗೊತ್ತಾದ ಫಲಗಳು ಹೀಗೆಹೀಗೆ ದೊರಕಬೇಕೆಂಬ ನಿಯಮವಿದೆ. ಪರಮೇಶ್ವರನು ದಯಾಲುವಾದ್ದರಿಂದ ಜನರು ಸನ್ಮಾರ್ಗದಲ್ಲಿ ನಡೆದು ಅವರವರ ಪ್ರಯತ್ನಕ್ಕೆ ತಕ್ಕ ಪುರುಷಾರ್ಥಗಳನ್ನು ಪಡೆಯಲೆಂದು ಶಾಸ್ತ್ರವನ್ನು ಜನರಿಗೆ ಕೊಟ್ಟಿರುತ್ತಾನೆ. ಶಾಸ್ತ್ರವನ್ನು ಮೀರಿ ನಡೆಯುವವರಿಗೆ ಇಂಥಂಥ ದುಷ್ಫಲವು ಆಗುವದೆಂದೇ ಮೊದಲೇ ಕಟ್ಟಲೆಯನ್ನು ಮಾಡಿರುತ್ತಾನೆ. ಯಾರೊಬ್ಬರನ್ನೂ ಆವನು ತನ್ನವರೆಂದು ಪ್ರೀತಿಸುವದಿಲ್ಲ ; ಯಾರೊಬ್ಬರನ್ನೂ ತನಗೆ ಆಗದವರೆಂದು ದ್ವೇಷಿಸುವದಿಲ್ಲ. ಆದ್ದರಿಂದ ಅವರವರ ಕರ್ಮಕ್ಕೆ ತಕ್ಕಂತೆ ಫಲವಾಗುವದು ಸ್ವಾಭಾವಿಕವಾಗಿದೆ.

ನಿಯಮವನ್ನು ಮೀರಿ ನಡೆಯುವವರಿಗೆ ಆಗುವ ಕೆಟ್ಟಫಲವನ್ನು ತಿಳಿದದ್ದಾಯಿತು ; ಇನ್ನು ಶಾಸ್ತ್ರದೃಷ್ಟಿಯನ್ನವಲಂಬಿಸಿ ನಿಯಮಬದ್ಧರಾಗಿ ನಡೆಯುವವರಿಗೆ ಆಗುವ ಸತ್ಫಲವನ್ನು ತಿಳಿದುಕೊಳ್ಳಬೇಕಾಗಿದೆ.

---

# ೨೬. ಕರ್ಮಯೋಗ

## (12-8-62)

ಜೀವರುಗಳ ಜ್ಞಾನೇಚ್ಛಾಕರ್ಮಗಳು ಒಂದಕ್ಕೊಂದು ಸಂಬದ್ಧವಾಗಿರುತ್ತವೆ –ಎಂದು ತಿಳಿದದ್ದಾಯಿತು. ಶಾಸ್ತ್ರೀಯವಾದ ಕರ್ಮಗಳ ವಿಚಾರವನ್ನು ಈಗ ಪ್ರಾರಂಭಿಸಲಿದ್ದೇವೆ. ಮೊದಲು ಒಂದು ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಬೇಕಾಗಿದೆ. ಜ್ಞಾನವು ಕರ್ಮಕ್ಕಾಗಿ ಬೇಕೋ, ಕರ್ಮವು ಜ್ಞಾನಕ್ಕಾಗಿ ಬೇಕೋ? ಲೋಕದಲ್ಲಿ ಮನುಷ್ಯನು ಇಂಥ ಫಲವು ಬೇಕಾದರೆ ಇಂಥ ಕರ್ಮವನ್ನು

ಹೀಗೆ ಮಾಡಬೇಕು- ಎಂಬ ತಿಳಿವಳಿಕೆಯನ್ನು ಮೊದಲು ಸಂಪಾದಿಸಿಕೊಳ್ಳು ತ್ತಾನೆ. ಆ ತಿಳಿವಳಿಕೆಯಿಲ್ಲದೆ ಯಾವದೋ ಒಂದು ಕರ್ಮವನ್ನು ಮಾಡಿದರೆ, ಯಾವದೋ ಫಲವಾದೀತೇ ಹೊರತು ಉದ್ದಿಷ್ಟಫಲವು ದೊರಕಲಾರದು. ಆದ್ದರಿಂದ ಕರ್ಮವನ್ನು ಮಾಡುವ ಮೊದಲು ಜ್ಞಾನವು ಬೇಕು ಎಂದು ತೋರುತ್ತದೆ. ಒಂದು ಕರ್ಮವನ್ನು ಮಾಡಿ ಅದರಿಂದಾಗುವ ಒಳ್ಳೆಯ ಅಥವಾ ಕೆಟ್ಟ ಪರಿಣಾಮವನ್ನು ಅರಿತುಕೊಳ್ಳುತ್ತಾರೆಂಬುದೂ ಲೋಕದಲ್ಲಿ ಅನುಭವದಲ್ಲಿದೆ ; ಆದ್ದರಿಂದ ಕರ್ಮವು ಜ್ಞಾನಕ್ಕೆ ಎಂಬುದೂ ಸರಿಯೆಂದೇ ತೋರುತ್ತದೆ. ಕರ್ಮ, ಜ್ಞಾನ, ಕರ್ಮ, ಜ್ಞಾನ, ಕರ್ಮ– ಹೀಗೆ ಅನಂತವಾದ ಶ್ರೇಣಿಯಿರುವದೇ ಸಂಸಾರ ಎನ್ನಬಹುದು. ಆದ್ದರಿಂದ ಜ್ಞಾನಕರ್ಮಗಳೆರಡರೊಳಗೆ ಯಾವದು ಸಾಧನ, ಯಾವದು ಫಲ ? ಯಾವದನ್ನು ಮಾಡಿ ಯಾವದರಲ್ಲಿ ಕೊನೆಗಾಣಬೇಕು?– ಎಂಬುದು ಸಂಶಯ.

ಒಬ್ಬ ವಿದ್ಯಾಶಾಲಾ ಇನಸ್ಪೆಕ್ಟರು 'ಈ ಪಾಠ ಸರಿಯಾಗಿ ಮಾಡಿಲ್ಲ, ಇಂಥ ಪಾಠವನ್ನು ಹೀಗೆ ಕಲಿಸಬೇಕಿತ್ತು ; ಇಂಥ ಪಾಠವು ತೃಪ್ತಿಕರವಾಗಿತ್ತು' ಎಂದು ಮುಂತಾಗಿ ವಿಸಿಟರ್ಸ್ ಬುಕ್ಕಿನಲ್ಲಿ (ಆಗುಂತುಕರ ಅಭಿಪ್ರಾಯವನ್ನು ಗುರುತುಮಾಡುವ ಪುಸ್ತಕದಲ್ಲಿ) ಬರೆಯುತ್ತಿದ್ದರು. 'ಅವರನ್ನು ಹೀಗೆ ಬರೆಯುತ್ತಿರುವದು ಯಾರ ತಿಳಿವಳಿಕೆಗಾಗಿ ? ಉಪಾಧ್ಯಾಯರು ಮುಂದಿನ ವರ್ಷವೂ ಅದೇ ಶಾಲೆಯಲ್ಲಿ ಅದೇ ತರಗತಿಗೆ ಪಾಠವನ್ನು ಹೇಳುತ್ತಾರೆಂಬ ಭರವಸೆಯಿದೆಯೆ ? ಮುಖ್ಯೋಪಾಧ್ಯಾಯರು ಅವರಿಗೆ ಬೇರೊಂದು ತರಗತಿಯನ್ನು ಕೊಡಬಹುದು ; ಅಥವಾ ಅಧಿಕಾರಿಗಳು ಅವರನ್ನು ಬೇರೊಂದು ಊರಿಗೆ ವರ್ಗಾಯಿಸಬಹುದಲ್ಲವೆ ?' ಎಂದು ಒಬ್ಬರು ಪ್ರಶ್ನಿಸಿದರು. ಅದಕ್ಕೆ ಇನಸ್ಪೆಕ್ಟರು 'ನಾವೇನೋ ಹೀಗೆ ಬರೆಯುವದು ವಾಡಿಕೆ ; ಮುಂದೆ ಈ ತರಗತಿಗೆ ಬರುವವರಿಗಾದರೂ ಅದು ಮಾರ್ಗನಿರ್ದೇಶಕವಾಗಬಹುದು' ಎಂದರು ! ಹಿಟ್ಲರನು ಹಲವು ಹಿಂದಿನ ವರ್ಷಗಳ ಕಾಲಮಾನಸ್ಥಿತಿಯನ್ನು ಪರೀಕ್ಷಿಸಿ ವಾಯುಗುಣವನ್ನು ಭೌತಿಕ ಶಾಸ್ತ್ರಜ್ಞರಿಂದ ತಿಳಿದುಕೊಂಡು ಈ ಸಲ ರಷ್ಯಕ್ಕೆ ಈಗಲೆ ಚಳಿಗಾಲವು ಬರಲಾರದೆಂದು ನಿಶ್ಚಯಿಸಿಕೊಂಡು ಮಾಸ್ಕೋನಗರದಮೇಲೆ ಧಾಳಿ ಇಟ್ಟನು. ಆದರೆ ಅದೇನು ಮಾಯೆಯೊ, ಆ ವರ್ಷ ಬಹಳ ಮುಂಚಿತವಾಗಿಯೇ ಅಲ್ಲಿ ಹಿಮವು ಬಿದ್ದದ್ದರಿಂದ ಅವನಿಗೆ ಸೋಲಾಯಿತು. ಹಿಟ್ಲರನು ಕೂಡಿಹಾಕಿಕೊಂಡಿದ್ದ ಜ್ಞಾನವು ಅವನ ದಂಡಯಾತ್ರೆಯ ಕರ್ಮಕ್ಕೆ ಸಾಧಕವಾಗಲಿಲ್ಲ. ಜ್ಞಾನವು ವ್ಯರ್ಥವಾಯಿತು. ಒಂದೊಂದು ಕರ್ಮದಲ್ಲಿ ತೊಡಗಿರುವವನಿಗೆ ಮತ್ತೊಂದರ ತಿಳಿವಳಿಕೆ ಇದ್ದರೆ– ಉದಾಹರಣೆಗೆ ಶಾಸ್ತ್ರಪಾಠವನ್ನು ಹೇಳಬೇಕಾಗಿರುವ ಉಪಾಧ್ಯಾಯನಿಗೆ ಸಂಗೀತದಲ್ಲಿ ನೈಪುಣ್ಯವಿದ್ದರೂ– ಆ ಕರ್ಮಕ್ಕೆ ಆ ಜ್ಞಾನವು

ಉಪಯೋಗಕರವಲ್ಲ. ಹೀಗಿರುವದರಿಂದ ಜ್ಞಾನವು ಕರ್ಮಕ್ಕೋ, ಕರ್ಮವು ಜ್ಞಾನಕ್ಕೋ ?– ಎಂಬುದೊಂದು ತೊಡಕಿನ ಪ್ರಶ್ನೆಯಾಗಿರುತ್ತದೆ.

ಲೌಕಿಕರೇನೋ ಕರ್ಮಕ್ಕಾಗಿಯೇ ಜ್ಞಾನವೆಂದು ಪಟ್ಟುಹಿಡಿದು ಜ್ಞಾನ ರಾಶಿಯನ್ನು ಕೂಡಿಹಾಕಿಕೊಳ್ಳುತ್ತಾರೆ ; ಆದರೆ ಅವರ ಜ್ಞಾನವು ಸಾಯುವ ವರೆಗೂ ಕೆಲಸಕ್ಕೆ ಬಾರದೆಇದ್ದ ಉದಾಹರಣೆಗಳೂ ಕಂಡುಬಂದಿವೆ. ವೇದಾಂತಿ ಗಳು ಎಲ್ಲಾ ವ್ಯವಹಾರವೂ ಜ್ಞಾನಕ್ಕಾಗಿ ಎಂದು ಅಭಿಪ್ರಾಯಪಡುತ್ತಾರೆ. ಇದಕ್ಕೆ ಅವರು ಹೇಳುವ ಉಪಪತ್ತಿ ಏನೆಂದರೆ : ಮನುಷ್ಯನು ಬಗೆಬಗೆಯ ಕರ್ಮಗಳನ್ನು ಮಾಡಿ ಅವುಗಳ ಸಂಸ್ಕಾರವನ್ನು ಚಿತ್ತದಲ್ಲಿ ಉಂಟುಮಾಡಿಕೊಳ್ಳು ತ್ತಾನೆ ; ಆ ಸಂಸ್ಕಾರದಿಂದ ಮತ್ತೆ ಕೆಲಸಕ್ಕೆ ಪ್ರಾರಂಭಿಸುತ್ತಾನೆ. ಆದರೆ ನಿಜವಾಗಿ ಕೆಲಸವು ಕೆಲಸಕ್ಕಾಗಿ ಅಲ್ಲ ; ಕಟ್ಟಕಡೆಗೆ ಒಂದಾನೊಂದು ಜ್ಞಾನವು ಮನುಷ್ಯನಿಗೆ ಆಗಬೇಕಾಗಿದೆ, ಅದು ದೊರಕುವವರೆಗೂ ಅವನು ಹೀಗೆ ದುಡಿಯು ತ್ತಲೇ ಇರುತ್ತಾನೆ.

ಸಾಮಾನ್ಯಜನರಿಗೆ ಈ ತಿಳಿವಳಿಕೆಯಿಂದ ಆಗುವ ಪ್ರಯೋಜನವೇನು ?- ಎಂದು ನೀವು ಕೇಳಬಹುದು. ಇದಕ್ಕೆ ವೇದಾಂತಿಗಳ ಉತ್ತರವೇನೆಂದರೆ, ಸ್ವೇಚ್ಛೆ ಯಿಂದ ಕರ್ಮವನ್ನು ಮಾಡಿದರೆ ಅಜ್ಞಾನವು ದಟ್ಟವಾಗುತ್ತಾ ಹೋಗುತ್ತದೆ. ಜನರು ಅಸತ್ಯವೇ ಮುಂತಾದ ಆಸುರದೃಷ್ಟಿಯನ್ನು ಅವಲಂಬಿಸಿ ಜಗತ್ತನ್ನು ಅವ್ಯ ವಸ್ಥೆಗೀಡುಮಾಡುವ ಕ್ರೂರಕರ್ಮಗಳನ್ನು ಮಾಡುತ್ತಾ ತಾವೂ ದುರ್ಗತಿಯನ್ನು ಹೊಂದುತ್ತಾರೆ. ಆದರೆ ಶಾಸ್ತ್ರೀಯವಾಗಿ ಕರ್ಮವನ್ನು ಮಾಡಿದವರು ಅದರಿಂದ ಉತ್ಕೃಷ್ಟವಾದ ಫಲವನ್ನು ಪಡೆಯುತ್ತಾರೆ. ಹೀನಲೋಹಗಳುಕೂಡ ಅವುಗಳಲ್ಲಿ ರುವ ಪರಮಾಣುಗಳ ಕ್ರಮದ ವಿಪರಿಣಾಮದಿಂದ ಚಿನ್ನವಾಗಬಹುದೆಂದು ಈಗಿನ ಶಾಸ್ತ್ರಜ್ಞರು ಹೇಳುತ್ತಿದಾರೆ ; ಇದರಂತೆ ಬಂಧಕವಾಗಿರುವ ಕರ್ಮವನ್ನೇ ಶಾಸ್ತ್ರೋಪದಿಷ್ಟರೀತಿಯಿಂದ ಮಾಡಿದರೆ ಚೊಕ್ಕ ಚಿನ್ನದಂಥ ಜ್ಞಾನವನ್ನು ಸಂಪಾ ದಿಸಿಕೊಳ್ಳಬಹುದು– ಎಂಬುದು ವೇದಾಂತಿಗಳ ಅಭಿಪ್ರಾಯವಾಗಿದೆ.

ಲೋಕದಲ್ಲಿ ಸಾಮಾನ್ಯಜನರು ಹೇಗೆ ಕರ್ಮವನ್ನು ಮಾಡುತ್ತಾರೆ ? 'ಈ ಕರ್ಮವು ನನ್ನದು' ಎಂಬ ಅಭಿಮಾನವಿಲ್ಲದೆ ಕರ್ಮವನ್ನು ಮಾಡುವದು ಅವ ರಿಂದ ಆಗಲಾರದು. ನಾನು ಬಡಗಿ, ನಾನು ಸಂಗೀತಗಾರ, ನಾನು ಗುಮಾಸ್ತೆ, ನಾನು ಅಧಿಕಾರಿ– ಎಂದುಮುಂತಾಗಿ ತನ್ನ ತನ್ನ ಉದ್ಯೋಗಕ್ಕೆ ಒಬ್ಬೊಬ್ಬನೂ ಗಂಟುಬಿದ್ದಿರುತ್ತಾನೆ. ಹೀಗೆ ಕರ್ಮಕ್ಕೆ ಅಂಡಿಕೊಂಡಿರುವದಕ್ಕೆ 'ಸಂಗ'ವೆಂದು ಹೆಸರು. ಕೆಲಸದಲ್ಲಿ ಸಂಗವಿಲ್ಲದಿದ್ದರೆ ಅದು ಸರಿಯಾಗಿ ಆಗುವದಿಲ್ಲ– ಎಂಬುದು ಲೌಕಿಕರ ಅಭಿಪ್ರಾಯ. ಎರಡನೆಯದಾಗಿ 'ಇಂಥ ಕರ್ಮವನ್ನು ಇಂಥ ಫಲ

ಕ್ಕಾಗಿ ಮಾಡುತ್ತೇನೆ' ಎಂಬ ಗುರಿ ಇರಬೇಕು ; 'ಪ್ರಯೋಜನವನ್ನು ಉದ್ದೇಶಿಸದೆ ಯಾವ ಮೂಢನೂ ಕರ್ಮದಲ್ಲಿ ತೊಡಗುವದಿಲ್ಲ' ಎಂಬುದೊಂದು ಸೂಕ್ತಿ. ಕರ್ಮವನ್ನು ಮಾಡಿ ಫಲವನ್ನು ಪಡೆದುಕೊಂಡಬಳಿಕ ಅದರ ಭೋಗದಿಂದ ಸುಖದುಃಖಗಳು ಆಗುವದು ನಿಶ್ಚಯ ; ಸುಖದುಃಖಗಳಿಂದ ಮನಸ್ಸಿಗೆ ಹರ್ಷ ವಿಷಾದಗಳು ಅವಶ್ಯವಾಗಿ ಆಗುವವು. ಇದಿಷ್ಟೂ ಲೋಕದೃಷ್ಟಿಯಿಂದ ಮಾಡುವ ಕರ್ಮದ ವಿವರ.

ಶಾಸ್ತ್ರೀಯರೀತಿಯಿಂದ ಕರ್ಮವನ್ನು ಮಾಡಬೇಕಾದದ್ದು ಹೇಗೆ? ಎಂದರೆ ಮೊದಲನೆಯದಾಗಿ 'ಕರ್ಮವು ನನ್ನದು' ಎಂಬ ಅಭಿಮಾನವಿರಬಾರದು ; ಫಲದ ಆಶೆಯೂ ಇರಬಾರದು. ಕರ್ಮಫಲವನ್ನು ಪಡೆಯುವದಕ್ಕಾಗಿ ಮನುಷ್ಯನು ಮತ್ತೆ ಮತ್ತೆ ಜನ್ಮವನ್ನು ಪಡೆದು ಮತ್ತೆ ಮತ್ತೆ ಕರ್ಮಗಳನ್ನು ಮಾಡುತ್ತಲೂ ಅವುಗಳ ಫಲವನ್ನು ಭೋಗಿಸಿ ಸುಖದುಃಖಗಳಿಂದ ಮನಸ್ಸಿನ ವಿಕಳಿತಗಳನ್ನು ಅನುಭವಿಸುತ್ತಲೂ ಇರಲೇಬೇಕಾಗುವದು. ಹಾಗಾದರೆ ಕರ್ಮಫಲವೇ ಬೇಡವಾದ್ದರಿಂದ ಕರ್ಮವನ್ನೇ ಬಿಟ್ಟುಬಿಡೋಣ–ಎಂದೂ ಭಾವಿಸಬಾರದು. ಏಕೆಂದರೆ ಶಾಸ್ತ್ರೋಕ್ತಕರ್ಮಗಳನ್ನು ಬಿಟ್ಟುಬಿಡುವದರಿಂದ ಮನುಷ್ಯನು ಅವಶ್ಯವಾಗಿ ಸ್ವೇಚ್ಛಾಪ್ರವೃತ್ತಿಗೆ ಕೈಹಾಕಬೇಕಾಗುತ್ತದೆ. ಇದಿಷ್ಟನ್ನೂ

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ |
ಮಾ ಕರ್ಮಫಲಹೇತುರ್ಭೂರ್ಮಾ ತೇ ಸಙ್ಗೋಽಸ್ತ್ವಕರ್ಮಣಿ ||

ಗೀ. ೨–೪೭

ಎಂಬ ಶ್ಲೋಕದಲ್ಲಿ ಸಂಗ್ರಹಿಸಿರುತ್ತದೆ. ಕರ್ಮವು ನನ್ನದೆಂಬ ಬುದ್ಧಿಯನ್ನು ಬಿಟ್ಟು, ಫಲದಾಶೆಯನ್ನು ಬಿಟ್ಟವರು ಮಾಡುವ ಕರ್ಮವು ಸರಿಯಾಗಿ ಆದೀತೆ ? –ಎಂದು ಕೆಲವರು ಸಂಶಯಪಡುತ್ತಾರೆ. ತನ್ನದೇ ಆದ ಕೆಲಸದಂತೆ ಮತ್ತೊಬ್ಬರ ಕೆಲಸವನ್ನೂ ಮಾಡುವದಾದೀತೆ ? ಪ್ರಯೋಜನವಿಲ್ಲದಿದ್ದರೆ ಕೆಲಸವನ್ನು ಪ್ರಾರಂಭಿಸುವದಾದರೂ ಹೇಗೆ ? ಮನುಷ್ಯನನ್ನು ಕಾರ್ಯದಲ್ಲಿ ತೊಡಗಿಸುವದೇ ಫಲದ ಆಶೆಯಲ್ಲವೆ ?– ಎಂದು ನೀವು ಕೇಳಬಹುದು. ಆದರೆ ನಿಜವೇನು ? ಯಾವದಾದರೂ ಉತ್ತಮವಿಷಯದಲ್ಲಿ ಮಗ್ನನಾಗಿ ಗ್ರಂಥವನ್ನು ಓದುತ್ತಿರುವಾಗ ಭಾವಾವೇಶದಿಂದ ಸಂಗೀತಗಾರನು ಯಾವದಾದರೊಂದು ರಾಗವನ್ನು ಆಲಾಪನೆ ಮಾಡುತ್ತಿರುವಾಗ, ಅಥವಾ ಒಬ್ಬ ಶಿಲ್ಪಿಯು ತನ್ನ ಧ್ಯೇಯವನ್ನು ಲಕ್ಷ್ಯದಲ್ಲಿ ಇಟ್ಟು ಯಾವದಾದರೂ ಪ್ರತಿಮೆಯನ್ನು ಕೆತ್ತುತ್ತಿರುವಾಗ 'ನಾನು ಈ ಕೆಲಸವನ್ನು ಮಾಡುತ್ತಿದೇನೆ', 'ಈ ಕೆಲಸಕ್ಕೆ ಇಂತಿಷ್ಟು ಹಣವು ಬರುತ್ತದೆ'– ಎಂಬ ಭಾವನೆಯೇನಾದರೂ ಅವನ ಮನಸ್ಸಿನಲ್ಲಿ ಇರುವದೇನು ? 'ನಾನು, ಈ ಕೆಲಸವನ್ನು, ಇಂಥ ಫಲಕ್ಕಾಗಿ ಮಾಡುತ್ತಿದೇನೆ'– ಎಂಬ ತ್ರಿಪುಟಿಯನ್ನು ಕಳೆದು

ಕೊಂಡು ತನ್ನ ಕರ್ಮದಲ್ಲಿಯೇ ಮಗ್ನನಾಗಿರುವಾಗಲೇ ಕರ್ಮವು ಉತ್ತಮವಾಗುತ್ತದೆ ಎಂಬುದು ಅನುಭವಸಿದ್ಧವಾಗಿರುತ್ತದೆ. ಯಾರದ್ದಾದರೂ ಬಲಾತ್ಕಾರದಿಂದ ಒಂದು ಕೆಲಸವನ್ನು ಅದರಲ್ಲಿ ಹೃದಯವನ್ನಿಡದೆ ಮಾಡುತ್ತಿರುವಾಗ, ಅಥವಾ ಮುಂದೆ ತನಗೆ ಬರಬೇಕಾಗಿರುವ ಪ್ರತಿಫಲವನ್ನು ಹೆಜ್ಜೆಹೆಜ್ಜೆಗೂ ಮನದುದುಕೊಂಡು ಕೆಲಸವನ್ನು ಮಾಡುತ್ತಿರುವಾಗ, ಆ ಕೆಲಸವು ಎಂದಿಗೂ ತೃಪ್ತಿಕರವಾಗಲಾರದು ಎಂಬುದು ಅನುಭವಸಿದ್ಧವಾಗಿದೆ.

ಜ್ಞಾನಕ್ಕೆ ಅಂಗವಾಗಿ ಮಾಡುವ ಶಾಸ್ತ್ರೀಯಕರ್ಮದಲ್ಲಿ (1) ಸಂಗವಿರಬಾರದು, (2) ಫಲಾಶೆಯಿರಬಾರದು, (3) ಇವೆರಡೇ ಅಲ್ಲದೆ ಸಿದ್ಧಿ, ಅಸಿದ್ಧಿ ; ಸುಖ, ದುಃಖ–ಮುಂತಾದವುಗಳಿಂದ ಮನಸ್ಸನ್ನು ಏರುಪೇರುಗೊಳಿಸಿಕೊಳ್ಳದೆ ದ್ವಂದ್ವವನ್ನು ಮೀರಿರಬೇಕು. ಯಾವನ ಚಿತ್ತವು ಏರುಪೇರುಗಳನ್ನು ಪಡೆಯದೆ ಸಮತ್ವದಿಂದೊಡಗೂಡಿರುವದೋ ಅವನ ಕರ್ಮವು ವೀರ್ಯವತ್ತಾಗಿರಬೇಕೆಂದು ನಿರೀಕ್ಷಿಸತಕ್ಕದ್ದೇ ಆಗಿರುತ್ತದೆ.

ಇನ್ನು ಪರಮೇಶ್ವರನ ಆರಾಧನೆಗಾಗಿ ಕರ್ಮವನ್ನು ಮಾಡಬೇಕೆಂಬುದು ಉತ್ತಮಕರ್ಮಕ್ಕೆ ನಾಲ್ಕನೆಯ ಗುರುತು. ಇದು ಬಹುಮುಖ್ಯವಾದದ್ದು. ಈಶ್ವರನಿಗಾಗಿ ಮಯೆಡುವದರಿಂದ ನಮಗೆ ಆಗಬೇಕಾದದ್ದೇನು ? ಕರ್ಮವನ್ನು ನಮ್ಮದಲ್ಲವೆಂದು ಫಲದಾಶೆಯನ್ನು ಬಿಟ್ಟು ಮತ್ತೊಬ್ಬರಿಗಾಗಿ ದುಡಿಯುವದು ಅವಿವೇಕದ ಗುರುತಲ್ಲವೆ ?–ಎಂದು ಶಂಕಿಸಬಾರದು. ಈಶ್ವರನೆಂದರೆ ನಿಜವಾಗಿ ನಮ್ಮ ಆತ್ಮನೇ ; ಅವನು ನಮಗಿಂತ ಬೇರೆಯವನೆಂದು ಬಗೆಯುವದೇ ಮೊದಲನೆಯ ತಪ್ಪುತಿಳಿವಳಿಕೆ. 'ಮಾಡಿದ ಕರ್ಮವು ಈಶ್ವರಾರ್ಥವಾದರೆ, ಅದು ಕರ್ಮವಾದೀತೆ ? ಅಲ್ಲಿಗೇ ಅದರ ಫಲವೂ ನಿಂತುಹೋದೀತು !' ಎಂದು ಕೆಲವರು ; 'ಅದು ಹೇಗೋ ಆಗಿ ವಿಪರೀತಫಲವಾದರೂ ಆಗಬಹುದು' ಎಂದು ಮತ್ತೆ ಕೆಲವರೆನ್ನುವರು. ಇವೆರಡೂ ತಿಳಿವಳಿಕೆಸಾಲದ ಭಾವನೆಗಳು ಎಂದು ಹೇಳಬೇಕಾದದ್ದೇ ಇಲ್ಲ.

> ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ |
> ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ||

ಕೃಷಿಕರ್ಮದಲ್ಲಿ ಹಾಕಿದ ಪೈರು ಕಾರಣಾಂತರದಿಂದ ಬೆಳೆಯದೆ ಹೋಗಬಹುದು; ವೈದ್ಯನು ಸರಿಯಾಗಿ ರೋಗನಿದಾನವನ್ನು ನೋಡದೆ ಕೊಟ್ಟ ಔಷಧಿಯು ವಿಪರೀತಫಲವನ್ನು ಕೊಡಬಹುದು. ಆದರೆ ಈ ಕರ್ಮದಲ್ಲಿ ಈ ಎರಡು ದೋಷಗಳೂ ಇರುವದಿಲ್ಲ. ಏಕೆಂದರೆ ಈಶ್ವರನು 'ಇಂತಿಷ್ಟು ಕರ್ಮವನ್ನು ಮಾಡಿದರೆ ಇಷ್ಟು ಫಲವನ್ನು ಕೊಡುವೆನು' ಎಂದು ಕೂಲಿಯ ಆಳುಗಳಿಗೆ ಧಣಿಯು ಹೇಳು

ವಂತೆ ನಿಯಮಮಾಡುವದಿಲ್ಲ. ತನಗೆ ಕರ್ಮವನ್ನು ಅರ್ಪಿಸಿದಮಾತ್ರದಿಂದ ಕರ್ಮಕ್ಕೆ ಅನಂತಫಲವನ್ನು ಕೊಡುವ ಶಕ್ತಿಯನ್ನು ಅನುಗ್ರಹಿಸುತ್ತಾನೆ. ಈಶ್ವರ ನನ್ನು ನಂಬಿ ತನ್ನ ಕೆಲಸವನ್ನು ತಾನು ಮಾಡುತ್ತಿದ್ದರೆ ಸಾಕು ; ಅನಿರೀಕ್ಷಿತ ಪ್ರಕಾರದಿಂದಲೂ ಅವನು ಅನುಗ್ರಹಮಾಡಿಬಿಡುತ್ತಾನೆ. ನಾನು ಓದಿರುವ "God in The Every Day"[1] (ದಿನದಿನದ ವ್ಯವಹಾರದಲ್ಲಿ ಈಶ್ವರ) ಎಂಬ ಹೆಸರಿನ ಇಂಗ್ಲೀಷುಪುಸ್ತಕದಲ್ಲಿ (ಪು. 98) ಈ ಕಥೆಯಿದೆ ; ಗನಿಯಲ್ಲಿ ಪಾಲಿಗೆ ಕೆಲಸಮಾಡುತ್ತಿದ್ದ ಒಬ್ಬ ಕೂಲಿಯವನಿದ್ದನು ; ತೆಗೆದ ಅದುರಿನಲ್ಲಿ-ಅಥವಾ ಅದರ ಬೆಲೆಯಲ್ಲಿ-ಅವನಿಗೂ ಒಂದಂಶವು ದೊರೆಯಬೇಕೆಂಬ ಕರಾರಿನ ಮೇಲೆ ಅವನು ಕೆಲಸಮಾಡುತ್ತಿದ್ದನು. ಕೆಲವರಿಗೆ ಬಹಳ ಹಣವೂ ಸಿಕ್ಕು ತ್ತಿತ್ತು ; ಮತ್ತೆ ಕೆಲವರಿಗೆ ಏನೂ ಲಭಿಸುತ್ತಿರಲಿಲ್ಲ.

ಒಮ್ಮೆ ಒಂದು ತಿಂಗಳಾದರೂ ಈ ಕೂಲಿಯವನಿಗೆ ಒಂದುಬಿಡಿಗಾಸೂ ಸಿಕ್ಕಲಿಲ್ಲ. ಶನಿವಾರ ಸಾಯಂಕಾಲ ಮಕ್ಕಳೆಲ್ಲ ಮಲಗಿಕೊಂಡ ಬಳಿಕ ಆ ಕೂಲಿಯು ತನ್ನ ಕೋಣೆಗೆ ಹೋಗಿ ಮೊಳಕಾಲೂರಿ ದೇವರಿಗೆ ಹೀಗೆ ಬಿನ್ನಹ ಮಾಡಿಕೊಂಡನು : "ಅಪ್ಪಾ, ನಾನೇನೋ ಉಪವಾಸದಿಂದ ಸಾಯುವದಕ್ಕೆ ಸಿದ್ಧ ನಾಗಿದ್ದೇನೆ ; ಆದರೆ ಈ ಮಕ್ಕಳಿದಾರಲ್ಲ, ಅವರ ಗತಿ ? ಇವರು ಸಾಯುತ್ತಿರು ವದನ್ನು ನಾನು ನೋಡಲಾರೆ ; ನಿನಗೆ ಅದನ್ನು ನೋಡುವದು ಆದೀತೇನು ?"

ಇಷ್ಟರಲ್ಲಿ ಯಾರೋ ಬಾಗಿಲು ತಟ್ಟಿದ ಶಬ್ದವು ಕೇಳಿಸಿತು. ಕಿಟಕಿಯು ಕದವನ್ನು ತೆರೆದು 'ಯಾರಪ್ಪ, ಅದು ?' ಎಂದನು. 'ನಾನು !' ಎಂದು ಉತ್ತರ ಬಂತು. 'ನಾನು ಎಂದರೆ ಯಾರು ? – ಎಂದು ಕೂಲಿಯವನು ಕೇಳಲು 'ನಾನು ?' ಎಂದೇ ಉತ್ತರವು ಬಂದಿತು. ಮತ್ತೂ ಮತ್ತೂ 'ನಾನು ! ನಾನು!' ಎನ್ನುತ್ತಿದ್ದವರು ಯಾರೆಂದು ನೋಡುವದಕ್ಕೆ ಮೆಟ್ಟಿಲನ್ನಿಳಿದು ಬಾಗಿಲು ತೆರೆದು ನೋಡುತ್ತಾನೆ, ಯಾರೂ ಕಾಣಿಸಲಿಲ್ಲ ; ಆದರೆ ಬಾಗಿಲ ಮುಂದುಗಡೆಯಲ್ಲಿಯೇ ಕಾಣುವಹಾಗೆ ಒಂದು ಆಹಾರ ಪದಾರ್ಥಗಳ ಬುಟ್ಟಿಯಿತ್ತು !

ಆ ಗನಿಯವನಿಗೆ ಯಾವ ಶಾಸ್ತ್ರಜ್ಞಾನವೂ ಇರಲಿಲ್ಲ ; ಅವನಿಗೆ ಯಾವ ಕರ್ಮಯೋಗವೂ ತಿಳಿಯದು ; ಆದರೆ,

ಅನ್ಯೇ ತ್ವೇವಮಜಾನನ್ತಃ ಶ್ರುತ್ವಾಽನ್ಯೇಭ್ಯ ಉಪಾಸತೇ |
ತೇಽಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿಪರಾಯಣಾಃ ||

ಗೀ. ೧೩-೨೫

1. By Hugh Redwood, Rich & Gowan Ltd , 125, Soho Spuare, W, I, London.

ಯಾವ ಮಾರ್ಗವೂ ತಿಳಿಯದಿದ್ದರೂ ಮತ್ತೊಬ್ಬರು ತಿಳಿಸಿಕೊಟ್ಟ ಮಾರ್ಗ ದಿಂದಲೇ ಭಗವಂತನಿಗೆ ಶರಣುಹೋಗುವವರು ಇದ್ದಾರೆ; ಅವರಿಗೂ ಕಷ್ಟವನ್ನು ಪಾರುಗಾಣುವದು ಆಗಿಯೇತೀರುತ್ತದೆ. ಇಂಥ ಕಥೆಗಳು ನಮ್ಮ ದೇಶದಲ್ಲೇನೂ ಇಲ್ಲವೆಂದಲ್ಲ, ಪರಮೇಶ್ವರನು ನಮ್ಮನ್ನು ಕಾಪಾಡುವನೆಂಬುದನ್ನು ನಾವು ನಂಬಿದರೆ ಸಾಕು, ಅವನು ಹೇಗಾದರೂ ನಮ್ಮನ್ನು ಉದ್ಧರಿಸುವನೆಂಬ ನಂಬಿಕೆ ಯು ಇನ್ನೂ ಎಲ್ಲಾ ಜನರಲ್ಲಿಯೂ ಇದೆ ಎಂಬುದಕ್ಕೆ ಇದೊಂದು ಉದಾಹರಣೆ.

ಈವರೆಗೆ ನಾವು ವಿವರಿಸಿರುವ ಕ್ರಮದಿಂದ ಕರ್ಮವನ್ನು ಮಾಡುವದಕ್ಕೆ ಕರ್ಮಯೋಗವೆಂದು ಹೆಸರು. ವಿಶ್ವಾಸಮಾತ್ರದಿಂದಲೂ ಪರಮೇಶ್ವರನ ಅನುಗ್ರಹವಾಗುತ್ತದೆ. ಇಂಥ ಕರ್ಮದಿಂದ ಕಾಲಕ್ರಮದಲ್ಲಿ ವೇದಾಂತಜ್ಞಾನವು ಅವಶ್ಯವಾಗಿ ಆಗಿಬಿಡುತ್ತದೆ.

---

# ೨೮. ಶಾಸ್ತ್ರದೃಷ್ಟಿಯಲ್ಲಿ ಮೆಟ್ಟಿಲುಗಳು

(13—8—62)

ಶಾಸ್ತ್ರದೃಷ್ಟಿಯನ್ನು ಅವಲಂಬಿಸಿ ಪ್ರವರ್ತಿಸುವಲ್ಲಿ ಮೆಟ್ಟಿಲುಮೆಟ್ಟಿಲಾಗಿ ಮೇಲಕ್ಕೇರಬೇಕಾಗುತ್ತದೆ. ಎಲ್ಲಕ್ಕೂ ಮೊದಲು ಸ್ವಾತಂತ್ರ್ಯಕ್ಕೂ ಸ್ವೇಚ್ಛಾ ಪ್ರವೃತ್ತಿಗೂ ಇರುವ ವೈಲಕ್ಷಣ್ಯವನ್ನು ಮನದಂದುಕೊಳ್ಳಬೇಕು. ಇಚ್ಛಾ ದ್ವೇಷಾದಿಗಳಿಗೆ ಸ್ವಭಾವದಿಂದಲೇ ವಶರಾಗಿ ನಡೆಯುವದೇ ಸ್ವೇಚ್ಛಾಪ್ರವೃತ್ತಿ. ಹಿಂದಿನ ಕಾಲದಲ್ಲಿ ಸಿನೆಮ ಮುಂತಾದವುಗಳು ಆಚರಣೆಗೆ ಬರುವದಕ್ಕಿಂತ ಮುಂಚೆ, ಗೊಂಬೆಯಾಟವನ್ನು ವಿನೋದಕ್ಕಾಗಿ ಜನರು ನೋಡುತ್ತಿದ್ದರು. ಆ ಆಟದಲ್ಲಿ ಗೊಂಬೆಗಳನ್ನು ಕುಣಿಸುವವನು ತನ್ನ ಕೈಯಲ್ಲಿ ಕಬ್ಬಿಣದ ಸರಳು ಗಳನ್ನು ಹಿಡಿದು ಅವುಗಳನ್ನು ಆಡಿಸುತ್ತಿದ್ದರೂ ನೋಟಕನಿಗೆ ಗೊಂಬೆಗಳೇ ಹಾಗೆಲ್ಲ ಅಭಿನಯಿಸುತ್ತವೆ ಎಂಬ ಭಾವನೆ ಬರುವಂತಿತ್ತು. ಹೀಗೆಯೇ ನಾವು ಇಚ್ಛಾದ್ವೇಷಗಳಿಗೆ ವಶರಾಗಿ ಅವು ಪ್ರೇರಿಸಿದಂತೆ ಗೊಂಬೆಗಳಹಾಗೆ ಆಯಾ ಕರ್ಮದಲ್ಲಿ ತೊಡಗುತ್ತಿರುವೆವು; ಆದರೂ ನಾವು ಸ್ವತಂತ್ರರಾಗಿಯೇ ಕರ್ಮ ಗಳನ್ನು ಮಾಡುತ್ತಿರುವೆವೆಂಬ ಭ್ರಾಂತಿಯು ನಮ್ಮನ್ನು ಪೀಡಿಸುತ್ತಿರುವದು. ಇದನ್ನು ನಾವು ದಿನದಿನವೂ ಅನುಭವದಲ್ಲಿ ಕಾಣುತ್ತಿರುತ್ತೇವೆ. ಎಲ್ಲರೂ ಮತ್ತೊಂದು ಕಡೆ ವ್ಯಗ್ರರಾಗಿ ಕುಳಿತಿರುವಾಗ 'ಹಾವು! ಹಾವು' ಎಂದು ಯಾವ

ನಾದರೂ ಹಾಸ್ಯಕ್ಕಾಗಿ ಕೂಗಿದರೂ ಕೂಡಲೆ ಎಲ್ಲರೂ ಗಾಭರಿಯಿಂದ ಎದ್ದು ಅತ್ತಿತ್ತ ಚದರುತ್ತಾರೆ. ಇಲ್ಲಿ 'ಭಯ'ವೆಂಬ ವೇದನೆಯು ಅವರಿಗೂ ಅರಿವಿಲ್ಲದೆಯೇ ಅವರನ್ನು ಕರ್ಮದಲ್ಲಿ ತೊಡಗಿಸುವದೆಂಬುದು ಸ್ಪಷ್ಟ. ಹೀಗೆಯೇ ರಾಗದ್ವೇಷಾದಿಗಳು ನಮ್ಮನ್ನು ಪ್ರೇರಿಸುವಾಗ ನಾವು ದ್ವಂದ್ವಪರವಶರಾಗಿರುವೆವು ; ಆಮೇಲೆ ವಿಚಾರದಶೆಯಲ್ಲಿ "ಹೀಗೇಕೆ ಮಾಡಿದೆನೆಂದರೆ" ಎಂದು ತರ್ಕವನ್ನು ಉಪಯೋಗಿಸುವೆವು. ಸಾಮಾನ್ಯರು ವೇದನೆಗಳಿಗೆ ಪರವಶರಾಗಿಯೇ ಕರ್ಮಗಳಲ್ಲಿ ತೊಡಗುತ್ತಿರುವದರಿಂದ, 'ತಯೋರ್ನ ವಶಮಾಗಚ್ಛೇತ್' ರಾಗದ್ವೇಷಗಳಿಗೆ ವಶರಾಗಬಾರದು ; 'ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ' ಸ್ವಭಾವವು ನಿನ್ನನ್ನು ಕೆಲಸದಲ್ಲಿ ತೊಡಗುವಂತೆ ಮಾಡಿಬಿಡುತ್ತದೆ–ಎಂದು ಬೋಧಿಸುತ್ತದೆ.

ಆದ್ದರಿಂದ ವೇದನೆಗಳನ್ನು ವಶಪಡಿಸಿಕೊಳ್ಳುವದಕ್ಕೆ ಪ್ರಯತ್ನಿಸುವದು ಶಾಸ್ತ್ರದೃಷ್ಟಿಯು ಅವಲಂಬನೆಗೆ ಮೊದಲನೆಯ ಮೆಟ್ಟಲು. 'ಅಕುರ್ವನ್ನಪಿ ವಿಧ್ಯುಕ್ತಂ ನಿಷಿದ್ಧಂ ಪರಿವರ್ಜಯೇತ್' ವಿಧಿಯಲ್ಲಿ ಹೇಳಿರುವದನ್ನು ಮಾಡದಿದ್ದರೂ ಮಾಡಬಾರದೆಂದಿರುವದನ್ನು ಮೊದಲು ಬಿಡಬೇಕು– ಎಂಬ ವಚನಕ್ಕೆ ಇದೇ ಅಭಿಪ್ರಾಯ. ನಿಷಿದ್ಧಕರ್ಮವನ್ನು ಮಾಡುವಾಗಲೆಲ್ಲ ನಾವು ಶಾಸ್ತ್ರವನ್ನು ಲೆಕ್ಕಿಸದೆ ನಡೆಯುತ್ತಿರುತ್ತೇವೆ. ಶಾಸ್ತ್ರಕ್ಕೆ ವಶರಾದಮಾತ್ರದಿಂದ ನಮ್ಮ ಸ್ವಾತಂತ್ರ್ಯವು ಹೋಯಿತೆಂದು ತಿಳಿಯಬಾರದು , ಕೀಲುಕೊಟ್ಟ ಗಡಿಯಾರವು ವ್ಯವಸ್ಥೆಯಿಂದ ನಡೆಯುವಂತೆಯೂ ನಾಯಕನ ಅಪ್ಪಣೆಯಂತೆ ಒಬ್ಬರಂತೆ ಒಬ್ಬರು ಅಳತೆಯಮೇರೆ ಹೆಜ್ಜೆಯನ್ನಿಡುವ ಶಿಪಾಯಿಗಳಂತೆಯೂ ನಮ್ಮ ಕರ್ಮಗಳು ಶಿಸ್ತಿನಿಂದ ನಡೆಯಬೇಕಾಗುವದೆಂಬುದು ನಿಜ. ಆದರೆ ನಮ್ಮ ಇಂದ್ರಿಯಗಳನ್ನು ನಾವೇ ಉಪಯೋಗಿಸುತ್ತಿರುವದರಿಂದ ಕರ್ಮವನ್ನು ಮಾಡುವವರು ನಾವೇ. ಯಾವನಿಗೆ ಕ್ರಿಯೆಯಲ್ಲಿ ಸ್ವಾತಂತ್ರ್ಯವಿದೆಯೋ ಅವನಿಗೇ ಶಾಸ್ತ್ರದ ವಿಧಿನಿಷೇಧಗಳು ಅನ್ವಯಿಸುತ್ತವೆ. ಕಂಬಕ್ಕೆ 'ನಿಂತಿರು' ಎಂದು ಯಾರೂ ಆಜ್ಞೆಮಾಡಲಾರರಷ್ಟೆ ?

ಶಾಸ್ತ್ರಕ್ಕೆ ಕಟ್ಟುಬಿದ್ದು ಕಾಮ್ಯಕರ್ಮಗಳನ್ನು ಮಾಡುವದಕ್ಕೆ ಆರಂಭಿಸುವದು ಶಾಸ್ತ್ರದೃಷ್ಟಿಯ ಪ್ರವೃತ್ತಿಗೆ ಎರಡನೆಯ ಮೆಟ್ಟಲು. ಶಾಸ್ತ್ರದಲ್ಲಿ ಹೇಳಿರುವ ಕರ್ಮಗಳಿಗೆ ದೃಷ್ಟಫಲಗಳೂ–ಉದಾಹರಣೆಗೆ ಧನಧಾನ್ಯಪುತ್ರಪಶ್ವಾದಿಗಳೂ ಆಯುರಾರೋಗ್ಯಾದಿಗಳೂ–ಲಭಿಸುವವು. ಸ್ವೇಚ್ಛೆಯಿಂದ ನಡೆವಾಗ ಆಗುವ ದೃಷ್ಟಫಲಗಳಿಗೂ ಶಾಸ್ತ್ರದಂತೆ ನಡೆಯುವಾಗ ಆಗುವ ಫಲಗಳಿಗೂ ಹೆಚ್ಚುಕಡಿಮೆಯಿದೆ. ಉದಾಹರಣೆಗೆ ಕಾಮಕ್ಕಾಗಿ ತನ್ನಿಚ್ಛೆಯಂತೆ ಪತ್ನೀಸಂಯೋಗವನ್ನು ಮಾಡುವವರಿಗೂ ಶಾಸ್ತ್ರೋಕ್ತನಿಯಮಕ್ಕೆ ಒಳಪಟ್ಟು ಮಾಡುವವರಿಗೂ ಮಕ್ಕಳು ಆಗುವದು ಸಮಾನ ; ಆದರೆ ಶಾಸ್ತ್ರದಂತೆ ನಡೆಯುವವರಿಗೆ

ಸುಪುತ್ರನೇ ಜನಿಸುವನೆಂಬುದು ಒಂದು ವಿಶೇಷ. ಶಾಸ್ತ್ರೋಕ್ತವಾದ ಕರ್ಮದ ಆಚರಣೆಗೆ ಇಂಥ ಫಲಗಳು ಹೇಗೆ ಆಗುವದೆಂಬುದನ್ನು ನಮ್ಮ ಲೌಕಿಕಬುದ್ಧಿಯಿಂದ ಉಪಪಾದನೆಮಾಡುವದು ಆಗಲಾರದು. ಆದರೂ ಅದು ಆಗುವದೆಂಬುದು ಶ್ರದ್ಧೆಯಿಂದ ಅನುಷ್ಠಾನಮಾಡುವವರಿಗೆ ಅನುಭವಗೋಚರವಾಗುತ್ತದೆ. ಸತ್ಯನಾರಾಯಣವ್ರತದಲ್ಲಿ ಸಪಾದವೆಂಬ ಸಿಹಿಯಾದ ಸಜ್ಜಿಗೆಯೊಂದನ್ನು ನೈವೇದ್ಯ ಮಾಡುತ್ತಾರಷ್ಟೆ? ಅದು ಬಹಳ ರುಚಿಯಾಗಿರುವದರಿಂದ ಅದನ್ನು ಕಂಡಕೂಡಲೆ ಜನರಿಗೆ ತಿನ್ನಬೇಕೆಂಬ ಇಚ್ಛೆಯು ಮೊಳೆಯುವದು ಸ್ವಾಭಾವಿಕ. ಆದರೆ ವ್ರತವನ್ನು ಮಾಡುವವನು 'ಇದು ದೇವರಿಗಾಗಿ ಮಾಡಿದೆ ; ಆಮೇಲೆ ಪ್ರಸಾದವಾಗಿ ಸ್ವೀಕರಿಸೋಣ' ಎಂದು ನಾಲಗೆಯನ್ನು ಬಿಗಿಹಿಡಿದುಕೊಂಡಿರುತ್ತಾನೆ. ಇದಕ್ಕೆ ಅವನಿಗೆ ಕರ್ಮದಲ್ಲಿರುವ ಶ್ರದ್ಧಾದರಗಳೇ ಕಾರಣ. ಹುಡುಗರಿಗೆ ಮಾತ್ರ ಅದು ತಿಳಿಯುವದಿಲ್ಲವಾದ್ದರಿಂದ ಅವರಿಗೆ ಹಾಗೆ ನಾಲಗೆಯಲ್ಲಿ ಉಂಟಾಗುವ ಪ್ರವರ್ತಕೇಚ್ಛೆಯನ್ನು ತಡೆದುಕೊಳ್ಳುವದು ಕಷ್ಟವಾಗುತ್ತದೆ. ಹೀಗೆ ಸ್ವಾಭಾವಿಕವಾಗಿರುವ ಕಾಮಾದಿಗಳನ್ನು ತಡೆದುಕೊಂಡು ಶಾಸ್ತ್ರದಲ್ಲಿರುವ ಶ್ರದ್ಧೆಯಿಂದ ಕರ್ಮವನ್ನು ಮಾಡುವದೂ ಶಾಸ್ತ್ರದೃಷ್ಟಿಯನ್ನು ಅವಲಂಬಿಸಿದ್ದಕ್ಕೆ ಗುರುತಾಗಿರುತ್ತದೆ.

ಇನ್ನು ಫಲಸಂಬಂಧವನ್ನು ಬಯಸದೆ ಶಾಸ್ತ್ರದಲ್ಲಿ ವಿಧಿಸಿರುವ ನಿತ್ಯಕರ್ಮಗಳನ್ನು ಮಾಡುವದು ಮೂರನೆಯ ಮೆಟ್ಟಲು. ಶಾಸ್ತ್ರದಲ್ಲಿ ಕೆಲವು ಕರ್ಮಗಳನ್ನು ಯಾವಜ್ಜೀವವೂ ಮಾಡಬೇಕೆಂದು ವಿಧಿಸಿರುತ್ತದೆ. ಸ್ನಾನಸಂಧ್ಯಾಶೌಚಾದಿಗಳು ಇಂಥವು. ಶಾಸ್ತ್ರದಲ್ಲಿ ವಿಧಿಸಿದೆ ಎಂಬ ಒಂದೇ ಕಾರಣದಿಂದ ಇದನ್ನು ಮಾಡತಕ್ಕದ್ದು ಎಂದು ಆ ಕರ್ಮಗಳನ್ನು ಮಾಡಬೇಕಾಗುತ್ತದೆ. ಹೀಗೆ ಮಾಡುವದರಿಂದ ಯಾವ ದೃಷ್ಟಫಲವೂ ಆಗುವದಿಲ್ಲವಾದ್ದರಿಂದ ಅದು ವ್ಯರ್ಥಕಾಲಕ್ಷೇಪವೆಂದೂ ಶರೀರಕ್ಲೇಶಕ್ಕೆ ಕಾರಣವೆಂದೂ ನಮಗೆ ತೋರಬಹುದು ಆದರೆ ಶಾಸ್ತ್ರದಲ್ಲಿ ಹೇಳಿರುವ ಪುಣ್ಯಪಾಪಾದಿಗಳು ಹೇಗೆ ನಮಗೆ ಇಂದ್ರಿಯಗೋಚರವಲ್ಲವೋ ಹಾಗೆಯೇ ಕರ್ಮಗಳಿಂದಾಗುವ ದುರಿತಕ್ಷಯಾದಿಫಲಗಳೂ ಗೋಚರವಾಗುವದಿಲ್ಲ. ಈ ಸಂದರ್ಭದಲ್ಲಿ ಶಾಸ್ತ್ರದಂತೆ ನಡೆಯುತ್ತಿದ್ದೇನೆ ಎಂಬ ಮನಃಸಮಾಧಾನವೇ ಆಸ್ತಿಕರಿಗೆ ಬರುವ ಮೊದಲನೆಯ, ಅನುಭವವು. ಅಂತಃಕರಣದಲ್ಲಿ ಆಗಿರುವ ಪಾಪಸಂಸ್ಕಾರಗಳು ತೊಲಗಿದಂತೆ ಮತ್ತೆ ಕೆಟ್ಟಕೆಲಸಗಳಲ್ಲಿ ತೊಡಗುವದಕ್ಕೆ ಮನಸ್ಸು ಬಾರದೆ ಇರುವದೇ ಎರಡನೆಯ ಫಲವು.

ಕರ್ಮವನ್ನು ಸಂಗವಿಲ್ಲದೆ, ಯಾವ ಫಲದ ಆಶೆಯೂ ಇಲ್ಲದೆ, ಅದರಿಂದ ಆಗುವ ಜ್ಞಾನಾದಿಗಳು ಸಿದ್ಧಿಯಾಗುವದೊ, ಇಲ್ಲವೊ - ಎಂಬ ತಳಮಳವಿಲ್ಲದ ಸಮತ್ವವನ್ನು ಅವಲಂಬಿಸಿ ಈಶ್ವರಾರಾಧನೆ ಎಂದು ನಿತ್ಯಕರ್ಮವನ್ನು ಮಾಡುವ

ಕರ್ಮಯೋಗವು ಶಾಸ್ತ್ರದೃಷ್ಟಿಯ ಕರ್ಮದ ನಾಲ್ಕನೆಯ ಮೆಟ್ಟಲು. 'ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ' (ಗೀ. ೨-೪೦) ಎಂದುಮುಂತಾಗಿ ಕರ್ಮಯೋಗವನ್ನು ಹೊಗಳಿರುವಗೀತಾವಾಕ್ಯವನ್ನು ಆಗಲೆ ಉದಾಹರಿಸಿರುತ್ತೇನೆ. ಇದರಲ್ಲಿ ದ್ವಂದ್ವಗಳಿಂದಾಗುವ ಏರುಪೇರು ಇರುವದಿಲ್ಲ ; ಮಾಡಿದ್ದಕ್ಕೆ ನಾಶವಿಲ್ಲ. ಮಾಡದೆಇದ್ದದ್ದರಿಂದಾದ ದೋಷವೂ ಇಲ್ಲ. ಏಕೆಂದರೆ ಹಾಗಲುಕಾಯಿ ಮುಂತಾದ ತರಕಾರಿಗಳ ಕಹಿಯನ್ನು ತೆಗೆದು ಉಪಯೋಗಿಸುವಂತೆ ಅವನು ಕರ್ಮವು ಬಂಧಕವಾಗುವದಕ್ಕೆ ಕಾರಣವಾಗಿರುವ ಸಂಗ, ಫಲ- ಇವುಗಳನ್ನು ಬಿಟ್ಟಿರುತ್ತಾನೆ ; ದ್ವಂದ್ವಗಳನ್ನು ಸಹಿಸಿಕೊಂಡಿರುತ್ತಾನೆ. ಕರ್ಮಯೋಗವು ಹೆಚ್ಚಿನ ಫಲವನ್ನು ಕೊಡುವದಕ್ಕೆ ಕಾರಣವೇನೆಂದರೆ, ಈಶ್ವರಾರಾಧನೆ.

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ |
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥ ಗೀ. ೧೮-೪೬

ಪ್ರಾಣಿಗಳೆಲ್ಲ ಕರ್ಮದಲ್ಲಿ ಪ್ರವರ್ತಿಸುವದಕ್ಕೆ ಕಾರಣನಾದವನು ಈಶ್ವರನು. ಆ ಭಗವಂತನೇ ಸರ್ವರಲ್ಲಿಯೂ ವ್ಯಾಪಿಸಿಕೊಂಡಿರುತ್ತಾನೆ. ಆದ್ದರಿಂದ ಆವನಿಂದ ಹೊರಚ್ಚಾಗಿ ಸ್ವತಂತ್ರವಾಗಿರುವದು ಏನುತಾನೆ ಇದ್ದೀತು ? ಹೀಗಿರುವಲ್ಲಿ ನಾನು, ನನ್ನ ಶರೀರಾದಿಗಳು- ಇವು ಆ ಭಗವಂತನಿಗಿಂತ ಬೇರೆಯಾಗಿ, ಆತನಿಗೆ ಸೇರದೆ ಇರುವಂತೆ, ಇವೆ ಎನ್ನಬಹುದೆ ? ಆತನ ಸಂನಿಧಿಯಿಂದಲೇ ಇವೆಲ್ಲವೂ ಜೀವಂತವೆನಿಸಿಕೊಂಡಿರುತ್ತವೆ. ಆದ್ದರಿಂದ ಕನಕದಾಸರು ಎಂದಿರುವಂತೆ 'ತನು ನಿನ್ನದು ಜೀವನ ನಿನ್ನದಯ್ಯ' ಎನ್ನುತ್ತಾ ಕರ್ಮವನ್ನು ಮಾಡುವದು ಎಷ್ಟು ಹೆಚ್ಚಿನ ಅಂತಸ್ತಿನ ಕರ್ಮವಾಯಿತು ! ಆದ್ದರಿಂದಲೇ ಈಶ್ವರಾಭ್ಯರ್ಚನರೂಪವಾದ ಕರ್ಮಯೋಗಕ್ಕೆ ಎಲ್ಲಕ್ಕಿಂತಲೂ ಹೆಚ್ಚಿನ ಬೆಲೆಯೆಂದಾಯಿತು. ಯಾವನ ಜೀವನವೆಲ್ಲವೂ ಪರಮೇಶ್ವರನಿಗೇ ಅರ್ಪಿತವಾಗಿರುವದೋ ಅವನು ಪರಮೇಶ್ವರನವನೇ, ಪರಮೇಶ್ವರನಲ್ಲಿಯೇ ಆತನು ಅಡಕವಾಗಿಬಿಟ್ಟಿರುತ್ತಾನೆ.

ಈ ಶ್ಲೋಕದಲ್ಲಿ ಹೇಳಿರುವ 'ಸ್ವಕರ್ಮ' ಎಂದರೇನು ? ತನ್ನತನ್ನ ವರ್ಣಾಶ್ರಮದ ಕರ್ಮ ಎಂದರ್ಥ. ಗೀತೆಯಲ್ಲಿ ವರ್ಣಾಶ್ರಮಧರ್ಮವನ್ನೇ ಹೇಳಿಲ್ಲವೆಂದು ಕೆಲವರು ತಮ್ಮತಮ್ಮ ಮೂಗಿನ ನೇರಕ್ಕೆ ನೋಡಿ ಹೇಳುತ್ತಿರುವದುಂಟು. 'ಚಾತುರ್ವರ್ಣ್ಯಂ ಮಯಾ ಸೃಷ್ಟಮ್' ಮುಂತಾದ ಶ್ಲೋಕಗಳಿಗೆ ಅವರು ಏನು ಅರ್ಥವನ್ನು ಮಾಡುವರೋ 'ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ' ಮುಂತಾದ ಶ್ಲೋಕಗಳಿಗೆ ಏನು ಅಭಿಪ್ರಾಯವನ್ನು ಕಲ್ಪಿಸುವರೋ ಅವರಿಗೇ ಗೊತ್ತು. ಅದಿರಲಿ, ವೈದಿಕವರ್ಣಾಶ್ರಮಧರ್ಮವು ನಮ್ಮ ದೇಶದಲ್ಲಿ ಮಾತ್ರವೇ ಇದ್ದರೂ ಅದಕ್ಕನುಗುಣವಾದ ಸಮಾಜದಿಂದ ಜನರಿಗೆ ಕ್ಷೇಮವಾದೀತೆಂಬ ಬಗ್ಗೆ ಯಾವ ಸಂಶಯವೂ ಇಲ್ಲ. ವರ್ಣಾಶ್ರಮಪದ್ಧತಿಯಂತೆ,

ವರ್ಣಗಳಲ್ಲಿ ಎಲ್ಲರಿಗೂ ಮೇಲಿನ ಅಂತಸ್ತಿನವನಾದ ಬ್ರಾಹ್ಮಣನಿಗೂ, ಆಶ್ರಮ ಗಳಲ್ಲಿ ಉತ್ತಮನೆನಿಸಿದ್ದ ಸಂನ್ಯಾಸಿಗೂ, ಹೆಚ್ಚಿನ ಹೊಣೆಗಾರಿಕೆಯನ್ನು ಕಲ್ಪಿಸಿದೆ. ಬ್ರಾಹ್ಮಣನು ಎಲ್ಲರ ಯೋಗಕ್ಷೇಮಚಿಂತನೆಯನ್ನು ಮಾಡಬೇಕು ; ಎಲ್ಲರಿಗೂ ಆದರ್ಶವಾದ ಧರ್ಮಜೀವನವನ್ನು ಮಾಡಬೇಕು. ಅವನಿಗೆ ಯಾವ ಆಸ್ತಿಯನ್ನೂ ತನ್ನದೆಂದು ಇಟ್ಟುಕೊಳ್ಳುವ ಹಕ್ಕಿಲ್ಲ. ಅವನ ಐಹಿಕಯೋಗಕ್ಷೇಮವನ್ನು ಮಿಕ್ಕ ವರ್ಣದವರು ನೋಡಿಕೊಳ್ಳಬೇಕು. ಸರ್ವರಿಗೂ ಪೂಜ್ಯನೆನಿಸಿದ್ದ ಸಂನ್ಯಾಸಿಗಂತೂ ಮನೆ, ಬಾಗಿಲು, ಹಣ, ನೆಂಟರು, ಇಷ್ಟರು– ಯಾರ ಆಲಂಬನೆ ಯೂ ಇರಕೂಡದು ; ಅವನಿಗೆ ಇಡಿಯ ಭೂಮಂಡಲವೇ ಕುಟುಂಬ. ಬ್ರಾಹ್ಮಣನು ನಿತ್ಯವೂ ಧರ್ಮದಲ್ಲಿಯೂ ತ್ಯಾಗದಲ್ಲಿಯೂ ಮಿಕ್ಕವರಿಗೆಲ್ಲ ಆದರ್ಶ ಪ್ರಾಯನಾಗಿದ್ದದ್ದರಿಂದ ಅವನನ್ನು ಎಲ್ಲರೂ ಗೌರವಿಸುತ್ತಿದ್ದದ್ದು ಯುಕ್ತವೇ ಆಗಿತ್ತು. ಈಗ್ಗೆ ವರ್ಣಸಂಕರವೂ ಆಶ್ರಮಧರ್ಮೋಲ್ಲಙ್ಘನೆಯೂ ಮೇರೆಮೀರಿ ಕಾಣುತ್ತಿರುವದರಿಂದ 'ಸಿದ್ಧಿಂ ವಿನ್ದತಿ' ಎನ್ನುವದಕ್ಕೆ ಬದಲು 'ಅನಿಷ್ಟಂ ವಿನ್ದತಿ' ಎಂದೇ ಹೇಳಬೇಕಾಗಿದೆ. ಈಶ್ವರನನ್ನೂ ಬಿಟ್ಟು ಸ್ವಧರ್ಮವನ್ನೂ ಬಿಟ್ಟವನಿಗೆ ಎಲ್ಲಿಯ ಸಿದ್ಧಿ ?

ವರ್ಣಾಶ್ರಮವ್ಯವಸ್ಥೆಯು ಈಗ ಎಷ್ಟೇ ಕೀಳಾಗಿರಲಿ ತಮ್ಮನ್ನು 'ನಾವು ಬ್ರಾಹ್ಮ ಣರು', 'ಕ್ಷತ್ರಿಯರು', 'ವೈಶ್ಯರು', 'ಶೂದ್ರರು' –ಎಂದುಕೊಳ್ಳುವವರು ತಮ್ಮ ಹಕ್ಕುಗಳಿಗಾಗಿ ಕಾದಾಡುವದನ್ನು ಮೊದಲು ಬಿಡಬೇಕು ; ತಮ್ಮ ಹೊಣೆಗಾರಿಕೆ ಯನ್ನು ಮನದಂದುಕೊಂಡು ಈಶ್ವರಪ್ರೀತ್ಯರ್ಥವಾಗಿ ಸ್ವಕರ್ಮವನ್ನು ಆಚರಿಸು ವದನ್ನು ಕಲಿಯಬೇಕು. ಲೌಕಿಕದೃಷ್ಟಿಯಿಂದ ನಾವುನಾವು ಆಚರಿಸಿಕೊಂಡಿರುವ ಉದ್ಯೋಗಗಳು ಯಾವವೇ ಇರಲಿ, ಎಲ್ಲರೂ 'ಈ ಕರ್ಮವು ಈಶ್ವರನಿಗೆ ಮೆಚ್ಚಾಗಲಿ' ಎಂದು ಧರ್ಮದೃಷ್ಟಿಯಿಂದ ಮಾಡುವದಕ್ಕೆ ಆರಂಭಿಸಿದರೆ ಆಗ ಮನಸ್ಸು ಯಾವ ಅಂತಸ್ತಿಗೆ ಏರುವದೆಂಬುದು ಅವರವರ ಅನುಭವಕ್ಕೇ ಬರುವದು. ಇಲ್ಲಿ ಒಂದು ಎಚ್ಚರಿಕೆ : ಬಾಹ್ಯಾರ್ಚನೆಯು ನಮ್ಮೆಲ್ಲರಿಗೂ ಗೊತ್ತಿರುವ ಕರ್ಮವಾಗಿದೆ. ಅನೇಕ ಪೂಜಾಸಾಮಗ್ರಿಗಳ ಸಂಭಾರದಿಂದ ಕೂಡಿ ಮಾಡುವ ಅನುಷ್ಠಾನವದು. ಅದರಲ್ಲಿ ವಿಕ್ಷೇಪಗಳಿರುವದು ಸ್ವಾಭಾವಿಕವಾಗಿದೆ. ಅರ್ಚನೆಗೆಂದು ತಂದಿರುವ ವಸ್ತುಗಳಲ್ಲಿ ನಮಗೆ ಅರಿವಾಗದೆಯೇ ಮಮತಾವಾಸನೆಯು ಅಂಟಿಕೊಂಡಿರುತ್ತದೆ. ಪೂಜೆಯ ಕಾಲಕ್ಕೆ ಪೂಜಾಪದಾರ್ಥಗಳನ್ನೆಲ್ಲ 'ಪೂಜಾದ್ರವ್ಯಾಣಿ ಸಂಪ್ರೋಕ್ಷ್ಯ' ಎಂದು ಕಲಶೋದಕದಿಂದ ಅಥವಾ ಶಂಖೋದಕದಿಂದ ಪ್ರೋಕ್ಷಣೆಮಾಡುವಾಗ ಇವೆಲ್ಲವೂ ಭಗವಂತನ ಅರ್ಚನೆಗೆಂದು ತೆಗೆದಿಟ್ಟಿರುವ ದ್ರವ್ಯಗಳು ಎಂಬ ಭಾವನೆ ಯನ್ನು ತಂದುಕೊಂಡು ಬಲಪಡಿಸಿಕೊಳ್ಳಬೇಕು. ಲೌಕಿಕವಿಚಾರಗಳನ್ನು ಮನದಂದುಕೊಳ್ಳದೆ ಈಶ್ವರಭಾವನೆಯಿಂದಲೇ ಭರಿತನಾಗಿರಬೇಕು. ಈ ಭಾವನೆ

ಯನ್ನು ದೀರ್ಘಕಾಲದ ಅಭ್ಯಾಸದಿಂದ ಅಳವಡಿಸಿಕೊಂಡವರು ಈಗ ಹೇಳುವ 'ಸ್ವಕರ್ಮಣಾ ತಮಭ್ಯರ್ಚ್ಯ' ಎಂಬ ಉಪದೇಶವನ್ನು ಅನುಸರಿಸುವದಕ್ಕೆ ಹೊರಡಬೇಕು. ಅಲ್ಲಿ ನಾವು ಮಾಡುವ ಸ್ವಕರ್ಮಗಳೇ ಪೂಜಾದ್ರವ್ಯಗಳ ಸ್ಥಾನ ದಲ್ಲಿರುತ್ತವೆ. ಅವನ್ನು ಮಾಡುವಾಗಲೆಲ್ಲ 'ಈಶ್ವರನ ಅಭ್ಯರ್ಚನೆಯನ್ನು ಮಾಡುತ್ತಿದೇನೆ' ಎಂಬ ಭಾವನೆಯು ಮೂಡಿಕೊಳ್ಳುವಂತೆ ಮಾಡುವದು ಎಲ್ಲ ರಿಗೂ ಸುಲಭಸಾಧ್ಯವಲ್ಲವೆಂಬುದು ಮೇಲೆಯೇ ಕಾಣಿಸುತ್ತದೆ.

ಹೀಗೆ ನಾವು ಮಾಡುವ ಕರ್ಮಗಳನ್ನೆಲ್ಲ—

ಯತ್ ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ |
ಯತ್ ತಪಸ್ಯಸಿ ಕೌನ್ತೇಯ ತತ್ ಕುರುಷ್ವ ಮದರ್ಪಣಮ್ ||

ಎಂಬಂತೆ ಭಗವಂತನಿಗೆ ಅರ್ಪಿಸುವದು, ಅದರಲ್ಲಿ 'ನಾನು', 'ನನ್ನದು' ಎಂಬ ಭಾವನೆಗಳು ಎಳ್ಳಷ್ಟೂ ಇಲ್ಲದಂತೆ ಮಾಡಿದರೆ ಕರ್ಮಯೋಗವು ಭಕ್ತಿಯೋಗ ವಾಗಿ ಪರಿಣಮಿಸುವದು. ಇಲ್ಲಿ ಅಹಂಕಾರವು ಪೂರ್ಣವಾಗಿ ಹೋಗಿಬಿಡಬೇಕು; ಕರ್ತೃವಿನಲ್ಲಿಯೂ ಕರ್ಮದಲ್ಲಿಯೂ ಭಗವಂತನೇ ಕುಳಿತುಕೊಂಡುಬಿಡಬೇಕು.

ತ್ಯಕ್ತ್ವಾ ಮಮಾಹಮಿತಿ ಬನ್ಧಕರೇ ಪದೇ ದ್ವೇ
ಮಾನಾಪಮಾನಸದೃಶಾಃ ಸಮದರ್ಶಿನಶ್ಚ |
ಕರ್ತಾರಮನ್ಯಮವಗಮ್ಯ ತದರ್ಪಿತಾನಿ
ಕುರ್ವನ್ತಿ ಕರ್ಮಪರಿಪಾಕಫಲಾನಿ ಧನ್ಯಾಃ ||

ಎಂದಿರುವಂತೆ 'ನಾನು', 'ನನ್ನದು' ಎಂಬ ಎರಡು ಪದಗಳನ್ನು ಅಳಿಸಿಹಾಕಿ ಮಾನ, ಅಪಮಾನ—ಮುಂತಾದ ದ್ವಂದ್ವಗಳಿಗೆ ಎಡೆಗೊಡದೆ, 'ನಾನು ಮಾಡುವ ಕರ್ಮವೆಲ್ಲ ಈಶ್ವರನದೇ ; ಆತನ ಆಶ್ರಯವಿಲ್ಲದೆ ನಾನು ಏನುತಾನೆ ಮಾಡಿ ಯೇನು ? ಆದ್ದರಿಂದ ಈ ಕರ್ಮದ ಫಲವೂ ಆತನದೇ' ಎಂದು ಎಲ್ಲವನ್ನೂ ಭಗವಂತನಿಗೆ ಸಮರ್ಪಣೆಮಾಡುವವರೇ ಧನ್ಯರು. ಅವರೇ ಶಾಸ್ತ್ರದೃಷ್ಟಿಯ ಅನುಷ್ಠಾನದ ಕೊನೆಯ ಮೆಟ್ಟಿಲನ್ನೇರಿರುವರು.

ಈಶ್ವರನ ಕರುಣಾಗಂಗೆಯ ಪ್ರವಾಹವು ಎಲ್ಲೆಲ್ಲಿಯೂ ಹರಿಯುತ್ತಿದೆ. ಆದರೆ ಅಹಂಕಾರದ ದಿಣ್ಣೆಯು ನಮ್ಮ ಹೃದಯಪ್ರದೇಶದಲ್ಲಿ ಎದ್ದುಕೊಂಡಿದೆ : ಅದನ್ನು ತೆಗೆದುಹಾಕಿದರೆ ಸಾಕು, ಹೃದಯದಲ್ಲಿ ಭಕ್ತಿಯ ಗುಂಡಿಯು ಆಳವಾಗು ತ್ತಲೂ ಆ ಕರುಣಾಮೃತವು ಅಲ್ಲಿಗೂ ಹರಿದುಬಂದು ನಿಲ್ಲುತ್ತದೆ. ಬ್ರಾಹ್ಮಣನು ವೇದಧನನಾಗದೆ ಬಾಹ್ಯವಸ್ತುಗಳನ್ನು ರಾಶಿಹಾಕಿಕೊಳ್ಳುವದಕ್ಕೆ ಮೊದಲು ಮಾಡುವದು, ಕ್ಷತ್ರಿಯನು ಧರ್ಮವನ್ನು ಬಿಟ್ಟು ಬಲಪ್ರಯೋಗಮಾಡುವದು, ವೈಶ್ಯನು ಅಧರ್ಮದಿಂದ ಧನವನ್ನು ಸಂಪಾದಿಸುವದಕ್ಕೆ ಯತ್ನಿಸುವದು, ಕೂಲಿ

ಯವರು ಕೆಲಸವಿಲ್ಲದೆ ಸಂಬಳಕೇಳುವದು, ರೈತರು ಪೈರುಬೆಳೆಯದೆ ಗುತ್ತಿಗೆಯನ್ನು ಕಡಿಮೆಮಾಡಿರೆನ್ನುವದು, ಉಪಾಧ್ಯಾಯರು ಪಾಠವನ್ನು ಹೇಳದೆ ಬಡತಿಯನ್ನು ಕೋರುವದು, ಹುಡುಗರು ಪಾಠವನ್ನು ಅಭ್ಯಾಸಮಾಡದೆ 'ಪ್ಯಾಸ್' (ಪರೀಕ್ಷೆಯಲ್ಲಿ ಉತ್ತೀರ್ಣರನ್ನಾಗಿ) ಮಾಡಿಸಿರಿ ಎನ್ನುವದು, ಸರ್ಕಾರದವರು ಅನವಶ್ಯವಾಗಿ ಕರಗಳನ್ನು ಹೆಚ್ಚಿಸಿ ದುಂದುವೆಚ್ಚಗಳಿಗೆ ವಿನಿಯೋಗಿಸುವದು, ಅಧಿಕಾರಿಗಳೂ ಪ್ರಜೆಗಳೂ ಸರಕಾರಕ್ಕೆ ದ್ರೋಹವನ್ನು ಬಗೆಯುವದು, ದೇಶದವರೆಲ್ಲ ಸೋಮಾರಿಗಳಾಗಿ ಪಾಶಿಸಮಲ್ಲರಾಗಿ ಅನ್ಯಾಯದ ಅನ್ನವನ್ನು ಉಣ್ಣುವದಕ್ಕೆ ಮೊದಲುಮಾಡುವದು–ಹೀಗೆ ಮಾಡಿದರೆ, ಯಾವ ಕರ್ಮಕ್ಕೆ ಯಾವ ಫಲವನ್ನು ತಾನೆ ಕೊಟ್ಟಾನು, ಭಗವಂತ ?

ಜನರೆಲ್ಲರೂ ಅಶಿಸ್ತು ಮದ್ಯಪಾನವನ್ನು ಮಾಡುತ್ತಿದ್ದಾರೆ ; ಈಶ್ವರನಿಂದ ಒಳ್ಳೆಯ ಪ್ರತಿಫಲಗಳು ಸಿಕ್ಕಬೇಕೆಂದು ತವಕಿಸುತ್ತಿದ್ದಾರೆ ; ಈಶ್ವರನನ್ನು ಮರೆತೇ ಇರುತ್ತಾರೆ! ಕಾಮಾದಿಗಳೆಂಬ ಹಗಲುಗಳ್ಳರು ತಾವು ಎಲ್ಲಿದೇವೆಂಬುದನ್ನು ಯಾರಿಗೂ ತೋರಿಸಿಕೊಳ್ಳದೆ ದರೋಡೆಮಾಡುತ್ತಿದ್ದಾರೆ. ವಿದ್ಯಾವಂತರು ಹಣವಂತರು, ವರ್ತಕರು, ಕೆಲಸಗಾರರು– ಎಲ್ಲರೂ ಸ್ವಕರ್ಮವನ್ನು ಅಧರ್ಮಬುದ್ಧಿಯಿಂದಲೇ ಸಾಗಿಸಿ ಮತ್ತೊಬ್ಬರನ್ನು ವಂಚಿಸಿ ತಾವು ಬದುಕಬೇಕೆನ್ನುತ್ತಿದ್ದಾರೆ. ಇದು ಆಗದ ಮಾತು. ಈಶ್ವರನನ್ನು ವಂಚಿಸುವದಕ್ಕೆ ಆಗುವದಿಲ್ಲ. ದೇಶಗಳೆಲ್ಲವೂ ಪರಸ್ಪರದ್ವೇಷದಿಂದ ಭೂಮಂಡಲವೇ ನಾಶವಾಗುವ ಮಾರ್ಗವನ್ನು ಅನುಕರಿಸುತ್ತಿವೆ. ಇದನ್ನೆಲ್ಲ ಬದಿಗಿಟ್ಟು ಮೊದಲು ಶಾಸ್ತ್ರದೃಷ್ಟಿಯನ್ನವಲಂಬಿಸಬೇಕು. ಈಶ್ವರನನ್ನು ಹೃದಯದಲ್ಲಿಟ್ಟುಕೊಂಡು ಅವನಿಗೆ ಸ್ವಕರ್ಮಗಳನ್ನು ಅರ್ಪಣೆಮಾಡುವ ಕರ್ಮಯೋಗವನ್ನು ಸಂಕಲ್ಪಿಸಬೇಕು. ಇದೇ ಸರ್ವಸಾಧನೆಗಳ ಸಾರ.

---

## ೨೮. ಕರ್ಮಯೋಗವೂ ಗುಣತ್ರಯವೂ

(14—8 62)

ಕರ್ಮದ ಫಲವನ್ನು ಈಶ್ವರಾರ್ಪಣೆಗೆಂತ ಕೈಬಿಟ್ಟು ಆಮೇಲೆ ನಮಗೆ ಸಿಕ್ಕುವದಾದರೂ ಏನು ? ಶಾಸ್ತ್ರದಲ್ಲಿ ಹೇಳಿರುವ ಕರ್ಮಗಳಿಗೆ ಸತ್ತಮೇಲೆ ಸಿಕ್ಕುವವೆಂದು ಹೇಳಿರುವ ಅದೃಷ್ಟಫಲಗಳನ್ನು ಜನರು ಇಲ್ಲಿ ಕಂಡೇ ಇಲ್ಲವಾದ್ದರಿಂದ ಅವುಗಳ ವಿಷಯಕ್ಕೆ ಚರ್ಚೆಯೇನೂ ಇಲ್ಲ ; ಆದರೆ ಇಲ್ಲಿಯೇ ಮಾಡಿ ಇಲ್ಲಿಯೇ ಫಲವನ್ನು ಅನುಭವಿಸುವ ಕರ್ಮಗಳನ್ನು ಅನಾದರಮಾಡಿ ಪಡೆದು

ಕೊಳ್ಳಬೇಕಾದ ಪುರುಷಾರ್ಥವಾದರೂ ಏನಿದೆ ?– ಎಂದು ಕೆಲವರು ಕರ್ಮ ಯೋಗದ ಉಪದೇಶವನ್ನು ಆಕ್ಷೇಪಿಸ ವದೂ ಉಂಟು. ಆದರೆ ವೇದಾಂತದಲ್ಲಿ ಉಪದೇಶಿಸಿರುವ ಕರ್ಮಯೋಗದ ಫಲವು, ಇಲ್ಲಿಯೇ ಅನುಭವಕ್ಕೆ ಬರುವ ಚಿತ್ತ ಶುದ್ಧಿ, ಜ್ಞಾನನಿಷ್ಠಾಯೋಗ್ಯತೆ, ಜ್ಞಾನನಿಷ್ಠೆ - ಇವುಗಳಲ್ಲಿ ಯಾವದೊಂದೂ, ಲೋಕಾಂತರದಲ್ಲಿ ಆಗುವ ಫಲವಲ್ಲ. ಈ ವಿಷಯದಲ್ಲಿ ಶಂಕರಾಚಾರ್ಯರು ಬರೆದಿರುವ ವಾಕ್ಯವನ್ನು ಕೇಳಿ :

> ಕರ್ಮಫಲೇ ಹಿ ಸ್ವರ್ಗಾದೌ ಅನುಭವಾನಾರೂಢೇ ಸ್ಯಾದಪಿ ಕದಾಚಿತ್ ಆಶಙ್ಕಾ ಭವೇದ್ ವಾ ನ ವಾ ಇತಿ ! ಅನುಭವಾ ರೂಢಂ ತು ಜ್ಞಾನಫಲಮ್ 'ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ' (ಬೃ. ೩–೪–. ) ಇತಿ ಶ್ರುತೇಃ | 'ತತ್ ತ್ವಮಸಿ' (ಛಾಂ. (೬–೮–೭) ಇತಿ ಚ ಸಿದ್ಧವದುಪದೇಶಾತ್ | ನ ಹಿ ತತ್ತ್ವಮಸಿ ಇತ್ಯಸ್ಯ ವಾಕ್ಯಸ್ಯಾರ್ಥಃ, ತತ್ ತ್ವಂ ಮೃತೋ ಭವಿಷ್ಯಸಿ– ಇತ್ಯೇವಂ ಪರಿಣೇತುಂ ಶಕ್ಯಃ || ಸೂ. ಭಾ. ೩–೪–೩೨

"ಕರ್ಮಕ್ಕೆ ಫಲವಾಗಿರುವ ಸ್ವರ್ಗಾದಿಗಳು ಅನುಭವಕ್ಕೆ ಹತ್ತಿರುವದಿಲ್ಲವಾದ್ದ ರಿಂದ ಆದೀತೊ, ಇಲ್ಲವೊ ?– ಎಂದು ಶಂಕಿಸಿದರೂ ಶಂಕಿಸಬಹುದು. ಜ್ಞಾನ ಫಲವು ಅನುಭವಕ್ಕೆ ಹತ್ತಿಕೊಂಡು ಇಲ್ಲಿಯೇ ತೋರತಕ್ಕದ್ದು, ಬ್ರಹ್ಮವು ಸಾಕ್ಷಾ ತ್ತಾಗಿ ಅಪರೋಕ್ಷವಾಗಿರತಕ್ಕದ್ದು–ಎಂದು ಶ್ರುತಿಯಿದೆ. 'ಅದೇ ನೀನಾಗಿರುವೆ' ಎಂಬ ಶ್ರುತಿಯ ಉಪದೇಶವು ಆಗಲೆ ಬ್ರಹ್ಮಾತ್ಮೈಕ್ಯವು ಇಲ್ಲಿಯೇ ಸಿದ್ಧವಾಗಿರು ವಂತೆ ತೋರಿಸುತ್ತಿದೆ. ಅದು ನೀನಾಗಿದೀಯೆ– ಎಂಬ ವಾಕ್ಯದ ಅರ್ಥವನ್ನು 'ನೀನು ಸತ್ತು ಅದಾಗುವೆ' ಎಂದೇನೂ ಮಾರ್ಪಡಿಸಿ ಹೇಳುವದಕ್ಕೆ ಆಗುವದಿಲ್ಲ ವಷ್ಟೆ ? ಹೀಗಿರುವದರಿಂದ ಕರ್ಮಯೋಗದಿಂದ ಆಗುವ ಚಿತ್ತಶುದ್ಧಿಯೇ ಮುಂತಾದ ಜ್ಞಾನದವರೆಗಿನ ಫಲಗಳನ್ನು 'ಆದೀತೊ, ಇಲ್ಲವೊ–ಯಾರು ಬಲ್ಲರು?' ಎಂದು ಶಂಕಿಸುವದಕ್ಕೆ ಆಗುವಹಾಗಿಲ್ಲ. ಊಟವನ್ನು ಮಾಡಿದರೆ ಆಗುವ ತೃಪ್ತಿ ಯಂತೆ ಇಲ್ಲಿಯೇ ಆಗುವ ಫಲವನ್ನು ಶಂಕಿಸುವದಕ್ಕೆ ಕಾರಣವಾದರೂ ಏನಿದೆ ? ಅತ್ರ ಬ್ರಹ್ಮ ಸಮಶ್ನುತೇ (ಕಾ. ೩. ೩–೧೪) ಇಲ್ಲಿಯೇ ಬ್ರಹ್ಮವನ್ನು ಪಡೆದು ಕೊಳ್ಳುತ್ತಾನೆ– ಎಂದಲ್ಲವೆ ಶ್ರುತಿ ?

ಕರ್ಮದಲ್ಲಿ ಸಂಗವನ್ನು ಬಿಡುವದು ಹೇಗೆ ?– ಫಲತ್ಯಾಗವನ್ನು ಮಾಡುವದು ಹೇಗೆ ? ಅದರಿಂದ ಚಿತ್ತಶುದ್ಧಿಯಾಗುವದೆಂದರೆ ಹೇಗೆ ? ಇವೇ ಮುಂತಾದ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವದಕ್ಕೆ ಗೀತೆಯಲ್ಲಿ ಸಾಂಖ್ಯದರ್ಶನದ ಸಹಾಯವನ್ನು ತೆಗೆದುಕೊಂಡಿರುತ್ತದೆ. ಸಾಂಖ್ಯವು ವೇದಾಂತಕ್ಕಿಂತ ಬೇರೆಯು ದರ್ಶನವಾದರೂ ಆ ದರ್ಶನದ ಪ್ರಕ್ರಿಯೆಗಳು ಎಲ್ಲೆಲ್ಲಿ ವೇದಾಂತಕ್ಕೆ ಅನುಗುಣ

ವಾಗಿರುತ್ತವೆಯೋ ಅಲ್ಲೆಲ್ಲ ಶಿಷ್ಟರೂ ಅದನ್ನು ಉಪಯೋಗಿಸುತ್ತಿರುತ್ತಾರೆ. ಮನ್ವಾದಿಸ್ಮೃತಿಗಳಲ್ಲಿಯೂ ಗುಣತ್ರಯದ ಪ್ರಕ್ರಿಯೆಯನ್ನು ಅಲ್ಲಲ್ಲಿ ಉಪಯೋಗಿಸಿಕೊಂಡಿರುವದಕ್ಕೆ ಇದೇ ಕಾರಣ. 'ಪರಮತಂ ಅಪ್ರತಿಷಿದ್ಧಮನುಮತಂ ಭವತಿ' ಎಂಬುದೊಂದು ತಂತ್ರಯುಕ್ತಿ ; ಮತ್ತೊಂದು ದರ್ಶನದಲ್ಲಿ ಹೇಳಿರುವದನ್ನು ನಾವು ಬಾಯಿಬಿಟ್ಟು ಅಲ್ಲಗಳೆದಹೊರತು ಅದನ್ನು ನಾವು ಒಪ್ಪಿದಂತೆಯೇ ಎಂದು ತಿಳಿದುಕೊಳ್ಳಬೇಕು – ಎಂಬುದೂ ಈ ನ್ಯಾಯಪ್ರಯೋಗದ ಅಭಿಪ್ರಾಯ. ಆದ್ದರಿಂದಲೇ ಭಗವದ್ಗೀತೆಯಲ್ಲಿಯೂ ಗೀತಾಭಾಷ್ಯದಲ್ಲಿಯೂ ಈ ಪ್ರಕ್ರಿಯೆಯನ್ನು ಒಪ್ಪಿಕೊಂಡೇ ವಿಷಯಪ್ರತಿಪಾದನೆಯನ್ನು ಮಾಡಿರುತ್ತದೆ.

> ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ |
> ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ||
>
> ಗೀ. ೧೮–೧೯

(ಜ್ಞಾನ, ಕರ್ಮ, ಕರ್ತೃ– ಈ ಒಂದೊಂದೂ ಮೂರು ಗುಣಗಳ ಭೇದದಿಂದ ಸಾತ್ತ್ವಿಕ, ರಾಜಸ, ತಾಮಸ– ಎಂಬ ಮೂರು ಮೂರು ವಿಧವಾಗಿರುತ್ತದೆ. ಅವುಗಳನ್ನು ಹೇಳುವೆನು, ಕೇಳು).

ಎಂಬೀ ಶ್ಲೋಕದ ಭಾಷ್ಯದಲ್ಲಿ ಶ್ರೀಶಂಕರಾಚಾರ್ಯರು ಹೀಗೆಂದು ಬರೆದಿರುತ್ತಾರೆ :

> ಗುಣಸಂಖ್ಯಾನೇ ಕಾಪಿಲೇ ಶಾಸ್ತ್ರೇ | ತದಪಿ ಗುಣಸಂಖ್ಯಾನಂ ಶಾಸ್ತ್ರಂ ಗುಣಭೋಕ್ತೃವಿಷಯೇ ಪ್ರಮಾಣಮೇವ | ಪರಮಾರ್ಥಬ್ರಹ್ಮೈಕತ್ವವಿಷಯೇ ಯದ್ಯಪಿ ವಿರುಧ್ಯತೇ, ತಥಾಪಿ | ತೇ ಹಿ ಕಾಪಿಲಾ ಗುಣಗೌಣವ್ಯಾಪಾರನಿರೂಪಣೇ ಅಭಿಯುಕ್ತಾ ಇತಿ ತಚ್ಛಾಸ್ತ್ರಮಪಿ ವಕ್ಷ್ಯಮಾಣಾರ್ಥಸ್ತುತ್ಯರ್ಥತ್ವೇನ ಉಪಾದಿತ್ಸತ ಇತಿ ನ ವಿರೋಧಃ ||

ಈ ಶ್ಲೋಕದಲ್ಲಿ 'ಗುಣಸಂಖ್ಯಾನೇ' ಎಂದರೆ ಕಾಪಿಲಶಾಸ್ತ್ರದಲ್ಲಿ ಎಂದರ್ಥ. ಆ ಗುಣಸಂಖ್ಯಾನಶಾಸ್ತ್ರವುಕೂಡ ಬ್ರಹ್ಮವೊಂದೇ ಪರಮಾರ್ಥ ಎಂಬ ವಿಷಯದಲ್ಲಿ ವೇದಾಂತಕ್ಕೆ ಅದು ವಿರುದ್ಧವಾಗಿದ್ದರೂ ಗುಣಗಳು, ಭೋಕ್ತೃ– ಇವರ ಸ್ವರೂಪವನ್ನು ನಿರ್ಣಯಮಾಡುವ ವಿಷಯದಲ್ಲಿ ಪ್ರಮಾಣವೇ. ಏಕೆಂದರೆ ಆ ಕಪಿಲರ ಅನುಯಾಯಿಗಳು ಗುಣಗಳು, ಗುಣಗಳ ವ್ಯಾಪಾರ– ಇವುಗಳನ್ನು ಪರೀಕ್ಷಿಸಿ ತಿಳಿಸುವದರಲ್ಲಿ ಅಭಿಯುಕ್ತರು (ಬಲ್ಲವರು) ; ಆದ್ದರಿಂದ ಅವರ ಶಾಸ್ತ್ರವನ್ನು ಕೂಡ ಮುಂದೆ ಹೇಳಲಿರುವ ವಿಷಯವನ್ನು ಹೊಗಳುವದಕ್ಕಾಗಿ ಇಲ್ಲಿ ಪರಾಮರ್ಶಿಸಿದೆಯಾದ್ದರಿಂದ, ಯಾವ ವಿರೋಧವೂ ಇಲ್ಲ– ಎಂಬುದು ಭಾಷ್ಯದ ಅಭಿಪ್ರಾಯ. ಹೀಗೆ ಸಾಂಖ್ಯರು ಹೇಳಿದ್ದರಲ್ಲಿರುವ ಗುಣವನ್ನು ಗ್ರಹಿಸುವದರಲ್ಲಿ ಯಾವ ದೋಷವೂ ಇಲ್ಲ, ಪ್ರಯೋಜನವೂ ಇದೆ. ಇದನ್ನರಿತು ನಾವೂ ಈಗ

ನವರ ವಿಚಾರಕ್ರಮದಲ್ಲಿ ಯಾವ ಗುಣಗಳಾದರೂ ಕಂಡುಬಂದರೆ ಅವಶ್ಯವಾಗಿ ಸ್ವೀಕರಿಸಬೇಕು.

ಭಗವದ್ಗೀತೆಯಲ್ಲಿ ಈ ಗುಣಗಳ ವಿಚಾರವು ಮತ್ತೆಮತ್ತೆ ಬರುತ್ತಿರುತ್ತದೆ. ಸಾಂಖ್ಯದರ್ಶನದಂತೆ, ಸತ್ತ್ವ, ರಜಸ್ಸು, ತಮಸ್ಸು– ಎಂಬ ಮೂರುಗುಣಗಳಿಂದಲೇ ಜಗತ್ತೆಲ್ಲವೂ ಆಗಿರುತ್ತದೆ. ಗುಣಗಳು ಎಂಬುದೊಂದು ಪಾರಿಭಾಷಿಕಶಬ್ದ ; ವ್ಯಾಕರಣದಲ್ಲಿ 'ಗುಣಸಂಧಿ' ಎಂದರೆ ಏ ಓ ಮತ್ತು ಅಕಾರ– ಇವಕ್ಕೆ ಸಂಜ್ಞೆ. ತರ್ಕದಲ್ಲಿ ಸಂಖ್ಯೆ, ಪರಿಮಾಣ ಮುಂತಾದ ಪದಾರ್ಥಗಳ ಧರ್ಮಗಳನ್ನು 'ಗುಣಗಳು' ಎಂದು ಕರೆದಿದಾರೆ. ಸಾಂಖ್ಯರು ಜಗತ್ತಿನ ಮೂಲವಾದ ಪ್ರಕೃತಿಯು ಸತ್ತ್ವರಜಸ್ತಮೋಗುಣಗಳಿಂದಾಗಿದೆ ಎಂದು ಹಿಡಿದಿದ್ದಾರೆ. ಸಾಂಖ್ಯರು ಒಪ್ಪಿರುವ ಈ ಗುಣಗಳು ಸೃಷ್ಟಿಯಾಗುವ ಮುಂಚೆ ಸಮಪ್ರಧಾನವಾದ ಅವಸ್ಥೆಯಲ್ಲಿರುತ್ತವೆ ; ಆ ಅವಸ್ಥೆಯ ಪ್ರಕೃತಿಯಲ್ಲಿಯೇ ಜಗತ್ತೆಲ್ಲವೂ ಬೀಜರೂಪವಾಗಿದ್ದುಕೊಂಡು ಸೃಷ್ಟಿಯು ಆರಂಭವಾಗಲು ಮಹತ್ತು, ಅಹಂಕಾರ, ತನ್ಮಾತ್ರೆಗಳು– ಮುಂತಾದ ರೂಪದಿಂದ ವಿಕಾರಗಳಾಗುತ್ತವೆ. ಇವುಗಳಿಗೆ ಹತ್ತು ಇಂದ್ರಿಯಗಳು, ಮನಸ್ಸು, ಶಬ್ದಾದಿವಿಷಯಗಳು– ಇಷ್ಟನ್ನೂ ಸೇರಿಸಿದರೆ ಸಾಂಖ್ಯರು ಹೇಳುವ ಇಪ್ಪತ್ತನಾಲ್ಕು ತತ್ತ್ವಗಳು ಆಗುತ್ತವೆ. (ಗೀ. ೧೩–೫) ಹೀಗೆ ಈ ತತ್ತ್ವಗಳು ಆಧ್ಯಾತ್ಮಿಕವಾಗಿಯೂ ಪರಿಣಮಿಸಿ ಶರೀರೇಂದ್ರಿಯಮನಸ್ಸುಗಳಾಗಿರುವದರಿಂದ ಪುರುಷನು ನಿಜವಾಗಿ ನಿರ್ಲಿಪ್ತನಾದರೂ ಪ್ರಕೃತಿಸ್ಥನಾಗಿ ಪ್ರಕೃತಿಯೇ ತಾನೆಂದು ಅವಿದ್ಯೆಯಿಂದ ತಿಳಿದುಕೊಂಡು, ಪ್ರಕೃತಿಯಿಂದಾಗಿರುವ ಗುಣಗಳನ್ನು –ಎಂದರೆ ಸುಖದುಃಖಮೋಹಾಕಾರದಿಂದ ತೋರಿಕೊಳ್ಳುತ್ತಿರುವ ಇವುಗಳ ಕಾರ್ಯವನ್ನು ತನ್ನದೆಂದೇ ಭಾವಿಸಿಕೊಂಡಿರುವದರಿಂದ ಸಂಸಾರವಾಗಿರುತ್ತದೆ (ಗೀ. ೧೩–೨೧).

'ಹೀಗೆ ಅವಿದ್ಯಾಕಾಮಗಳೇ ಸಂಸಾರಕ್ಕೆ ಕಾರಣವಾಗಿವೆ ಎಂದಾಯಿತಷ್ಟೆ ? ಗುಣಗಳು ಅತ್ಯಂತಚಂಚಲವ್ಯಾಪಾರವುಳ್ಳವಾಗಿರುವದರಿಂದ ಇವುಗಳಲ್ಲಿ ಅಭಿಮಾನವುಳ್ಳ ಜೀವನಿಗೂ ಬಗೆಬಗೆಯ ಸುಖದುಃಖಾದಿಗಳು ಒಂದರಮೇಲೊಂದು ಬಂದು ಹೋಗುತ್ತಿರುತ್ತವೆ. ಆದ್ದರಿಂದ ಈ ಮೂರು ಗುಣಗಳಲ್ಲಿಯೂ ಸಂಗವುಳ್ಳ ಮನುಷ್ಯನು ಬಗೆಬಗೆಯ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ ; ಅವುಗಳ ಫಲವನ್ನು ಅನುಭವಿಸುತ್ತಲೇ ಇರುತ್ತಾನೆ. ಆದ್ದರಿಂದಲೇ

ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ |
ನಿರ್ದ್ವನ್ದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ||

ಗೀ. ೨–೪೫

ಮೂರು ಗುಣಗಳಿಂದಾಗಿರುವ ಸಂಸಾರದಲ್ಲಿ ತೊಳಲುತ್ತಿರುವವರಿಗೆ ಅವರವರ ಕರ್ಮಕ್ಕನುಗುಣವಾಗಿ ಇಂಥಿಂಥ ಫಲವು ಆಗುವದು ಹೇಗೆಂಬುದನ್ನು ವೇದದಲ್ಲಿ ತಿಳಿಸಿರುತ್ತದೆ. ಆದರೆ ನಿಷ್ಕಾಮರಾಗಿ ಪ್ರಯತ್ನಿಸುವ ಮುಮುಕ್ಷುಗಳಿಗೆ ಮೋಕ್ಷವು ಲಭಿಸುವ ಬಗೆಯನ್ನು ಅದೇ ವೇದದ ಜ್ಞಾನಕಾಂಡವು ತಿಳಿಸಿಕೊಡುತ್ತದೆ. ಮುಮುಕ್ಷುಗಳಾದವರು ದ್ವಂದ್ವಗಳನ್ನು ಮೀರಿ ನಿತ್ಯಸತ್ತ್ವಸ್ಥರಾಗಿ ನಿಸ್ತ್ರೈಗುಣ್ಯ ರಾಗಬೇಕು- ಎಂದು ಶ್ರೀಕೃಷ್ಣಭಗವಂತನು ಅರ್ಜುನನಿಗೆ ಉಪದೇಶಿಸಿರುತ್ತಾನೆ.

ನಿಸ್ತ್ರೈಗುಣ್ಯನಾಗುವದು ಹೇಗೆ ? -ಎಂಬ ಪ್ರಶ್ನೆಗೆ ಉತ್ತರವನ್ನು ಕಂಡು ಕೊಳ್ಳಬೇಕಾದರೆ ಮೊದಲು ಗುಣಗಳ ವ್ಯಾಪಾರದ ಕ್ರಮವನ್ನು ತಿಳಿದುಕೊಳ್ಳ ಬೇಕಾಗುವದು.

> ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ |
> ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ||
> ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ |
> ತನ್ನಿಬಧ್ನಾತಿ ಕೌನ್ತೇಯ ಕರ್ಮಸಂಗೇನ ದೇಹಿನಮ್ ||
> ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ |
> ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ||
>
> ಗೀ. ೧೪-೬ರಿಂದ ೮

ಸತ್ತ್ವಗುಣವು ನಿರ್ಮಲವಾಗಿರುತ್ತದೆ. ಅದು ಎಲ್ಲವನ್ನೂ ಬೆಳಗಿತೋರಿ ಸುವ ಸ್ವಭಾವದ್ದು ; ಅದರಲ್ಲಿ ಯಾವ ದುಃಖವೂ ಇರುವದಿಲ್ಲ. ಈ ಗುಣದಿಂದ ತೋರುವ ಸುಖವನ್ನೂ ಜ್ಞಾನವನ್ನೂ ತನ್ನದೆಂದು ಅಭಿಮಾನಮಾಡಿಕೊಳ್ಳುವದ ರಿಂದ ಮನುಷ್ಯನು ಬದ್ಧನಾಗಿರುತ್ತಾನೆ. ಸುಖವು ವಿಷಯ, ಪುರುಷನು ವಿಷಯಿ; ಆದರೂ ಇವೆರಡನ್ನೂ ವಿವೇಚನೆಮಾಡಿಕೊಳ್ಳಲಾರದೆ, ಸತ್ತ್ವಗುಣದ ಧರ್ಮ ವಾದ ಸುಖವು ತನ್ನದೆಂದೂ ಅದರಿಂದಾಗುವ ಜ್ಞಾನವಿಶೇಷವನ್ನು ತನ್ನದೆಂದೂ ಅವಿದ್ಯೆಯಿಂದ ತಿಳಿದುಕೊಂಡು ಬಂಧವನ್ನು ಅನುಭವಿಸುತ್ತಿರುತ್ತಾನೆ. ರಜೋ ಗುಣವೋ, ಎಂದರೆ ಮನುಷ್ಯನಿಗೆ ತನ್ನ ಬಣ್ಣವನ್ನೇ ಬಳಿದುಬಿಡುತ್ತದೆ ; ಆದರಿಂದ ಮನುಷ್ಯನು ಆ ಗುಣದ ಧರ್ಮಗಳಾದ ಆಶೆ, ಕರ್ಮ- ಇವುಗಳು ತನ್ನವೇ ಎಂದುಕೊಂಡು ಮೋಸಹೋಗುತ್ತಿದಾನೆ. ಇನ್ನು ತಮಸ್ಸೋ, ಎಂದರೆ ಅದರ್ಶನಾತ್ಮಕವಾಗಿರತಕ್ಕದು, ಏನೂ ಅರಿಯದಂತೆ ಮಾಡಿಬಿಡತಕ್ಕದ್ದು. ಎಚ್ಚರಿಕೆಯಿಲ್ಲದೆ ಇರುವದು, ಸೋಮಾರಿತನ, ನಿದ್ರೆ- ಇವೆಲ್ಲ ಅದರ ಧರ್ಮ ಗಳು ; ಆದರೂ ವಿವೇಕವಿಲ್ಲದ ಮನುಷ್ಯನು ಅವೂ ತನ್ನ ಧರ್ಮಗಳೇ ಎಂದು ಕೊಳ್ಳುತ್ತಿರುತ್ತಾನೆ. ಈ ಗುಣಗಳು ಮೂರೂ ಒಂದೊಂದೇ ಬರುವದಿಲ್ಲ ; ಮಿಕ್ಕ ಎರಡನ್ನೂ ಹಿಮ್ಮೆಟ್ಟಿಸಿ ಯಾವ ಗುಣವು ಎದ್ದುಕೊಳ್ಳುವದೋ ಆದರ

ಕಾರ್ಯಕ್ಕೆ ವಶನಾಗಿ ಮನುಷ್ಯನು ವರ್ತಿಸುತ್ತಿರುತ್ತಾನೆ. ಊರಲ್ಲೆಲ್ಲ ಅಡ್ಡಾಡುತ್ತಾ ಇನ್ನು ನಿಂತಲ್ಲಿ ನಿಲ್ಲದೆ ಕಾಮಕ್ರೋಧಗಳಿಗೆ ವಶನಾಗಿ ಅದರಂತೆ ಜನರಲ್ಲಿ ಪ್ರವರ್ತಿಸುತ್ತಿದ್ದವನು, ಮನೆಗೆ ಬಂದು ಸ್ನಾನಮಾಡಿ ದೇವರಪೂಜೆ, ಜಪ, ಪಾರಾಯಣ-ಮುಂತಾದವುಗಳ ಅನುಷ್ಠಾನವನ್ನು ಮಾಡಿ, ಮತ್ತೆ ಮಧ್ಯಾಹ್ನದ ಮೇಲೆ ಸಂಗೀತಾದಿವಿನೋದಗಳಲ್ಲಿ ಕಾಲಹರಣಮಾಡುತ್ತಿರುವನೂ ಸಾಯಂಕಾಲದಲ್ಲಿ ಎಲ್ಲವನ್ನೂ ಬಿಟ್ಟು ಮೈಕೈಮುದುರಿಕೊಂಡು ಹಾಸಿಗೆಯಮೇಲೆ ಬಿದ್ದುಕೊಂಡು ಗೊರಕೆಹೊಡೆಯುವದೂ ನಮಗೆಲ್ಲ ಅನುಭವದಲ್ಲಿರುವ ವರ್ತನೆಯಾಗಿದೆ. 'ಈಗ ಸಾತ್ತ್ವಿಕಪ್ರವೃತ್ತಿ', 'ಈಗ ರಾಜಸಪ್ರವೃತ್ತಿ', 'ಈಗ ತಾಮಸಪ್ರವೃತ್ತಿ' ಎಂದುಕೊಂಡಿರುವಾಗಲೂ ಪ್ರಕೃತಿಗುಣಗಳು- ತಮ್ಮ ತಮ್ಮ ಕೆಲಸವನ್ನು ಮಾಡುತ್ತಲೇ ಇರುತ್ತವೆ. ಆದ್ದರಿಂದಲೇ ಒಂದು ಘಂಟೆಯೊಳಗಾಗಿ ಅದೇ ಮನುಷ್ಯನು ಈ ಮೂರು ಗುಣಗಳ ಮಹಿಮೆಗೂ ಒಳಗಾಗಿ ನಡೆದುಕೊಳ್ಳುತ್ತಿರುವದು ಕಂಡುಬರುತ್ತಿದೆ.

ಈಗ ನಾವು ನಿಸ್ತ್ರೈಗುಣ್ಯರಾಗುವದಕ್ಕೆ ಹೇಗೆ ಪ್ರಯತ್ನಿಸಬೇಕೆಂಬ ಪ್ರಶ್ನೆಗೆ ಉತ್ತರವು ಸಿಕ್ಕುತ್ತದೆ. ತಮೋಗುಣವು ಹೆಚ್ಚಾಗಿರುವಾಗ ಪ್ರಮಾದ, ನಿದ್ರೆ, ಆಲಸ್ಯ-ಇವುಗಳ ಪ್ರಭಾವವೇ ನಮ್ಮಮೇಲೆ ಹೆಚ್ಚಾಗಿರುತ್ತದೆ. ಅವುಗಳಿಗೆ ಹೆಚ್ಚುಹೆಚ್ಚಾಗಿ ಅವಕಾಶವನ್ನು ಕೊಡುವ ಸೋಮಾರಿಯು ಎಂದೆಂದಿಗೂ ತಾಮಸನಾಗಿಬಿಡುತ್ತಾನೆ. ತಾಮಸಾಹಾರವನ್ನು ಸೇವಿಸುತ್ತಾ, ತಾಮಸ ಕರ್ಮವನ್ನು ಮಾಡುತ್ತಾ, ತಾಮಸಜನರ ಸ್ನೇಹವನ್ನೇ ಮಾಡಿಕೊಂಡು, ತಮಸ್ಸನ್ನು ಹೆಚ್ಚಿಸುವ ವಿಚಾರಗಳನ್ನೇ ಮನಸ್ಸಿಗೆ ಹತ್ತಿಸಿಕೊಳ್ಳುತ್ತಿರುವವನು ತಾಮಸನೇ ಆಗಿಬಿಡುತ್ತಾನೆ. ಆದರೆ ಇದನ್ನು ರಜಸ್ಸಿಗೆ ಅನುಗುಣವಾದ ಆಹಾರ, ಕರ್ಮ, ವಿಚಾರ-ಇವುಗಳನ್ನವಲಂಬಿಸಿ ರಾಜಸರ ಸ್ನೇಹದಿಂದ ಅವುಗಳ ಸಂಗವನ್ನು ಉದ್ದೀಪನಮಾಡಿಕೊಂಡವನು ರಾಜಸನಾಗಿಬಿಡುತ್ತಾನೆ. ಅವನಿಗೆ ರಾಜಸಸುಖ, ಕಾಮಕ್ರೋಧಾದಿಪ್ರಧಾನವಾದ ಕರ್ಮ-ಇವುಗಳೇ ಒಗ್ಗಿಬಿಡುತ್ತವೆ. ಇದರಿಂದಾಗುವ ಒಂದು ಲಾಭವೇನೆಂದರೆ ತಮೋಗುಣಕ್ಕೆ ಅವಕಾಶವಿಲ್ಲದೆ ಹೋಗುವದು. ಈಗಿನ ನಮ್ಮ ಕಾಲದಲ್ಲಿ ಎಲ್ಲೆಲ್ಲಿಯೂ ಜನರು ಚಟುವಟಿಕೆಯಿಂದಲೇ ಕಾಲವನ್ನು ಕಳೆಯುತ್ತಿದಾರೆ ; ಅವರಿಗೆ ನಿದ್ರಾದಿಗಳನ್ನು ಸೇವಿಸುವದಕ್ಕೂ ಹೆಚ್ಚು ಕಾಲಾವಕಾಶವಿರುವದಿಲ್ಲ. ಆದರೆ ಸತ್ತ್ವಗುಣಕ್ಕೆ ಅನುಗುಣವಾದ ಆಹಾರ, ಸಾತ್ತ್ವಿಕಕರ್ಮಗಳು, ಸಾತ್ತ್ವಿಕವಿಚಾರಗಳು- ಇವುಗಳನ್ನು ಹೆಚ್ಚಿಸಿಕೊಳ್ಳುತ್ತಾ ಸಾತ್ತ್ವಿಕರ ಸಹವಾಸವನ್ನೇ ಮಾಡುವವರು ಈ ರಜೋಗುಣವನ್ನೂ ಮೀರುತ್ತಾರೆ ಸುಮ್ಮನೆ ತಲೆಹುಳುಕುನಾಯಿಯಂತೆ ಸುತ್ತಾಡುವದು ಅವರಿಗೆ ಪ್ರಿಯವಾಗುವದಿಲ್ಲ; ಏಕಾಂತದಲ್ಲಿ ಕುಳಿತು ಮನಸ್ಸನ್ನು

ಶಾಂತಿಯಿಂದ ಧ್ಯಾನಾದಿಗಳಿಗೆ ಒಲಿಸುವದು, ಸಾತ್ತ್ವಿಕವಿಷಯಗಳನ್ನೇ ಚಿಂತಿಸುವದು–ಇವೇ ಅವರಿಗೆ ಇಷ್ಟವಾಗಿಬಿಡುತ್ತವೆ.

ಹೀಗೆ ತಮಸ್ಸನ್ನು ರಜಸ್ಸಿನಿಂದಲೂ ರಜಸ್ಸನ್ನು ಸತ್ತ್ವದಿಂದಲೂ ಗೆದ್ದುಕೊಳ್ಳಬಹುದಾದರೂ ಪ್ರಕೃತಿಯು ನಮ್ಮ ಅನವಧಾನತೆಯ ಲಾಭವನ್ನು ತೆಗೆದುಕೊಂಡು ನಮ್ಮನ್ನು ಕೆಳಕ್ಕೆ ಉರುಳಿಸುವ ಅಪಾಯವಿರುತ್ತದೆ. ಹೇಗೆಂದರೆ ರಜೋಗುಣಪ್ರಧಾನನಾದವನೂ ಆಯಾಸದಿಂದ ನಿದ್ರಾಪರವಶನಾಗಿ ಬಿದ್ದುಕೊಳ್ಳಬಹುದು ; ಸತ್ತ್ವಗುಣಪ್ರಧಾನನಾದವನೂ ಎಚ್ಚರಿಕೆಯಿಂದಿರದಿದ್ದರೆ ಮತ್ತೆ ಕಾಮಾದಿಗಳಿಗೆ ವಶನಾಗಿ ಚಂಚಲನಾಗಿಬಿಡುವದಕ್ಕೆ ಅವಕಾಶವಿದೆ. ರಜಸ್ಸು ತಮಸ್ಸಿನ ಮಿಶ್ರಣದಿಂದ ಕೂಡಿಯೂ ಸತ್ತ್ವವು ರಜಸ್ತಮೋಗುಣಗಳ ಸಂಪರ್ಕದಿಂದ ಕೂಡಿಕೊಂಡು ಇರುವವರೆಗೆ ಯಾವನೂ ಈ ಮೂರು ಗುಣಗಳನ್ನೂ ಮೀರಿ ಮೇಲಿನ ಸ್ಥಿತಿಗೆ ಏರಲಾರನು. ಆದ್ದರಿಂದ ಸತ್ತ್ವಗುಣವು ಆಳವಟ್ಟಮೇಲೂ ರಜಸ್ತಮಸ್ಸುಗಳ ಹಾವಳಿಯನ್ನು ತಪ್ಪಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಲೇ ಇರಬೇಕು ; 'ನಿತ್ಯಸತ್ತ್ವಸ್ಥನಾಗಿರು'– ಎಂದು ಭಗವಂತನು ಉಪದೇಶಿಸುವವಕ್ಕೆ ಇದೇ ಅಭಿಪ್ರಾಯ.

ಶುದ್ಧಸತ್ತ್ವದಲ್ಲಿಯೇ ನಿಲ್ಲುವದಕ್ಕೆ ಮಾಡಬೇಕಾದ ಪ್ರಯತ್ನವನ್ನು ಭಗವದ್ಗೀತೆಯ ಹದಿನಾಲ್ಕನೆಯ ಅಧ್ಯಾಯದಲ್ಲಿ ತಿಳಿಸಿಕೊಟ್ಟಿರುತ್ತದೆ. 'ತ್ರಿಗುಣಾತೀತ'ನು–ಎಂದರೆ ಮೂರು ಗುಣಗಳಿಗೂ ವಶನಾಗದ ಮಹಾತ್ಮನು–ಹೇಗಿರುತ್ತಾನೆಂಬುದನ್ನು ಅಲ್ಲಿ ವಿಸ್ತಾರವಾಗಿ ಹೇಳಿರುತ್ತದೆ. ಸಾಧಕರಾದವರು ಪ್ರಯತ್ನಪೂರ್ವಕವಾಗಿ ಆ ಸ್ಥಿತಿಯನ್ನು ಏರುವದಕ್ಕೆ ಪ್ರಯತ್ನಮಾಡುತ್ತಿರಬೇಕು. ಮುಖ್ಯವಾಗಿ ತಾವು ಮಾಡುವ ಕರ್ಮವನ್ನೆಲ್ಲ ಪರಮೇಶ್ವರನಿಗೆ ಅರ್ಪಣೆಮಾಡುವದೆಂಬ ಭಕ್ತಿಯೋಗವನ್ನು ಅವಲಂಬಿಸಬೇಕು, ಹಾಗಾದರೆ ಆ ಭಗವಂತನ ಅನುಗ್ರಹದಿಂದ ಈ ಗುಣಗಳ ಉಪಟಳಕ್ಕೆ ವಶನಾಗದೆ ಇರುವ ಉನ್ನತಸ್ಥಿತಿಯನ್ನೇರಬಹುದು.

---

## ೨೯. ಈಶ್ವರಾಭ್ಯರ್ಚನ

(15—8—’2)

'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ' (ಗೀ. ೧೮–೪೬) ಎಂಬ ಶ್ಲೋಕವು ಆತ್ಮಜ್ಞಾನವನ್ನು ಅರಿಯದೆ ಅವಿದ್ಯಾವ್ಯವಹಾರದಲ್ಲಿರುವಾಗಲೇ

ಪುಣ್ಯವಶದಿಂದ ಮುಮುಕ್ಷುಗಳಾಗಿರುವವರಿಗಾಗಿ ಹೇಳಿದ್ದು. ವಿವೇಕದೃಷ್ಟಿಯಿಂದ ನೋಡುವಾಗ ತನಗೆರಡನೆಯದಿಲ್ಲದ ಆತ್ಮತತ್ತ್ವವೊಂದೇ ಪರಮಾರ್ಥವು. ಅದೇ ನಮ್ಮ ನಿಜವಾದ ಸ್ವರೂಪವು. ಆ ಸ್ವರೂಪಕ್ಕಿಂತ ಬೇರೆಯಾಗಿ ಜೀವರುಗಳಾಗಲಿ ಜಗತ್ತಾಗಲಿ ಇರುವದೇ ಇಲ್ಲ. ಹೀಗೆಂದು ತಿಳಿದವರೇ ತತ್ತ್ವಜ್ಞಾನಿಗಳು ; ಮಿಕ್ಕವರೆಲ್ಲರೂ ಅವಿದ್ಯಾರಾತ್ರಿಯಲ್ಲಿ ಕನವರಿಸುತ್ತಿರುತ್ತಾರೆ. ಲೋಕದಲ್ಲಿ ನಿದ್ರಾಸಂಚಾರ (Somnambulism) ಎಂಬ ಒಂದು ಬಗೆಯ ಕೃತಕನಿದ್ರಾರೋಗವುಂಟು. ಆ ಸ್ಥಿತಿಯಲ್ಲಿರುವವರು ಎಲ್ಲಾ ವ್ಯವಹಾರಗಳನ್ನೂ ಎಚ್ಚತ್ತಿರುವವರಂತೆಯೇ ಮಾಡುತ್ತಿರುತ್ತಾರೆ : ಆದರೂ ಅವರಿಗೆ ನಿಜವಾಗಿ ಎಚ್ಚತ್ತಮೇಲೆ ಆ ವ್ಯವಹಾರಗಳ ಅರಿವೇ ಉಳಿದಿರುವದಿಲ್ಲ. ಇದರಂತೆ ಅಜ್ಞರು 'ನಾನು ಕರ್ತೃಭೋಕ್ತೃ, ವಸ್ತುಗಳ ಜ್ಞಾನವನ್ನು ಸಂಪಾದಿಸಿಕೊಂಡು ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳಿಗಾಗಿ ಪ್ರಯತ್ನಿಸುತ್ತಿರುತ್ತೇನೆ ; ಇಂಥ ಕರ್ಮವನ್ನು ಮಾಡಿ ಇಂಥ ಫಲವನ್ನು ಪಡೆಯುವೆನು. ನನಗೆ ಶರೀರವಿದೆ, ಜನನಮರಣಗಳುಂಟು, ಸುಖದುಃಖಗಳುಂಟು'– ಎಂದುಮುಂತಾಗಿ ವ್ಯವಹರಿಸುವದೂ ಒಂದು ಬಗೆಯ ದೀರ್ಘವಾದ ಸ್ವಪ್ನನಿದ್ರೆ. ಅಜ್ಞರಿಗೆ ನಿಜವಾಗಿರುವ ಆತ್ಮತತ್ತ್ವದ ಅರಿವು ಇರುವದಿಲ್ಲ ; ಅದರ ವಿಷಯಕ್ಕೆ ಅವರು ನಿದ್ರೆಯನ್ನು ಅನುಭವಿಸುತ್ತಿರುವರು. ಆದರೆ ಪರಮಾರ್ಥವನ್ನು ಅರಿತಿರುವ ಜ್ಞಾನಿಗಳಿಗೆ ಜೀವರು ಮಾಡುತ್ತಿರುವ ಈ ಪ್ರಪಂಚವ್ಯವಹಾರವೆಲ್ಲವೂ ಸ್ವಪ್ನವ್ಯವಹಾರದಂತೆ ಬರಿಯ ಹುಸಿತೋರಿಕೆ ಎಂಬ ನಿಶ್ಚಯವು ಇದ್ದುಬಿಟ್ಟಿರುತ್ತದೆ. ಈ ಅಭಿಪ್ರಾಯವನ್ನು ಗೀತೆಯಲ್ಲಿ :

> ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ |
> ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ||
>
> ಗೀ. ೨–೬೯

ಎಂಬ ಶ್ಲೋಕದಿಂದ ತಿಳಿಸಿರುತ್ತದೆ

ಯಾವ ಜ್ಞಾನಿಗಳಿಗೆ ಈ ಅನಾದಿಮಾಯಾನಿದ್ರೆಯು ಹೋಗಿಬಿಟ್ಟಿರುತ್ತದೆಯೋ, ಅಂಥ ಮಹಾತ್ಮರಿಗೆ ಜನ್ಮಾದಿಗಳಿಲ್ಲದ, ಯಾವ ಅಜ್ಞಾನದ ಸೋಂಕೂ ಇಲ್ಲದ, ಗ್ರಾಹ್ಯಗ್ರಾಹಕಭೇದಬುದ್ಧಿರೂಪವಾದ ಯಾವ ಭ್ರಾಂತಿವ್ಯವಹಾರವೂ ಸೋಂಕದ ತತ್ತ್ವವೇ ತಮ್ಮ ಆತ್ಮನೆಂಬ ಅರಿವು ಉಂಟಾಗಿರುತ್ತದೆ. ಆದರೆ ಅಜ್ಞಾನಿಗಳಿಗೆ ದ್ವೈತವ್ಯವಹಾರವೆಂಬ ಕನಸೇ ಎಚ್ಚರವಾಗಿರುತ್ತದೆ. ಯಾವದೋ ಪುಣ್ಯವಿಶೇಷದಿಂದ ಲಭಿಸಿದ ಸತ್ಸಂಗದಿಂದ ಅವರು ಅಧ್ಯಾತ್ಮಸಾಧನವನ್ನು ಮಾಡಿದ ಬಳಿಕ ಚಿತ್ತಶುದ್ಧಿಯನ್ನು ಹೊಂದಿ ನಿದ್ರೆಯಿಂದ ತಿಳಿದು ಎಚ್ಚರುವವರಂತೆ ಈ ಪರಮಾರ್ಥತತ್ತ್ವವನ್ನು ಕಂಡುಕೊಳ್ಳಬೇಕಾಗಿರುತ್ತದೆ. ಇದನ್ನೇ ಶ್ರೀಗೌಡಪಾದಾಚಾರ್ಯರವರು ಹೀಗೆಂದು ತಿಳಿಸಿಕೊಟ್ಟಿರುತ್ತಾರೆ :

ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ |
ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ||

ಗೌ. ಕಾ. ೧-೧೬

ಅವಿದ್ಯೆಯಿಂದಾಗಿರುವ ಅನಾದಿಯಾಗಿರುವ ನಿದ್ರೆಯಲ್ಲಿ ಬಗೆಬಗೆಯ ಕನಸುಗಾಣುತ್ತಿರುವ ಜೀವನು- ನಾನು ಜೀವನು, ಸಂಸಾರಿಯು ಎಂದು ಕನವರಿಸಿಕೊಳ್ಳುವಾತನು-ಯಾವಾಗ ಮಹಾಕಾರುಣಿಕನಾದ ಆಚಾರ್ಯನಿಂದ ಉಪದಿಷ್ಟನಾಗಿ ತತ್ತ್ವವನ್ನರಿತು ಯಾವಾಗ ಎಚ್ಚರುತ್ತಾನೋ ಆಗ 'ನಾನು ಅದ್ವಿತೀಯಾತ್ಮನು, ನನಗೆ ಜನ್ಮ, ಅಸ್ತಿತ್ವ, ವೃದ್ಧಿ, ಪರಿಣಾಮ, ಅಪಕ್ಷಯ, ನಾಶ- ಎಂಬ ಆರು ವಿಕಾರಗಳೂ ಎಂದಿಗೂ ಇರಲೇ ಇಲ್ಲ, ನನಗೆ ಅಜ್ಞಾನವೂ ಯಾವಾಗಲೂ ಇರಲಿಲ್ಲ; ನನಗೆ ದ್ವಿತೀಯವಸ್ತುವನ್ನು ಕಾಣುವದೆಂಬ ಸ್ವಪ್ನವೂ ಯಾವಾಗಲೂ ಇರಲಿಲ್ಲ'- ಎಂದು ಅರಿತುಕೊಳ್ಳುತ್ತಾನೆ- ಎಂಬುದು ಕಾರಿಕೆಯ ಅಭಿಪ್ರಾಯ.

ಹೀಗೆ ಜ್ಞಾನರೂಪವಾದ ಪ್ರಬೋಧವು ಆಗುವವರೆಗೂ ಮಾಡುತ್ತಿರುವ ವ್ಯವಹಾರಗಳಲ್ಲಿ ತಾಮಸ, ರಾಜಸ, ಸಾತ್ತ್ವಿಕ- ಎಂಬ ಮೂರು ಪ್ರಭೇದಗಳಿರುವವು. ವೃತ್ತಕ್ಕೆ ನಿಜವಾದ ಕೇಂದ್ರವೊಂದು, ಕಲ್ಪಿಸಿಕೊಂಡ ಕೇಂದ್ರವೊಂದು- ಎಂದು ಎರಡು ಕೇಂದ್ರಗಳಿರಬಹುದಷ್ಟೆ. ಅಜ್ಞರು ನಾನು ಎಂಬ ಹುಸಿಕೇಂದ್ರವನ್ನೇ ತಮ್ಮ ನಿಜವಾದ ಆತ್ಮನೆಂದು ಭಾವಿಸಿಕೊಳ್ಳುತ್ತಿರುವರು. ನಿಜವಾದ ಕೇಂದ್ರವಾದ ಪರಮಾತ್ಮನು ಅವರಿಗೆ ಸಿಕ್ಕಿರುವದಿಲ್ಲ. ನೀರಿನಿಂದ ಹೊರಕ್ಕೆ ಹಾಕಿದ ಮೀನಿನಂತೆಯೂ ಗಾಳಿಯಿಲ್ಲದೆ ಉಸಿರುಕಟ್ಟಿದ ಪ್ರಾಣಿಗಳಂತೆಯೂ ಅವರು ಸಂಕಟಪಡುತ್ತಿರುವರು ; ಸರಿಯಾದ ವಸ್ತುಗಳನ್ನು ಕಾಣದ ಕುರುಡರಂತೆ ನಿಜವನ್ನು ಹುಡುಕುವ ಮಾರ್ಗವು ಗೊತ್ತಿಲ್ಲದೆ ಅಲ್ಲಿ, ಇಲ್ಲಿ- ತಡಕಾಡುತ್ತಿರುವರು. ತಾವು ಕರ್ತೃಭೋಕ್ತೃಗಳೆಂದು ತಪ್ಪಾಗಿ ಭಾವಿಸಿಕೊಂಡು ಯಾವಯಾವದೋ ಮಾರ್ಗವನ್ನು ಅನುಸರಿಸುತ್ತಾ ತಟ್ಟಾಡುತ್ತಿರುವರು. ಇಂಥವರಿಗೆ ಶಾಸ್ತ್ರವೇ ಸಾಧನಕ್ರಮವನ್ನು ತಿಳಿಸಿಕೊಡಬೇಕಾಗಿದೆ. ಶಾಸ್ತ್ರವನ್ನು ಅನುಸರಿಸದೆ ಇರುವವರೆಗೂ ಅವರು ಮಾಡುವ ಪ್ರಯತ್ನಗಳೆಲ್ಲ ವ್ಯರ್ಥವಾಗುತ್ತಿರುವವು. 'ವ್ಯರ್ಥವಾಯಿತೇ ಜನುಮ ವ್ಯರ್ಥವಾಯಿತೇ | ಕುರುಡ ಸರಣಿಯನ್ನು ಹೊಸೆಯೆ ಕರುವು ಮೇದ ತೆರನಂತೆ' ಎಂದು ದಾಸರು ಹಾಡಿರುವಂತೆ ನಿರುಪಯೋಗವಾದ ಪರಸೇವಾಕಾರ್ಯದಲ್ಲಿಯೇ ಕಾಲವನ್ನು ಕಳೆಯುತ್ತಿರುವ ಅವರ ಜನ್ಮವೆಲ್ಲ ವ್ಯರ್ಥಪ್ರಯಾಸರೂಪವಾಗಿರುತ್ತದೆ.

ಆದ್ದರಿಂದ ಸಂಸಾರದಲ್ಲಿದ್ದು ಮುಮುಕ್ಷುಗಳಾಗಿರುವವರ ಉಪಯೋಗಕ್ಕಾಗಿ ಶಾಸ್ತ್ರವಲ್ಲಿ ಒಂದು ಉಪದೇಶವನ್ನು ಮಾಡಿರುತ್ತದೆ. ಜ್ಞಾನಿಗಳು ಯಾವ

ತತ್ತ್ವವನ್ನು ಅರಿತಿರುವದರಿಂದ ನಿತ್ಯಮುಕ್ತರಾಗಿರುತ್ತಾರೋ, ಅದನ್ನೇ ಪೂಜಿಸಿ ನೀವು ಕೃತಾರ್ಥರಾಗಬೇಕಾಗಿದೆ. ನಿಮ್ಮ ಕರ್ಮಗಳಿಗೆಲ್ಲ ಒಂದು ಗುರಿಯಿರ ಬೇಕು. ಹಾಲುಕರೆಯುವವನು ಹಾಲಿನ ಧಾರೆಯು ಎತ್ತ ಕಡೆಗೆ ಇಳಿದುಬರುವ ದೆಂಬುದನ್ನು ಲಕ್ಷ್ಯದಲ್ಲಿಟ್ಟು ಅತ್ತಕಡೆಗೇ ಸರಿಯಾಗಿ ಪಾತ್ರೆಯನ್ನು ಹಿಡಿದು ಕೊಳ್ಳದಿದ್ದರೆ ಹಾಲೆಲ್ಲ ಚೆಲ್ಲಿಹೋಗಿ ಅವನ ಪ್ರಯತ್ನವು ವ್ಯರ್ಥವಾಗಿಬಿಡುವದ ಲ್ಲವೆ ? ಹಾಗೆಯೇ ತಾನು ಮಾಡುವ ಕರ್ಮಗಳಿಗೆ ಫಲವು ಎಲ್ಲಿಂದ ಬರುವದೋ ಅದನ್ನು ಲಕ್ಷ್ಯವಿಡುವದು ಕರ್ತೃವಾದವನಿಗೆ ಅತ್ಯವಶ್ಯ. ಈಶ್ವರನಿಂದಲೇ ಎಲ್ಲಾ ಕರ್ಮಗಳಿಗೂ ಫಲವು ದೊರೆಯುತ್ತದೆ ; ನಾವು ಯಾವ ಉದ್ದೇಶದಿಂದ ಕರ್ಮವನ್ನು ಮಾಡುತ್ತೇವೋ ಅದಕ್ಕೆ ತಕ್ಕಂತೆ ಈಶ್ವರನು ಫಲವನ್ನು ಕೊಡು ತ್ತಾನೆ.

ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಮ್ |
ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ || ಗೀ. ೪-೧೧.

'ನನ್ನಲ್ಲಿಗೆ ಯಾರು ಹೇಗೆ ಶರಣುಬರುವರೋ ಅವರನ್ನು ಹಾಗೆಯೇ ಅನು ಗ್ರಹಿಸುವೆನು' ಎಂದು ಭಗವಂತನು ಹೇಳಿರುತ್ತಾನೆ. ಕೆಲವರು ಆರ್ತರಾಗಿದ್ದು ನಮ್ಮನ್ನು ಈ ಕಷ್ಟದಿಂದ ಪಾರುಮಾಡೆಂದು ಭಗವಂತನನ್ನು ಭಜಿಸುತ್ತಾರೆ ; ಕೆಲವರು ತಮಗೆ ಇಷ್ಟವಾದ ಇಂಥಿಂಥ ವಸ್ತುಗಳನ್ನು ಕೊಡೆಂದು ಆತನನ್ನು ಪ್ರಾರ್ಥಿಸಿಕೊಳ್ಳುತ್ತಾರೆ; ಮತ್ತೆ ಕೆಲವರು ಜ್ಞಾನವನ್ನು ಕೊಡೆಂದು ಕೇಳುತ್ತಾರೆ; ಆದರೆ ಜ್ಞಾನಿಗಳಾದವರು ಮತ್ತೆ ಏನನ್ನೂ ಬಯಸದೆ ಪರಮಾತ್ಮನನ್ನೇ ಭಜಿಸು ತ್ತಿರುತ್ತಾರೆ. ಅವರವರ ಕೋರಿಕೆಯನ್ನು ನೆರವೇರಿಸುವದಕ್ಕೆ ಭಗವಂತನು ಸಿದ್ಧನಾಗಿರುತ್ತಾನೆ. ಜನರು ಹೇಗೂ ಭಗವಂತನಿಂದಲೇ ತಮ್ಮತಮ್ಮ ಕರ್ಮ ಗಳಿಗೆ ಫಲವನ್ನು ಪಡೆದುಕೊಳ್ಳಬೇಕಾಗಿರುತ್ತದೆಯಷ್ಟೆ ? ಇದನ್ನು ತಿಳಿದು ಮುಮುಕ್ಷುಗಳಾದವರು ನಿಷ್ಕಾಮಬುದ್ಧಿಯಿಂದ ಪರಮೇಶ್ವರನ ಪೂಜೆಯೆಂದು ಕರ್ಮವನ್ನು ಮಾಡುವದನ್ನು ಅಭ್ಯಾಸಮಾಡಬೇಕು.

ಈ ಸಂಸಾರದಲ್ಲಿ ಪರಮೇಶ್ವರನ ಸೇವೆಯೊಂದೇ ಸಾರವು. ಪರಮೇಶ್ವರ ನಿಂದ ಸೃಷ್ಟವಾದ ಈ ಪ್ರಪಂಚದಲ್ಲಿ ಆತನನ್ನು ಬಿಟ್ಟಿರುವದು ಸಾಧ್ಯವೂ ಅಲ್ಲ. ಮುಮುಕ್ಷುಗಳಾದವರು ಪ್ರಪಂಚದಲ್ಲಿದ್ದು ನಿಜವಾದ ಜೀವನದಲ್ಲಿ ಹೊಡೆದಾಡ ಲಾರದೆ ಹೇಡಿತನದಿಂದ ತಮ್ಮ ಮುಕ್ತಿಯನ್ನು ಗಳಿಸಿಕೊಳ್ಳುವದಕ್ಕೆ ಪ್ರಯತ್ನಿಸು ತ್ತಾರೆ-ಎಂದು ಕೆಲವರು ಆಕ್ಷೇಪಿಸುವದುಂಟು. ಆದರೆ ಅವರಿಗೆ ನಿಜವು ತಿಳಿ ಯದು. ನಾವುಗಳು ಕಲ್ಪಿಸಿಕೊಂಡಿರುವ ಪ್ರಪಂಚವೊಂದು, ನಿಜವಾಗಿರುವ ಪ್ರಪಂಚವೊಂದು-ಹೀಗೆ ಎರಡು ಪ್ರಪಂಚಗಳಿವೆ. ಕಲ್ಪಿತಪ್ರಪಂಚದಲ್ಲಿ ದುಃಖವೆ

ತುಂಬಿರುತ್ತದೆ ; ಆದರಲ್ಲಿ ಅಜ್ಞರು ತಾವು ಮಾಡುವ ಕರ್ಮಗಳಿಂದ ಅನಿತ್ಯಸುಖವನ್ನು ಸಂಪಾದಿಸಿಕೊಳ್ಳುತ್ತಿರಬಹುದು ; ಆದರೆ ಈ ಪ್ರಪಂಚದ ಸಾರವೆಲ್ಲ ಅಷ್ಟೇ ಎಂದು ತಿಳಿಯುವದು ತಪ್ಪು. ಇಂಗ್ಲೆಂಡಿಗೆ ಹೊಸದಾಗಿ ಟೀಸೊಪ್ಪು ಬಂದಾಗ ಒಂದು ಕುಟುಂಬದವರಿಗೆ ಅದನ್ನು ಹೇಗೆ ಬಳಸಿಕೊಳ್ಳಬೇಕೆಂಬುದು ತಿಳಿಯದೆ, ನೀರಿನಲ್ಲಿ ಅದನ್ನು ಬೇಯಿಸಿ ಕಷಾಯವನ್ನು ಬಸಿದು, ಉಳಿದ ಸೊಪ್ಪಿನಲ್ಲಿ ಪಲ್ಯವನ್ನು ಮಾಡಿಕೊಂಡು ತಿನ್ನುವದಕ್ಕೆ ಹೋದರಂತೆ ! ಇಲ್ಲಿ ಕೆಲವರು ಸಾರವನ್ನು ಬಿಟ್ಟು ಅಸಾರವಾದ ಅಂಶವನ್ನೇ ಹಿಡಿದುಕೊಂಡರು ; ಅಲ್ಲವೆ ? ಇದರಂತೆ ಅವಿವೇಕಿಗಳು ಈ ಸಂಸಾರದಲ್ಲಿ ಕೆಲಕೆಲವು ಕರ್ಮಗಳನ್ನು ಮಾಡಿ ಕೆಲಕೆಲವು ಇಂದ್ರಿಯಭೋಗಗಳನ್ನು ಸಂಪಾದಿಸಿಕೊಳ್ಳುವದೇ ಪುರುಷಾರ್ಥವೆಂದು ತಿಳಿದುಕೊಂಡು ವ್ಯರ್ಥವಾಗಿ ಕಷ್ಟಪಡುತ್ತಿರುವರು. ನಿಜವಾಗಿ 'ಈ ಅಸಾರವಾದ ಸಂಸಾರದಲ್ಲಿ ಈಶ್ವರನ ಪಾದಕಮಲವನ್ನು ಸೇವಿಸುವದೇ ಸಾರವು. ಇದೇ ಸತ್ಯವು, ಪರಲೋಕಕ್ಕೆ ಹಿತವು, ಇದೇ ಸಾರವು, ಇದೇ ಉಪನಿಷತ್ತುಗಳ ಹೃದಯವು' ಎಂದು ವ್ಯಾಸರು ಸಾರಿರುತ್ತಾರೆ. ಜನರು ಹೊರಗೆ ನೋಡುತ್ತಾ ಅಲ್ಲಿ ತಮಗೆ ಏನೋ ಸುಖವು ಸಿಕ್ಕುವದೆಂದು ಭಾವಿಸಿಕೊಂಡಿರುವದರಿಂದ ಮರ್ತ್ಯರೆನಿಸಿಕೊಂಡಿರುತ್ತಾರೆ ; ವಿವೇಕಿಗಳಾದವರು ಮನಸ್ಸನ್ನು ಒಳಗಡೆಗೆ ತಿರುಗಿಸಿಕೊಂಡು ತಮ್ಮ ಅಂತರಾತ್ಮನನ್ನು ಕಂಡುಕೊಂಡು ಅಮೃತರಾಗುತ್ತಾರೆ–ಎಂದು ಉಪನಿಷತ್ತು ಹೇಳುತ್ತಿದೆ.

ಪರಮಾತ್ಮನೊಬ್ಬನು ಇದಾನೆ ಎಂಬುದು ನಮಗೆ ಹೇಗೆ ಗೊತ್ತು ?–ಎಂದು ಕೆಲವರು ಕೇಳುವದುಂಟು. ಇದಕ್ಕೆ ಉಪನಿಷತ್ತಿನಲ್ಲಿ ಕೊಟ್ಟಿರುವ ಉತ್ತರವೇನೆಂದರೆ :

ಅಸನ್ನೇವ ಸ ಭವತಿ । ಅಸದ್ ಬ್ರಹ್ಮೇತಿ ವೇದ ಚೇತ್ |
ಅಸ್ತಿ ಬ್ರಹ್ಮೇತಿ ಚೇದ್ವೇದ | ಸಂತಮೇನಂ ತತೋ ವಿದುಃ ||

'ಬ್ರಹ್ಮ ಅಥವಾ ಪರಮಾತ್ಮ–ಎಂಬ ತತ್ತ್ವವು ನಮ್ಮೆಲ್ಲರ ಆತ್ಮನೇ ಆಗಿರುತ್ತದೆ. ಆದ್ದರಿಂದ ಯಾವನು ಬ್ರಹ್ಮವೆಂಬುದೇ ಇಲ್ಲವೆನ್ನುವನೋ ಅವನು ತನ್ನ ಸ್ವರೂಪವೇ ಇಲ್ಲವೆಂದವನಾಗುವನು; ಅಂಥವನು ಅಸನ್ಮಾರ್ಗವನ್ನು ಅನುಸರಿಸಿ ಪುರುಷಾರ್ಥಪ್ರಾಪ್ತಿಯ ಮಾರ್ಗವನ್ನು ಬಿಟ್ಟು ತಪ್ಪುಹಾದಿಯಲ್ಲಿ ದುಃಖವನ್ನು ಪಡೆದುಕೊಳ್ಳುತ್ತಾನೆ'. ಹೀಗೆ ಈ ಜಗತ್ತೆಲ್ಲವನ್ನೂ ಈಶ್ವರಮಯವಾಗಿರುತ್ತದೆಯೆಂದೂ ಇವೆಲ್ಲಕ್ಕೂ ಆತನೇ ಆತ್ಮನೆಂದೂ ಯಾರು ತಿಳಿದುಕೊಳ್ಳುತ್ತಾರೋ, ಅವರು ಆ ತಿಳಿವಳಿಕೆಯಿಂದ ಪ್ರಪಂಚದ ಸಾರತಮವಾದ ಸ್ವರೂಪವನ್ನು ತಿಳಿದು ಆನಂದಿಸುತ್ತಾರೆ.

ಈ ದಿನ ಉಪಾಕರ್ಮ. ಉಪಾಕರ್ಮವೆಂದರೆ ವೇದದ ಹೊಸಭಾಗವನ್ನು ಅಧ್ಯಯನಮಾಡುವದಕ್ಕೆ ಮೊದಲುಮಾಡುವದೆಂದರ್ಥ. ವೇದವನ್ನು ಅಧ್ಯಯನಮಾಡುತ್ತಲೇ ಇದ್ದು 'ಉತ್ಸರ್ಜನದ' ದಿನ ಅದನ್ನು ಮುಗಿಸಿದ ಕರ್ಮವನ್ನು ಮಾಡುವದು ಬ್ರಾಹ್ಮಣರ ಪದ್ಧತಿ. ಯಜುರ್ವೇದಿಗಳು ಒಂದೊಂದು ಕಾಂಡವನ್ನು ಮುಗಿಸುತ್ತಲೂ ಆಯಾ ಕಾಂಡದ ಋಷಿಯನ್ನು ಸ್ಮರಿಸಿಕೊಂಡು ಅತನಿಗೆ ತರ್ಪಣವನ್ನು ಮಾಡಬೇಕೆಂದು ಶಾಸ್ತ್ರವಿದೆ. ಬ್ರಾಹ್ಮಣನಾದವನು ಮತ್ತೆ ಯಾವ ಪ್ರಯೋಜನವನ್ನೂ ಬಯಸದೆ ಇದು ನನ್ನ ವರ್ಣಕ್ಕೆ ಹೇಳಿದ ಧರ್ಮ-ಎಂಬ ದೃಷ್ಟಿಯಿಂದ ಮಾಡುವ ಷಡಂಗವೇದಾಧ್ಯಯನದಿಂದ ಋಷಿ ಋಣವನ್ನು ತೀರಿಸಿದಂತೆ ಆಗುತ್ತದೆ. ತಾವು ಸಂಪಾದಿಸಿಕೊಂಡ ಜ್ಞಾನವೆಲ್ಲವೂ ಋಷಿಗಳಿಂದ ಬಂದದ್ದೆಂಬುದನ್ನು ಸ್ಮರಿಸುವ ಕೃತಜ್ಞತಾಪ್ರದರ್ಶನದ ದಿನವಿದು. ಹೀಗೆಯೇ ಕ್ಷತ್ರಿಯರೂ ಧನುರ್ವಿದ್ಯೆಯನ್ನು ಕಲಿತು ಧರ್ಮಕ್ಕಾಗಿ ಆಯುಧವನ್ನು ಹಿಡಿದು ಕಾದಾಡುವೆನೆಂಬ ಪ್ರತಿಜ್ಞೆಮಾಡಬೇಕು. ಬ್ರಾಹ್ಮಣರಿಗೆ ಶಾಂತಿ. ದಾಂತಿ, ತಪಸ್ಸು, ಶುಚಿತ್ವ, ಕ್ಷಮೆ, ಋಜುಭಾವ, ಜ್ಞಾನ, ವಿಜ್ಞಾನ, ಆಸ್ತಿಕ್ಯ- ಇವು ಹೇಗೆ ಕರ್ಮಗಳೋ ಹಾಗೆಯೇ ಕ್ಷತ್ರಿಯರಿಗೂ ಶೌರ್ಯ, ತೇಜಸ್ಸು, ಧೈರ್ಯ, ದಕ್ಷತೆ, ಯುದ್ಧದಲ್ಲಿ ಅಡಿಯನ್ನು ಹಿಂದಿಡದಿರುವದು, ದಾನ, ಎಲ್ಲವನ್ನೂ ಆಳುವದು-ಇವು ಕರ್ಮಗಳು. ಇದರಂತೆ ಕೃಷಿ, ಗೋರಕ್ಷಣೆ, ವಾಣಿಜ್ಯ-ಇವು ವೈಶ್ಯರಿಗೂ, ಸಮಾಜದ ಹಿತಕ್ಕೆ ಬೇಕಾದದ್ದನ್ನೆಲ್ಲ ಕಾಯಕಷ್ಟದಿಂದ ಸಿದ್ಧಗೊಳಿಸುವದು ಶೂದ್ರರಿಗೂ ಕರ್ಮಗಳು.

ಈಗ್ಗೆ ವರ್ಣಾಶ್ರಮಧರ್ಮಗಳು ಲುಪ್ತಪ್ರಾಯವಾಗಿವೆ. ಆದರೂ ಅವ ಶಿಷ್ಟವಾಗಿರುವ ಆವರವರ ಧರ್ಮವನ್ನು ಕಾಪಾಡಿಕೊಂಡುಬರುವವರಿಗೆ ಅನಂತವಾದ ಪುಣ್ಯವು ಬರುವದು. 'ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯ ಕರ್ಮಫಲಮನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲಧರ್ಮಾಯುಃ ಶ್ರುತವೃತ್ತವಿತ್ತಸುಖಮೇಧಸೋ ಜನ್ಮ ಪ್ರತಿಪದ್ಯಂತೇ' ( ಗೌ ಸೂ. ೨-೨೯ ) ಎಂಬ ಧರ್ಮಶಾಸ್ತ್ರವಚನದಲ್ಲಿ ಹೇಳಿರುವಂತೆ ಆಯಾ ಕರ್ಮಕ್ಕೆ ತಕ್ಕ ಫಲವನ್ನು ಸ್ವರ್ಗದಲ್ಲಿ ಅನುಭವಿಸುತ್ತಾ ಉತ್ತಮವಾದ ದೇಶ, ಜಾತಿ, ಕುಲ, ಧರ್ಮ, ಆಯುಸ್ಸು, ಶಾಸ್ತ್ರಜ್ಞಾನ, ನಡತೆ, ವಿತ್ತ, ಸುಖ-ಮುಂತಾದವುಗಳಿಂದ ಕೂಡಿದ ಜನ್ಮವನ್ನು ಪಡೆಯುತ್ತಾರೆ. ಆದರೆ ಈ ಸ್ವಕರ್ಮದಿಂದ ಭಗವಂತನನ್ನು ಅರ್ಚನೆಮಾಡಿದವರು ಜ್ಞಾನಕ್ಕೆ ತಕ್ಕ ಯೋಗ್ಯತೆ ಎಂಬ ಸಿದ್ಧಿಯನ್ನು ಪಡೆಯುತ್ತಾರೆ. ಯಾರಿಗೆ ಯಾವದು ಸ್ವಕರ್ಮವೋ ಅದನ್ನು ತಪ್ಪದೆ ಮಾಡಬೇಕು ; ಸ್ವಧರ್ಮದಲ್ಲಿ ಸಾವಾದರೂ ಮೇಲು, ಪರಧರ್ಮದಲ್ಲಿ ಎಂದಿಗೂ ಕೈಹಾಕತಕ್ಕದ್ದಲ್ಲ.

ನಮ್ಮ ನಮ್ಮ ಕರ್ಮವು ಯಾವದು, ಎಷ್ಟು ಮೇಲ್ತರದ್ದು– ಎಂಬುದರಿಂ ದೇನೂ ನಮಗೆ ಹೆಚ್ಚುಗಾರಿಕೆಯಿಲ್ಲ. 'ಸರ್ವಾರಮ್ಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ' ಎಲ್ಲಾ ಕರ್ಮಗಳಲ್ಲಿಯೂ ಯಾವದಾದರೊಂದು ದೋಷವು ಇದ್ದೇಇರುತ್ತದೆ. ಆದ್ದರಿಂದ ಅದನ್ನು ಹೇಗೆ ಮಾಡುತ್ತಿದೇವೆಂಬು ದರ ಮೇಲೆ ನಮ್ಮ ಕರ್ಮಕ್ಕೆ ಬೆಲೆ ಬರುತ್ತದೆ. ಒಬ್ಬ ಸಾಧುಗಳಲ್ಲಿ ಕೆಲವರು ಬಂದು ತಾವು ಯಾವ ಉದ್ಯೋಗವನ್ನು ಕೈಗೊಂಡರೆ ಸದ್ಗತಿಯಾದೀತೋ ಅಪ್ಪಣೆಕೊಡಿಸಬೇಕೆಂದು ಬೇಡಿಕೊಂಡರಂತೆ. ಆಗ ಆ ಸಾಧುಗಳಿಂತೆಂದರು : 'ನಿಮ್ಮನಿಮ್ಮ ಉದ್ಯೋಗವೇ ನಿಮಗೆ ಸದ್ಗತಿಯನ್ನು ಕೊಡಬಲ್ಲದು. ಉದಾ ಹರಣೆಗೆ ನೀನು ಬೊಕ್ಕಸವನ್ನು (ಟ್ರೆಜರಿಯನ್ನು) ಕಾಯುವ ಹವಾಲ್‌ದಾರ ನಾಗಿದ್ದೀಯೆ ; "ಇದು ಈಶ್ವರನಿಗೆ ಸೇರಿದ ಭಂಡಾರವು. ಇದರಲ್ಲಿ ಒಂದು ಬಿಡಿಗಾಸೂ ಮತ್ತೊಬ್ಬರ ಪಾಲಾಗದಂತೆ ನೋಡಿಕೊಳ್ಳುವದಕ್ಕೆ ನನ್ನನ್ನು ಪರಮೇಶ್ವರನು ನಿಯಮಿಸಿರುತ್ತಾನೆ'–ಎಂದು ಭಾವನೆಮಾಡುತ್ತಾ ನಿನ್ನ ಕೆಲಸ ವನ್ನು ಮಾಡು; ಆವನು ಒಬ್ಬ ಅಂಚೆಯನ್ನು ಹಳ್ಳಿಗೆ ಒಯ್ಯುವ ಕೆಲಸದವನು. ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ರಾತ್ರಿಯಲ್ಲಿಕೂಡ ಅವನು ನಡೆಯುತ್ತಿರ ಬೇಕಾಗುವದಷ್ಟೆ ? 'ಶ್ರೀ ಪರಮೇಶ್ವರನ ಭಕ್ತರಿಗೆ ನಾನು ಒಯ್ಯುತ್ತಿರುವ ಸಂದೇಶಗಳಿವು ; ನಾನು ಅವನ ಭಂಟನು' ಎಂಬ ಉತ್ಸಾಹದಿಂದ ಅವನು ಸಂಚರಿಸಲಿ ! ಹೀಗೆಯೇ ನೀವುಗಳೆಲ್ಲರೂ ನಿಮ್ಮನಿಮ್ಮ ಕೆಲಸಗಳನ್ನು ಭಗ ವಂತನಿಗೆ ಸಂಬಂಧಿಸಿಕೊಂಡು ಮಾಡುತ್ತಾಹೋಗಿರಿ, ಅದರಿಂದಲೇ ಭಗವಂತನು ತೃಪ್ತನಾಗಿ ನಿಮಗೆ ಇಷ್ಟಾರ್ಥಗಳನ್ನು ನೆರವೇರಿಸುವನು."

ಈ ಸಾಧುಗಳ ಉಪದೇಶವೇ ನಾವು ತಿಳಿದುಕೊಳ್ಳಬೇಕಾಗಿರುವ ಸಾರಾ ರ್ಥವು. ನಾವು ಯಾರೂ ಯಾವದೊಂದು ಕರ್ಮವನ್ನೂ ಮಾಡದೆ ಒಂದು ಕ್ಷಣವೂ ಸುಮ್ಮನೆ ಇರುವಂತಿಲ್ಲ. ಆದ್ದರಿಂದ ನಾವು ಮಾಡುವ ಪ್ರತಿಯೊಂದು ಕರ್ಮವನ್ನೂ ಈಶ್ವರನಿಗೆ ಸಂಬಂಧಿಸಿಕೊಂಡು ಸುಖವಾಗಿ ಬಾಳುವ ಈ ಕರ್ಮ ರಹಸ್ಯವನ್ನು ಅರಿತುಕೊಳ್ಳಬೇಕು. ಕರ್ಮಗಳು ಈಗ ನಮಗೆ ಬಂಧಕವಾಗಿರುವ ದೇಕೆಂದ ಮೂರು ಗುಣಗಳೂ ನಮ್ಮನ್ನು ಬಿಟ್ಟಿಹಿಡಿದುಕೊಂಡು 'ಇದು ಈಗ ನನ್ನ ಕರ್ತವ್ಯ, ಆಮೇಲೆ ಅದು ಕರ್ತವ್ಯ' ಎಂದು ಕರ್ತವ್ಯದ ಮೂಟೆಯನ್ನು ನಮ್ಮಮೇಲೆ ಹೊರಿಸಿ ನಮ್ಮನ್ನು ಗೋಳುಗುಟ್ಟಿಸುತ್ತಿವೆ. ನಾವು ಕರ್ಮಗಳಿಗೆ ಅಡಿಯಾಳಾಗಿ ದುಡಿಯಬಾರದು ; ಕರ್ಮವೇ ನಮಗೆ ಆಳಾಗಬೇಕು.

ಆಸ್ತಿಕರು ಬೇರೆಬೇರೆಯ ಫಲಗಳನ್ನು ಬಯಸುತ್ತಿರುವದರಿಂದ, ಆಯಾ ಫಲವನ್ನು ಕೊಡುವ ಬೇರೆಬೇರೆಯ ದೇವತೆಗಳನ್ನು ಪೂಜಿಸಿ ಆಯಾ ಫಲಗಳನ್ನು ಪಡೆದುಕೊಳ್ಳುತ್ತಾರೆ ಆದರೆ ಆ ದೇವತೆಗಳೆಲ್ಲ ಪರಮೇಶ್ವರನ ರಾಜ್ಯಕ್ಕೇ

ಸೇರಿದವರು. ಒಂದು ಸರಕಾರದ ಕಾರ್ಯಾಲಯದಲ್ಲಿ ಒಬ್ಬನು ಟಪ್ಪಾಲುಪುಸ್ತಕ ಬರೆಯುವವನೂ, ಒಬ್ಬನು'ಇಂದ-ಗೆ' ಬರೆಯುವವನೂ, ಒಬ್ಬನು ವಿಷಯಗಳನ್ನು ಹುದ್ದೇದಾರರಲ್ಲಿ ಸುನಾವಣಿಮಾಡಿ ಅನುಜ್ಞೆಪಡೆದು ಅವರವರಿಗೆ ತಕ್ಕ ಉತ್ತರ ಗಳನ್ನು ಬರೆಯುವವನೂ ಇರುತ್ತಾರೆ. ಆದರೆ ಆ ಕಚೇರಿಗೆ ಮುಖ್ಯಸ್ಥನು ಯಾರೋ ಅವನ ಸತ್ತ್ವವೇ ಇವರೆಲ್ಲರಲ್ಲಿಯೂ ಇರುತ್ತದೆ. ಕಚೇರಿಯಲ್ಲಿರುವ ಚಿಲ್ಲರೆ ನೌಕರರಿಗೆ ಒಂದೊಂದು ಶಾಖೆಯ ಹೊಣೆಗಾರಿಕೆ ಮಾತ್ರ ಇರುತ್ತದೆ. ಮುಖ್ಯವಾಗಿ ಕಚೇರಿ ಎಂದರೆ ಮುಖ್ಯಸ್ಥನೇ ಅಲ್ಲವೆ ? ಹಾಗೆಯೇ ಪರಮೇಶ್ವರ ನಿಗೆ ನಮ್ಮ ದೂರು ಹೋದರೆ, ಅವನು ಪ್ರಸನ್ನನಾಗುವನು ; ಆಗ ಮಿಕ್ಕ ಎಲ್ಲಾ ದೇವತೆಗಳೂ ಪ್ರಸನ್ನರಾದಂತೆಯೇ ಆಗುವದು. ಆತನಿಗೆ ಪ್ರೀತಿಯಾಗ ಲೆಂದು ಸರ್ವಕರ್ಮಗಳನ್ನೂ ಮಾಡುವದೇ ಜೀವನದ ರಹಸ್ಯ. ಅಲ್ಪಫಲ ಗಳಿಗೆ ಜೋಲಬಾರದು ; ಪರಮೇಶ್ವರನ ಅನುಗ್ರಹದಿಂದ ಮಹಾಫಲವನ್ನೇ ಪಡೆದುಕೊಳ್ಳುವ ಸಂಕಲ್ಪವನ್ನು ಮಾಡಬೇಕು.

ಕರ್ಮಯೋಗವೆಂದರೆ ಇಷ್ಟೇತಾನೆ ?– ಎಂತ ಅದನ್ನು ಅಲ್ಪಸಾಧನವೆಂದು ಅಸಡ್ಡೆಮಾಡಬಾರದು. 'ಇದಕ್ಕೆ ಸಂಗವನ್ನು ಬಿಡಬೇಕು, ಫಲಾಸಕ್ತಿಯನ್ನು ಬಿಡಬೇಕು, ದ್ವಂದ್ವಗಳನ್ನು ಮೀರುವದಕ್ಕೆ ಪ್ರಯತ್ನಿಸಬೇಕು ; ಆದ್ದರಿಂದ ಇಲ್ಲಿ ಕಟ್ಟುಗಳು ಬಹಳ' ಎಂದು ಕುಸಿಯಲೂಬಾರದು. 'ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್||' (ಗೀ.೨-೪೦) ಎಂದಿರುವಂತೆ ಇದನ್ನು ಒಂದಿಷ್ಟುಮಾಡಿದರೂ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಪರ ಮೇಶ್ವರನ ಅನುಗ್ರಹಕ್ಕೆ ಪಾತ್ರರಾಗಬಹುದು. ಕರ್ಮಗಳೆಲ್ಲ ನಮಗೆ ಫಲ ವನ್ನು ಕೊಡತಕ್ಕವು ; ಚೆಕ್ಕು ಬರೆಯಿಸಿಕೊಂಡುಹೋದಮೇಲೂ ಬ್ಯಾಂಕಿನಲ್ಲಿ ಅದನ್ನು ಕ್ಯಾಷ್‌ಮಾಡಿಸಿಕೊಂಡೇ ಹಣವನ್ನು ಪಡೆಯಬೇಕಾಗಿರುವಂತೆ, ಕರ್ಮ ವನ್ನು ಪರಮೇಶ್ವರನಿಗೆ ಅರ್ಪಣೆಮಾಡಿಯೇ ಅದರಿಂದ ಮಹಾಫಲವನ್ನು ಪಡೆಯ ಬಹುದು. ಪರಮೇಶ್ವರನ ಅಭ್ಯರ್ಚನೆಯ ರೂಪದ ಕರ್ಮಯೋಗವೆಂಬುದು ಸಾಧನೆಗಳಲ್ಲಿ ಒಂದು ಉನ್ನತವಾದ ಮೆಟ್ಟಲು. ಇದನ್ನು ಉಪಯೋಗಿಸಿಕೊಂಡು ಕೃತಾರ್ಥರಾಗುವದಕ್ಕೆ ಯತ್ನಿಸೋಣ !

———

# ೩೦. ದೇವತೆಗಳು

(17—8 62)

ಮನುಷ್ಯನು ಪರಮಾತ್ಮನೆಂಬುದಕ್ಕೆ ಈಗಿನ ಅವನ ಸ್ವಭಾವದಿಂದಲೇ ಗುರುತುಗಳು ಯಾವದಾದರೂ ಇವೆಯೆ ?- ಎಂಬುದನ್ನು ನೋಡೋಣ. ಮೊದಲನೆಯದಾಗಿ ಮನುಷ್ಯನು ಕಾಮಮಯನಾಗಿರುತ್ತಾನೆ.

'ಕಾಮಮಯ ಏವಾಯಂ ಪುರುಷ ಇತಿ ಸ ಯಥಾಕಾಮೋ ಭವತಿ ತತ್ಕ್ರತು ರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪ ದ್ಯತೇ'॥ (ಬೃ. ೪-೪-೫) ಎಂಬ ಶ್ರುತಿಯು ಈ ಮನುಷ್ಯನು ಕಾಮಮಯನಾಗಿರು ತ್ತಾನೆ. ಅವನು ಯಾವಬಗೆಯ ಕಾಮವುಳ್ಳವನೋ ಅದರಂತೆ ನಿಶ್ಚಯಿಸಿಕೊಳ್ಳು ತ್ತಾನೆ; ಹೇಗೆ ನಿಶ್ಚಯಿಸಿಕೊಳ್ಳುತ್ತಾನೋ ಅದರಂತೆ ಕರ್ಮವನ್ನು ಮಾಡು ತ್ತಾನೆ; ಯಾವ ಕರ್ಮವನು ಮಾಡುತ್ತಾನೋ ಅದರ ಫಲವನ್ನು ಪಡೆದುಕೊಳ್ಳು ತ್ತಾನೆ- ಎಂದು ವರ್ಣಿಸಿದೆ. ಮನುಷ್ಯನಿಗೆ ಸರ್ವಕಾಮಗಳನ್ನೂ ಪಡೆದುಕೊಳ್ಳ ಬೇಕೆಂಬ ಆಶೆಯು ಸ್ವಭಾವದಿಂದಲೇ ಇರುವದು ಆಪ್ತಕಾಮನಾದ ಪರಮಾತ್ಮನಿಗೂ ಇವನಿಗೂ ಏನೋ ನಿಕಟಸಂಬಂಧವಿದೆ ಎಂಬುದನ್ನು ಸೂಚಿಸುತ್ತದೆ ಅತ್ಯಂತ ವೃದ್ಧನಾಗಿದ್ದರೂ ವಿಕಲಾಂಗನಾಗಿದ್ದರೂ ಕುರೂಪಿಯಾಗಿದ್ದರೂ 'ನಿನಗೆ ಹೆಣ್ಣು ಕೊಡುತ್ತಾರೆ' ಎಂದು ಸೂಚನೆಮಾಡಿದ ಮಾತ್ರದಿಂದ 'ಏತಕ್ಕೆ ಪ್ರಯತ್ನಿಸ ಬಾರದು ?' ಎಂದು ಆಶೆಯು ಮನುಷ್ಯನಲ್ಲಿ ಅಂಕುರಿಸುತ್ತಿರುವದು. ಎರಡನೆಯ ದಾಗಿ, ಜನರಲ್ಲಿ ಹುಟ್ಟಿನಿಂದಲೇ ಸ್ವಭಾವ ವೈಚಿತ್ರ್ಯವು ಕಾಣಿಸುತ್ತಿರುವದರಿಂದ ಲೂ ಕರ್ಮಗಳನ್ನು ಮಾಡಿದರೆ ಫಲವನ್ನು ಪಡೆಯುವದೇ ಯುಕ್ತವೆಂಬ ನಿಯಮವು ನಮ್ಮೆಲ್ಲರ ಹೃದಯಕ್ಕೂ ಒಪ್ಪಾಗಿರುವದರಿಂದಲೂ ಮನುಷ್ಯನು ಆತ್ಮವು 'ನಿತ್ಯ' ವೆಂದು ನಂಬಬಹುದಾಗಿದೆ. ಮೂರನೆಯದಾಗಿ ಎಷ್ಟೋ ಪದಾರ್ಥಗಳು ತನಗೆ ಸಿಕ್ಕುವಹಾಗಿದ್ದರೂ ವೈರಾಗ್ಯದಿಂದ ಅವುಗಳನ್ನು ಬಿಟ್ಟು ಅಲ್ಪದಿಂದಲೇ ತೃಪ್ತ ರಾಗುವ ಸ್ವಭಾವದ ಮಹನೀಯರೂ ಅಲ್ಲಲ್ಲಿ ಸಿಕ್ಕುತ್ತಾರೆ; ಇದರಿಂದ ಮನುಷ್ಯನ ಆತ್ಮನು ನಿತ್ಯತೃಪ್ತನಾಗಿರಬೇಕೆಂದು ಕಲ್ಪಿಸಬಹುದಾಗುವದು. ಹೀಗೆಯೇ ಮನು ಷ್ಯನು ತನ್ನ ಕೋಪವು ಮತ್ತೊಬ್ಬರ ಮೇಲೆ ಪರಿಣಾಮವನ್ನು ಮಾಡಲಿ, ಬಿಡಲಿ, ಎಲ್ಲರನ್ನೂ ಗದರಿಸುವದಕ್ಕೆ ಹೋಗುತ್ತಾನೆ; ಎಲ್ಲಾ ಕೆಲಸವನ್ನೂ ಮಾಡುವದಕ್ಕೆ ಕೈಹಾಕುತ್ತಾನೆ. ಇದು ಮನುಷ್ಯನ ಆತ್ಮನ ಈಶಿತೃತ್ವಕ್ಕೆ ದ್ಯೋತ ಕವಾಗಿರುತ್ತದೆ. 'ನಾನು ಆ ಸ್ಥಾನದಲ್ಲಿದ್ದರೆ ಹೀಗೆ ಮಾಡುತ್ತಿದ್ದೆ' ಎಂದುಕೊಳ್ಳು ತ್ತಿರುವದೂ, ಗ್ರಂಥಗಳ ಬೆಲೆಯನ್ನು ಕಟ್ಟುವದೂ, ಸಂಗೀತವನ್ನೂ ಶಿಲ್ಪವನ್ನೂ 'ಸರಿ, ಸರಿಯಲ್ಲ' ಎಂದು ತೀರ್ಮಾನಿಸುವದೂ ಮನುಷ್ಯನ ಆತ್ಮನು ಸರ್ವಜ್ಞನು

ಎಂಬುದನ್ನು ಸೂಚಿಸುತ್ತದೆ. ಅಂತೂ ಹೀಗೆ ಬಗೆಬಗೆಯ ನಿಸರ್ಗವಾದ ಸ್ವಾಭಾವಿಕ ವಾದ ಪ್ರವೃತ್ತಿಗಳಿಂದ ಮನುಷ್ಯನಲ್ಲಿ ಪರಮಾರ್ಥತತ್ತ್ವವು ಹುದುಗಿಕೊಂಡಿದೆ ಎಂದು ನಾವು ಕಲ್ಪಿಸಿಕೊಳ್ಳಬಹುದಾಗಿದೆ.

ಈಗಿರುವ ಸ್ಥಿತಿಯಲ್ಲಿ ಕಿಂಚಿಜ್ಞನಾಗಿ ಅಲ್ಪಶಕ್ತಿಯಾಗಿ ಅಲ್ಪಾಯುವಾಗಿ ಶರೀರೇಂದ್ರಿಯಾದಿಗಳಿಗೆ ಕಟ್ಟುಬಿದ್ದಿರುವ ಜೀವನು ಪರಮಾತ್ಮನೇ ಆಗಿರುತ್ತಾನೆ, ಅಥವಾ ಪರಮಾತ್ಮತ್ವವನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲವನಾಗಿರುತ್ತಾನೆ ಎಂದರೆ ಯಾರೂ ನಂಬುವಹಾಗಿಲ್ಲ. ಕೊರಳುದ್ದಕ್ಕೂ ಗುಂಡಿಯಲ್ಲಿ ಹುಗಿಸಿಕೊಂಡು ಮುಗಿಲುದ್ದಕ್ಕೂ ಹಾರಬಲ್ಲೆನು– ಎಂದು ಹೇಳುವವನ ಸಾಹಸಕ್ಕೆ ಎಣೆಯಾಗಿರುತ್ತವೆ, ಮನುಷ್ಯನ ಆಶಾಪ್ರತೀಕ್ಷೆಗಳು. ಆದರೂ ಕರ್ಮಯೋಗದ ಮೆಟ್ಟಿಲುಗಳನ್ನು ಕ್ರಮಕ್ರಮವಾಗಿ ಏರುತ್ತಾಬಂದಹಾಗೆಲ್ಲ ಶಾಸ್ತ್ರದಲ್ಲಿ ನಂಬಿಕೆಯು ಹೆಚ್ಚುತ್ತಾ ಬರುತ್ತದೆ ; ನೀರಿನಲ್ಲಿ ಬಿದ್ದವನಿಗೆ ಕಾರಣವೇನೂ ಗೊತ್ತಿಲ್ಲದೆ 'ಕೈಗಳನ್ನು ಬಡಿದ ಮಾತ್ರದಿಂದ ನನ್ನನ್ನು ಮೇಲಕ್ಕೆಬ್ಬಿಸಿತು. ನೀರನ್ನೂ ನಂಬಿ ನಾನು ಅದರಮೇಲೂ ಮಲಗಿಕೊಳ್ಳಬಹುದು ; ಅದಕ್ಕೆ ನನ್ನನ್ನು ತೇಲಿಸುವ ಶಕ್ತಿಯುಂಟು' ಎಂಬ ಧೈರ್ಯವು ಹೇಗೆ ಬರುತ್ತದೆಯೋ ಹಾಗೆಯೇ ಶಾಸ್ತ್ರದೃಷ್ಟಿಯನ್ನವಲಂಬಿಸಿ ಮಾಡಿದ ಕರ್ಮವನ್ನು ಪರಮೇಶ್ವರನಿಗೆ ಅರ್ಪಣೆಮಾಡುವಾಗ 'ತವ ತತ್ತ್ವಂ ನ ಜಾನಾಮಿ ಕೀದೃಶೋಽಸಿ ಜನಾರ್ದನ | ಯಾದೃಶೋಽಸಿ ಮಹಾದೇವ ತಾದೃಶಾಯ ನಮೋ ನಮಃ' ನೀನು ಹೇಗಿರುವೆ ಎಂಬ ತತ್ತ್ವವು ನನಗೆ ತಿಳಿಯದು ; ನೀನು ಹೇಗಿರುವೆಯೋ ಹಾಗಿರುವ ನಿನಗೆ ನಮಸ್ಕಾರ !– ಎಂದಿರುವಂತೆ ಪರಮೇಶ್ವರನ ಅಸ್ತಿತ್ವದಲ್ಲಿ ಶ್ರದ್ಧೆಯುಂಟಾಗಿ ಅಷ್ಟುಮಾತ್ರದಿಂದಲೇ ಆತನಿಗೆ ಪ್ರೀತಿಯುಂಟಾಗಲೆಂದು ಮಾಡುವ ಕರ್ಮವು ವಿಶಾಲಜೀವನದ ಭಾವವನ್ನು ಮನಸ್ಸಿಗೆ ಮುಟ್ಟಿಸುತ್ತದೆ.

ದೇವತೆಗಳು, ಈಶ್ವರ–ಮುಂತಾದ ಭಾವನೆಗಳಲ್ಲಿ ಜನರಿಗೆ ಈಚೆಗೆ ಶ್ರದ್ಧೆಯು ಕಡಿಮೆಯಾಗುತ್ತಾಬಂದಿದೆ. ವೇದದಲ್ಲಿ ಅಗ್ನಿ, ಇಂದ್ರ– ಮುಂತಾದ ಅನೇಕ ದೇವತೆಗಳನ್ನು ಹೇಳಿದೆ. ಒಬ್ಬೊಬ್ಬ ದೇವತೆಯ ಆರಾಧನೆಯಿಂದ ಒಂದೊಂದು ವಿಶಿಷ್ಟವಾದ ಫಲವು ದೊರಕುವದೆಂದೂ ಅಲ್ಲಿ ಹೇಳಿರುತ್ತದೆ. ದೇವತೆಗಳ ಸ್ವಭಾವಾದಿಗಳ ವರ್ಣನೆಯೂ ಅಲ್ಲಿ ಹೇರಳವಾಗಿರುತ್ತದೆ. ಪರಮೇಶ್ವರನು ಸರ್ವದೇವತಾಮಯನು; ದೇವತೆಗಳು ಕಿರಣಗಳಿದ್ದಂತೆ, ಪರಮೇಶ್ವರನು ಸೂರ್ಯನಿದ್ದಂತೆ. ಗುರುದೇವತಾಭಕ್ತಿಯು ಬೆಳೆದಂತೆಲ್ಲ ಹೃದಯವು ಅರಳುತ್ತದೆ ; ಅಧ್ಯಾತ್ಮಜೀವನದ ಆನಂದವು ಮನದಟ್ಟಾಗುತ್ತಾಬರುತ್ತದೆ.

ಈಗ್ಗೆ ನಮಗೆ ವೇದಾರ್ಥವನ್ನು ಮಾಡಿಕೊಳ್ಳುವ ಶಕ್ತಿಯಿಲ್ಲ. ಪಾಶ್ಚಾತ್ಯರ ಕಣ್ಣಿನಿಂದ ವೇದಗಳನ್ನು ನೋಡಿ, "ಋಷಿಗಳೆಂದರೆ ಕವಿಗಳು, ದೇವತೆಗಳೆಂದರೆ

ಪ್ರಕೃತಿಯ ಶಕ್ತಿವಿಶೇಷಗಳು ; ಬೆಂಕಿ, ಗಾಳಿ, ಸೂರ್ಯ– ಮುಂತಾದವುಗಳಿಗೆ ದೇವತೆ ಎಂದು ಪುರಾತತ್ತ್ವಾನ್ವೇಷಕರು ವರ್ಣಿಸಿರುತ್ತಾರೆ" ಎಂದುಮುಂತಾಗಿ ನಿಶ್ಚಯಮಾಡಿಕೊಂಡಿದೇವೆ. ಕಾಲೇಜಿನ ವಿದ್ಯೆಯು ದೊರೆತಂತೆಲ್ಲ ನಮಗೆ ಹೃದಯವು ಸಂಕುಚಿತವಾಗುತ್ತಿದೆ. ಪೃಥಿವಿ, ಅಪ್ಪು, ಆದಿತ್ಯ– ಮುಂತಾದವುಗಳ ಅಭಿಮಾನಿದೇವತೆಗಳು ಬೇರೆ ಇರುತ್ತಾರೆ ; ಎಲ್ಲರಿಗೂ ಅಂತರಾತ್ಮನಾಗಿ ಸರ್ವಾತ್ಮಕನಾಗಿರುವ ಪರಮೇಶ್ವರನೂ ಇರುತ್ತಾನೆ –ಎಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ಆದರೆ ಅದೆಲ್ಲ ಕವಿಗಳ ಕಲ್ಪನೆ ಎಂದು ನಮ್ಮ ಹುಡುಗರು ವಿಕಲ್ಪಿಸುತ್ತಿದಾರೆ ! ಪಾಶ್ಚಾತ್ತ್ಯರು ಹೆಚ್ಚಾಗಿ ಓದಿದವರಾದ್ದರಿಂದ ಅವರಿಗೆ ನಿಜ ತಿಳಿದಿರಬೇಕೆಂಬ ಭಾವನೆ ನಮಗೂ ಗಂಟುಬೀಳುತ್ತಿದೆ ! ಹೊರಗಿನ ಆಕಾರವಲ್ಲದೆ ಒಳಗೂ ಒಂದು ತತ್ತ್ವವಿರುವದು ಸ್ವಾಭಾವಿಕವೆಂಬುದು ನಮ್ಮಗಳಿಗೆ ಈಗ ಹೊಳೆಯುವದೇ ಇಲ್ಲ. ಗಾಂಧಿಯ ಚಿತ್ರವನ್ನು ಕಂಡವರು ಬಡಕಲುಶರೀರವನ್ನು ನೋಡಿ, 'ಗಾಂಧಿ ಎಂದರೆ ಇಷ್ಟೇನೆ ?' ಎಂದು ಯಾರೂ ಕೇಳುವದಿಲ್ಲ. ಆತನ ಆಧ್ಯಾತ್ಮಿಕಶಕ್ತಿಯು ಬ್ರಿಟಿಷರ ಜಗತ್ತನ್ನೇ ಅಲುಗಾಡಿಸಿಬಿಟ್ಟಿತೆಂಬುದನ್ನು ಹೇಗೆ ಮರೆಯುವದಕ್ಕಾದೀತು ? ವಿವೇಕಾನಂದಸ್ವಾಮಿಗಳವರು ಅಮೆರಿಕದಲ್ಲಿ ಭಾಷಣವನ್ನು ಮಾಡುತ್ತಿದಾಗ "ನಿಮ್ಮವರು 'ನಾನು ಶರೀರವು, ನನಗೊಂದು ಆತ್ಮವಿದೆ' ಎಂದುಕೊಳ್ಳುತ್ತಾರೆ ; ಆದರೆ ನಮ್ಮವರು, 'ನಾನು ಆತ್ಮನು ; ನನಗೊಂದು ಶರೀರವಿದೆ' ಎನ್ನುತ್ತಾರೆ" ಎಂದು ಹೇಳಿದರೆಂಬುದನ್ನು ನಿಮ್ಮಲ್ಲಿ ಕೆಲವರಾದರೂ ಕೇಳಿರಬಹುದು. ದೇಹಾದಿಗಳ ಅರಿವು ನಮಗೆ ಆತ್ಮಚೈತನ್ಯದಿಂದಲೇ ಆಗಬೇಕಾಗಿರುತ್ತದೆ. ಪ್ರತ್ಯಗ್ದೃಷ್ಟಿಯನ್ನು ಮಾತ್ರ ಸಂಪಾದಿಸಿಕೊಳ್ಳಬೇಕು. ಹೇಗೆ ಕಣ್ಣಿಲ್ಲವೆ ಬರಿಯ ಕನ್ನಡಕದಿಂದ ನೋಡುವದಕ್ಕೆ ಬರಲಾರದೋ ಹಾಗೆಯೇ ಚೈತನ್ಯವಿಲ್ಲವೆ ಯಾವದೊಂದನ್ನೂ ಅರಿಯುವದಕ್ಕೆ ಆಗಲಾರದು. ಶರೀರಕ್ಕಿಂತಲೂ ಒಳಗೆ ಇರುವ ಸುಖ, ದುಃಖ, ಆಶ್ಚರ್ಯ– ಮುಂತಾದವುಗಳು ಯಾರಿಗೂ ಪ್ರತ್ಯಕ್ಷಪ್ರಮಾಣದಿಂದ ತಿಳಿಯಬರುವಂತಿರುವದಿಲ್ಲ ; ಆದರೂ ಸುಖದುಃಖಾದಿಗಳು ನಮಗೆ ಸ್ವಾನುಭವವೇದ್ಯವಾಗಿರುವದರಿಂದ ಅವುಗಳು ಇಲ್ಲವೆಂದು ಎಂದಿಗೂ ಬಗೆಯಲಾರೆವು. ನಮಗೆ ಹೇಗೆ ಶರೀರೇಂದ್ರಿಯಾದಿಗಳಿಗೆ ಆಗುವ ಸುಖದುಃಖಾದಿಗಳು ಅನುಭವಕ್ಕೆ ಬರುತ್ತಿರುವವೋ ಇದರಂತೆಯೇ, ಹೊರಗೆ ಕಾಣುವ ಸೂರ್ಯ, ಚಂದ್ರ, ನಕ್ಷತ್ರಗಳು, ಭೂಮಿ, ವಾಯು, ತೇಜಸ್ಸು– ಮುಂತಾದವುಗಳಿಗೂ ಅಭಿಮಾನಿಯಾಗಿರುವ ದೇವತೆಗಳು ಇರುತ್ತಾರೆಂದೂ ಅವರಿಗೆ ಶರೀರಾದಿಗಳೂ ಅಂತರ್ಧಾನಾದಿಶಕ್ತಿಗಳೂ ಇರುವವೆಂದೂ ತಮ್ಮನ್ನು ಆರಾಧಿಸುವ ಭಕ್ತನಿಗೆ ಅನುಗ್ರಹವನ್ನು ಮಾಡುವ ಶಕ್ತಿಯೂ ಇದೆಯೆಂದೂ ಶಾಸ್ತ್ರದಲ್ಲಿ ಹೇಳಿರುವದನ್ನು ಕಡೆಗಣಿಸಿ ದೇವತಾಭಕ್ತಿಯಿಂದಾಗುವ ಲಾಭದಿಂದ ವಂಚಿತರಾಗಬಾರದು.

ದೇವತೆಗಳನ್ನು ನಾವು ಯಾರೂ ಕಂಡಿಲ್ಲವಾದ್ದರಿಂದ 'ಅವರಿದ್ದಾರೆಂದು ನಂಬಿಕೆ ಬರುವವರೆಗೆ ನಾನು ದೇವತಾರ್ಚನೆಯನ್ನು ಮಾಡುವದಿಲ್ಲ' ಎನ್ನುವದು ಮೂರ್ಖತನ. 'ವಿದ್ಯುಚ್ಛಕ್ತಿಯ ತತ್ತ್ವವೇನೆಂಬುದು ತಿಳಿಯುವವರೆಗೂ ಮನೆಯಲ್ಲಿ ವಿದ್ಯುದ್ದೀಪವನ್ನು ಇಡಿಸುವದಿಲ್ಲ!' ಎಂದು ಯಾರಾದರೂ ಹೇಳುತ್ತಾರೆಯೆ? ರೈಲುಗಾಡಿ ಕುದುರೆಯಿಲ್ಲದೆ ಹೇಗೆ ಓಡೀತು ? -ಎಂದು ತರ್ಕಮಾಡುತ್ತಾ ಜನರು ರೈಲುಪ್ರಯಾಣಕ್ಕೆ ಒಲಿಯದೆ ಕುಳಿತರೇನು? ಇಲ್ಲ. 'ಸ್ವಾಧ್ಯಾಯಾದಿಷ್ಟದೇವತಾಸಂಪ್ರಯೋಗಃ' (ಯೋ. ಸೂ. ೨-೪೪) ಆಯಾ ದೇವತೆಯನ್ನು ಜಪಾದಿಗಳಿಂದ ಒಲಿಸಿಕೊಳ್ಳಬಹುದೆಂದು ಯೋಗಿಗಳು ಹೇಳುತ್ತಾರೆ. ಭಗವದ್ಗೀತೆಯಲ್ಲಿಯೂ-

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ‖
ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।
ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ‖

ಗೀ ೭-೨೧, ೨೨.

ಎಂದು ಭಗವಂತನು ಹೇಳಿರುತ್ತಾನೆ. 'ಯಾವಯಾವನು ಯಾವಯಾವ ದೇವತೆಯ ವಿಗ್ರಹವನ್ನು ಶ್ರದ್ಧೆಯಿಂದ ಪೂಜಿಸುವದಕ್ಕೆ ಹೊರಡುತ್ತಾನೋ ಅವನಿಗೆ ಆಯಾ ದೇವತೆಯಲ್ಲಿಯೇ ಶ್ರದ್ಧೆಯನ್ನು ನಾನು ಉಂಟುಮಾಡುತ್ತೇನೆ. ಅವನು ಆ ಶ್ರದ್ಧೆಯಿಂದ ಕೂಡಿದವನಾಗಿ ಆಯಾ ದೇವತೆಯ ಪೂಜೆಗೆ ಯತ್ನಿಸುತ್ತಾನೆ ; ಆದರಿಂದ ಆಯಾ ಕಾಮಗಳನ್ನು- ಅವುಗಳನ್ನು ನಾನೇ ಕೊಡುವದರಿಂದ- ಪಡೆದುಕೊಳ್ಳುತ್ತಾನೆ' ಎಂದು ಭಗವದುಕ್ತಿಯ ಅಭಿಪ್ರಾಯ. ದೇವತೆಗಳನ್ನು ಆರಾಧನೆಮಾಡುವದಕ್ಕೆ ಹೃದಯದಲ್ಲಿ ಶ್ರದ್ಧೆಯಿರಬೇಕು. ಆದಿತ್ಯ, ಚಂದ್ರ, ಅಗ್ನಿ, ವಿನಾಯಕ, ಸರಸ್ವತಿ, ಲಕ್ಷ್ಮಿ-ಮುಂತಾದ ಬಗೆಬಗೆಯ ಹೆಸರುಗಳಿಂದಲೂ ಬಗೆಬಗೆಯ ಆಕಾರಗಳಿಂದಲೂ ಕೂಡಿರುವ ದೇವತೆಗಳನ್ನು ಶ್ರದ್ಧೆಯಿಂದ ಪೂಜಿಸಿ ತಮ್ಮ ಕಾಮಿತಾರ್ಥಗಳನ್ನು ಪಡೆದುಕೊಳ್ಳುತ್ತಿರುವ ಆಸ್ತಿಕರು ಇನ್ನೂ ಅಲ್ಲಲ್ಲಿ ಸಿಕ್ಕುತ್ತಾರೆ. ಆದರೂ ನಾವು ಆಧುನಿಕವಿದ್ಯಾಭ್ಯಾಸದ ಪ್ರಭಾವಕ್ಕೆ ಒಳಗಾಗಿ ಸೂರ್ಯನೆಂದರೆ ಒಂದು ಉಷ್ಣದ ಗೋಳ, ಚಂದ್ರಗ್ರಹಕ್ಕೆ ಇಷ್ಟರಲ್ಲಿಯೇ ವಿಜ್ಞಾನಶಾಸ್ತ್ರಜ್ಞರು ಹೋಗಿಬರುತ್ತಾರಾದ್ದರಿಂದ ಅದು ದೇವತೆಯೆನ್ನುವದಕ್ಕೇನೂ ಕಾರಣವಿಲ್ಲ- ಎಂದು ನಾಸ್ತಿಕವಾದಕ್ಕೆ ಮೊದಲುಮಾಡಿರುತ್ತೇವೆ ! ಹೃದಯವಿಲ್ಲದವರಿಗೆ ಒಳಗಿರುವ ದೇವತೆ ಹೇಗೆ ಪ್ರಸನ್ನವಾಗಬೇಕು ?

ದೇವತೆಗಳೆಂಬುವರು ಅನೇಕರಿದ್ದಾಗ್ಯೂ ಅವರೆಲ್ಲರೂ ದೇವದೇವನಾದ ಒಬ್ಬನೇ ಪರಮಾತ್ಮನ ವಿಭೂತಿಗಳು. ಸೂರ್ಯನಿಗೆ ಕಿರಣಗಳು ಹೇಗೋ

ಹಾಗೆಯೇ ಪರಮಾತ್ಮನಿಗೆ ದೇವತೆಗಳು. ಆದ್ದರಿಂದಲೇ ಅವರನ್ನು ಪೂಜಿಸು ವವರಿಗೆ ಅವರೊಳಗಿರುವ ಪರಮಾತ್ಮನೇ ಫಲವನ್ನು ಕೊಡುತ್ತಾನೆ. ಆದ್ದ ರಿಂದಲೇ ಭಗವಂತನು ಹೀಗೆಂದಿರುತ್ತಾನೆ:

ಯೇಽಪ್ಯನ್ಯದೇವತಾಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ |
ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯವಿಧಿಪೂರ್ವಕಮ್ ||
ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ |
ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ|| ಗೀ. ೯–೨೩, ೨೪.
ಅನ್ತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ |
ದೇವಾನ್ ದೇವಯಜೋ ಯಾನ್ತಿ ಮದ್ಭಕ್ತಾ ಯಾನ್ತಿ ಮಾಮಪಿ ||
ಗೀ. ೭–೨೩

"ಯಾರು ಬೇರೆಯ ದೇವತೆಗಳನ್ನು ಶ್ರದ್ಧೆಯಿಂದ ಪೂಜಿಸುವರೋ ಅವರೂ ಹಾಗೆಂದು ಅರಿಯದೆ ನನ್ನನ್ನೇ ಪೂಜಿಸುತ್ತಿರುವರು. ನಾನೇ ಅಲ್ಲವೆ, ಸರ್ವ ಯಜ್ಞಗಳಲ್ಲಿಯೂ ಕೊಡುವವನು, ತೆಗೆದುಕೊಳ್ಳುವವನು, ಎಲ್ಲಕ್ಕೂ ಫಲವನ್ನು ಕೊಡುವ ಒಡೆಯನು ? ಆದರೆ ಆಯಾ ದೇವತೆಗಳೊಳಗೆ ಇರುವ ನನ್ನನ್ನು ಅವರು ನಿಜದಿಂದ ಅರಿಯದೆ ಇರುತ್ತಾರೆ ; ಆದ್ದರಿಂದ ಅವರಿಗೆ ಆ ಯಾಗದ ಪೂರ್ಣಫಲವು ದೊರಕದೆ ಇರುತ್ತದೆ. ದೇವತೆಗಳೆಂದು ದೇವತೆಗಳನ್ನು ಪೂಜಿಸು ವವರಿಗೆ ದೇವತಾಸಾಯುಜ್ಯವು ದೊರಕುವಂತೆ, ಅವರಲ್ಲೇ ಅಂತರ್ಯಾಮಿ ಯಾಗಿರುವ ನನ್ನನ್ನೇ ಆ ದೇವತೆಗಳ ಸಾರವೆಂದು ತಿಳಿದು ಪೂಜಿಸುವವರು ನನ್ನನ್ನೇ ಸೇರುತ್ತಾರೆ."

ಯೋ ದೇವೋಽಗ್ನೌ ಯೋಽಪ್ಸು ಯೋ ವಿಶ್ವಂ ಭುವನಮಾವಿವೇಶ| ಯ ಓಷ– ಧೀಷು ಯೋ ವನಸ್ಪತಿಷು ತಸ್ಮೈ ದೇವಾಯ ನಮೋ ನಮಃ || ಶ್ವೇ. ೨ ೧೭

"ಯಾವ ದೇವನು ಅಗ್ನಿಯಲ್ಲಿರುವನೋ, ಯಾವನೇ ನೀರಿನಲ್ಲಿಯೂ ಇರುವನೋ, ಯಾವನು ಎಲ್ಲಾ ಭುವನವನ್ನೂ ಒಳಹೊಕ್ಕಿರುವನೋ, ಯಾವಾತನು ಮರಗಿಡ ಗಳಲ್ಲಿಯೂ ಸಸ್ಯಗಳಲ್ಲಿಯೂ ಇರುವನೋ ಆ ದೇವನಿಗೆ ನಮಸ್ಕಾರ !"

ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಮ್|
ಪತಿಂ ಪತೀನಾಂ ಪರಮಂ ಪರಸ್ತಾತ್ ವಿದಾಮ ದೇವಂ ಭುವನೇಶಮೀಡ್ಯಮ್||
ಶ್ವೇ ೯–೭

"ಈಶ್ವರರಲ್ಲೆಲ್ಲ ಪರಮಮಹೇಶ್ವರನಾದ, ದೇವತೆಗಳೊಳಗೆಲ್ಲ ಪರಮದೇವತೆ ಯಾದ ಪತಿಗಳೊಳಗೆಲ್ಲ ಪರಮಪತಿಯಾದ ಎಲ್ಲಕ್ಕೂ ಅತೀತನಾದ, ಭುವನೇ ಶ್ವರನಾದ ಪೂಜ್ಯನಾದ ದೇವನನ್ನು ನಾವು ಅರಿಯುವಂತಾಗಲಿ !"

ದೇವತೆಗಳನ್ನು ಹೃದಯದಿಂದ ಮುಟ್ಟಬೇಕು. ನಮ್ಮ ಹೃದ್ರೋಗದಿಲ್ಲ ಹೋಗಲಿ! ಎಲ್ಲೆಲ್ಲಿಯೂ ದೇವತೆಗಳಿದ್ದಾರೆ, ದೇವತೆಗಳ ಅಂತರ್ಯಾಮಿಯೂ ಇರುತ್ತಾನೆ. ಇದನ್ನು ತೋರಿಸಿಕೊಡುವ ಸದ್ಗುರುವಿನ ಹೃದಯದೊಡನೆ ನಮ್ಮ ಹೃದಯವು ಒಂದಾಗಬೇಕು. ಶರೀರದೊಳಗೆ ಆಗುವ ಮನಸ್ತೃಪ್ತಿಯನ್ನು ಹೊರಕ್ಕೆ ಯಾರಿಗಾದರೂ ತೋರಿಸುವದಕ್ಕೆ ಬರುವದೆ? ಹೀಗೆಯೇ ದೇವತೆಗಳ ದರ್ಶನ, ಬ್ರಹ್ಮಸಂಸ್ಪರ್ಶ– ಇವೆಲ್ಲವನ್ನೂ ಹೃದಯದಿಂದಲೇ ಕಂಡುಕೊಳ್ಳಬೇಕಾಗಿದೆ. ದೇವತೆಗಳು ಅಪ್ರತ್ಯಕ್ಷರಾದರೂ ಅವರನ್ನು ಕಂಡು ಅವರಿಗೂ ನಮಗೂ ಸಂಬಂಧವನ್ನು ಉಂಟುಮಾಡಿಕೊಳ್ಳಬಹುದಾಗಿದೆ. ಮಾನವರಲ್ಲಿಯೂ ದೈವಾಂಶವಿದೆ. ವಿಜ್ಞಾನಶಾಸ್ತ್ರಜನ್ಯಬುದ್ಧಿಯಿಂದ ಮ್ಯಾಟರ್ (ದ್ರವ್ಯ), ಎನರ್ಜಿ (ಶಕ್ತಿ) –ಎಂದು ಮುಂತಾಗಿ ನಾವು ತಿಳಿದುಕೊಳ್ಳುವಂತೆಯೇ ಆಧ್ಯಾತ್ಮಿಕಶಾಸ್ತ್ರದಿಂದ ದೇವತೆಗಳನ್ನೂ ದೇವದೇವನಾದ ಈಶ್ವರನನ್ನೂ ಅರಿತುಕೊಳ್ಳಬಹುದು. ಶ್ರದ್ಧೆ ಎಂಬ ಕಾಲುವೆಯನ್ನು ಗುರುವಿನ ಹೃದಯವೆಂಬ ಜಲಾಶಯದಿಂದ ನಮ್ಮ ಹೃದಯದಕಡೆಗೂ ತೋಡಿಕೊಂಡು ದೇವತಾಬುದ್ಧಿಯ ಗಂಗೆಯನ್ನು ಹಾಯಿಸಿಕೊಳ್ಳಬಹುದು.

ಕರ್ಮಯೋಗದಲ್ಲಿ ದೇವತೋಪಾಸನೆ ಎಂಬುದೂ ಕಡಿಮೆಯ ಭೂಮಿಕೆಯೇ, ಕ್ರಮಕ್ರಮವಾಗಿ ದೇವದೇವನಾದ ಪರಮೇಶ್ವರನಿಗೆ ನಮ್ಮ ಸಮಸ್ತ ಕರ್ಮಗಳನ್ನೂ ಅರ್ಪಿಸುವದನ್ನು ಅಳವಡಿಸಿಕೊಳ್ಳುವದೇ ಗುರಿ. ಅದಕ್ಕಾಗಿಯೇ ದೇವತಾಬುದ್ಧಿಯನ್ನು ಮೊದಲು ಸಂಪಾದಿಸಿಕೊಳ್ಳಬೇಕಾಗಿದೆ.

## ೩೧. ಈಶ್ವರನ ವಿಭೂತಿಗಳು

(1[illegible]-8-62)

ಪರಮಾರ್ಥವು ಅದ್ವಿತೀಯವಾಗಿರುತ್ತದೆ ಎಂಬುದೇ ವೇದಾಂತದ ತತ್ತ್ವ. ಇದನ್ನು ಗೀತೆಯಲ್ಲಿಯೂ ಹೀಗೆಂದು ಹೇಳಿದೆ :

ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್ ಮಾಂ ಪ್ರಪದ್ಯತೇ |
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ || ಗೀ. ೧೭-೯

ಅನೇಕ ಜನ್ಮಗಳಲ್ಲಿ ಅಂತಃಕರಣಸಂಸ್ಕಾರವನ್ನು ಹೊಂದಿ "ಸಕಲಮಿದಮಹಂ ಚ ವಾಸುದೇವಃ" ಇದೆಲ್ಲವೂ ನಾನೂ ವಾಸುದೇವನೇ ಎಂಬ ತತ್ತ್ವವನ್ನು ಅರಿತುಕೊಳ್ಳುತ್ತಾನೆ. ಆತನೇ ಮಹಾತ್ಮನು, ಅವನಿಗೆ ಸಮನಾದವರಾಗಲಿ ಹೆಚ್ಚಿ

ನವರಾಗಲಿ ಮತ್ತೊಬ್ಬರಿಲ್ಲ. ಮನುಷ್ಯನಲ್ಲಿರುವ ಪರಮತತ್ತ್ವವೇ ಪರಮಾತ್ಮನ ತತ್ತ್ವ. ಮಾನವನಿಗೆ "ನಾನು ಹುಟ್ಟುತ್ತೇನೆ, ಬೆಳೆಯುತ್ತೇನೆ, ಮುದುಕನಾಗಿ ಸಾಯುತ್ತೇನೆ" ಎಂಬ ಅಲ್ಪಬುದ್ಧಿಯಿದೆ ; ಆದರಿಂದಲೇ ದುಃಖಪ್ರಪಂಚವನ್ನು ಬಿಡುವದಕ್ಕೆ ಯಾರಿಗೆ ಆಗುವದಿಲ್ಲವೋ ಅವರಿಗೆ ದುಃಖದಿಂದ ತಪ್ಪಿಸಿಕೊಳ್ಳುವದೂ ಆಗುವದಿಲ್ಲ. ನಿಜವನ್ನು ತಿಳಿಸಿ ಉದ್ಧಾರಮಾಡುವದಕ್ಕಾಗಿ ವೇದಾಂತದಲ್ಲಿ 'ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ' "ಇದೆಲ್ಲಕ್ಕೂ ಆ ಪರಮಾರ್ಥತತ್ತ್ವವೇ ಆತ್ಮನು, ಅದೇ ನಿಜವಾದ ಸತ್ಯವು, ಆ ತತ್ತ್ವವೇ ಆತ್ಮನು, ಅದೇ ನೀನು" ಎಂದು ಉಪದೇಶಿಸಿದೆ. ಈ ಉತ್ತಮತತ್ತ್ವವನ್ನು ಮನಗಾಣುವ ಮುಂಚೆ ಅತೀಂದ್ರಿಯತತ್ತ್ವಗಳನ್ನು ಮೆಟ್ಟಿಲುಮೆಟ್ಟಿಲಾಗಿ ತಿಳಿಯುವದಕ್ಕೆ ಸಜ್ಜಾಗಬೇಕು. ಸದ್ಗುರುವಿನ ಉಪದೇಶದಿಂದ ದೇವತೆಗಳ ಇರುವಿಕೆಯನ್ನು ಅರಿತುಕೊಂಡರೆ ಆ ಬಳಿಕ ದೇವದೇವನಾದ ಭಗವಂತನ ತತ್ತ್ವವನ್ನು ಅರಿತುಕೊಳ್ಳಬಹುದಾಗಿರುತ್ತದೆ.

ಅರ್ಜುನನು ಆಧ್ಯಾತ್ಮದ ಉಪದೇಶವನ್ನು ಭಗವಂತನಿಂದ ಹೊಂದಿದ ಮೇಲೂ "ಭಗವಂತನೆ, ನಿನ್ನನ್ನು ಯಾವಯಾವ ಭಾವಗಳಲ್ಲಿ ಚಿಂತಿಸಲಿ ?" ಎಂದು ಕೇಳಿದನು. ಪುಷ್ಕರಣಿಯ ಮೆಟ್ಟಿಲಿನಮೇಲೆ ನಿಂತಿರುವವನೇ 'ಕಲ್ಲೆಂದರೆ ಯಾವದು ?' ಎಂದು ಕೇಳುವಂತೆಯೂ, ವಾಯುವಿನಲ್ಲಿಯೇ ಸಂಚರಿಸುತ್ತಿದ್ದವನೇ 'ವಾಯುವೆಂದರೆ ಯಾವದು ?' ಎಂದು ಕೇಳಿದಂತೆಯೂ ಇದೆ, ಈ ಪ್ರಶ್ನೆ ! ಇದಕ್ಕೆ ಭಗವಂತನು ಕೊಟ್ಟ ಉತ್ತರವೇನು ?

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ |
ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ || ಗೀ. ೧೦–೨೦.

'ಅರ್ಜುನನೆ, ಸರ್ವಭೂತಗಳ ಹೃದಯದಲ್ಲಿಯೂ ಇರುವ ಆತ್ಮನು ನಾನು ; ನಾನು ಭೂತಗಳಿಗೆ ಆದಿ, ಮಧ್ಯ, ಅಂತ್ಯ– ಎಲ್ಲವೂ ಆಗಿರುವೆನು' ಪರಮಾತ್ಮನನ್ನು ಎಲ್ಲಿ ಪೂಜಿಸಬೇಕು ?– ಎಂದು ಕೇಳುವದೇಕೆ ? ಆತನು ಎಲ್ಲಾ ವಿಭೂತಿಗಳಿಗೂ ಆದಿಮಧ್ಯಾಂತನಾಗಿರುತ್ತಾನೆ; ಆತನನ್ನು ಬಿಟ್ಟು ಯಾವದೊಂದೂ ಇರಲಾರದು, ಆತನೇ ಎಲ್ಲಕ್ಕೂ ತಿರುಳು. ಆದ್ದರಿಂದ ಭಗವಂತನು ಎಲ್ಲಕ್ಕೂ ಆತ್ಮನೇ ಎಂದೇ ಚಿಂತಿಸಬೇಕು. ಇದಾಗದಿದ್ದರೆ ಹತ್ತನೆಯ ಅಧ್ಯಾಯದಲ್ಲಿ ಹೇಳಿರುವ ಉಳಿದ ವಿಭೂತಿಗಳನ್ನು ಚಿಂತಿಸಬೇಕು. ಇದೇ ವೇದಾಂತದ ಸಾರ ; ಮಾನವನ ಆತ್ಮನೇ ಪರಮಾರ್ಥತತ್ತ್ವ– ಎಂದು ಹೇಳುವದರಿಂದಲೇ ವೇದಾಂತವು ಜೀವಂತದರ್ಶನವಾಗಿರುತ್ತದೆ.

ಎಲ್ಲಾ ಪ್ರಾಣಿಗಳಲ್ಲಿಯೂ ಭಗವಂತನು ಆತ್ಮನಾಗಿದ್ದುಕೊಂಡಿರುವನೆಂಬ ಉತ್ತಮತತ್ತ್ವವನ್ನು ಅರಿತುಕೊಂಡವನಿಗೆ 'ಪ್ರಾಣಿಗಳಿಗೆ ಆತ್ಮನಿಲ್ಲ'ವೆಂಬ

ತುಚ್ಛಕಲ್ಪನೆಯು ಬರಲಾರದು; ಪ್ರಾಣಿಗಳ ಹಿಂಸೆಗೆ ಮನಸ್ಸು ಒಲಿಯಲಾರದು. ಮಿಕ್ಕ ಜನರನ್ನು ಕೀಳೆಂದು ತಿಳಿಯುವದೂ ಒಬ್ಬರೊಡನೊಬ್ಬರು ಕಚ್ಚಾಡುವ ದಕ್ಕೆ ಯತ್ನಿಸುವದೂ ಈ ದೃಷ್ಟಿಯಲ್ಲಿ ಸಾಧ್ಯವಿಲ್ಲ. ಪ್ರಾಣಿಗಳನ್ನೆಲ್ಲ ಆಳುವ ದಕ್ಕೆ ಮನುಷ್ಯನು ಹುಟ್ಟಿರುವನೆಂಬ ಕೀಳ್ತನದ ಬುದ್ಧಿಗೆ ಅವಕಾಶವಿಲ್ಲ.

ಈಶ್ವರೋ ಜೀವಕಲಯಾ ಪ್ರವಿಷ್ಟೋ ಭಗವಾನಿತಿ | (ಭಾಗವತ ೩-೨೯-೩೪) ಸಂನ್ಯಾಸಿಯಾದವನು ಸರ್ವಪ್ರಾಣಿಗಳಲ್ಲಿಯೂ ಈಶ್ವರನು ಜೀವನೆಂಬ ಅಂಶದಿಂದ ಪ್ರವಿಷ್ಟನಾಗಿರುತ್ತಾನೆಂಬ ಭಾವನೆಯಿಂದ ನಾಯಿ, ಚಂಡಾಲ, ಗೋವು, ಕತ್ತೆ-ಎಲ್ಲವನ್ನೂ ನಮಸ್ಕರಿಸಬೇಕು (ಭಾಗವತ ೧೧-೨೯-೧೬) ಎಂಬ ಪುರಾಣೋಕ್ತಿಗೆ ಇದೇ ಅಭಿಪ್ರಾಯ. ಜನರು ಈಗ ತಿಳಿದಿರುವಂತೆ ಈಶ್ವರನು ಒಂದಾನೊಂದು ಗುಡಿಯನ್ನು ಹೊಕ್ಕಿಲ್ಲ ; ಅವನನ್ನು ಪೂಜಾರಿಗಳು ಬಾಗಿಲಿಗೆ ಬೀಗವನ್ನು ಹಾಕಿ ಭದ್ರವಾಗಿರಿಸಿಕೊಳ್ಳುವದಕ್ಕೆ ಆಗುವದಿಲ್ಲ ; ದೇವಾಲಯಪ್ರವೇಶಕ್ಕೆ ಹಕ್ಕು ಬೇಕು ಎಂದು ಹರಿಜನರೇ ಮುಂತಾದವರು ಕಲಹವನ್ನು ಎಬ್ಬಿಸುವದಕ್ಕೆ ಕಾರಣವಿಲ್ಲ. ಪರಮಾತ್ಮನು ಸರ್ವವ್ಯಾಪಕನೆಂಬ ಬುದ್ಧಿ ಬರಬೇಕೆಂಬುದೇ ಅಧ್ಯಾತ್ಮವಿದ್ಯೆಯ ಉಪದೇಶದ ಗುರಿ. ಹೀಗೆ ಈಶ್ವರನು ಸರ್ವರಿಗೂ ಆತ್ಮನಾಗಿರುತ್ತಾನೆಂಬ ಭಾವನೆಯನ್ನು ಮಾಡಿಕೊಳ್ಳುವದಕ್ಕೆ ಶಕ್ತರಲ್ಲದವರಿಗೆ ಗೀತೆಯು ಹತ್ತನೆಯ ಅಧ್ಯಾಯದಲ್ಲಿ ಹೇಳಿರುವ ಉಳಿದ ವಿಭೂತಿಗಳ ಉಪಾಸನೆಯನ್ನು ಹೇಳಿದೆ

ಆದಿತ್ಯಾದಿವಿಭೂತಿಗಳನ್ನು ಹೀಗೆಯೇ ಹೃದಯದಲ್ಲಿ ಶ್ರದ್ಧೆಯನ್ನಿಟ್ಟುಕೊಂಡು ಉಪಾಸನೆಮಾಡಬೇಕು. 'ಆದಿತ್ಯರಲ್ಲಿ ನಾನು ವಿಷ್ಣುವು' (೧೦-೨೧) ಎಂದು ಭಗವಂತನು ಹೇಳಿರುತ್ತಾನೆ. ಆದಿತ್ಯನೆಂದರೆ ನಮಗೆ ಈಗ ಒಂದು ಉಷ್ಣದ ಗಟ್ಟಿಯಾಗಿದೆ. ಅದರ ಶಕ್ತಿಯನ್ನು ಬಳಸಿಕೊಂಡು ಅನೇಕ ಲೌಕಿಕಕಾರ್ಯಗಳಿಗೆ ಉಪಯೋಗಿಸಿಕೊಳ್ಳಬಹುದು ಎಂದು ವಿಜ್ಞಾನಶಾಸ್ತ್ರದ ಹೇಳಿಕೆ ಇರಬಹುದು. ಮನೆಗೆ ಬೆಂಕಿಬಿದ್ದಾಗ 'ಆರಿಸಬೇಡಿ, ಸ್ವಲ್ಪ ಬೀಡಿಯನ್ನು ಹತ್ತಿಸಿಕೊಳ್ಳುತ್ತೇನೆ' ಎಂಬ ಮೂರ್ಖನ ದೃಷ್ಟಾಂತವು ನೆನಪಾಗುತ್ತದೆ, ಜನರ ಅವಿವೇಕವನ್ನು ನೋಡಿದರೆ ಸೂರ್ಯಮಂಡಲವು ಒಬ್ಬ ಉತ್ಕೃಷ್ಟದೇವತೆಯ ಶರೀರವೆಂದೂ ಆ ದೇವನಲ್ಲಿಯೂ ಅಂತರ್ಯಾಮಿಯಾಗಿ ಭಗವಂತನು ಇರುತ್ತಾನೆಂದೂ ನಮ್ಮವರು ಹೇಳುತ್ತಿದ್ದರು. ಸೂರ್ಯೋಪಾಸನೆಯು ಒಂದಾನೊಂದು ಕಾಲದಲ್ಲಿ ಬಹಳ ಪ್ರಚುರವಾಗಿದ್ದಿತು ; ಈಗ್ಗೆ ಅದೆಲ್ಲ ನಮ್ಮ ಪಾಲಿಗೆ ಮೂಢವಿಶ್ವಾಸವೆಂದಾಗಿಬಿಟ್ಟಿದೆ. ಸೂರ್ಯನಿಂದ ಲೋಕಕ್ಕೆ ಆಗುವ ಐಹಿಕವಾದ ಫಲಗಳು ಪ್ರತ್ಯಕ್ಷವಾಗಿಬಿಟ್ಟಿರುತ್ತವೆಯಾದರೂ 'ಯ ಆದಿತ್ಯೇ ತಿಷ್ಠನ್ ಆದಿತ್ಯಾದನ್ತರೋ ಯಮಾದಿತ್ಯೋ ನ ವೇದ ಯಸ್ಯಾದಿತ್ಯಃ ಶರೀರಂ ಯ ಆದಿತ್ಯಮನ್ತರೋ ಯಮಯತಿ ಏಷ ಆತ್ಮಾ ಅನ್ತರ್ಯಾಮ್ಯಮೃತಃ || ಬೃ.

(೩-೨-೯) ಎಂಬ ವೇದೋಕ್ತಿಯು ನಮ್ಮ ಪಾಲಿಗೆ ಅರ್ಥವಿಲ್ಲದ ವಾಕ್ಯವಾಗಿ ಬಿಟ್ಟಿದೆ. ಆಕಾಶವನ್ನು ನೋಡುವದಕ್ಕೆ ನೂಕು ನುಗ್ಗಲೆ? ಇಲ್ಲಿಯೂ ಪಾಶ್ಚಾತ್ಯರ ಉಪದೇಶವೇ ಬೇಕೆ? 'ಧ್ಯೇಯಃ ಸದಾ ಸವಿತೃಮಣ್ಡಲಮಧ್ಯವರ್ತೀ ನಾರಾಯಣಃ' ಸೂರ್ಯಮಂಡಲದಲ್ಲಿರುವ ನಾರಾಯಣನನ್ನು ಯಾವಾಗಲೂ ಧ್ಯಾನಿಸಬೇಕು-ಎಂಬ ಉಕ್ತಿಯನ್ನನುಸರಿಸಿ ಈಗಲೂ ಸೂರ್ಯನಮಸ್ಕಾರ ಮಾಡುತ್ತಾ, ಆರೋಗ್ಯ, ಬಲ, ಬುದ್ಧಿ- ಮುಂತಾದ ಫಲಗಳನ್ನು ಪಡೆಯುತ್ತಿರುವ ಆಸ್ತಿಕರು ಇನ್ನೂ ತಕ್ಕಮಟ್ಟಿನ ಸಂಖ್ಯೆಯಲ್ಲಿ ನಮ್ಮ ದೇಶದಲ್ಲಿರುತ್ತಾರೆ. ಪಾಶ್ಚಾತ್ಯರು ಏನು ಹೇಳಿದರೇನು? ತಾನು ಉದಯಿಸಿದ ಕಡೆಯೇ ಪೂರ್ವವೆಂದು ತೋರಿಸಿಕೊಳ್ಳುತ್ತಿರುವ ಸೂರ್ಯನು ನಮ್ಮಗಳೆಗೆಲ್ಲ ಪ್ರಾಣವಾಗಿರುತ್ತಾನೆ. ಅವನನ್ನು ಭಗವಂತನ ವಿಭೂತಿಯೆಂದು ಉಪಾಸನೆಮಾಡುವದರಿಂದ ನಮಗೆ ಶ್ರೇಯಸ್ಸುಂಟೆಂದು ನಂಬೋಣ. 'ಸ ಯಶ್ಚಾಯಂ ಪುರುಷೇ | ಯಶ್ಚಾಸಾವಾದಿತ್ಯೇ | ಸ ಏಕಃ' (ತೈ ೨-೮) ಮನುಷ್ಯರೊಳಗಿರುವ ಆತ್ಮನೂ ಆದಿತ್ಯನಲ್ಲಿರುವ ಪರಮಾತ್ಮನೂ ಒಬ್ಬನೇ ಎಂಬ ಶ್ರುತಿವಾಕ್ಯಕ್ಕೆ ಕಿವಿಗೊಡೋಣ

ಗೀತೆಯಲ್ಲಿ ಹೇಳಿರುವ ವಿಭೂತಿಗಳಲ್ಲಿ ಕೆಲವನ್ನೇ ಇಲ್ಲಿ ಪ್ರಸ್ತಾಪಿಸುತ್ತೇನೆ. 'ವೇದಾನಾಂ ಸಾಮವೇದೋಽಸ್ಮಿ' (೧೦-೨೨) ಎಂಬುದು ವೇದಾಧ್ಯಯನವು ಬಹಳವಿರಳವಾಗಿರುವ ಈಗಿನ ಕಾಲಕ್ಕೆ ಅರ್ಥವಾಗುವಂತಿಲ್ಲ. ಸೂರ್ಯನನ್ನು ಕೂಡ ವೇದಾತ್ಮಕನೆಂದೂ ವೈದಿಕಕರ್ಮಗಳ ಫಲವೆಂದೂ ಹಿಂದಿನವರು ಭಾವಿಸಿದ್ದರು. ಋಗ್ವೇದದ ಮಂತ್ರಗಳನ್ನೇ ಗೀತವಾಗಿ ಯಜ್ಞದಲ್ಲಿ ದೇವತೆಗಳನ್ನು ಸ್ತೋತ್ರಮಾಡುವದಕ್ಕೆ ಉಪಯೋಗಿಸುತ್ತಿದ್ದರು. ಆದಕ್ಕೆ 'ಸಾಮ'ವೆಂದು ಹೆಸರು. ಹಲವು ಕಾರಣಗಳಿಂದ ಸಂಸ್ಕೃತಭಾಷೆಯ ಪ್ರಚಾರವೇ ಕುಗ್ಗುತ್ತಿರುವ ಈ ಕಾಲಕ್ಕೆ ವೇದದ ಮಹಿಮೆಯಾಗಲಿ ವೇದಾರ್ಥಾನುಷ್ಠಾನದ ಪ್ರಯೋಜನವಾಗಲಿ ಹೇಗೆ ತಿಳಿಯಬೇಕು? ಭಾರತದೇಶದ ಯಾವಯಾವ ಕಡೆಯಲ್ಲಿ ವೇದಾಧ್ಯಯನವು ಎಷ್ಟರಮಟ್ಟಿಗೆ ಉಳಿದುಕೊಂಡಿದೆ ಎಂಬುದನ್ನು ಒಬ್ಬ ವಿದ್ರಾಸಿನ ತತ್ತ್ವಾನ್ವೇಷಕರು ವರದಿಮಾಡಿದರು; ಅವರ ಭಾಷಣಕ್ಕೆ ಟೇಪ್‌ರಿಕಾರ್ಡುಗಳಿಂದ ಉದಾಹರಣೆಯನ್ನು ಕೊಡಬೇಕಾಗಿಬಂದಿತ್ತು! ವೇದಗಳೊಳಗೆ ಸಾಮವೇದವಂತೂ ಬಹಳವಾಗಿ ಖಿಲವಾಗುತ್ತಿದೆ. ನಮ್ಮ ದೇಶದ ಸಂಸ್ಕೃತಿಯು ಅಭಿಮಾನವಿರುವವರು ವೇದಾಧ್ಯಯನಕ್ಕೆ ಪ್ರೋತ್ಸಾಹವನ್ನು ಕೊಟ್ಟರೆ ಅದೇ ಒಂದು ಉಪಾಸನೆಯೆಂದು ಭಗವಂತನು ಭಾವಿಸಿಯಾನೆಂಬುದಕ್ಕೆ ಸಂಶಯವಿಲ್ಲ.

'ಇಂದ್ರಿಯಾಣಾಂ ಮನಶ್ಚಾಸ್ಮಿ' ಇಂದ್ರಿಯಗಳೊಳಗೆ ಮನಸ್ಸು ನಾನು ಎಂದು ಭಗವಂತನು ಹೇಳಿರುವದು ಮನನೀಯವಾಗಿದೆ. ಹ್ಯಾಮಿಲ್ಟನ್ ಎಂಬಾತನು ಹೇಳಿರುವಂತೆ ಪ್ರಪಂಚದಲ್ಲಿ ಮನುಷ್ಯನಿಗಿಂತ ಹೆಚ್ಚಿನದಿಲ್ಲ; ಮನುಷ್ಯರಲ್ಲಿ

ಮನಸ್ಸಿಗಿಂತ ಹೆಚ್ಚಿನದಿಲ್ಲ. ಇಲ್ಲಿ 'ಮನಸ್ಸು' ಎಂದರೆ ಅಂತಃಕರಣವು ; ಇದು ಮನನಮಾಡುವ ಮನಸ್ಸು, ನಿಶ್ಚಯಿಸಿ ತಿಳಿಯುವ ಬುದ್ಧಿ, ಅನುಸಂಧಾನ ಮಾಡುವ ಚಿತ್ತ, ಅಭಿಮಾನಪಡುವ ಅಹಂಕಾರ- ಎಂದು ವೃತ್ತಿಭೇದದಿಂದ ನಾಲ್ಕು ವಿಧವಾಗಿದೆ. ಮನುಷ್ಯನಿಗೆ ಈಶ್ವರನು ಅನುಗ್ರಹಿಸಿರುವ ವರಗಳಲ್ಲಿ ಇದೊಂದು ಬಲುಹೆಚ್ಚಿನ ಬೆಲೆಯುಳ್ಳದ್ದು. ಇದರ ಸದುಪಯೋಗವನ್ನು ಮಾಡಿಕೊಂಡು ನಾವು ಭಗವಂತನಿಗೆ ಕೃತಜ್ಞರಾಗಿರಬೇಕು. 'ಮನುಷ್ಯರಲ್ಲಿರುವ ಮನಸ್ಸೇ ನಾನು ಎಂದು ಧ್ಯಾನಿಸು' ಎಂದು ಭಗವಂತನು ಇದನ್ನು ತನ್ನ ವಿಭೂತಿಯೆಂದು ಹೊಗಳಿರುವದು ಅದರ ಯೋಗ್ಯತೆಗೆ ತಕ್ಕಂತೆಯೇ ಇದೆ.

'ಸರಸಾಮಸ್ಮಿ ಸಾಗರಃ" ದೇವಖಾತವಾಗಿರುವ ಜಲಾಶಯಗಳಲ್ಲಿ ಸಾಗರವು ನಾನು-ಎಂದು ಭಗವಂತನು ಮತ್ತೊಂದು ವಿಭೂತಿಯನ್ನು ನಮ್ಮ ಕಣ್ಣಮುಂದೆ ಇಟ್ಟಿರುತ್ತಾನೆ. ಸಮುದ್ರದಮೇಲೆ ಹಡಗನ್ನು ನಡೆಯಿಸುವದು, ಜಹಜು ಯುದ್ಧದಲ್ಲಿ ದೇಶಾಂತರವನ್ನು ಗೆಲ್ಲುವದು ಮನುಷ್ಯನ ಚುರುಕುಬುದ್ಧಿಯನ್ನು ಸೂಚಿಸಬಹುದು. ಅದರ ಆಧ್ಯಾತ್ಮಿಕವಾದ ಆಳವನ್ನು ಮನದಂದುಕೊಂಡು ಸುಖಿಸುವ ಉಪಾಸನಾಶಕ್ತಿಯು ಎಲ್ಲರಿಗೂ ದಕ್ಕಲಾರದು. 'ಬ್ರಾಹ್ಮಣನು ಸಮುದ್ರಯಾನವನ್ನು ಮಾಡಬಾರದು' ಎಂದು ಸ್ಮೃತಿಕಾರರು ಹೇಳಿರುವದರ ಆಶಯವನ್ನು ಅರಿಯಬೇಕಾದರೆ ಸಾಗರವೆಂಬುದು ಸರ್ವತೀರ್ಥಗಳ ಸಾರವನ್ನೂ ಇಟ್ಟುಕೊಂಡಿರುತ್ತದೆ-ಎಂಬ ಭಾವನೆಯು ಮನಸ್ಸಿನೊಳಗೆ ಬರಬೇಕು. ಸಮುದ್ರದಲ್ಲಿ ಮೀನುಗಳೇ ಮುಂತಾದವುಗಳನ್ನು ಹಿಡಿದು ಆಹಾರವಾಗಿ ಉಪಯೋಗಿಸಿ ಅದನ್ನು ಸಂಕುಚಿತವಾದ ವಾಣಿಜ್ಯದೃಷ್ಟಿಯಿಂದ ನೋಡುವವರಿಗೆ ಆ ಭಾವನೆಯು ಸಿಕ್ಕಲಾರದು.

'ಅಶ್ವತ್ಥಃ ಸರ್ವವೃಕ್ಷಾಣಾಮ್' ವೃಕ್ಷಗಳೊಳಗೆ ಅಶ್ವತ್ಥವು ನಾನು- ಎಂಬ ಮತ್ತೊಂದು ವಿಭೂತಿ. ಅಶ್ವತ್ಥವು ಬಹುಪವಿತ್ರವಾದ ವೃಕ್ಷವೆಂಬ ಭಾವನೆ ನಮ್ಮ ದೇಶದಲ್ಲಿ ಬಂದಿರುತ್ತದೆ. ಪುರಾಣಗಳಲ್ಲಿ ಪುರಾತನಕಾಲದಿಂದಲೂ ಬ್ರಹ್ಮ, ವಿಷ್ಣು, ಮಹೇಶ್ವರ- ಎಂಬ ತ್ರಿಮೂರ್ತಿಗಳು ಇದರಲ್ಲಿ ಸಂನಿಹಿತರಾಗಿರುತ್ತಾರೆಂದು ವರ್ಣಿಸಿರುವದನ್ನು ಇಲ್ಲಿ ಮನದಂದುಕೊಳ್ಳಬೇಕು. ಇದರ ಕೆಳಗೆ ಎಷ್ಟೋ ಋಷಿಗಳು ತಪಸ್ಸುಮಾಡಿರುತ್ತಾರೆ. ಗೌತಮಬುದ್ಧನು ಈ ಮರದ ಕೆಳಗೆ ಕುಳಿತು ತಪಸ್ಸುಮಾಡಿ ಸಂಸಾರದ ದುಃಖನಿದಾನವನ್ನೂ ದುಃಖಪರಿಹಾರದ ಉಪಾಯವನ್ನೂ ಕಂಡುಹಿಡಿದನೆಂದೂ ಆ ತಿಳಿವಳಿಕೆಯು ಈ ಮರದ ಕೆಳಗೆ ಬಂದದ್ದರಿಂದ ಇದಕ್ಕೆ 'ಬೋಧಿವೃಕ್ಷ'ವೆಂಬ ಹೆಸರು ಬೌದ್ಧಧರ್ಮದವರಲ್ಲಿ ಪ್ರಸಿದ್ಧವಾಗಿದೆಯೆಂದೂ ಸಾಧಕರು ಮನಸ್ಸಿನಲ್ಲಿ ಹೊರಳಾಡಿಸಿದರೆ ಈ ವಿಭೂತಿಯ ಹೆಚ್ಚು [illegible] ಗುವದು.

'ನರಾಣಾಂ ಚ ನರಾಧಿಪಮ್' ಮನುಷ್ಯರೊಳಗೆ ರಾಜನೆಂದು ತಿಳಿ– ಎಂದು ಭೂಪತಿಯನ್ನು ವಿಭೂತಿಯೆಂದು ಕರೆದಿದೆ. ಇದು ಪ್ರಜೆಗಳಿಗೆ ಧರ್ಮ ಪರಾಯಣನಾದ ಅಧಿಕಾರಿಯಲ್ಲಿರಬೇಕಾದ ಭಾವನೆಯನ್ನು ಸೂಚಿಸುತ್ತದೆ. ಆದರೆ ಇದರಿಂದ ಆಳುವವರು 'ನಾವು ಭಗವದಂಶಸಂಭೂತರು ; ನಮ್ಮನ್ನು ಯಾರೂ ಏನುಮಾಡಿದರೂ ಪ್ರಶ್ನಿಸಕೂಡದು' –ಎಂದು ತಿಳಿಯುವಹಾಗಿಲ್ಲ. ಬಹುಪುರಾತನ ಕಾಲದಲ್ಲಿ ವೇನ, ನಹುಷ– ಮುಂತಾದವರು ಅಧಿಕಾರದ ಮದದಿಂದ ಋಷಿಗಳ ಶಾಪಕ್ಕೆ ತುತ್ತಾಗಿ ತಮ್ಮ ಪದವಿಯಿಂದ ಚ್ಯುತರಾದರೆಂಬ ಪುರಾಣಕಥೆಗಳಿಂದ ಈ ತಪ್ಪುಭಾವನೆಯು ಯಾರಿಗೂ ಸಂಮತವಲ್ಲವೆಂಬುದನ್ನು ನಿಶ್ಚಯಿಸಬಹುದು. ಈಗ್ಗೆ ಬಹಳ ದೇಶಗಳಲ್ಲಿ ರಾಜರುಗಳು ಪದಚ್ಯುತರಾಗಿರುತ್ತಾರೆ. ಆದರೂ ಪ್ರಜೆ ಗಳಾದವರು ಆಳುವವರಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಮಾತ್ರ ಈ ವಿಭೂತ್ಯುಪಾಸನೆಯ ಉಪದೇಶದಿಂದ ಗ್ರಹಿಸತಕ್ಕದ್ದು.

'ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್' ಗುಟ್ಟುಗಳಲ್ಲೆಲ್ಲ ಮೌನವೇ ಪರಮಾತ್ಮನು ; ತತ್ತ್ವವನ್ನು ನಿರಂತರವಾಗಿ ಮನನ ಮಾಡುತ್ತಾ ನಲಿಯುವದು ಭಗವಂತನ ಅನುಗ್ರಹದಿಂದ ಮಾತ್ರವೇ ಸಾಧ್ಯ. ಮಿಕ್ಕ ಎಲ್ಲ ಗುಟ್ಟುಗಳೂ ಒಂದಲ್ಲದಿದ್ದರೆ ಒಂದುದಿನ ರಟ್ಟಾಗುವವು; ಆದರೆ ಮೌನವು ಮುನಿಯಾಗಿರುವವನಿಗೇ ಮೀಸಲು. ಅದನ್ನು ಯಾರೂ ಅವನಿಂದ ಕಸಿದುಕೊಳ್ಳು ವದಕ್ಕೆ ಬರುವಂತಿಲ್ಲ. ಗುಹ್ಯವೆಂದರೆ ಕಾದಿರಿಸಿಕೊಳ್ಳಬೇಕಾದದ್ದು ಎಂಬರ್ಥ ವನ್ನು ಮಾಡಬಹುದು. ಮನುಷ್ಯನು ತನಗೆ ಆಪದ್ಧನವಾಗಿರಲೆಂದು ಬಲುಬೆಳೆ ಯುಳ್ಳ ಪದಾರ್ಥಗಳನ್ನು ಯಾರಿಗೂ ಸಿಕ್ಕದಂತೆ ರಹಸ್ಯವಾಗಿ ಇಟ್ಟುಕೊಳ್ಳು ತ್ತಾನಲ್ಲವೆ? ಇಂಥ ಪದಾರ್ಥಗಳಲ್ಲಿ ಮೌನಕ್ಕಿಂತ ಹೆಚ್ಚಿನ ಗುಹ್ಯವು ಇನ್ನೊಂದಿಲ್ಲ. ಅದು ಸದ್ಗುರುವಿನ ಕೃಪೆಯಿಂದಲೂ ಈಶ್ವರನ ಅನುಗ್ರಹದಿಂದಲೂ ಹೃದಯ ಪೂರ್ವಕವಾಗಿ ಶುಶ್ರೂಷೆಮಾಡುವ ಜಿಜ್ಞಾಸುವಾದ ಶಿಷ್ಯನಿಗೆ ಮಾತ್ರವೇ ದೊರೆಯತಕ್ಕದ್ದಾಗಿರುತ್ತದೆ. ಜ್ಞಾನವೂ ಹಾಗೆಯೇ. ಅದು ನಿಜವಾಗಿ ಭಗವಂತನ ಸ್ವರೂಪವೇ ಆಗಿದ್ದು ಯಾರಿಗೆ ಲಭಿಸಿದರೆ ಅವರನ್ನು ಸಂಸಾರಬಂಧದಿಂದ ಮುಕ್ತ ರನ್ನಾಗಿ ಮಾಡುವದು. ಆದ್ದರಿಂದ ಅದನ್ನು ಭಗವಂತನೆಂದೇ ಗೌರವದಿಂದ ಭಾವಿಸಿ ತನ್ನ ಹೃದಯದಲ್ಲಿಟ್ಟುಕೊಂಡು ಯೋಗ್ಯರಿಗೆ ಮಾತ್ರ ಹಂಚಬೇಕು. ಜ್ಞಾನದಾತೃವೂ ಜ್ಞಾನವನ್ನು ಗ್ರಹಿಸುವವನೂ ಅದನ್ನು ಭಗವತ್ಸ್ವರೂಪವೆಂದೇ ಗೌರವಿಸಬೇಕು.

'ಕೀರ್ತಿಃ ಶ್ರೀರ್ವಾಕ್ಚ ನಾರೀಣಾಮ್' ಸ್ತ್ರೀಯರಲ್ಲಿ ಕೀರ್ತಿ, ಲಕ್ಷ್ಮಿ ಮತ್ತು ವಾಗ್ದೇವಿ–ಇವರು ಭಗವಂತನ ವಿಭೂತಿಗಳು. 'ಸ್ಮೃತಿ, ಮೇಧಾ, ಧೃತಿ, ಕ್ಷಮಾ' ಇವರೂ ಹಾಗೆಯೇ. ಆತ್ಮವಿದ್ಯಾನಿಮಿತ್ತವಾದ ಯಶಸ್ಸು, ಬ್ರಹ್ಮಶ್ರೀ

ಸಂಪತ್ತು, ಸನ್ಮಾರ್ಗಕ್ಕೆ ಒಯ್ಯುವ ಮಾತು, ತತ್ತ್ವದ ನಿರಂತರಸ್ಮರಣೆ, ತತ್ತ್ವ ಗ್ರಂಥಗಳ ಅಥವಾ ತತ್ತ್ವಬೋಧೆಯ ಸಾರವನ್ನು ಮರೆಯದಿರುವದು, ಶರೀರಕರಣ ಸಂಘಾತವನ್ನು ಕುಸಿಯದಂತೆ ಹಿಡಿದಿಟ್ಟುಕೊಳ್ಳುವ ಶಕ್ತಿ, ತನ್ನನ್ನು ಬಯ್ದರೂ ಹೊಡೆದರೂ ಚಿತ್ತದಲ್ಲಿ ವಿಕಾರವಾಗದಿರುವ ತಾಳ್ಮೆ- ಇವುಗಳೆಲ್ಲಕ್ಕೂ ಆಯಾ ಅಭಿಮಾನಿದೇವತೆಯ ಅನುಗ್ರಹವೇ ಬೇಕು. ಈ ದೇವತೆಗಳನ್ನು ಪರಮಾತ್ಮನ ವಿಭೂತಿಗಳೆಂದು ಭಾವಿಸಬೇಕು. 'ಯಾಸಾಮಾಭಾಸಮಾತ್ರಸಂಬನ್ಧೇನಾಪಿ ಲೋಕಃ ಕೃತಾರ್ಥಮಾತ್ಮಾನಂ ಮನ್ಯತೇ' ಎಂದಿದಾರೆ ಆಚಾರ್ಯರು. ಈ ಕೀರ್ತಿಯೇ ಮುಂತಾದವುಗಳ ಮೂಲರೂಪವು ಸಿಕ್ಕುವದಿರಲಿ, ಇವುಗಳ ಆಭಾಸ ಮಾತ್ರದಿಂದಲೇ ತಾನು ಕೃತಾರ್ಥನೆಂದು ಜನರು ತಿಳಿಯುತ್ತಾರೆ- ಎಂದರ್ಥ. ಆದ್ದರಿಂದ ಸತ್ಕೀರ್ತಿಯೇ ಮುಂತಾದ ರೂಪದಿಂದ ಪರಮಾತ್ಮನನ್ನು ಉಪಾಸನೆ ಮಾಡಬೇಕು.

ಹೀಗೆ ವಿಭೂತಿಗಳನ್ನು ಉಪಾಸನೆಮಾಡುತ್ತಾ ಇದ್ದರೆ ಈ ಜಗತ್ತೆಲ್ಲವೂ ಪರಮಾತ್ಮನೇ ಎಂಬ ಅರಿವು ಮನದಲ್ಲಿ ಮಿಂಚುವದು. ವಿಭೂತಿಗಳು ಇಲ್ಲಿ ಹೇಳಿರುವಷ್ಟೇ ಎಂದು ತಿಳಿಯಬಾರದು :

ಯದ್ಯದ್ ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ |
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ || ಗೀ. ೧೦-೪೧

ಯಾವಯಾವದು ವಿಭೂತಿಯಿಂದ- ಹೆಚ್ಚುಗಾರಿಕೆಯಿಂದ, ಸಮೃದ್ಧಿಯಿಂದ, ಮೇಲ್ಮೆಯಿಂದ, ಅಥವಾ ಅಣಿಮಾದಿಸಿದ್ಧಿಯಿಂದ- ಕೂಡಿರುವದೋ, ಯಾವ ಯಾವದು ಲಕ್ಷ್ಮೀಯುಕ್ತವಾಗಿರುವದೋ, ಊರ್ಜಿತವಾಗಿ ಎಂದರೆ ಉತ್ಸಾಹ ಶಕ್ತಿಯಿಂದೊಡಗೂಡಿರುವದೋ, ಅಂಥ ವಸ್ತುವೆಲ್ಲವನ್ನೂ ನನ್ನ ತೇಜಸ್ಸಿನ ಒಂದಂಶದಿಂದ ಉಂಟಾದದ್ದು ಎಂದು ತಿಳಿದುಕೋ- ಎಂದು ಭಗವಂತನು ಅಪ್ಪಣೆ ಕೊಡಿಸಿರುತ್ತಾನೆ. ಈಗ ಜನರಿಗೆ ವೀರರನ್ನು ಗೌರವಿಸುವ ಅಭಿಮಾನ, ಸ್ವಜನಾ ಭಿಮಾನ, ಸ್ವರಾಷ್ಟ್ರಾಭಿಮಾನ- ಎಂದು ಮುಂತಾಗಿ ಬಂದಿರುವ ಭಾವಗಳನ್ನು ಹೀಗೆ ವಿಭೂತಿಗಳ ಉಪಾಸನೆಯೆಂದೇ ಮಾಡಿಕೊಂಡರೆ ಅವಕ್ಕೂ ಹೆಚ್ಚು ಕಳೆ ಬರುತ್ತದೆ.

ವಿಭೂತ್ಯುಪಾಸನೆಯು ಏತರಲ್ಲಿ ಕೊನೆಗಾಣಬೇಕೆಂಬುದನ್ನು ಭಗವಂತನು ಹೀಗೆ ಹೇಳಿಕೊಟ್ಟಿದ್ದಾನೆ :

ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ |
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ || ಗೀ. ೧೦-೪೨

ಒಂದೊಂದಾಗಿ ವಿಭೂತಿಗಳನ್ನು ತಿಳಿದದ್ದರಿಂದ ಆಗಬೇಕಾದದ್ದೇನು? ಭಗವಂತನು ಈ ಜಗತ್ತೆಲ್ಲದರ ರೂಪದಿಂದ ತನ್ನ ಒಂದಂಶವನ್ನು ಮಾತ್ರ ತೋರಿಸಿಕೊಂಡಿರುತ್ತಾನೆ.

'ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' | ಋ.

೧೦-೯೦ ೩

ಸರ್ವಭೂತಗಳೂ ಈತನ ಭಾಗಪಾಲುಮಾತ್ರ, ಇನ್ನುಳಿದ ಮೂರುಪಾಲು ಅಮೃತಸ್ವರೂಪವಾಗಿದ್ದುಕೊಂಡು ತನ್ನ ದಿವ್ಯಮಹಿಮೆಯಲ್ಲಿಯೇ ಇದ್ದುಕೊಂಡಿರುತ್ತದೆ ಎಂಬ ಶ್ರುತಿಯ ಅಭಿಪ್ರಾಯವನ್ನೇ ಇಲ್ಲಿ ಗ್ರಹಿಸಬೇಕು.

---

## ೩೨. ಕಾಲ, ಮೃತ್ಯು, ಮನಸ್ಸು- ಎಂಬ ಈಶ್ವರವಿಭೂತಿಗಳು

( 18-8-62 )

'ಯದ್ಯದ್ ವಿಭೂತಿಮತ್ ಸತ್ತ್ವಮ್' ಎಂದು ಉಪಲಕ್ಷಣವಾಗಿ ಹೇಳಿರುವದೆಲ್ಲ ಯಾವಯಾವದು ಜಗತ್ತಿನಲ್ಲಿ ಆನಂದಾನುಭವಕ್ಕೆ ಹೇತುವಾಗಿದೆಯೋ ಅದೆಲ್ಲವನ್ನೂ ಇಲ್ಲಿ ಗ್ರಹಿಸಬೇಕು. ವಾಕ್ಯಗಳಲ್ಲಿರುವ ನವರಸಗಳಲ್ಲಿಯೂ ಸೇರಿಕೊಂಡಿರುವ ರಸತತ್ತ್ವವನ್ನು ಹೇಗೆ ರಸಿಕರಾದವರೇ ಅನುಭವಿಸಿ ನಲಿಯುವದಕ್ಕೆ ಅರ್ಹರೋ ಹಾಗೆಯೇ ಜಗತ್ತಿನಲ್ಲಿರುವ ಭಗವದ್ವಿಭೂತಿಗಳಲ್ಲೆಲ್ಲ ಭಗವಂತನೇ ಅನುಗತನಾಗಿರುವದನ್ನು ಕಂಡು ಉಪಾಸನೆಮಾಡುವದಕ್ಕೆ ಸೌಂದರ್ಯೋಪಾಸಕರೇ ಅಧಿಕಾರಿಗಳು. ಆಶ್ಚರ್ಯ, ಭಯ-ಮುಂತಾದವುಗಳಿಗೆ ಕಾರಣವಾಗಿರುವ ಹುಲಿ, ಸಿಂಹ, ಹಾವು-ಮುಂತಾದ ದೃಶ್ಯಗಳಲ್ಲಿ ಕೂಡ ಪರಮಾತ್ಮನ ವಿಭೂತಿಯನ್ನು ಕಾಣಬಹುದಾಗಿದೆ. ವಿಸ್ತಾರವಾಗಿ ಹರಡಿರುವ ಸಾಗರ, ದಿಕ್ಕುದಿಕ್ಕಿಗೆ ಭೋರ್ಗರೆಯುತ್ತಾ ಹರಿಯುವ ನದಿಗಳು, ಎತ್ತರವಾಗಿ ಬೆಳೆದು ಜನರನ್ನು ಬೆರಗುಮಾಡುತ್ತಿರುವ ಬೆಟ್ಟಗಳು, ಪರ್ವತಗಳು, ಮರಗಿಡಬಳ್ಳಿಗಳಿಂದ ವಿಸ್ತರಿಸಿಕೊಂಡಿರುವ ಕಾಡುಗಳು, ವಿಶಾಲವಾಗಿ ಹಸುರಿನಿಂದ ಕಂಗೊಳಿಸುವ ಮೈದಾನಗಳು, ಮರುಭೂಮಿಗಳು, ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವ ಆಕಾಶ, ಅದರಲ್ಲಿದ್ದುಕೊಂಡಿರುವ ವಾಯು, ತಲೆಯೆತ್ತಿದಾಗ ಜನರನ್ನು ತಮ್ಮ ಪ್ರಕಾಶ

ದಿಂದಲೂ ಸಂಖ್ಯೆಯಿಂದಲೂ ವ್ಯವಸ್ಥೆಯಿಂದಲೂ ಬೆರಗುಗೊಳಿಸುವ ಸೂರ್ಯ ಚಂದ್ರಾದಿಗ್ರಹಗಳು, ನಕ್ಷತ್ರಗಳು- ಇವೇ ಮುಂತಾದವೆಲ್ಲವೂ ಪರಮಾತ್ಮನ ವಿಭೂತಿಗಳೇ.

ಈಗ 'ಅಹಮೇವಾಕ್ಷಯಃ ಕಾಲಃ' (೧೦-೩೩ ಸವೆಯದ ಕಾಲವು ನಾನೇ), 'ಕಾಲಃ ಕಲಯತಾಮಹಮ್' (ಎಣಿಸುವವದರಲ್ಲಿ ಕಾಲವು ನಾನು)- ಎಂಬಲ್ಲಿರುವ ವಿಭೂತಿಯ ವಿಚಾರವನ್ನು ಸ್ವಲ್ಪ ಮನಸ್ಸಿಗೆ ಹತ್ತಿಸಿಕೊಳ್ಳೋಣ. ಕಾಲ ವೆಂಬುದು ಎಂಥ ವಿಚಿತ್ರವಾದ ಭಾವವದು ! ಕಾಲವು ಎಲ್ಲದರ ಆಯುಸ್ಸನ್ನೂ ಲೆಕ್ಕಮಾಡುತ್ತಿರುವದು. ಜಗತ್ತೆಲ್ಲವನ್ನೂ ತಿನ್ನುತ್ತಿರುವ ಕಾಲನು, ಲೋಕವೆಲ್ಲ ವನ್ನೂ ಸವೆಯಿಸುತ್ತಿರುವ ಕಾಲನು ಭಗವಂತನೇ, ಕಾಲಕ್ಕೆ ಹಿಂದೆ, ಮುಂದೆ ಇದೆ ; ಹಿಂದಿನ ಕಾಲವು ಆಗಿಹೋಯಿತು, ಮುಂದಿನ ಕಾಲವು ಬರಲಿದೆ, ಇಂದಿನ ಕಾಲವು ಹೋಗುತ್ತಿದೆ-ಎಂಬುದೊಂದು ವಿಚಿತ್ರಭಾವನೆ. ವಸ್ತುಗಳು, ಅಥವಾ ಘಟನೆಗಳು ಹಿಂದಿನ ಕಾಲಕ್ಕೆ ಸೇರಿದವು, ಅಥವಾ ಇದಾದಮೇಲೆ ಇದು ಎಂದು ಅನುಕ್ರಮವಾಗಿ ಕಾಣಿಸಿಕೊಳ್ಳುವವು- ಎಂಬ ಭಾವನೆಗೂ ಕಾಲವೇ ಕಾರಣ. ಅಹೋರಾತ್ರಲಕ್ಷಣವಾದ ಅಥವಾ ತಿಥ್ಯಾದಿಲಕ್ಷಣವಾದ ಸೌರಚಾಂದ್ರ ಮಾಸಗಳ ಕಾಲವೆಂಬ ವೈಲಕ್ಷಣ್ಯವು ಬೇರೆ. ಚಾಂದ್ರಮಾನವನ್ನು ಸೌರ ಮಾನಕ್ಕೆ ಹೊಂದಿಸುವದಕ್ಕೆ ಅಧಿಕಮಾಸ, ಕ್ಷಯಮಾಸ-ಎಂಬ ಲೆಕ್ಕವನ್ನು ಜ್ಯೋತಿಷಿಕರು ಹಾಕುತ್ತಿರುವರು ; ಒಂದು ಗ್ರಹವು ಇನ್ನೊಂದು ಗ್ರಹದ ಸುತ್ತಲೂ ಇಂತಿಷ್ಟು ದಿನಗಳಲ್ಲಿ ಸುತ್ತುವ ಉಪಗ್ರಹವಾಗಿರುತ್ತದೆ ಎನ್ನುವಾಗ ಒಂದು ಕಾಲವನ್ನು ಇನ್ನೊಂದು ಕಾಲಮಾನದಿಂದ ಅಳೆಯುವರು ; ಸೂರ್ಯನ ಬೆಳಕು ಭೂಮಿಗೆ ಬಂದು ಮುಟ್ಟುವದಕ್ಕೆ ಇಂತಿಷ್ಟು ನಿಮಿಷಗಳು ಎಂಬ ಲೆಕ್ಕವು ಬೇರೆ. ಲೆಕ್ಕದ ಪ್ರಕಾರ ಅಳೆಯುವ ಕಾಲವೇ ಬೇರೆ ; ನಾವು ಅನುಭವಿಸುವ (ಬಹಳಕಾಲವಾಯಿತು, ಎಷ್ಟು ಬೇಗ ಕಾಲವು ಕಳೆಯಿತು !- ಎಂಬ ರೀತಿಯ ಭಾವನೆಯ) ಕಾಲವು ಬೇರೆ. 'ಈಗ ಎಷ್ಟು ಹೊತ್ತು ?' 'ಈಗ' ಎಂದರೆ ಅವರವರು ಮಾತಾಡುವಾಗ ಒಂದೊಂದು ದೃಷ್ಟಿಯಿಂದ 'ಈಗ, ಆಗ' ಎನ್ನುತ್ತಿ ರುವರು. ಕಾಲವು ಕಳೆಯುತ್ತಿದೆಯೆ, ಬೆಳೆಯುತ್ತಿದೆಯೆ ; ಹೋಗುತ್ತಿದೆಯೆ ? -ಎಂಬ ಪ್ರಶ್ನೆಯನ್ನು ಕೇಳುವದು ಸುಲಭ; ಅದನ್ನು ನಿರ್ಣಯಿಸುವದು ಎಷ್ಟು ಕಷ್ಟ ! ಕಾಲಕ್ಕೆ ಅವಧಿಯುಂಟೆ ? ಕಾಲವೇ ಹೀಗೆ ಅಭೇದ್ಯರಹಸ್ಯವಾಗಿರುವಾಗ ಯಾವಾತನ ತೇಜೋಂಶದಿಂದ ಇದು ಹುಟ್ಟಿರುವದೋ ಆತನ ಸ್ವರೂಪವು ಎಂಥ ದ್ದಿರಬೇಕು ! ಶಾಲಗ್ರಾಮವನ್ನು ವಿಷ್ಣುವೆಂದು ಪೂಜಿಸುವಂತೆ ಕಾಲವನ್ನೇ ಪರ ಮಾತ್ಮನೆಂದು ಪೂಜಿಸುವದು ಆ ನೆಪದಿಂದ ಭಗವಂತನ ಮಹಿಮೆಯನ್ನು ಮನ ದಂದುಕೊಳ್ಳುವದಕ್ಕೆ ಉಪಾಯವಾಗಿರುತ್ತದೆ.

ಈಗ 'ಮೃತ್ಯುಃ ಸರ್ವಹರಶ್ಚಾಹಮ್' (೧೦-೩೪ ಎಲ್ಲವನ್ನೂ ಅಪಹರಿಸುವ ಮೃತ್ಯು ನಾನು) ಎಂಬಲ್ಲಿರುವ ವಿಭೂತಿಯನ್ನು ಕುರಿತು ವಿಚಾರ ಮಾಡೋಣ. "ಮೃತ್ಯು' ಎಂಬ ಶಬ್ದವು ಕಿವಿಗೆ ಬಿದ್ದಮಾತ್ರದಿಂದಲೇ ಎಲ್ಲರಿಗೂ ನಡುಕವುಂಟಾಗುತ್ತದೆ. ಸಾವು ಎಂಬ ಮಾತೇ ಅಮಂಗಲವೆಂದುಜನರ ಭಾವನೆ. ಮೃತ್ಯುವು ದೂರವಿರಬೇಕೆಂದೇ ಎಲ್ಲರಿಗೂ ಆಶೆ. ತಲೆನೆರೆಯುವದು ಮೈ ಸುಕ್ಕುವದು, ಹಲ್ಲುಗಳುದುರುವದು- ಮುಂತಾದ ಗುರುತುಗಳು ಎಚ್ಚರಿಕೆ ಕೊಟ್ಟರೂ ನಾವು ಇನ್ನೂ ಬದುಕಿರುವೆವೆಂದೇ ಜನರು ನಂಬುತ್ತಾರೆ. ಮಿಕ್ಕವರು ತಮ್ಮ ಕಣ್ಣೆದುರಿಗೇ ಸಾಯುತ್ತಿದ್ದರೂ ತಾವು ಮಾತ್ರ ಚಿರಕಾಲ ಇರುವೆವೆಂಬ ದೃಢವಿಶ್ವಾಸವಿರುತ್ತದೆ. ಆದರೂ ಮನುಷ್ಯನು ಮರ್ತ್ಯನು ಎಂಬುದನ್ನು ಸುಳ್ಳುಮಾಡುವದು ಯಾರಿಂದಲೂ ಆಗುವಂತಿಲ್ಲ. ಜನನಮರಣಗಳ ರಿಜಿಸ್ಟರು ನೋಡಿದರೆ, ಘಂಟೆಗೆ ಪೃಥ್ವಿಯಮೇಲೆ ಎಷ್ಟುಜನರು ಸಾಯುತ್ತಿರುವರೆಂಬುದು ತಿಳಿದೀತು. ಸಾವೆಂಬುದು ಎಲ್ಲರಿಗೂ ತಿಳಿದೇಇರುವ ದೃಶ್ಯ ; ಅದರ ರಹಸ್ಯವನ್ನು ಮಾತ್ರ ಯಾರೂ ತಿಳಿಯರು. ಭೂಲೋಕದಲ್ಲಿ ಏಳು ಆಶ್ಚರ್ಯಕರ ವಸ್ತುಗಳಿವೆ ಎಂದು ಈಗಿನವರು ಹೇಳಿಕೊಳ್ಳುತ್ತಿರುವದುಂಟು ; ಆದರೆ ಮೃತ್ಯುವಿಗಿಂತ ಆಶ್ಚರ್ಯಕರವಾದದ್ದು ಇನ್ನೊಂದಿಲ್ಲವೆಂದರೆ ತಪ್ಪಾಗದು. 'ಇಂದ್ರಿಯಾಣಾಂ ಮನಃ' ಎಂದು ಮನಸ್ಸನ್ನು ಒಂದು ವಿಭೂತಿಯಾಗಿ ವರ್ಣಿಸಿದ್ದಾಗಿದೆ. ಮನಸ್ಸು ಕಾಲವಶವೆ ? ಅದಕ್ಕೂ ಮೃತ್ಯುವುಂಟೆ ? ಅಥವಾ ಕಾಲ ಮೃತ್ಯುಗಳೇ ಮನಸ್ಸಿಗೆ ವಶವೊ ? ಮನಸ್ಸು ಹೀಗಾಯಿತು, ಹಾಗಾಯಿತು- ಎಂದು ಹೇಳಿಕೊಳ್ಳುತ್ತಿರುವೆವಲ್ಲ, ಅದನ್ನು ಮನದಂದರೆ ಮನಸ್ಸೂ ಕಾಲವಶವೆಂದೇ ತೋರುತ್ತದೆ ; ಮನುಷ್ಯನ ಮೆದುಳಿನ ಶಕ್ತಿಯೇ ಮನಸ್ಸು ಎಂದು ವಿಜ್ಞಾನಶಾಸ್ತ್ರಜ್ಞರು ಕೆಲವರು ಹೇಳುತ್ತಿದಾರೆ. ಆದರೆ ಹಾಗೆಂದು ಕಲ್ಪಿಸುವದಕ್ಕೂ ಮನಸ್ಸು ಬೇಕು. ಆದ್ದರಿಂದ ಮನಸ್ಸು, ಕಾಲ, ಮೃತ್ಯು- ಇವುಗಳ ಸಂಬಂಧವೂ ವೈಲಕ್ಷಣ್ಯವೂ ಒಂದು ಅಭೇದರಹಸ್ಯವೇ ಆಗಿ ಕಾಣುತ್ತಿದೆ.

ಕಾಲ, ಮೃತ್ಯು, ಮನಸ್ಸು- ಈ ಮೂರು ಭಾವಗಳನ್ನು ಮನಸ್ಸಿನಲ್ಲಿ ಆಗಾಗ್ಗೆ ಹೊರಳಾಡಿಸಿದರೆ ಭಗವಂತನ ಪರಮಾರ್ಥವನ್ನು ಅರ್ಥಮಾಡಿಕೊಳ್ಳುವದಕ್ಕೆ ಬಹಳ ಸಹಾಯವು ದೊರಕೀತು. ಪರಮಾತ್ಮನಿಗೆ 'ಕಾಲಕಾಲ'ನೆಂದೂ 'ಮೃತ್ಯುಂಜಯ'ನೆಂದೂ, 'ಮನಸ್ಸಿಗೂ ಮನಸ್ಸು'—ಎಂದೂ ಹೆಸರುಂಟು. ಈ ಮೂರು ಹೆಬ್ಬಾಗಿಲನ್ನು ಒಳಹೊಕ್ಕು ನೋಡಬಲ್ಲೆವಾದರೆ ಪರಮಾತ್ಮತತ್ತ್ವದ ಅರಿವು ಆದೀತು. ಸೂರ್ಯೋದಯಕ್ಕಿಂತ ಮುಂಚೆ ಅರುಣೋದಯವಾಗುವಂತೆ ಪರಮಾತ್ಮನ ಜ್ಞಾನವು ನಮಗೆ ಚೆನ್ನಾಗಿ ಮನದಟ್ಟಾಗುವದಕ್ಕೆ ಮೊದಲು ಈ ಮೂರರ ರಹಸ್ಯವನ್ನು ಅರಿತುಕೊಳ್ಳುವ ಶಕ್ತಿಯು ಬರಬೇಕು.

ಪರಮಾತ್ಮನು ತರ್ಕಕ್ಕೆ ನಿಲುಕನು. ಕಾಲಮೃತ್ಯುಮನಸ್ಸುಗಳೂ ಅತರ್ಕ್ಯ ವಾಗಿರುತ್ತವೆ. ಪರಮಾತ್ಮನು ಸರ್ವವನ್ನೂ ತನ್ನ ವಶದಲ್ಲಿಟ್ಟುಕೊಂಡು, ಎಲ್ಲಕ್ಕೂ ಆಧಾರವಾಗಿದ್ದುಕೊಂಡು ಎಲ್ಲವನ್ನೂ ತನ್ನಲ್ಲಿಯೇ ಅಡಕಮಾಡಿಕೊಂಡಿರುತ್ತಾನೆ. ಕಾಲಾದಿಗಳೂ ವ್ಯವಹಾರದಲ್ಲಿ ಹಾಗೆಯೇ. ಪರಮಾತ್ಮನ ಜನ್ಮವನ್ನಾಗಲಿ ನಾಶ ವನ್ನಾಗಲಿ ಕಲ್ಪಿಸುವದಕ್ಕೆಕೂಡ ಆಗುವಂತಿಲ್ಲ ; ವ್ಯವಹಾರದಲ್ಲಿ ಕಾಲಾದಿಗಳ ಜನ್ಮಾದಿಗಳೂ ಹಾಗೆಯೇ. ಹೀಗಿರುವದರಿಂದ ಕಾಲವನ್ನೂ, ಮೃತ್ಯುವನ್ನೂ, ಮನಸ್ಸನ್ನೂ ಬ್ರಹ್ಮದ ವಿಭೂತಿಗಳಾಗಿ ಉಪಾಸನೆಮಾಡಬೇಕೆಂದು ಗೀತೆಯಲ್ಲಿ ಉಪದೇಶಿಸಿರುವದರಲ್ಲಿ ಬಹಳ ಔಚಿತ್ಯವಿದೆ.

---

## ೩೩. ಸಿಂಹಾವಲೋಕನ, ಕರ್ಮಯೋಗ

( 19–೭–62 )

ಕರ್ಮಯೋಗದಿಂದ ಭಕ್ತಿಯೋಗಕ್ಕೆ ಏರುವ ಕ್ರಮವನ್ನು ತಿಳಿಸುವದ ಕ್ಕೆಂದು ವಿಭೂತಿಯೋಗವನ್ನು ಪ್ರಸ್ತಾಪಿಸಿದ್ದಾಗಿದೆ. ಈಗ ಕರ್ಮಯೋಗದೊಳಗೆ ಭಕ್ತಿಯ ಅಂಶವು ಹೇಗೆ ಸೇರಿದೆ ?– ಎಂಬುವನ್ನು ಸ್ವಲ್ಪ ಬಿಡಿಸಿನೋಡಬೇಕಾ ಗಿದೆ.

'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ' ದ್ವಂದ್ವಗಳನ್ನು ಸಹಿಸಿಕೊಂಡು ಸಂಗಫಲತ್ಯಾಗಪೂರ್ವಕವಾಗಿ ಕರ್ಮವನ್ನು ಮಾಡುವದಕ್ಕೂ ಈಶ್ವರಾಭ್ಯರ್ಚನರೂಪವಾದ ಕರ್ಮವನ್ನು ಮಾಡುವದೇ ಉಪಾಯವೆಂದು ತಿಳಿಸಲಾಗಿದೆ. ಇದರಿಂದ ಕರ್ಮಬಂಧವು ಹೇಗೆ ತಪ್ಪುತ್ತದೆ ?– ಎಂಬುದನ್ನು ವಿಚಾರಮಾಡಬೇಕಾಗಿದೆ.

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ |
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ || ಗೀ. ೬–೧

ಕರ್ಮಫಲವನ್ನು ಬಯಸದೆಇದ್ದರೆ, ಅದರ ಹಂಗು ಕರ್ತೃವಿಗೆ ಇರುವದಿಲ್ಲ. ಕಾಮ್ಯಕರ್ಮವನ್ನು ಬಿಟ್ಟು ನಿತ್ಯಕರ್ಮವನ್ನು ಮಾತ್ರ ಮಾಡುತ್ತಿದ್ದರೆ, ಅವನು ಸಂನ್ಯಾಸಿಯೂ ಆದನು, ಯೋಗಿಯೂ ಆದನು. ಸುಮ್ಮನೆ ಶಾಸ್ತ್ರೀಯಕರ್ಮ ಗಳನ್ನು ಬಿಟ್ಟಮಾತ್ರದಿಂದ ಸಂನ್ಯಾಸಿಯಾಗುವದಿಲ್ಲ ; ಯಾವ ಕರ್ಮವನ್ನೂ

ಮಾಡದೆ ಸುಮ್ಮನೆ ಕುಳಿತಿದ್ದಮಾತ್ರದಿಂದ ಯೋಗಿಯೂ ಆಗುವದಿಲ್ಲ. ಕರ್ಮ-ಯೋಗಿಯು ಸಂಗತ್ಯಾಗಫಲತ್ಯಾಗಗಳಿಂದ ಸಂನ್ಯಾಸಿಯಾಗಿರುತ್ತಾನೆ ; ಈಶ್ವರನಲ್ಲಿ ಚಿತ್ತಸಮಾಧಾನವನ್ನು ಮಾಡಿಕೊಂಡಿರುವದರಿಂದ ಯೋಗಿಯೂ ಆಗಿರುತ್ತಾನೆ. ಕರ್ಮಸಂನ್ಯಾಸದಿಂದ ಅವನಿಗೆ ಜನ್ಮಾಂತರಪ್ರಾಪ್ತಿರೂಪವಾದ ಫಲವು ಉಂಟಾಗದೆ ಇರುತ್ತದೆ ; ಈಶ್ವರನಲ್ಲಿ ಚಿತ್ತವನ್ನಿಟ್ಟದ್ದರಿಂದ ವಿಷಯಗಳಲ್ಲಿ ಹರಿದಾಡುವ ವಿಕ್ಷೇಪವೂ ತಪ್ಪುತ್ತದೆ. ಕರ್ಮಯೋಗಿಯು 'ಈಶ್ವರನ ಭೃತ್ಯನು ನಾನು ; ಅವನು ಪ್ರೀತನಾದರೆ ನನಗೆ ಅಷ್ಟೇ ಸಾಕು' ಎಂದು ಭಕ್ತಿಯೋಗಕ್ಕೂ ಹತ್ತಿರವಾಗುತ್ತಾನೆ.

ಕರ್ಮಯೋಗದ ರಹಸ್ಯವೆಂದರೆ ಮೂರು ಗುಣಗಳನ್ನು ಮೀರುವದು :

ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।
ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ॥
ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।
ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥
ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ॥

ಗೀ. ೭-೧೨, ೧೩, ೧೪

ಸತ್ತ್ವರಜಸ್ತಮೋಗುಣಗಳು ಪರಮಾತ್ಮನಿಂದಲೇ ಆಗಿರುವವು, ಎಂದರೆ ಅದ್ವಿತೀಯನಾದ ಪರಮಾತ್ಮನಲ್ಲಿಯೇ ತೋರಿಕೊಳ್ಳುತ್ತಿರುವವು ಹಗ್ಗದಲ್ಲಿ ತೋರುವ ಹಾವು ಹಗ್ಗವನ್ನು ತಿಳಿದುಕೊಳ್ಳುವವರೆಗೂ ಹೇಗೆ ತೋರುತ್ತಲೇ ಇರುವದೋ ಹಾಗೆ ಪರಮಾತ್ಮನ ನಿಜವನ್ನು ಅರಿತುಕೊಳ್ಳುವವರೆಗೂ ಈ ಗುಣಗಳು ಮನುಷ್ಯರ ಚಿತ್ತವನ್ನು ಸೆಳೆದುಕೊಳ್ಳುತ್ತಿರುವವು. ಇವನ್ನು ದಾಟುವದಕ್ಕೆ ಪರಮಾತ್ಮನನ್ನೇ ಭಕ್ತಿಯಿಂದ ಸೇವಿಸಬೇಕು. ತಮಸ್ಸನ್ನು ರಜಸ್ಸಿನಿಂದಲೂ ರಜಸ್ಸನ್ನು ಸತ್ತ್ವದಿಂದಲೂ ಗೆದ್ದುಕೊಂಡು ಶುದ್ಧಸತ್ತ್ವದ ಅವಲಂಬನೆಯಿಂದ ಸತ್ತ್ವದ ಹಿಡಿತದಿಂದಲೂ ತಪ್ಪಿಸಿಕೊಳ್ಳಬೇಕು. ಇದಕ್ಕೆ ಭಕ್ತಿಯೇ ಉಪಾಯ.

ಸಾಂಖ್ಯರು ಈ ಮೂರು ಗುಣಗಳನ್ನೂ ಅವುಗಳ ವ್ಯಾಪಾರವನ್ನೂ ಮೊದಲು ವರ್ಣಿಸಿ ತಿಳಿಯಿಸಿಕೊಟ್ಟರು. ಆದರೆ ಅವರಿಗೆ ಗುಣಗಳೆಂಬಿವು ನಿಜವಾಗಿರುವ ತತ್ತ್ವಗಳು. ಪ್ರಕೃತಿಯು ಈ ಮೂರು ಗುಣಗಳನ್ನು ವಿಂಗಡಿಸಿ ಅರಿತುಕೊಳ್ಳದೆ ಇರುವದರಿಂದ ಅವು ಅಸಂಗಪುರುಷನಾದ ತನಗೇ ಸೇರಿರುತ್ತವೆ ಎಂದು ಜನರು ಮೋಸಹೋಗುತ್ತಾರೆ—ಎಂಬುದು ಅವರ ಹೇಳಿಕೆ. ವೇದಾಂತಿಗಳು ಅದೇ ಪ್ರಕ್ರಿಯೆಯನ್ನು ಬಳಸಿಕೊಂಡಿರುತ್ತಾರಾದರೂ ಅವೆಲ್ಲ ಮಾಯಿಕ, ಹುಸಿತೋರಿಕೆ

–ಎಂದಿರುತ್ತಾರೆ. ಗುಣಗಳು ಮಾಯಿಕವಾಗಿರುವದರಿಂದ ಅವು ನಿಜವಾಗಿಯೂ ಇರುವವೆಂದು ತಿಳಿದುಕೊಂಡಿರುವವರೆಗೆ ಜನರು ಅವಕ್ಕೆ ಬೆರಗಾಗಿ ಆಸುರೀ, ರಾಕ್ಷಸೀ–ಸ್ವಭಾವವನ್ನು ಅವಲಂಬಿಸುತ್ತಾರೆ. ಸುಂದರವಾದ ಸ್ತ್ರೀಯ ವೇಷದಿಂದ ಕಾಣಿಸಿಕೊಂಡ ಪಿಶಾಚಿಗೆ ಮರುಳಾದ ಮೂಢನಂತೆ, ಅಜ್ಞರು ಈ ಗುಣಗಳ ವಿಲಾಸಕ್ಕೆ ಮರುಳಾಗಿರುತ್ತಾರೆ. ಆದರೆ ಯಾವ ಮಹಾತ್ಮನು ಪರಮಾತ್ಮನೇ ಇವುಗಳ ಒಡೆಯನು, ಅವನಿಗೆ ಅಧೀನವಾಗಿಯೇ ಇವು ತೋರಿಕೊಳ್ಳುತ್ತಿರುವವು –ಎಂದು ನಿಶ್ಚಯಿಸಿಕೊಂಡಿರುವವನೋ ಅವನು ಭಕ್ತಿಯಿಂದ ಭಗವಂತನನ್ನೇ ಶರಣುಹೊಂದುವನು. ಅಂಥ ಮಹಾತ್ಮನ ಪಾಲಿಗೆ ಗುಣಗಳೂ ಪರಮಾತ್ಮನ ವಿಭೂತಿಯೇ ಆಗುವವು.

ಜೂಜಾಡುವದು, ಮಾದಕದ್ರವ್ಯಗಳನ್ನು ಸೇವಿಸುವದು, ಮಾಡಬಾರದ ಅತ್ಯಾಚಾರಗಳನ್ನು ಮಾಡುವದು, ಆಡಬಾರದ ಮಾತುಗಳನ್ನು ಆಡುವದು– ಇವೆಲ್ಲ ಗುಣಗಳಿಗೆ ಪರವಶರಾದವರನ್ನು ಹಾಳುಮಾಡುತ್ತಿರುವವು. ಆದರೆ ಯಾರು ಭಗವಂತನನ್ನೇ ಶರಣುಹೊಕ್ಕಿರುವರೋ ಅಂಥವರಮೇಲೆ ಕೆಟ್ಟ ವಸ್ತುಗಳ, ಕೆಟ್ಟ ಆಹಾರವಿಹಾರಗಳ ಮತ್ತು ಕೆಟ್ಟ ಆಚಾರಗಳ ಕಾಟವಂತಿರಲಿ, ಧನಕನಕವಸ್ತು ವಾಹನಾದಿಗಳ ಪ್ರಲೋಭನವೂ ಯಾವ ಪರಿಣಾಮವನ್ನೂ ಮಾಡಲಾರದು. ಒಮ್ಮೆ ಏಕನಾಥರಿಗೆ ಅನುಗ್ರಹಮಾಡಬೇಕೆಂದು ಲಕ್ಷ್ಮಿಯು ಬಯಸಿ, ಅಷ್ಟಸಿದ್ಧಿಗಳನ್ನು ಅವರ ಸೇವೆಗೆ ಕಳುಹಿಸಿಕೊಟ್ಟಳಂತೆ ; ಅವರು ಸುಂದರಕನ್ಯಕೆಯರ ವೇಷದಿಂದ ಬಂದು ಅವರಿಗೆ ಕಾಣಿಸಿಕೊಳ್ಳಲು 'ನೀವು ಯಾರು?' ಎಂದು ಕೇಳಲು 'ತಮ್ಮ ಸೇವೆಗೆ ಲಕ್ಷ್ಮೀದೇವಿಯಿಂದ ನಿಯುಕ್ತರಾಗಿದೇವೆ. ತಾವು ಹೇಳಿದಂತೆ ಮಾಡುವೆವು' ಎಂದು ಅವರು ಉತ್ತರಕೊಟ್ಟರು. ಆಗ ಆ ಸಾಧುವರ್ಯರು 'ನಾನು ಹೇಳಿದಂತೆ ಕೇಳುವದಾದರೆ, ಕೂಡಲೆ ಹಿಂತಿರುಗಿಹೋಗಿರಿ !' ಎಂದು ನಿಃಸ್ಪೃಹತೆಯಿಂದ ಕಟ್ಟುಮಾಡಿದರಂತೆ !

ಪರಮಾತ್ಮನನ್ನು ಆಶ್ರಯಿಸುವದೇನೂ ಕಷ್ಟವಲ್ಲ. ಈ ಲೋಕದ ಅಧಿಕಾರಿಗಳಂತೆ ತಮ್ಮನ್ನು ಬಂದುಬಂದು ಕಾಣುತ್ತಲೇ ಇರುವವರ ಸೇವೆಯನ್ನು ಕೈಕೊಂಡು ಕೊನೆಗೆ 'ಈಗ ನನಗೆ ರಿಟೈರ್ ಆಗಿದೆ; ಮೊದಲೇ ಬಂದಿದ್ದರೆ ನಿಮ್ಮ ಕೆಲಸವನ್ನು ಮಾಡಿಕೊಡುತ್ತಿದ್ದೆ' ಎನ್ನುವ ಸ್ವಭಾವವೇನೂ ಆ ದೇವದೇವನಲ್ಲಿಲ್ಲ.

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ !
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ || ಗೀ. ೯–೨೬

ಒಂದು ಎಲೆ,ಹೂ, ಒಂದು ಹಣ್ಣು,ಒಂದಿಷ್ಟು ನೀರು–ಇವುಗಳೊಳಗೆ ಯಾವದಾದ ರೊಂದನ್ನಾದರೂ ಭಕ್ತಿಯಿಂದ ಕೊಟ್ಟರೆ ಆ ಭಗವಂತನು ಅದನ್ನು ಸ್ವೀಕರಿಸು

ವನು. ಭಗವಂತನಿಗೆ ಕೊಡುವದೆಂದರೇನು ?- ಎಂಬುದನ್ನು ಇಲ್ಲಿ ಸ್ವಲ್ಪ ವಿಮರ್ಶಿಸಿ ತಿಳಿದುಕೊಳ್ಳಬೇಕಾಗಿದೆ. ಸರ್ವವ್ಯಾಪಕನಾಗಿ' ಸರ್ವಕ್ಕೂ ಜನ್ಮಪ್ರದನಾಗಿರುವ ಆತನಿಗೆ ಯಾವದರ ಕೊರತೆ, ಯಾವದು ಆತನದಲ್ಲದ್ದು ? 'ನನ್ನದು' ಎಂಬ ಭಾವನೆಯನ್ನು ಬಿಟ್ಟರೆ ಆಯಿತು. ಮನುಷ್ಯನಿಗೆ ಪ್ರಪಂಚದಲ್ಲೆಲ್ಲ ಮಮಕಾರ. ಮನಸ್ಸು ಇದು ನನ್ನದು, ಇದು ನನಗೆ ಸಿಕ್ಕಿದೆ, ಇದು ಬೇಕಾಗಿದೆ- ಎಂದೇ ಸಾಯುವವರೆಗೂ ಬಾಹ್ಯವಿಷಯಗಳಿಗೆ ಅಂಟಿಕೊಂಡಿರುತ್ತದೆ. ಈ ಮಮತೆಯನ್ನು ಬಿಟ್ಟರೆ ಸಾಕು, ಪರಮಾತ್ಮನಿಗೆ ಕೊಟ್ಟಂತೆ ಆಗುವದು.

'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ' ಎಂದು ಹೇಳಿದ್ದರಲ್ಲಿ ತನ್ನತನ್ನ ವರ್ಣಾಶ್ರಮಗಳ ಕರ್ಮವನ್ನು ಎಂದೇ ಅರ್ಥ. ಇದರಂತೆ

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ |
ಯತ್ತಪಸ್ಯಸಿ ಕೌನ್ತೇಯ ತತ್ ಕುರುಷ್ವ ಮದರ್ಪಣಮ್ ||
ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬನ್ಧನೈಃ |
ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ||

ಗೀ. ೯-೨೭, ೨೮

ಎಂದಿರುವ ವಚನಕ್ಕೆ ಮೂಲತಃ ವರ್ಣಾಶ್ರಮಗಳ ಕರ್ಮವೆಂದೇ ಅರ್ಥವನ್ನು ಮಾಡಬೇಕು. ಆದರೆ ಈಗ್ಗೆ ಚಾತುರ್ವರ್ಣ್ಯವೆಂಬುದರ ಗುರುತುಗಳೇ ಕಾಣಿಸದಂತಾಗಿದೆ. ಹೀಗಿರುವಲ್ಲಿ ಭಗವಂತನ ವಚನಕ್ಕೇನರ್ಥ ? ಆತನು ನಾಲ್ಕು ವರ್ಣದವರನ್ನು ಮಾತ್ರ ಕಾಪಾಡುತ್ತಾನೆ ಎಂದರೆ ಈಗ ಯಾರನ್ನು ಕಾಪಾಡುವದೂ ಆತನ ಕೆಲಸವಲ್ಲವೆಂದಾದೀತು ! ಹಾಗೇನೂ ಇಲ್ಲ. ವರ್ಣಾಶ್ರಮಗಳ ಅಭಿಮಾನವಿರುವವರು ಮಾಡುವ ನಾನಾದೋಷಯುಕ್ತವಾಗಿರುವ ಯಜ್ಞ, ದಾನ, ತಪಸ್ಸು-ಇವುಗಳಲ್ಲಿ ಸಾದ್ಗುಣ್ಯವುಂಟಾಗುವದಕ್ಕೂ ಭಗವಂತನಿಗೇ ಅವುಗಳನ್ನು ಅರ್ಪಿಸಬೇಕು. ಕರ್ಮಬಾಹಿರರಾಗಿರುವವರಾದರೂ 'ಯತ್ಕರೋಷಿ ಯದಶ್ನಾಸಿ' ಎಂಬ ಸಾಮಾನ್ಯೋಕ್ತಿಯಲ್ಲಿ ಹೇಳಿರುವಂತೆ ಕರ್ತೃತ್ವಭೋಕ್ತೃತ್ವದ ಅಭಿಮಾನವನ್ನು ತೊರೆದು ಇವೆರಡೂ ಪರಮಾತ್ಮನ ಅನುಗ್ರಹದಿಂದಲೇ ನನ್ನಲ್ಲಿ ತೋರುತ್ತಿವೆ ; ಇವು ನನಗೆ ನಿಜವಾಗಿ ಸೇರಿಲ್ಲ- ಎಂಬ ಭಾವನೆಯನ್ನು ತಂದುಕೊಂಡರೆ ಆತನಿಗೆ ಸರ್ವಕರ್ಮಗಳನ್ನೂ ಅರ್ಪಿಸಿದಂತೆ ಆಯಿತು. ಅರ್ಜುನನು-

ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ ಶ್ರದ್ಧಯಾನ್ವಿತಾಃ |
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ || ಗೀ. ೧೭-೧

ಶಾಸ್ತ್ರವಿಧಿಯನ್ನುಬಿಟ್ಟು ಯಾರು ಪೂಜಿಸುವರೋ ಅವರ ಶ್ರದ್ಧೆ ಯಾವ ಜಾತಿಗೆ ಸೇರಿದ್ದು ?- ಎಂದು ಕೇಳಿರುವದು ಬೇಕೆಂತ ಶಾಸ್ತ್ರವಿಧಿಯನ್ನು ತಿರಸ್ಕರಿಸಿದವರ ವಿಷಯವಲ್ಲ ; ಶಾಸ್ತ್ರವಿಧಿಯನ್ನು ತಿಳಿಯದೆ ಯಾರು ಭಗವಂತನನ್ನು ಪೂಜಿಸುವರೋ ಅವರನ್ನು ಸಾತ್ತ್ವಿಕರೆನ್ನಬೇಕೊ, ರಾಜಸರೆನ್ನಬೇಕೊ, ತಾಮಸರೆನ್ನಬೇಕೊ ?-ಎಂಬುದೇ ಅವನ ಪ್ರಶ್ನೆ. ಆದ್ದರಿಂದ ಶಾಸ್ತ್ರದಂತೆ ನಡೆಯುವದಕ್ಕೆ ಆಗದವರೆಲ್ಲರನ್ನೂ ಸೇರಿಸಿಕೊಂಡು, ಅವರು ಮಾಡುವ ಲೌಕಿಕಕರ್ಮಗಳನ್ನುಕೂಡ ಪರಮೇಶ್ವರನ ಆರಾಧನೆ ಎಂದು ಭಾವಿಸುವವರಿಗೂ ಈ ಕರ್ಮಯೋಗದ ಫಲವು ಅವಶ್ಯವಾಗಿ ದೊರೆಯುತ್ತದೆ ಎಂದು ಭಾವಿಸಬೇಕಾಯಿತು

ಪರಮಾತ್ಮನೇ ನಮಗೆ ಶರೀರ, ಇಂದ್ರಿಯಗಳು, ಮನಸ್ಸು- ಎಲ್ಲವನ್ನೂ ಕೊಟ್ಟಿರುತ್ತಾನೆ. ಆತನು ಕೊಟ್ಟಿರುವ ಮನಃಪ್ರಾಣಗಳ ಬಲದಿಂದಲೇ ಕೀಲು ಕೊಟ್ಟ ಗಡಿಯಾರದಂತೆ ನಾವು ನಡೆಯುತ್ತಿರುವೆವು ; ನಮಗೆಲ್ಲಿಯ ಸ್ವತಂತ್ರ ಕರ್ತೃತ್ವ ಅಥವಾ ಭೋಕ್ತೃತ್ವ ? ನಮ್ಮ ಕರ್ಮವೆಲ್ಲವೂ ಪರಮಾತ್ಮನು ಕೊಟ್ಟಿರುವ ಶಕ್ತಿಯದು, ಅದರ ಫಲವನ್ನಂತೂ ಆತನೇ ಕೊಡುವನು.

ನಾವು ಕುಡಿಯುವ ನೀರು ಕೊಳದ್ದು, ಕೊಳಕ್ಕೆ ಕಾಲುವೆಯಿಂದ ನೀರು ಬರುತ್ತದೆ, ಕಾಲುವೆಗೆ ಕೆರೆಯಿಂದ ಬರುತ್ತದೆ, ಕೆರೆಗೆ ನದಿಯಿಂದ ಬರುತ್ತದೆ, ನದಿಗೆ ಮಳೆಯಿಂದ ಬರುತ್ತದೆ, ಮಳೆಯು ಮೋಡದಿಂದ ಬರುತ್ತದೆ, ಮೋಡವು ಸಾಗರದಿಂದ ಎದ್ದ ಆವಿಯಿಂದ ಬರುತ್ತದೆ. ಅಂತೂ ಎಲ್ಲಾ ನೀರೂ ಒಂದೇ ಮೂಲದ್ದು. ಇದರಂತೆ ನಮ್ಮ ಕರ್ಮಗಳೆಲ್ಲಕ್ಕೂ ಮೂಲವು ಪರಮಾತ್ಮನದೇ ಹೊರತು ನನ್ನದೆಂಬುದೇ ಇಲ್ಲ ; ಇದರ ಫಲವೂ ಹೀಗೆಯೇ ಎಲ್ಲಿಂದ ಬಂದರೂ ಪರಮಾತ್ಮನದೇ ಎಂದು ಭಾವಿಸಿಕೊಳ್ಳುವವರು ನಿಜವನ್ನು ಅರಿತವರು. 'ಭಗವಂತ, ನಿನಗೆ ಅರ್ಪಿಸಿದ ಹೂ ಗಂಧ ಮುಂತಾದವುಗಳನ್ನು ನಿನ್ನ ಪ್ರಸಾದವೆಂದು ಸ್ವೀಕರಿಸಿ ನಿನ್ನ ಮಾಯೆಯನ್ನು ಗೆಲ್ಲುವೆವು' ಎನ್ನುವವರೇ ನಿಜವಾದ ಕರ್ಮಯೋಗಿಗಳು, ನಿಜವಾದ ಭಕ್ತರು. Give us this day our daily bread ನಮ್ಮ ದಿನದಿನದ ಆಹಾರವನ್ನು ನಮಗೆ ಅನುಗ್ರಹಿಸು!-ಎಂದು ಕ್ರಿಸ್ತಿಯನ್ನರು ಮಾಡುವ ಪ್ರಾರ್ಥನೆಗೂ ಇದೇ ಅಭಿಪ್ರಾಯ. ಭಗವಂತನೇ ಅಲ್ಲವೆ, ಎಂಥ ಶ್ರೀಮಂತರಿಗಾದರೂ ಆಹಾರವನ್ನು ಕೊಡುತ್ತಿರುವವನು ? ಭಗವಂತನದಲ್ಲದ್ದು ಯಾವದುತಾನೆ ಇದೆ ? ನಾವು ತಿನ್ನುವ ಆಹಾರಕ್ಕೆಲ್ಲ ಪರಮಾತ್ಮಭಾವನೆಯ ಕಲಾಯವನ್ನು ಮಾಡಿಕೊಂಡರೆ ಅವುಗಳ ರುಚಿಯು ಹೆಚ್ಚುವದು, ನಮ್ಮ ದೇಹಕ್ಕೆ ಪುಷ್ಟಿಯೂ ಮನಸ್ಸಿಗೆ ತುಷ್ಟಿಯೂ ಒದಗುವವು. ಹೀಗಾದರೆ ಕರ್ಮಬಂಧನಗಳಾದ ಶುಭ, ಅಶುಭ- ಎರಡರಿಂದಲೂ ತಪ್ಪಿಸಿಕೊಳ್ಳುವದಕ್ಕಾಗುತ್ತದೆ. ಇದೇ ಕರ್ಮಯೋಗದ ಗುಟ್ಟು ; ಇಲ್ಲಿಯೇ ಕರ್ಮಯೋಗವು ಭಕ್ತಿಯೋಗವಾಗಿ ಪರಿಣಮಿಸುವದು.

---

# ೩೪. ಯೋಗ, ಭಾವನೆ

(20—8—62)

'ಸ ಸಂನ್ಯಾಸೀ ಚ ಯೋಗೀ ಚ' ಎಂಬ ಶ್ಲೋಕದ ವಿವರಣೆಯಲ್ಲಿ ಕರ್ಮಯೋಗದಲ್ಲಿ ಸಂನ್ಯಾಸವೂ ಯೋಗವೂ ಸೇರಿವೆ ಎಂದು ತಿಳಿಸಲಾಗಿತ್ತು. ಜ್ಞಾನಕ್ಕೆ ಯೋಗವು ಸೋಪಾನವು ; ಏಕೆಂದರೆ ಯೋಗದಿಂದ ಎಲ್ಲೆಲ್ಲಿಯೂ ಇರುವ ಆತ್ಮನನ್ನು ಅರಿತುಕೊಳ್ಳುತ್ತಾನೆ- ಎಂದು ಭಗವಂತನು ಹೇಳಿರುತ್ತಾನೆ. ಇದೇ ಧ್ಯಾನಯೋಗವು. ಎರಡನೆಯದಾಗಿ ಯೋಗಶಬ್ದವನ್ನು 'ಉಪಾಸನೆ' ಎಂಬರ್ಥದಲ್ಲಿಯೂ ಶಂಕರಭಗವತ್ಪಾದರವರು ಉಪಯೋಗಿಸಿರುತ್ತಾರೆ. ಯೋಗ ವೆಂದರೆ 'ಪಾತಂಜಲಯೋಗ' ಎಂಬರ್ಥವೂ ಪ್ರಸಿದ್ಧವಾಗಿರುತ್ತದೆ. ಆದ್ದರಿಂದ 'ಯೋಗ'ವೆಂಬುದು ಅನೇಕಾರ್ಥಗಳನ್ನು ಸೂಚಿಸುವ ಶಬ್ದ. ಸಾಮಾನ್ಯಜನರು ಯೋಗವೆಂದರೆ ಉಸಿರುಕಟ್ಟುವದು, ಯಾವದೋ ಶಕ್ತಿವಿಶೇಷದಿಂದ ನೆಲದಿಂದ ಒಂದೊಂದು ಮೊಳದ ಎತ್ತರಕ್ಕೆ ಏಳುವ ಅದ್ಭುತಕಾರ್ಯವು ಎಂದು ಭಾವಿಸಿರು ತ್ತಾರೆ !

'ಕರ್ಮಯೋಗ' ಎಂಬ ಶಬ್ದದಲ್ಲಿ 'ಕರ್ಮವು' ಸೇರಿದೆ ಎಂಬುದು ಸ್ಫುಟವೇ ಆಗಿದೆ ; ಆದರೆ ಅದನ್ನು 'ಯೋಗ'ವೆನಿಸಿರುವದು ಅಂತಃಕರಣದ ಧರ್ಮವಿಶೇಷವು. ಯಂತ್ರಗಳು ಎಡೆಬಿಡದೆ ಕೆಲಸವನ್ನು ಮಾಡುತ್ತಿದ್ದರೂ ಅವನ್ನು ಕರ್ಮಯೋಗಿ ಗಳೆಂದು ಯಾರೂ ಕರೆಯುವದಿಲ್ಲ ; ಏಕೆಂದರೆ ಅವಕ್ಕೆ ನಾವು ಕೆಲಸವನ್ನು ಮಾಡುತ್ತಿದೇವೆ ಎಂಬ ಭಾವನೆಯಾಗಲಿ, ಇಂಥ ಪ್ರಯೋಜನಕ್ಕಾಗಿ ಈ ಕೆಲಸ ವನ್ನು ಮಾಡುತ್ತಿದೇವೆ ಎಂಬ ಭಾವನೆಯಾಗಲಿ ಇರುವದಿಲ್ಲ. ಯಾವ ಯಂತ್ರಕ್ಕೂ 'ನಾನು' ಎಂಬ ಭಾವನೆಯೇ ಮೊದಲಿಲ್ಲ ; ನನಗಿಂತ ವಿಲಕ್ಷಣನಾದ ಪರಮಾತ್ಮ ನೊಬ್ಬನಿದಾನೆ ಎಂಬ ಭಾವನೆ ಅದಕ್ಕೆ ಎಲ್ಲಿಂದ ಬರಬೇಕು ?

ಯೋಗದಲ್ಲಿ ಸೇರಿರುವ ಅಂಶಗಳು ಯಾವಯಾವವು ? ಸಂಗತ್ಯಾಗ ಫಲತ್ಯಾಗ, ಈಶ್ವರನಿಗೆ ಕರ್ಮವನ್ನು ಅರ್ಪಿಸುವದು. ಇವುಗಳಲ್ಲಿ ಮುಖ್ಯ ವಾದದ್ದು ಈಶ್ವರನಿಗೆ ಅರ್ಪಿಸುವದೇ ಆಗಿದೆ. ಚಟುವಟಿಕೆಯೇ ಮನುಷ್ಯನಿಗೆ ಗುರುತು. ಎಲ್ಲಿಯೂ ಓಡಾಡದೆ ಒಂದು ಗುಹೆಯಲ್ಲಿ ಪ್ರಾಣಾಯಾಮವನ್ನು ಮಾಡುತ್ತಾ ಮೌನವಾಗಿ ಕೊರಡುಬಿದ್ದಂತೆ ಒಂದು ಕಡೆ ಇರುವವನನ್ನು ಅಧ್ಯಾತ್ಮ ವಿದ್ಯಾಸಕ್ತನು—ಎಂದು ತಪ್ಪಾಗಿ ಸಾಮಾನ್ಯರು ಭಾವಿಸಿಕೊಳ್ಳುತ್ತಾರೆ. ಕರ್ಮವನ್ನು ಮಾಡುವದು, ಅದರಲ್ಲಿರುವ ದೋಷವನ್ನು ತೆಗೆದುಹಾಕುವದಕ್ಕಾಗಿ ಈಶ್ವರಾರ್ಪಣೆ, ಯಾಗಲೆಂದು ಅದನ್ನು ಮಾಡುವದು- ಇವೇ ಕರ್ಮಯೋಗಕ್ಕೆ ಮುಖ್ಯಗುರು. ಕಸವನ್ನು ರಸವಾಗಿ ಮಾಡಿಕೊಳ್ಳುವಂತೆ ದೋಷಯುಕ್ತವಾಗಿರುವ ಕರ್ಮವನ್ನು

ಈಶ್ವರನಿಗೆ ಸಂಬಂಧಿಸಿಕೊಂಡರೆ ಅದು ಕರ್ಮಯೋಗವಾಗಿ ಉತ್ಕೃಷ್ಟವಾದ ಫಲವನ್ನು ಕೊಡುತ್ತದೆ.

ಉಪಾಸನೆ ಎಂಬ ಶಬ್ದದ ಅರ್ಥವು ಅನೇಕರಿಗೆ ತಿಳಿದಿಲ್ಲ. ಒಂದೂರಿನಲ್ಲಿ ಒಬ್ಬ ಸಾಧುಗಳು ಉಪಾಸನೆಯ ವಿಷಯವಾಗಿ ಉಪದೇಶಮಾಡುತ್ತಿದ್ದರು ; ಒಬ್ಬ ಹುಡುಗನಿಗೆ ಅವರು ಹೇಳಿದ್ದರ ಅರ್ಥವಾಗದೆ ರಾತ್ರಿ ಉಪವಾಸವನ್ನು ಮಾಡುವೆನೆಂದು ಸಂಕಲ್ಪಿಸಿಕೊಂಡನು. ಉಪಾಸನೆ ಎಂಬುದು ಅಂತಃಕರಣಕ್ಕೆ ಸೇರಿದ ಒಂದು ಕಲೆ, ಉಪವಾಸವೆಂಬುದು ಶರೀರಕ್ಕೆ ಆಹಾರವನ್ನು ಕೊಡದಿರುವದು ಎಂಬುದು ಅವನಿಗೆ ಗೊತ್ತಾಗಿರಲಿಲ್ಲ. ಉಪಾಸನೆಯನ್ನು ಮಾಡುವದು ಹೇಗೆ? -ಎಂಬುದನ್ನು ತಿಳಿಯದೆ ಏಕಾಂತವಾಸವಾದರೆ ಉಪಾಸನೆ ಎಂದು ತಿಳಿದುಕೊಂಡಿರುವವರೂ ಉಂಟು. ಉಪಾಸನೆಯನ್ನು ಮಾಡುವವರೂ ಸುಮ್ಮನೆ ಕುಳಿತುಕೊಂಡಿರುವಂತೆ ಕಾಣುತ್ತಿದ್ದರೂ ಅವರ ಮನಸ್ಸು ಬಹಳ ಸೂಕ್ಷ್ಮವಾದ ಸಾಧನವನ್ನು ಮಾಡುತ್ತಿರುತ್ತದೆ ಒಮ್ಮೆ ಬೆಂಗಳೂರಿನಲ್ಲಿ ಒಬ್ಬರ ಮನೆಯಲ್ಲಿ ಮದುವೆಯ ನಿಮಿತ್ತದಿಂದ ಜನರಿಗೆ ತಾಂಬೂಲಾದಿಗಳನ್ನು ಕೊಡುವದಕ್ಕೆಂದು ಒಂದು ಕಡೆಯಲ್ಲಿ ಸಂಗೀತಕಛೇರಿಯನ್ನು ಏರ್ಪಡಿಸಿದ್ದರು ; ಅಲ್ಲಿ ತಬಲನ್ನು ಬಾರಿಸುತ್ತಿದ್ದವನೊಬ್ಬನು ಬೆರಳುಗಳನ್ನು ಆಡಿಸುತ್ತಾನೆಂಬುದೂ ಗೊತ್ತಾಗದಷ್ಟು ವೇಗದಿಂದ ಸೂಕ್ಷ್ಮವಾದ ಇಂಪಾದ ಶಬ್ದವು ಹೊರಹೊಮ್ಮುವಂತೆ ಮಾಡುತ್ತಿದ್ದನು. ಬಂದವರು ತಾಂಬೂಲಸ್ವೀಕಾರವನ್ನು ಮಾಡಿದಮೇಲೂ ಆ ವಾದನದಲ್ಲಿಯೇ ಮಗ್ನರಾಗಿ ಕುಳಿತುಬಿಟ್ಟಿದ್ದರು. ಹಾಗೆಯೇ ಇಲ್ಲಿ ಮನಸ್ಸು ಚಟುವಟಿಕೆಯಿಂದ ಇದ್ದರೂ ಹೊರಗೆ ನೋಡುವವರಿಗೆ ಅದರ ವ್ಯಾಪಾರದ ತತ್ತ್ವವು ತಿಳಿಯುವಂತಿರುವದಿಲ್ಲ.

ಮನಸ್ಸಿನ ಭಾವನೆಗೆ ಬೆಲೆಯನ್ನು ಕೊಡದೆ, ಉಪಾಸನೆಯನ್ನು ಮಾಡುವವರ ಹೊರಗಿನ ಆಸನಾದಿಗಳನ್ನು ಅನುಕರಿಸುತ್ತಾ ಕಣ್ಣುಮುಚ್ಚಿಕೊಂಡು ಕುಳಿತ ಮಾತ್ರದಿಂದ ಉಪಾಸನೆಯಾಗಲಾರದು. ಉಪಾಸನೆ ಎಂದರೆ ಉಪಾಸ್ಯದೇವತೆಯನ್ನು ಸಮೀಪಿಸಿ ಮನಸ್ಸನ್ನು ಅದರಲ್ಲಿಯೇ ಕೂರಿಸಿಕೊಳ್ಳುವದು ಹುಡುಗರನ್ನು ಕುದುರೆಯಮೇಲೆ ಕುಳ್ಳಿರಿಸಿದರೆ ಅವರು ಹೇಗೆ ಸವಾರರೆನಿಸಲಾರರೋ ಹಾಗೆಯೇ ಸುಮ್ಮನೆ ಧ್ಯಾನಮಾಡುವೆನೆಂದು ತೋರಿಸಿಕೊಂಡಮಾತ್ರದಿಂದ ಉಪಾಸನೆಯಾಗಲಾರದು. ಕರ್ಮಯೋಗವನ್ನು ಮೊದಲು ಶ್ರದ್ಧಾಪೂರ್ವಕವಾಗಿ ಮಾಡಿ ಉಪಾಸನೆಗೆ ಮನಸ್ಸನ್ನು ಸಜ್ಜುಮಾಡಬೇಕು ; ತಪ್ಪಲೆಯನ್ನು ಕಾಯಿಸಿದರೆ ಒಳಗಿನ ಹಾಲೂ ಕಾಯುವಂತೆ ಕರ್ಮಯೋಗದಿಂದ ಮನಸ್ಸು ಉಪಾಸನೆಗೆ ಸಜ್ಜಾಗುತ್ತದೆ.

ವಿಭೂತಿಯೋಗದಲ್ಲಿಯೂ ಭಾವನೆಗೇ ಪ್ರಾಧಾನ್ಯ. ವಿಭೂತಿಯುಕ್ತವಾದದ್ದೇ-ಮುಂತಾದದ್ದನ್ನು 'ನನ್ನ ತೇಜೋಂಶದಿಂದುಂಟಾದದ್ದೆಂದು ತಿಳಿದುಕೊ' ಎಂದು ಭಗವಂತನು ಹೇಳಿದ್ದಾನೆ ; 'ತಿಳಿದುಕೊಂಡೆ' ಎಂದು ಬುದ್ಧಿಯಿಂದ ನಿಶ್ಚಯಿಸಿದ್ದನ್ನು ಹೇಳಿಕೊಂಡರೆ ಸಾಲದು, ಭಾವನೆಯ ಪ್ರವಾಹವು ಹರಿಯಬೇಕು. 'ನದಿಗಳೊಳಗೆ ಜಾಹ್ನವಿ ನಾನು' (ಗೀ. ೧೦ ೩೧) ಎಂದು ಭಗವಂತನು ಹೇಳಿದ್ದನ್ನು ಉಪಾಸನೆಮಾಡುವಾಗ 'ಶ್ರೀವಿಷ್ಣುವಿನ ಪಾದೋತ್ಪನ್ನಳಾಗಿ ಶಿವನ ಜಟಾಜೂಟದಲ್ಲಿ ನಿಂತು ಭೂಲೋಕಕ್ಕೆ ಬಂದು ಜಹ್ನುವಿನ ಸ್ಪರ್ಶದಿಂದ 'ಜಾಹ್ನವೀ' ಎಂಬ ವಿಖ್ಯಾತನಾಮವನ್ನು ಧರಿಸಿರುವ ಪವಿತ್ರದೇವತೆ'– ಎಂಬ ಭಾವನೆಯು ಮನಸ್ಸಿನಲ್ಲಿ ತುಂಬಿಕೊಳ್ಳಬೇಕು. ಹೀಗೆಯೇ 'ಅಧ್ಯಾತ್ಮವಿದ್ಯಾ ವಿದ್ಯಾನಾಮ್' (೧೦-೩೨) ಎಂಬ ವಿಭೂತಿಯ ಸ್ಮರಣೆಯನ್ನು ಮಾಡುವಾಗ 'ಸಾ ವಿದ್ಯಾ ಯಾ ವಿಮುಕ್ತಯೇ' ಎಂಬಂತೆ ಸಂಸಾರದ ಸರ್ವಬಂಧಗಳನ್ನೂ ಬಿಡಿಸಿ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾದ ಪರಮಾತ್ಮನ ಭಾವದಲ್ಲಿ ನೆಲೆನಿಲ್ಲಿಸುವ ವಿದ್ಯೆ ಅನಾತ್ಮದ ಸಂಸ್ಪರ್ಶವು ಎಂದೆಂದಿಗೂ ಆಗದಂತೆ ಮಾಡಿಕೊಡುವ ವಿದ್ಯೆ, ಯಾವದೊಂದು ಮತಕ್ಕೂ ವಿರೋಧವಾಗದೆ ಎಲ್ಲರಿಗೂ ಆತ್ಮನೇ ಆಗಿರುವದರಿಂದ ಸರ್ವಭೂತಗಳಿಗೂ ಹಿತವನ್ನೂ ಸುಖವನ್ನೂ ಕೊಡುವ ಸ್ಥಿತಿಯನ್ನು ತಂದುಕೊಡುವ ವಿದ್ಯೆ– ಎಂಬ ಉದಾತ್ತಭಾವನೆಯು ಮೂಡಿಕೊಳ್ಳಬೇಕು.

ಅಧ್ಯಾತ್ಮವಿದ್ಯೆಯಲ್ಲಿ ಪ್ರೀತಿಯಿದ್ದದ್ದಕ್ಕೆ ಗುರುತೇನು ? ಇಲ್ಲಿ ಸುಖಕ್ಕೆ ಕಾರಣವಾಗಿರುವದೆಲ್ಲವನ್ನೂ ತೊರೆದು ಕಾಡಿಗೆ ಹೋಗಬೇಕು, 'ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್' ಎಂದು ಭಗವಂತನೇ ಹೇಳಿರುವದರಿಂದ ಈ ಲೋಕವು ಅನಿತ್ಯ, ಇದರಲ್ಲಿ ಸುಖವಿಲ್ಲ –ಎಂದು ತಿಳಿದು ಹೆಂಡತಿಮಕ್ಕಳನ್ನು ನಮ್ಮ ದುಃಖಕ್ಕೇ ಕಾರಣರೆಂದು ಬಗೆದು ಲೋಕವಿಲಕ್ಷಣವಾದ ವೇಷವನ್ನೂ ವರ್ತನೆಯನ್ನೂ ಇಟ್ಟುಕೊಳ್ಳಬೇಕು, ಜನರೊಡನೆ ಸೇರಬಾರದು– ಹೀಗಾದರೆ ಅಧ್ಯಾತ್ಮವಿದ್ಯಾಭ್ಯಾಸಕ್ಕೆ ಸಿದ್ಧನಾದಂತೆ– ಎಂದು ಕೆಲವರ ಆಶ್ಚರ್ಯಕರವಾದ ಭಾವನೆಯುಂಟು. ನಿಜಕ್ಕೂ ಈ ತಪ್ಪುತಿಳವಳಿಕೆಗೂ ಎಷ್ಟೋ ದೂರ. ಲೌಕಿಕ ಸುಖಗಳು ಪರಮಾರ್ಥವಾದ ಆನಂದದ ತುಂತುರುಗಳೇ ಆಗಿರುತ್ತವೆಯಾದರೂ ಅವು ಅವಿದ್ಯಾಕೃತವಾದ ಸಾಮಗ್ರಿಗಳಿಂದ ತೋರಿಕೊಳ್ಳುವದರಿಂದ ಕ್ಷಣಿಕವಾಗಿಯೂ ದುಃಖಕ್ಕೆ ಕಾರಣವಾಗಿಯೂ ಇರುತ್ತವೆ. ಆದರೂ ಇದರ ಉಪಕರಣವನ್ನೇ ಭಗವಂತನ ವಿಭೂತಿಯನ್ನಾಗಿ ಮಾಡಿಕೊಂಡರೆ ಅದು ವಿಭೂತಿಯಾಗಿ ಬಿಡುತ್ತದೆ.

ಉದಾಹರಣೆಗೆ ಸಂಗೀತವು ಮನುಷ್ಯಮಾತ್ರಕ್ಕೆ ಸುಖವನ್ನುಂಟುಮಾಡುತ್ತದೆ. ಜನರನ್ನು ಮೆಚ್ಚಿಸುವದಕ್ಕೆ ಕಚೇರಿಯನ್ನು ಮಾಡಿ ಕೀರ್ತಿಯನ್ನು

ಸಂಪಾದಿಸಿಕೊಳ್ಳುವದಕ್ಕೆ ಬರುತ್ತದೆ. ಶೃಂಗಾರದ ಜಾವಡಿಗಳನ್ನು ಹಾಡಿ ತಪ್ಪುಮಾರ್ಗದಲ್ಲಿ ಮನಸ್ಸನ್ನು ಹರಿಯಬಿಡುವವರನ್ನು ಮೋಹಗೊಳಿಸುವದಕ್ಕೂ ಬರುತ್ತದೆ. ಆದರಿಂದ ಧನಸಂಪಾದನೆಯೂ ಆಗಬಹುದು ಆದರೆ ಸಂಗೀತ ಗಾರರು ವೀಣಾದಿಗಳನ್ನು ಬಾರಿಸುವಾಗ ಮತ್ತು ಹಾಡುವಾಗ ಶ್ರೋತೃಗಳ ಮನಸ್ಸು ಸಮಾಹಿತವಾಗಿ ಆತ್ಮನಲ್ಲಿಯೇ ನಿಲ್ಲುವದರಿಂದ ಅವರಿಗೆ ಹಾಗೆ ಆನಂದ ವಾಗುತ್ತದೆ ; ಆದ್ದರಿಂದಲೇ ಅವರಿಗೆ ಧನವು ಹೆಚ್ಚಾಗಿ ಸಿಕ್ಕುತ್ತಿರುತ್ತದೆ ಎಂದು ಉಪನಿಷತ್ತಿನಲ್ಲಿ ಹೇಳಿರುವ ರಹಸ್ಯವನ್ನು ಅವರು ಅರಿತುಕೊಂಡರೆ ಆಗ ಆ ಕಲೆಯಲ್ಲಿ ಪರಮಾತ್ಮನಿಗೆ ಮೀಸಲಾಗಿರುವ ಸ್ತೋತ್ರವೆಂಬ ಭಾವನೆಯನ್ನು ಅವರು ಮೂಡಿಸಿಕೊಂಡು ಕೃತಾರ್ಥರಾಗಿಬಿಡಬಹುದು. ರಾಗದಲ್ಲಿಯೇ ಮಗ್ನ ರಾಗಿರುವಾಗ ಮನಸ್ಸು ಏಕಾಗ್ರತೆಯನ್ನು ಹೊಂದಿ ಸಮಾಧಿಸುಖವನ್ನೇ ಕೊಡು ತ್ತದೆ ಎಂಬ ಗುಟ್ಟನ್ನು ಅರಿತುಕೊಂಡರೆ ಆಗ ಆ ವಿದ್ಯೆಗೆ ಎಷ್ಟು ಘನತೆ ಏರಿತು ! ತ್ಯಾಗರಾಜರಂಥ ಮಹನೀಯರು ಶ್ರೀರಾಮನನ್ನು ಹಾಡಿ ಹೊಗಳಿ ತಾವೂ ಪುರುಷಾರ್ಥವನ್ನು ಗಳಿಸಿಕೊಂಡು ಲೋಕಕ್ಕೆಲ್ಲ ಸಂಗೀತದ ಸುಖವನ್ನು ತೋರಿಸಿ ಕೊಟ್ಟು ಕೀರ್ತಿಶರೀರರಾಗಿ ಉಳಿದಿಲ್ಲವೆ ? ಉತ್ತಮವಾದ ಭಕ್ತಿರಸವು ಉಕ್ಕು ವಂಥ ಪರಮಾತ್ಮನ ವಿಷಯಕವಾದ ಗಾನವು ಹಾಡಿದವರನ್ನೂ ಕೇಳಿದವರನ್ನೂ ಸದ್ಯಃಸುಖಸಮಾಧಿಯಲ್ಲಿ ಮುಳುಗಿಸುವದನ್ನು ನಾನು ಅಲ್ಲಲ್ಲಿ ಕಂಡಿರುತ್ತೇನೆ.

ಇದರಂತೆ ರಸಾತ್ಮಕವಾದ ಕಾವ್ಯವು, ಭಾವಗಳನ್ನು ಮನದುಂದುಕೊಳ್ಳುವ ರಸಿಕರಿಗೆ ಶ್ರವಣಕಾಲದಲ್ಲಿಯೇ ಪರಮಸುಖವನ್ನು ತಂದುಕೊಡುತ್ತದೆ. ಅಮಂ ಗಲವನ್ನೆಲ್ಲ ನಾಶಮಾಡುತ್ತದೆ, ಕವಿಗೆ ಯಶಸ್ಸನ್ನೂ ಅರ್ಥವನ್ನೂ ತಂದು ಐಹಿಕ ಸುಖಕ್ಕೂ ಕಾರಣವಾಗುತ್ತದೆ. ಉತ್ತಮವಿಷಯವನ್ನು ಆರಿಸಿಕೊಂಡು ಗುಣಾಲಂಕಾರಗಳು ಮಾತ್ರವೇ ಅಲ್ಲದೆ ರಸವನ್ನು ಮುಖ್ಯವಾಗಿಟ್ಟುಕೊಂಡು ಬರೆದ ಕಾವ್ಯವು ಕವಿಗೆ ಬರುವ ಯಶಸ್ಸು, ಧನಲಾಭ- ಇವುಗಳಿಗಿಂತಲೂ ದಿವ್ಯ ವಾದ ಆತ್ಮಾನಂದವನ್ನು ಅನುಭವಿಸುವದಕ್ಕೆ ಒಂದು ತೆರೆದ ಬಾಗಿಲಾಗುವದು. ಹೀಗೆಯೇ ದೇವಾಲಯಾದಿಗಳ ಕಟ್ಟಡಗಳನ್ನೂ ದೇವತಾವಿಗ್ರಹಗಳನ್ನೂ ಶಾಸ್ತ್ರೋಕ್ತವಾಗಿ ಮಾಡಿ ನೋಟಕರ ಕಣ್ಮನಗಳನ್ನು ಸೆಳೆದು ಸುಖಸಮಾಧಿಯಲ್ಲಿ ನಿಲ್ಲಿಸುವಂತೆ ನಿರ್ಮಿಸುವವನು ತಮ್ಮ ಶಿಲ್ಪಕೌಶಲದಿಂದ ತಾನೂ ಅಕೃತ್ರಿಮವಾದ ಆನಂದವನ್ನು ಪಡೆದುಕೊಳ್ಳುತ್ತಾನೆ. ಕುಂಬಾರ, ಬಡಗಿ, ಅಕ್ಕಸಾಲೆ- ಮೊದಲಾದ ಉದ್ಯೋಗಿಗಳೂ ಹಾಗೆಯೇ ತಮ್ಮತಮ್ಮ ಕಲೆಯನ್ನು ಪರಮಾತ್ಮನ ವಿಭೂತಿ ಯಾಗುವಂತೆ ಮಾಡಿಕೊಳ್ಳುವದಕ್ಕೆ ಅವಕಾಶವಿದೆ.

ಹೀಗೆ ಈ ಲೋಕದಲ್ಲಿ ಎಷ್ಟೋ ಸುಖಸಾಧನಗಳಾದ ಕಲೆಗಳೂ ಉದ್ಯೋಗ ಗಳೂ ಇರುತ್ತವೆ. ಸಾಮಾನ್ಯಕುಟುಂಬಿಗರುಕೂಡ ತಾವು ಈಗ ಅನುಭವಿಸು

ತ್ತಿರುವ ವ್ಯಾವಹಾರಿಕಸುಖವು ಕ್ಷಣಿಕವಾಗಿದ್ದರೂ ಮತ್ತೊಂದು ದೃಷ್ಟಿವಿಶೇಷ ವನ್ನು ಅವಲಂಬಿಸಿ ಇಹಜೀವನವನ್ನೆಲ್ಲ ಪರಮಾತ್ಮಮಯವಾಗಿ ಮಾಡಿಕೊಳ್ಳು ವದು ಸಾಧ್ಯವಾಗಿರುತ್ತದೆ. ಇದರಲ್ಲಿಯೇ 'ಅನಿತ್ಯಮಸುಖಂ ಲೋಕ ಮಿಮಂ ಪ್ರಾಪ್ಯ ಭಜಸ್ವ ಮಾಮ್' ಎಂಬ ವಾಕ್ಯಕ್ಕೆ ಪರಮತಾತ್ಪರ್ಯವಿದೆ. ದುಃಖಮಯವಾಗಿ ಕಾಣುತ್ತಿರುವ ಈ ಜೀವನವನ್ನು ಸುಖಮಯವಾಗಿ ಮಾರ್ಪ ಡಿಸಿಕೊಳ್ಳುವದಕ್ಕೆ ಒಂದು ಬಗೆಯ ತಪಸ್ಸು ಬೇಕಾಗಿರುತ್ತದೆ. ನಮ್ಮೆಲ್ಲರ ಮನೆಗಳಲ್ಲಿಯೂ ಮನೆಗಳಲ್ಲಿರುವವರೆಲ್ಲರ ಮನಸ್ಸಿನಲ್ಲಿಯೂ ಪರಮಾತ್ಮನ ಭಾವನೆ ಬರಲಿ! ಎಂದು ಹಾರೈಸಬೇಕು. ಮನೆಯು ದೇವಾಲಯವೆಂಬ ಭಾವನೆ ಬರು ವಂತೆ ಮಾಡಿಕೊಳ್ಳಬೇಕು; ಅದು ಅದಷ್ಟು ಚೊಕ್ಕಟವಾಗಿರುವಂತೆ ನೋಡಿ ಕೊಳ್ಳಬೇಕು. ಮನೆಯವರ ನಡೆನುಡಿಗಳೂ ವಿಚಾರಗಳೂ ಶುಚಿಯಾಗಬೇಕು. ಪರಮಾತ್ಮನ ಅನುಗ್ರಹದಿಂದ ನಮಗೆ ದೊರಕಿರುವದರಿಂದ ತೃಪ್ತರಾಗಿ ಎಡೆಬಿಡದೆ ಕೆಲಸವನ್ನು ಮಾಡುತ್ತಾ, ಮನಸ್ಸನ್ನು ಕ್ಲೇಶರಹಿತವಾಗಿರಿಸಿಕೊಳ್ಳುವದಕ್ಕೆ ಪರ ಮಾತ್ಮನನ್ನೇ ಶರಣುಹೋಗಬೇಕು. ಆಗ ಈ ಲೋಕವು ಆ ಪರಮಾತ್ಮಲೋಕವಾಗಿ ಮಾರ್ಪಡುವದು. ಪರಮಾತ್ಮನ ಚಿಂತೆಯಿಂದ ನಮಗೆ ಸುಖವು ಕಡಿಮೆಯಾದೀ ತೆಂದೂ ಜೀವನವು ಕಷ್ಟಮಯವಾಗುವದೆಂದೂ ಭಾವಿಸಬಾರದು. ಶ್ರೀರಾಮಕೃಷ್ಣ ಪರಮಹಂಸರು ವಿವೇಕಾನಂದರಿಗೆ ಬೋಧೆಯನ್ನು ಮಾಡುತ್ತಿದ್ದ ಒಂದು ಸಂದರ್ಭ ದಲ್ಲಿ "ಪರಮಾತ್ಮನೆಂಬುದು ಒಂದು ಅಮೃತದ ಬಟ್ಟಲಿದ್ದಂತೆ; ನಾವು ಅದನ್ನು ಕುಡಿದು ತೃಪ್ತರಾಗುವದಕ್ಕೆ ಹೊರಟಿರುವ ನೊಣಗಳಿದ್ದಂತೆ; 'ಅದರೊಳಗೆ ಬಿದ್ದು ಸತ್ತೇನೇನೊ!' ಎಂಬ ಅಂಜಿಕೆಗೆ ಅಲ್ಲಿ ಸ್ವಲ್ಪವೂ ಅವಕಾಶವಿಲ್ಲ; ಏಕೆಂ ದರೆ ಸತ್ತವರನ್ನು ಸಂಜೀವನದಿಂದ ಎಬ್ಬಿಸುವ ಅಮೃತವದು" ಎಂದಿರುತ್ತಾರೆ. ಪರಮಾತ್ಮನು ಆನಂದಮಯನಾಗಿರುತ್ತಾನೆ; ಪ್ರಾಣಿಗಳೆಲ್ಲರೂ ಆನಂದದಿಂದಲೇ ಬಂದು, ಆನಂದದಿಂದಲೇ ಜೀವಿಸುತ್ತಿದ್ದು, ಆನಂದವನ್ನೇ ಸೇರಿಕೊಳ್ಳುವರು ಎಂಬ ಶ್ರುತಿಯು ಅಕ್ಷರಶಃ ನಿಜವಾಗಿರುತ್ತದೆ.

ಜೀವನದಲ್ಲಿ ನಮಗೆ ಚಿರಪರಿಚಿತವಾಗಿರುವ ಶಿಲ್ಪ, ಸಂಗೀತ, ಕಾವ್ಯ— ಮುಂತಾದವುಗಳಲ್ಲಿಯೂ ಕರ್ಮಯೋಗದ ಬೀಜವಿದೆ. ನಿತ್ಯಜೀವನದಲ್ಲಿಯೂ ನಮ್ಮ ನಮ್ಮ ಸ್ಥಿತಿಯಲ್ಲಿಯೇ ಕರ್ಮಯೋಗವನ್ನು ಅಭ್ಯಾಸಮಾಡುವದಕ್ಕೆ ಅವ ಕಾಶವಿದೆ. ಲೌಕಿಕಕರ್ಮಗಳನ್ನುಕೂಡ ಕರ್ಮಯೋಗಕ್ಕೆ ಸಾಧನವಾಗಿ ಮಾಡಿಕೊಳ್ಳಬಹುದಾಗಿದೆ. ನಮ್ಮನಮ್ಮ ಪಾಲಿಗೆ ಬಂದಿರುವ ಕೆಲಸಗಳನ್ನು ಉತ್ತಮವಾದ ರೀತಿಯಿಂದ ಮಾಡಿ ಭಗವದರ್ಚನೆಯಾಗಿ ಮಾಡಿಕೊಳ್ಳುವದಕ್ಕೆ ಅವಕಾಶವಿದೆ. ಕೆಲಸವನ್ನು ಕೇವಲ ಕರ್ತವ್ಯವೆಂಬ ಬುದ್ಧಿಯಿಂದ ಮಾಡುವ ದಕ್ಕೆ ಬದಲು ಅದನ್ನೇ ಮನಮುಟ್ಟಿಮಾಡಿ ಪರಮಾತ್ಮನ ಅರ್ಚನೆಯೆಂದು ಭಾವಿಸಿಕೊಂಡರೆ ಲೌಕಿಕಜೀವನವೇ ಪರಮಾರ್ಥಕ್ಕೆ ಸೋಪಾನವಾದೀತು.

---

# ೩೫. ಉಪಾಸನೆ

(21-8-'2)

ಕರ್ಮಯೋಗದಿಂದ ಉಪಾಸನೆಗೆ ಬಂದು ನಿಂತಿದ್ದೇವೆ. ಉಪಾಸನೆಯ ತತ್ತ್ವವನ್ನು ಶಾಸ್ತ್ರದಿಂದಲೇ ತಿಳಿದುಕೊಳ್ಳಬೇಕಾಗಿದೆಯಾದರೂ ಉಪಾಸನೆಯೆಂಬ ಭಾವನೆಯೇನೂ ಜನರಿಗೆ ಹೊಸದಲ್ಲ. ಲೌಕಿಕವ್ಯವಹಾರದಲ್ಲಿ ಒಬ್ಬೊಬ್ಬರೂ ಒಂದೊಂದು ಭಾವನಾಭಿನಿವೇಶದಿಂದ ಕೂಡಿಕೊಂಡೇ ಇರುತ್ತಾರೆ. ಉದಾಹರಣೆಗೆ ಸಂಗೀತಗಾರನಿಗೆ ಅತ್ತದ್ದು, ನಕ್ಕದ್ದು - ಮುಂತಾದದ್ದರಲ್ಲಿಯೂ ಇಂಥಿಂಥ ಸ್ವರಗಳು ಸೇರಿವೆಯೆಂದೇ ತೋರುತ್ತಿರುತ್ತದೆ; ಹಣದ ದೃಷ್ಟಿಯವನಿಗೆ ಯಾವ ಲಾಭನಷ್ಟವಾದರೂ ಇಂತಿಷ್ಟು ರೂಪಾಯಿನ ಲಾಭ ಅಥವಾ ನಷ್ಟ ಎಂದೇ ಭಾಸವಾಗುತ್ತದೆ; ಭೂಮಿಯನ್ನು ಉಳುವ ರೈತನಿಗೆ ಮನೆಯ ಅಭಿವೃದ್ಧಿಯು ಅಥವಾ ಹೀನಸ್ಥಿತಿಯು ದನಕರು ಮುಂತಾದವುಗಳ ಮಾನದಂಡದಿಂದಲೇ ಅಳೆಯತಕ್ಕದ್ದಾಗಿರುತ್ತದೆ. ಸ್ಕೂಲುಹುಡುಗರಿಗೆ ತಮ್ಮ ತಿಳಿವಳಿಕೆಯ ಅಂತಸ್ತನ್ನು ಅಳೆಯುವಾಗ 'ನಂಬರು' (ಗುಣಸಂಖ್ಯೆ) ಗಳಿಂದಲೇ ಗೊತ್ತುಮಾಡಬೇಕೆನಿಸುತ್ತದೆ. ಹೀಗೆ ಒಂದೊಂದೇ ಭಾವನೆಯು ವ್ಯವಹಾರದಲ್ಲಿ ಚಿತ್ತವನ್ನು ಆವರಿಸಿರುವಂತೆ, ಶಾಸ್ತ್ರದಿಂದ ತಿಳಿದುಬರುವ ವಿಷಯಕ್ಕೆ ಚಿತ್ತವೃತ್ತಿಯ ಹೊನಲು ಹರಿಯುತ್ತಿದ್ದರೆ ಅದು 'ಉಪಾಸನೆ' ಎನಿಸುತ್ತದೆ.

ಗೀತಾಭಾಷ್ಯದಲ್ಲಿ ಉಪಾಸನೆಗೆ ಲಕ್ಷಣವನ್ನು ಹೀಗೆ ಹೇಳಿದೆ : 'ಯಥಾಶಾಸ್ತ್ರಮುಪಾಸ್ಯಸ್ಯಾರ್ಥಸ್ಯ ವಿಷಯೀಕರಣೇನ ಸಾಮೀಪ್ಯಮುಪಗಮ್ಯ ತೈಲಧಾರಾವತ್ ಸಮಾನಪ್ರತ್ಯಯಪ್ರವಾಹೇಣ ದೀರ್ಘಕಾಲಂ ಯದಾಸನಂ ತದುಪಾಸನಮಾಚಕ್ಷತೇ|| ಶಾಸ್ತ್ರದಲ್ಲಿ ಹೇಳಿರುವಂತೆ ಉಪಾಸ್ಯವಾದ ವಸ್ತುವನ್ನು ಸಮೀಪಿಸಿ ಮನಸ್ಸಿಗೆ ವಿಷಯವಾಗಿ ಮಾಡಿಕೊಂಡು ಎಣ್ಣೆಯ ಧಾರೆಯ ಹಾಗೆ ಕಡಿವಡೆಯದೆ ದೀರ್ಘಕಾಲದವರೆಗೂ ಅದರಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಳ್ಳುವದೇ ಉಪಾಸನೆ.

ನಮಗೆ ಇಷ್ಟವಾದ ಅಥವಾ ಪೂಜ್ಯವಾದ ವಸ್ತುವನ್ನು ಎಡೆಬಿಡದೆ ನಾವು ಉಪಾಸನೆಮಾಡುತ್ತಿರುತ್ತೇವೆ ಎಂಬುದನ್ನು ಆಚಾರ್ಯರು ಹೀಗೆ ದೃಷ್ಟಾಂತಪೂರ್ವಕವಾಗಿ ಮನದಟ್ಟುಮಾಡಿಕೊಟ್ಟಿರುತ್ತಾರೆ :

> ತಥಾ ಹಿ ಲೋಕೇ 'ಗುರುಮುಪಾಸ್ತೇ' 'ರಾಜಾನಮುಪಾಸ್ತೇ' ಇತಿ ಚ| ಯಸ್ತಾತ್ಪರ್ಯೇಣ ಗುರ್ವಾದೀನನುವರ್ತತೇ ಸ ಏವಮ್ ಉಚ್ಯತೇ | ತಥಾ 'ಧ್ಯಾಯತಿ ಪ್ರೋಷಿತನಾಥಾ ಪತಿಮ್' ಇತಿ ಯಾ ನಿರನ್ತರಸ್ಮರಣಾ ಪತಿಂ ಪ್ರತಿ ಸೋತ್ಕಣ್ಠಾ ಸಾ ಏವಮಭಿಧೀಯತೇ ||

"ಲೋಕದಲ್ಲಿ 'ಗುರುವನ್ನು ಉಪಾಸನೆಮಾಡುತ್ತಾನೆ', 'ರಾಜನನ್ನು ಉಪಾಸನೆಮಾಡುತ್ತಾನೆ'– ಎಂದು ಯಾವನು ಗುರುವೇ ಮೊದಲಾದವರನ್ನು ತಾತ್ಪರ್ಯದಿಂದ ಅನುವರ್ತಿಸಿಕೊಂಡಿರುತ್ತಾನೋ ಅವನ ವಿಷಯದಲ್ಲಿ ಹೀಗೆಂದು ಹೇಳುತ್ತಾರೆ. ಇದರಂತೆ 'ಪರಸ್ಥಳಕ್ಕೆ ಹೋಗಿರುವ ಗಂಡನನ್ನು ಧ್ಯಾನಿಸುತ್ತಿರುತ್ತಾಳೆ' ಎಂದು ನಿರಂತರವಾಗಿ ಪತಿಯನ್ನೇ ಕುತೂಹಲದಿಂದ ಯಾವಳು ಸ್ಮರಿಸುತ್ತಿರುವಳೋ ಆಕೆಯ ವಿಷಯದಲ್ಲಿ ಹೀಗೆಂದು ಹೇಳುವರು." ಇಲ್ಲಿ ಹೇಳಿರುವ ಉದಾಹರಣೆಗಳಂತೆ ಲೌಕಿಕರು ತವುತಮಗೆ ಪ್ರಿಯವಾದ ವಸ್ತುಗಳನ್ನು ಕುರಿತು ಚಿಂತಿಸುವದನ್ನು ನಾವು ಮನದಂದುಕೊಳ್ಳಬಹುದು. ಹಳ್ಳಿಯವನೊಬ್ಬನಿಗೆ ಕಾಲೇಜಿಗೆ ಹೋದ ತನ್ನ ಮುದ್ದುಮಗನ ಚಿಂತೆ, ರೈತನಿಗೆ ಪೈರಿನ ಚಿಂತೆ, ದನವನ್ನು ಸಾಕುವವನಿಗೆ ಕರುವಿನ ಚಿಂತೆ, ಶ್ರೀಮಂತ ತಂದೆಗೆ ಸೀಮೆಗೆ ವಿದ್ಯಾಭ್ಯಾಸಕ್ಕೆ ಕಳುಹಿಸಿರುವ ಏಕಪುತ್ರನ ಚಿಂತೆ– ಇತ್ಯಾದಿ. ದುಃಖ, ಸಂತೋಷ, ಭಯ, ಆಶ್ಚರ್ಯ–ಮುಂತಾದ ವೇದನೆಗಳು ಬಲವಾಗಿ ಮನಸ್ಸನ್ನು ಹಿಡಿದುಕೊಂಡಿರುವಾಗ ಆಯಾ ವಸ್ತುವಿನಲ್ಲಿಯೇ ಮನಸ್ಸು ನಿಂತುಬಿಟ್ಟಿರುತ್ತದೆ. ಹೀಗೆ ನಿರಂತರವಾಗಿ ಬಾಹ್ಯವಸ್ತುವನ್ನೇ ನೆನೆನೆನೆದು ಅದರ ವಾಸನೆಗೆ ಕಟ್ಟುಬಿದ್ದಿರುವ ಮನಸ್ಸನ್ನು ಆಯಾ ವಸ್ತುವಿನಿಂದ ಬಿಡಿಸುವದಕ್ಕೆ ಆಗುವಂತಿಲ್ಲ. ಬೆಲೆಯುಳ್ಳ ವಸ್ತುವನ್ನು ಕಳೆದುಕೊಂಡು ಎಷ್ಟೋ ಕಾಲವಾಗಿದ್ದರೂ, ಪ್ರಿಯನಾದ ಪುತ್ರನೇ ಮೊದಲಾದವರು ಸತ್ತು ಹಲವು ವರ್ಷಗಳಾಗಿದ್ದರೂ ಮತ್ತೊಬ್ಬನು ತನ್ನನ್ನು ಬಯ್ದು ಅಪಮಾನಮಾಡಿದ್ದು– ಮುಂತಾಗಿ ಆಯಾ ವಿಷಯವನ್ನೇ ಸಂತತವಾಗಿ ಜನರು ಮನಸ್ಸಿನಲ್ಲಿ ಹೊರಳಾಡಿಸುತ್ತಿರುವರು. ಈ ಗಂಟನ್ನು ಬಿಡಿಸಿಕೊಂಡು ಪರಮಾತ್ಮನಕಡೆಗೆ ತಿರುಗಿ ಅಲ್ಲಿಯೇ ಮನಸ್ಸನ್ನು ನಿಲ್ಲಿಸಿಬಿಟ್ಟರೆ ಶಾಸ್ತ್ರೀಯವಾದ ಉಪಾಸನೆಯಾಯಿತು.

ಮನಸ್ಸು ವಿಷಯಗಳ ವಾಸನೆಯಿಂದ ವಾಸಿತವಾಗಿರುವದನ್ನು ಮಲವೆಂದೂ ಕಂಡಕಂಡಕಡೆಗೆ ಹರಿದಾಡುತ್ತಾ ಇರುವದನ್ನು ವಿಕ್ಷೇಪವೆಂದೂ ಕರೆಯುವರು. ಈ ಎರಡು ಮನೋದೋಷಗಳನ್ನು ನೀಗಿಸುವದಕ್ಕಾಗಿ ಉಪಾಸನೆಯು ಬಹಳ ಪ್ರಯೋಜನಕಾರಿಯಾಗಿರುತ್ತದೆ. "ಭರ್ತೃಹರಿನಿರ್ವೇದ' ಎಂಬ ನಾಟಕೆಯಲ್ಲಿ ರಾಜನು ಪತ್ನೀವಿಯೋಗದಿಂದ ದುಃಖವು ಹೆಚ್ಚುತ್ತಾ ಹೋಗಲು ಉನ್ಮಾದದಿಂದ ಹೆಂಡತಿಯ ಹೆಣವನ್ನೇ ತನ್ನ ಎದೆಯಮೇಲೆ ಇಟ್ಟುಕೊಂಡು ಪ್ರಾಣವನ್ನು ಬಿಡುತ್ತೇನೆಂದು ಹಠಹಿಡಿದದ್ದನ್ನು ಕಂಡು ಗೋರಖನಾಥರು ಒಂದು ಕಮಂಡಲುವಿನ ನೆಪದಿಂದ ಅವನಿಗೆ ವೈರಾಗ್ಯವನ್ನುಂಟುಮಾಡಿದ ಕಥೆಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ವಿಷಯದಲ್ಲಿಯೇ ನೆಟ್ಟಮನಸ್ಸುಳ್ಳವರು ಅದರ ಗುಣಗಳನ್ನು ಮತ್ತೆಮತ್ತೆ ಮನಸ್ಸಿನಲ್ಲಿ ಹೊರಳಿಸುವ ಹಾಗೆ ಪರಮಾತ್ಮನ ಗುಣಗಳನ್ನೇ ನಿರಂತರವಾಗಿ ಮನಸ್ಸಿನಲ್ಲಿ ಹೊರಳಾಡಿಸಿದರೆ ಅದು ಉಪಾಸನೆ

ಯಾಗುವದು. ಶಾಸ್ತ್ರದಲ್ಲಿ ಹೇಳಿರುವ ಗುಣಗಳನ್ನು ಮತ್ತೆಮತ್ತೆ ಕೇಳುವದ ರಿಂದ ಆ ಗುಣಗಳನ್ನೆಲ್ಲ ಒಕ್ಕಡೆಗೆ ಸೇರಿಸಿಕೊಂಡರೆ ಮನಸ್ಸು ಅವುಗಳಿಂದಲೇ ಊಡಿಕೊಂಡುಬಿಟ್ಟಿರುತ್ತದೆ. ನಿರಂತರವಾಗಿ ಬಹುಕಾಲದವರೆಗೆ ಮಾಡಿದ ಉಪಾಸನೆಯಿಂದ- ಕಸ್ತೂರಿಯನ್ನು ಅರೆದಂತೆಲ್ಲ ಅದರ ಘಮವು ಹೆಚ್ಚುವಂತೆ- ಉಪಾಸ್ಯವಸ್ತುವಿನಲ್ಲಿ ಪ್ರೇಮವೂ ಹೆಚ್ಚುತ್ತದೆ ; ಅದರಲ್ಲಿಯೇ ಮನಸ್ಸು ನಿಂತು ಬಿಡುತ್ತದೆ, ವಿಷಯಸಂಗವು ಬಿಟ್ಟುಹೋಗುತ್ತದೆ.

ಶ್ರುತಿಯಲ್ಲಿ ಇಂಥ ಉಪಾಸನೆಗಳನ್ನು ವಿವರಿಸಿರುತ್ತದೆ. ಉಪಾಸನೆಗಳೆಲ್ಲ ಒಂದೇ ವಿಧವಾಗಿರುವದಿಲ್ಲ. ಕೆಲವು ಕರ್ಮಾಂಗವಾದ ಉಪಾಸನೆಗಳು. ಸಂಧ್ಯಾವಂದನೆಗೆ ಅಂಗವಾಗಿ ಗಾಯತ್ರಿಯ ಜಪವನ್ನು ಮಾಡುವಂತೆ, ಒಂದೊಂದು ಕರ್ಮಕ್ಕೆ ಅಂಗವಾಗಿ ಉಪಾಸನೆಯನ್ನು ಹೇಳಿರುವದುಂಟು. ಆ ಕರ್ಮಕ್ಕೆ ಯಾರು ಅಧಿಕಾರಿಗಳೋ ಅವರೇ ಆಯಾ ಕರ್ಮಾಂಗೋಪಾಸನೆಗೆ ಅಧಿಕಾರಿಗಳು ಎಂಬುದು ಸ್ಪಷ್ಟವಾಗಿದೆ. ಕೆಲವು ಪ್ರತೀಕೋಪಾಸನೆಗಳು. ಈಗ ಜನರು ಸಾಲಗ್ರಾಮವನ್ನು ವಿಷ್ಣುವೆಂದೂ ಲಿಂಗವನ್ನು ಶಿವನೆಂದೂ ಉಪಾಸನೆಮಾಡುವ ಹಾಗೆ ಆಕಾಶ, ಮನಸ್ಸು-ಮುಂತಾದವುಗಳನ್ನು ಬ್ರಹ್ಮವೆಂದು ಉಪಾಸನೆಮಾಡ ಬೇಕೆಂದು ಶ್ರುತಿಯಲ್ಲಿ ವಿಧಿಸಿರುತ್ತದೆ. ಇನ್ನೂ ಕೆಲವು ಕಡೆಗಳಲ್ಲಿ ಉಪಾಸ್ಯವಾದ ಬ್ರಹ್ಮದ ಗುಣಗಳನ್ನು ವರ್ಣಿಸಿ ಇಂಥ ಬ್ರಹ್ಮವೇ ನಾನೆಂದು ಉಪಾಸನೆಮಾಡ ಬೇಕೆಂದು ಹೇಳಿರುತ್ತದೆ ; ಈ ಬಗೆಯ ಉಪಾಸನೆಗಳಿಗೆ ಅಹಂಗ್ರಹೋಪಾಸನೆ ಗಳು ಎಂದು ಹೆಸರು. ಒಂದೇ ಉಪಾಸನೆಯು ಬೇರೆಬೇರೆಯ ವೇದಭಾಗಗಳಲ್ಲಿ ಬಂದಿದ್ದರೆ ಎಲ್ಲಾ ಕಡೆಗಳಲ್ಲಿಯೂ ಹೇಳಿರುವ ಗುಣಗಳನ್ನು ಒಟ್ಟುಗೂಡಿಸಿ ಕೊಂಡೇ ಉಪಾಸನೆಮಾಡಬೇಕಾಗುತ್ತದೆ

ಉಪಾಸನೆಗಳಿಗೆ ದುರಿತಕ್ಷಯ, ಕರ್ಮದ ಸಮೃದ್ಧಿ, ಇಷ್ಟಾರ್ಥಪ್ರಾಪ್ತಿ, ಕ್ರಮಮುಕ್ತಿ-ಹೀಗೆ ಬೇರೆಬೇರೆಯ ಫಲಗಳೂ ಇರುತ್ತವೆ. ಯಾವ ಉಪಾಸನೆ ಗಳಿಗೆ ಸಾಕ್ಷಾತ್ಕಾರವನ್ನು ಪಡೆದುಕೊಂಡು ದೇಹವು ಬಿದ್ದಬಳಿಕ ಕಾಲಾಂತರದಲ್ಲಿ ಆಯಾ ದೇವತೆಯ ಸಾಯುಜ್ಯವನ್ನೇ ಪಡೆಯಬೇಕಾಗುವದೋ ಅಂಥ ಉಪಾ ಸನೆಗಳು ಅನೇಕವಾಗಿ ಶಾಸ್ತ್ರದಲ್ಲಿ ವರ್ಣಿತವಾಗಿರುವದರಿಂದ ಯಾವದಾದರೂ ಒಂದನ್ನೇ ಆರಿಸಿಕೊಂಡು ಧ್ಯೇಯಸಾಕ್ಷಾತ್ಕಾರವಾಗುವವರೆಗೂ- ಅದೇ ತಾನೆಂಬ ಭಾವನೆಯು ಗಟ್ಟಿಯಾಗಿ ನಿಲ್ಲುವವರೆಗೂ- ಉಪಾಸನೆಯನ್ನು ಮಾಡಬೇಕಾಗು ತ್ತದೆ. ಫಲವು ಕಾಲಾಂತರದಲ್ಲಿ ಲೋಕಾಂತರದಲ್ಲಿ ಆಗುವದಾಗಿದ್ದರೂ ಉಪಾ ಸನೆಯು ಪಕ್ವವಾದಂತೆಲ್ಲ ಉಪಾಸ್ಯದ ಗುಣಗಳು ಉಪಾಸಕನಲ್ಲಿ ಬದುಕಿರು ವಾಗಲೇ ಕಾಣಿಸಿಕೊಳ್ಳುವದಕ್ಕೆ ಮೊದಲಾಗುವವು. ಕ್ರಿಸ್ತಿಯನ್ನರ ಸಂತನಾದ ಸೇಂಟ್ ಫ್ರಾನ್ಸಿಸ್ ಎಂಬಾತನ ದೇಹದಲ್ಲಿ ಕ್ರಾಸ್ (ಶಿಲುಬೆಯ) ಗುರುತುಗಳು

ಮೂಡಿದ್ದವೆಂದು ಐತಿಹಾಸಿಕರು ಒಪ್ಪಿರುವದನ್ನೂ ಶ್ರೀರಾಮಕೃಷ್ಣಪರಮ ಹಂಸರು ಬೇರೆಬೇರೆಯ ಭಾವಗಳಿಂದ ಉಪಾಸನೆಯನ್ನು ಮಾಡಿದಾಗ ಅವರ ಶರೀರಾದಿಗಳಲ್ಲಿ ಕೂಡ ಅದಕ್ಕನುಗುಣವಾದ ಮಾರ್ಪಾಡುಗಳು ಆದವೆಂದು ಹೇಳಲಾಗಿರುವ ಸ್ವಾಭಾವಿಕಪರಿಣಾಮವನ್ನೂ ಇಲ್ಲಿ ಮನದಂದುಕೊಳ್ಳಬಹುದು.

'ತಾನ್ಯೇತಾನಿ ಉಪಾಸನಾನಿ ಸತ್ತ್ವಶುದ್ಧಿಕರತ್ವೇನ ವಸ್ತುತತ್ತ್ವ-
ವಭಾಸಕತ್ವಾತ್ ಅದ್ವೈತಜ್ಞಾನೋಪಕಾರಕಾಣಿ, ಆಲಮ್ಬನವಿಷಯ
ತ್ವಾತ್ ಸುಸಾಧ್ಯಾನಿ ಚ ಇತಿ ಪೂರ್ವಮುಪನ್ಯಸ್ಯನ್ತೇ ||' (ಛಾಂ.ಭಾ.)

ಎಂಬುದು ಶಂಕರಾಚಾರ್ಯರವರ ಭಾಷ್ಯವಾಕ್ಯ. ಉಪನಿಷತ್ತುಗಳಲ್ಲಿ ವಸ್ತು ಪ್ರಧಾನವಾದ ಅದ್ವೈತಜ್ಞಾನವನ್ನು ಮಾತ್ರವೇ ಹೇಳಿಲ್ಲ; ಅದಕ್ಕಿಂತ ಮೊದಲು ಪುರುಷನು ಪ್ರಯತ್ನಪೂರ್ವಕವಾಗಿ ಮಾಡಬಹುದಾದ ಉಪಾಸನೆಯನ್ನೂ ಅಂದರೆ ಧ್ಯಾನವನ್ನೂ- ಅದರ ಪ್ರಕಾರಗಳನ್ನೂ ಹೇಳಿರುತ್ತದೆ. ಅದೇಕೆ ? ಎಂದರೆ ಅವುಗಳಿಂದ ಚಿತ್ತದ ದೋಷಗಳು ಹೋಗಿ ಜ್ಞಾನಕ್ಕೆ ಸಹಾಯವಾಗುತ್ತದೆ. ಮನಸ್ಸು ಮೊದಲು ಪ್ರತ್ಯಕ್ಪ್ರವಣವಾಗಬೇಕು, ಹೊರಗಿನ ವಿಷಯಚಿಂತನೆಯ ಹಿಡಿತದಿಂದ ತಪ್ಪಿಸಿಕೊಂಡು ಒಳಮುಖವಾಗಬೇಕು ; ತನ್ನ ಚಾಂಚಲ್ಯವನ್ನು ಕಳೆದುಕೊಂಡು ಏಕಾಗ್ರತೆಯನ್ನು ಪಡೆದುಕೊಳ್ಳಬೇಕು. ಇದಲ್ಲದೆ ಜ್ಞಾನಕ್ಕೆ ಎಲ್ಲರೂ ಅಧಿಕಾರಿಗಳಲ್ಲ ; ಅಂಥವರಿಗೆ ಉಪಾಸನೆಯಿಂದಲ್ಲದೆ ಮತ್ತೆ ಯಾವ ಮಾರ್ಗದಿಂದಲೂ ಪುರುಷಾರ್ಥಪ್ರಾಪ್ತಿಯಾಗುವಂತಿಲ್ಲ. ಈಗಿನ ಸ್ಥಿತಿಯಲ್ಲಿ ಜನರಿಗೆ ಸಂಸ್ಕೃತಭಾಷೆಯ ಪರಿಚಯವಿಲ್ಲ, ಅಧ್ಯಾತ್ಮವಿದ್ಯಾವಂತರ ಸಹವಾಸವು ದೊರಕುವಂತಿಲ್ಲ, ಪಾಶ್ಚಾತ್ತ್ಯರ ನಡೆನುಡಿಗಳ ಅನುಕರಣೆಯ ಪ್ರಭಾವ ಬೇರೆ; ಸಾಲದ ಕಡಿಮೆಗೆ 'ಉಪಾಸನೆಯು ಕಡಿಮೆಯ ಅಂತಸ್ತಿನವರಿಗೆ ಹೇಳಿದ್ದು, ಕರ್ಮವನ್ನು ಮೀರಿದ ನಿಸ್ತ್ರೈಗುಣ್ಯರಿಗಲ್ಲ' ಎಂದು ಬೋಧಿಸುತ್ತಾ ಒಣ ವೇದಾಂತದ ಮಾತುಗಳಿಂದ ಜನರನ್ನು ಅಡ್ಡಹಾದಿಗೆ ಎಳೆಯುತ್ತಿರುವ ಕಲಿ-ಯುಗದ ವೇದಾಂತಿಗಳ ಉಪದೇಶವೂ ಸೇರಿಕೊಂಡಿದೆ ! ಉಪನಿಷತ್ತುಗಳಲ್ಲಿ ಹೇಳಿದ ಉಪಾಸನೆಗಳು ಪುಸ್ತಕದಲ್ಲಿಯೇ ಹೊರತು ಈಗಿನ ಮುಮುಕ್ಷುಗಳಿಗೆ ಅವು ದೊರೆಯುವಂತಿಲ್ಲ ; ವೈದಿಕಾಚಾರಗಳ ಸೋಂಕಿಲ್ಲದವರಿಗೆ ಉಪಾಸನೆಗಳು ದಕ್ಕುವಂತೆಯೂ ಇಲ್ಲ. ಹೀಗಿರುವ ಸ್ಥಿತಿಯವರಿಗೆ ಏನುಗತಿ ?- ಎಂಬ ಶಂಕೆ ಎದ್ದುಕೊಳ್ಳುತ್ತದೆಯಷ್ಟೆ ? ಇದಕ್ಕೆ ಪರಿಹಾರವನ್ನು ಈಗ ಹುಡುಕಿ ತಿಳಿದುಕೊಳ್ಳುವದಕ್ಕೆ ಯತ್ನಿಸೋಣ.

---

# ೩೭. ಇತಿಹಾಸಪುರಾಣೋಕ್ತವಾದ ಉಪಾಸನೆ

( 22-8-62 )

ಯಾರಿಗೆ ಅಧ್ಯಯನಾಧಿಕಾರವಿಲ್ಲವೋ, ಅಥವಾ ಇದ್ದರೂ ಅವರು ದ್ವಿಜತ್ವದಿಂದ ಚ್ಯುತರಾಗಿರುವ ಕಾರಣದಿಂದ ಯಾರಿಗೆ ಕಾಲಮಹಿಮೆಯಿಂದ ವೈದಿಕ ಧರ್ಮದ ಸಂಸ್ಕಾರವು ಕಡಿಮೆಯಾಗಿದೆಯೋ ಅಂಥವರಿಗೆ ಏನೂ ಗತಿಯಿಲ್ಲವೆ? ಎಂದರೆ ಇದೆ. ಅರಗದ ಹಾಲನ್ನು ನೀರುಬೆರೆಯಿಸಿ ಮಕ್ಕಳಿಗೆ ಕುಡಿಸುವಂತೆ ವೇದೋಕ್ತವಾದ ಉಪಾಸನೆಗಳನ್ನೇ ಅಧಿಕಾರಿಗಳಿಗೆ ತಕ್ಕಂತೆ ಮಾರ್ಪಡಿಸಿ ಪುರಾಣಗಳಲ್ಲಿ ಉಪದೇಶಿಸಿರುತ್ತದೆ. ರಾಮಾಯಣಭಾರತಗಳಲ್ಲಿಯೂ ವಿಶೇಷವಾಗಿ ಈಗ ಎಲ್ಲರಿಗೂ ಪರಿಚಿತವಾದ ಹೆಸರಿನ ಭಗವದ್ಗೀತೆಯಲ್ಲಿಯೂ ಈ ವಿಚಾರವಿದೆ. ಸದ್ಯಕ್ಕೆ ರಾಮಾಯಣಮಹಾಭಾರತಗಳನ್ನಾದರೂ ನಾವು ಶ್ರವಣ ಮಾಡುತ್ತಿದ್ದಿದ್ದರೆ ನಮಗೆ ಕರ್ಮೋಪಾಸನೆಗಳ ತತ್ತ್ವವು ಕಣ್ಮನಸ್ಸುಗಳಿಗೆ ಮರೆಯಾಗುತ್ತಿರಲಿಲ್ಲ. ನಮ್ಮ ದುರದೃಷ್ಟದಿಂದ ರಾಮಾಯಣ, ಭಾರತ-ಎಂಬ ಹೆಸರುಗಳಿಗೆಕೂಡ ಕಲಂಕವು ಹತ್ತುವಂತೆ ಆಗಿದೆ; 'ತೆಗೆಯಬೇಡಿ, ರಾಮಾಯಣವನ್ನ!', 'ಅದೇ ಒಂದು ಮಹಾಭಾರತವಾಯಿತು!' ಎಂದು ಜನರು ತಮಗೆ ಅರ್ಥವೂ ತಿಳಿಯದೆ ಇರುವ ಉತ್ತಮಧರ್ಮಗ್ರಂಥಗಳ ಹೆಸರನ್ನು ಸಂಭಾಷಣೆಯಲ್ಲಿ ಕೀಳುದೃಷ್ಟಿಯಿಂದ ನೋಡುವ ವಾಕ್ಯಗಳಲ್ಲಿ ಬಳಸುವದಕ್ಕೆ ಮೊದಲು ಮಾಡಿದ್ದಾರೆ!

ಈ ದಿನ ಶ್ರೀಕೃಷ್ಣಜಯಂತಿ. ಕೃಷ್ಣನ ವಿಚಾರವು ವ್ಯಾಸರ ಭಾರತದಲ್ಲಿದೆ. ಶ್ರೀಅರವಿಂದರು ರಾಜಕಾರಣದ ಚಳುವಳಿಯಲ್ಲಿದ್ದಾಗ 'ನಮಗೆ ಸ್ವಾತಂತ್ರ್ಯವು ಏಕೆ ಬೇಕೆಂದರೆ, ವ್ಯಾಸವಾಲ್ಮೀಕರಂಥ ಒಬ್ಬ ವ್ಯಕ್ತಿಯಾದರೂ ನಮ್ಮ ದೇಶದಲ್ಲಿ ಹುಟ್ಟಬೇಕು, ಅದಕ್ಕೇ?' ಎಂದಿದ್ದರಂತೆ! ಈಗ ನಮಗೆ ಸ್ವಾತಂತ್ರವೇನೋ ಬಂದಿದೆ, ಆಳುವ ಸ್ವಾತಂತ್ರ್ಯವಲ್ಲ, ಅಳುವ ಸ್ವಾತಂತ್ರ್ಯ. ವ್ಯಾಸವಾಲ್ಮೀಕರಂಥವರು ಹುಟ್ಟುವದು ಹಾಗಿರಲಿ, ಅವರ ಹೆಸರನ್ನು ಕೇಳಿರುವ ಭಾರತದೇಶೀಯರೂ ಕಡಿಮೆಯಾಗುತ್ತಿದಾರೆ. ರಾಷ್ಟ್ರದ ಅಭ್ಯುದಯಕ್ಕೇಂದು ಈಗ ಎಷ್ಟೋ ಯೋಜನೆಗಳಿವೆ, ಆದರೆ ಸಂಸ್ಕೃತಭಾಷೆಯ ಉಜ್ಜೀವನಕ್ಕೆ ಏನೂ ಆಗಿಲ್ಲ; 'ಅದೊಂದು ಮೃತಭಾಷೆ, ಆದನ್ನು ತಿಳಿದುಕೊಳ್ಳುವದು ಕಷ್ಟ!' ಎಂಬ ಹುಚ್ಚುಕೂಗನ್ನು ಎಬ್ಬಿಸಿರುತ್ತಾರೆ, ಆತ್ಮಹತ್ಯಾಕಾರರು! ರಾಮಾಯಣಮಹಾಭಾರತಗಳೆಂದರೆ ನಮ್ಮ ದೇಶದ ಸಂಸ್ಕೃತಿಯ ನಿಧಿಯಿದ್ದಂತೆ. ಬಾಗಿಲಿಗೆ ಭದ್ರವಾಗಿ ಬೀಗವನ್ನು ಹಾಕಿ, 'ಇನ್ನು ನೀವು ಬೇಕಾದ ಹಾಗೆ ಓಡಾಡಬಹುದು' ಎನ್ನುವವರಂತೆ ನಮ್ಮ ದೇಶದ ಸಂಸ್ಕೃತಿಯನ್ನು ತಿಳಿಸುವ ಭಾಷೆಯನ್ನು ಮೂಲೆಗೊತ್ತಿ

ನಿಮಗೆ ಸ್ವಾತಂತ್ರ್ಯವು ಬಂದಿದೆ ಎಂದು ಹೇಳುತ್ತಾ, ತಮಗೂ ಪ್ರಪಂಚಕ್ಕೆ ಅನ್ಯಾಯವನ್ನು ಮಾಡುತ್ತಿದ್ದಾರೆ ! ಸಂಸ್ಕೃತಕ್ಕೆ ಹೋಲಿಸಿದರೆ ಭಾಷೆಯೆನ್ನಿಸಿ ಕೊಳ್ಳುವದಕ್ಕೂ ಅರ್ಹವಲ್ಲದ 'ಹೀಬ್ರೂ' ಇಸ್ರಾಏಲಿನಲ್ಲಿ ಸರಕಾರದ ಭಾಷೆ ಯಾಗಿ ಕುಳಿತಿದೆ ! ಇದಿರಲಿ. ರಾಮಾಯಣಭಾರತಗಳು ಹಿಂದಿ, ಮಹಾರಾಷ್ಟ್ರ ತೆಲುಗು, ಕನ್ನಡ-ಮುಂತಾದ ದೇಶಭಾಷೆಗಳಲ್ಲಿಯೂ ಇವೆ. ಆದರೂ ನಮ್ಮ ಮಕ್ಕಳು 'ರಾಮನಿಗೆ ಸೀತೆ ಏನಾಗಬೇಕು !' ಎಂದು ಕೇಳುವಂಥ ಕಾಲವು ಸಮೀಪಿಸುತ್ತಿದೆ !

'ರಾಮಃ ಶಸ್ತ್ರಭೃತಾಮಹಮ್', 'ವೃಷ್ಣೀನಾಂ ವಾಸುದೇವೋಽಸ್ಮಿ'- ಎಂಬ ಎರಡು ವಿಭೂತಿಗಳ ವಿಚಾರವನ್ನು ಇಂದು ಮನಸ್ಸಿಗೆ ತಂದುಕೊಳ್ಳೋಣ 'ಶಸ್ತ್ರವನ್ನು ಹಿಡಿದವರಲ್ಲಿ ರಾಮನು' ಎಂಬಲ್ಲಿ ವಿಶೇಷವೇನು ? ಶಸ್ತ್ರಗಳು ಹಾಗಿರಲಿ ; ಬಂದೂಕು ಫಿರಂಗಿ, ಬಾಂಬುಗಳು-ಮುಂತಾದ ಆಯುಧಗಳನ್ನು ಹಿಡಿದವರು ಇಲ್ಲವೆ ?- ಎಂದರೆ ಆಯುಧವನ್ನು ಹಿಡಿದದ್ದರಿಂದಲ್ಲ, ಶ್ರೀರಾಮನಿಗೆ ವೈಶಿಷ್ಟ್ಯ; ಸತ್ಯಧರ್ಮಗಳನ್ನು ಉದ್ಧಾರಮಾಡಿದ್ದರಿಂದ; "ರಾಮೋ ವಿಗ್ರಹವಾನ್ ಧರ್ಮಃ" ರಾಮನೆಂದರೆ ಮೂರ್ತಿವಂತವಾದ ಧರ್ಮವೇ. ರಾಮನೇ ಧರ್ಮ, ಧರ್ಮವೇ ರಾಮನು-ಎಂಬುದನ್ನು ನಾವು ಮೊದಲು ಮನಸ್ಸಿಗೆ ತಂದು ಕೊಳ್ಳಬೇಕು. ಸತ್ಯವನ್ನು ಆಡುವದು, ಧರ್ಮವನ್ನು ಆಚರಿಸುವದು- ಇವೆರಡೂ ವೇದವಿಹಿತಕರ್ಮಗಳು, ಸತ್ಯಧರ್ಮಗಳು ಒಂದನ್ನೊಂದು ಬಿಟ್ಟಿರಬಾರದು ಎಂಬುದನ್ನು ಹೇಳುವದಕ್ಕಾಗಿ ಶ್ರುತಿಯಲ್ಲಿ ಸತ್ಯವೇ ಧರ್ಮ, ಧರ್ಮವೇ ಸತ್ಯ- ಎಂದಿದೆ. ಶ್ರೀರಾಮನು ಸತ್ಯಧರ್ಮಗಳನ್ನು ಕಾಪಾಡುವದಕ್ಕೆಂದೇ ಶಸ್ತ್ರವನ್ನು ಹಿಡಿದವನು ; ಪಿತೃವಾಕ್ಯಪರಿಪಾಲನೆಗಾಗಿ ವನಕ್ಕೆ ಹೋಗುವಾಗ ಅವನನ್ನೇ ಹಿಂಬಾಲಿಸಿ ಅನೇಕವರ್ಷಗಳ ಕಾಲ ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬಂದಿದ್ದ ಲಕ್ಷ್ಮಣನು ಇಂದ್ರಜಿತುವಿನಮೇಲೆ ಮಂತ್ರಾಸ್ತ್ರವನ್ನು ಬಿಡುವಾಗ 'ಧರ್ಮಾತ್ಮಾ ಸತ್ಯಸಂಧಶ್ಚ ರಾಮೋ ದಾಶರಥಿರ್ಯದಿ' ರಾಮನು ಧರ್ಮಾತ್ಮನೂ ಸತ್ಯಸಂಧನೂ ಆಗಿದ್ದರೆ ಎಲೈ ಬಾಣವೆ, ಈ ರಾವಣನ ಮಗನನ್ನು ಕೊಂದು ಹಾಕು-ಎಂದು ಸತ್ಯಧರ್ಮಗಳ ಮೂರ್ತಿಯಾದ ಶ್ರೀರಾಮನ ಶಕ್ತಿಯನ್ನು ಬಾಣದಲ್ಲಿ ಆವಾಹನೆಮಾಡಿ ಅದನ್ನು ಬಿಟ್ಟನೆಂದು ವಾಲ್ಮೀಕರು ಬರೆದಿರುತ್ತಾರೆ. ಶ್ರೀರಾಮನು ಬಂದಾಗ ದಂಡಕಾರಣ್ಯದಲ್ಲಿದ್ದ ಋಷಿಗಳು ತಪಸ್ವಿಗಳಾದ ತಮ್ಮವರನ್ನು ರಾಕ್ಷಸರು ಕೊಂದು ಅವಶೇಷವಾಗಿ ಬಿಟ್ಟಿದ್ದ ಮೂಳೆಯ ರಾಶಿಗಳನ್ನು ತೋರಿಸಿದರೆಂದೂ ಶ್ರೀರಾಮನು ಆ ಅಧರ್ಮಿಷ್ಠರಿಗೆ ತಕ್ಕ ಶಾಸ್ತಿಯನ್ನು ಮಾಡುವೆನೆಂದು ಪ್ರತಿಜ್ಞೆಮಾಡಿದನೆಂದೂ ರಾಮಾಯಣದಲ್ಲಿದೆ. ಮುಂದೆ ರಾಕ್ಷಸರ ಬಾಧೆಯು ತಪ್ಪಲಾಗಿ ಈ ಭೂಭಾಗವು 'ರಾಮಕ್ಷೇತ್ರ'ವೆಂಬ ಹೆಸರನ್ನು

ಪಡೆಯಿತು. ಶ್ರೀರಾಮನು ಅಯೋಧ್ಯೆಯನ್ನು ಬಿಟ್ಟು ನಾರುಡೆಯನ್ನು ಧರಿಸಿ ಪಾದಚಾರಿಯಾಗಿ ಬಂದದ್ದೇ ಧರ್ಮಪಾಲನೆಗೆ; ಮುಂದೆ ಅಧರ್ಮವನ್ನು ನಾಶ ಮಾಡಿ ಧರ್ಮವನ್ನು ಸ್ಥಾಪನೆಮಾಡುತ್ತಲೇ ನಡೆದಿದಾನೆ. ಅಧರ್ಮದ ಮೂರ್ತಿಯೆನಿಸಿಕೊಂಡಿದ್ದ ರಾವಣನನ್ನು ವಧಿಸಿ ಲೋಕಕ್ಕೆ ಶಾಂತಿಯನ್ನು ಕೊಟ್ಟು ಧರ್ಮದ ಉದ್ಧಾರವನ್ನು ಮಾಡಿರುತ್ತಾನೆ. ರಾಮಾಯಣವನ್ನು ಭಕ್ತಿಯಿಂದ ಓದುವವರಿಗೂ ಉತ್ತಮಫಲವುಂಟು ; ಬ್ರಾಹ್ಮಣನಿಗೆ ವೇದಾಂತ ಜ್ಞಾನ, ಕ್ಷತ್ರಿಯನಿಗೆ ವಿಜಯ, ವೈಶ್ಯನಿಗೆ ಧನಸಮೃದ್ಧಿ, ಶೂದ್ರನಿಗೆ ಸುಖ–ಇಂಥ ಉತ್ತಮ ಫಲವನ್ನು ಕೊಡುವ ರಾಮಚರಿತ್ರೆಯನ್ನು ಓದುವದು, ಸತ್ಯ ಧರ್ಮಗಳನ್ನು ಪಾಲಿಸುವದು, ಶ್ರೀರಾಮನ ಉಪಾಸನೆಗೆ ಸಿದ್ಧರಾಗುವದು–ಇದಕ್ಕಿಂತ ಹೆಚ್ಚಿನ ಸಾಧನವು ಮತ್ತೆ ಬೇರೆ ಯಾವದಿದೆ ?

ಇನ್ನು ಶ್ರೀಕೃಷ್ಣಭಗವಂತನ ವಿಚಾರ. ಕೃಷ್ಣನ ಚಿತ್ರಪಟಗಳನ್ನು ನೀವು ನೋಡಿರಬಹುದು. ಒಂದರಲ್ಲಿಯಾದರೂ ಶ್ರೀಕೃಷ್ಣನಿಗೆ ಅಳುವ ಮುಖವನ್ನು ಕಂಡಿದ್ದೀರಾ? ಕೃಷ್ಣನ ಮೂರ್ತಿಯನ್ನು ನೋಡಿದರೇ ನಮ್ಮ ದುಃಖಗಳನ್ನು ಮರೆಯುವಂತೆ ಆಗುವದು. ಕೃಷ್ಣನ ಬಾಲಲೀಲೆಯಲ್ಲಿ ಧರ್ಮದ ಮೇಲ್ಮೆಯನ್ನು ಕಂಡುಕೊಳ್ಳಬೇಕು. ಶ್ರೀಕೃಷ್ಣನು ಪರಂಧಾಮಕ್ಕೆ ಹೋಗುವಾಗ ವ್ಯಾಧನು ಬಿಟ್ಟ ಬಾಣವನ್ನು ನೆಪಮಾಡಿಕೊಂಡು ಅವನಿಗೂ ಅನುಗ್ರಹವನ್ನು ಮಾಡಿ 'ದೇಹಾಭಿಮಾನವನ್ನು ಬಿಡಿರಿ' ಎಂದು ಲೋಕಕ್ಕೆಲ್ಲ ಸಾರುವಂತೆ ಯೋಗಾಗ್ನಿಯಿಂದ ತನ್ನ ಶರೀರವನ್ನು ಸುಟ್ಟು ವೈಕುಂಠಕ್ಕೆ ತೆರಳಿದನು. ಭಾರತಯುದ್ಧಕ್ಕೆ ಸೂತ್ರಧಾರಿಯಾಗಿದ್ದುಕೊಂಡು ಧರ್ಮಕ್ಕೆ ಜಯವನ್ನು ತಂದುಕೊಟ್ಟ ಆ ಭಗವಂತನು ಅರ್ಜುನನ ನಿಮಿತ್ತದಿಂದ ಮಾಡಿರುವ ಗೀತಾಶಾಸ್ತ್ರದ ಮಹಿಮೆಯನ್ನಂತೂ ಎಷ್ಟು ಕೊಂಡಾಡಿದರೂ ತೀರದು, ವೇದವ್ಯಾಸರು ಆ ಭಗವಂತನ ಉಪದೇಶದ ಏಳುನೂರು ಶ್ಲೋಕಗಳಲ್ಲಿಯೇ ಸಮಸ್ತವೇದಾರ್ಥವನ್ನೂ ನಮಗೆ ಅನುಗ್ರಹಿಸಿರುತ್ತಾರೆ. ಈಗ ಎರಡಾಣೆಗೇ ಒಂದು ಗೀತೆಯ ಪುಸ್ತಕವು ಸಿಕ್ಕುವಷ್ಟು ಸೌಲಭ್ಯವನ್ನು ಕೆಲವರು ಉದಾರಾಶಯರು ಕಲ್ಪಿಸಿರುತ್ತಾರೆ ಕಾಮ್ಯನಿತ್ಯಕರ್ಮಗಳ ತಾರತಮ್ಯ, ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ, ಜ್ಞಾನಯೋಗ –ಇವುಗಳನ್ನು ಮೆಟ್ಟಿಲುಮೆಟ್ಟಿಲಾಗಿ ಹೃದಯಂಗಮವಾಗಿ ಉಪದೇಶಿಸಿರುವ ಜಾಣ್ಮೆಯನ್ನು ಅಲ್ಲಿಯೇ ಕಾಣಬೇಕು. ಗೀತೆಯ ಭಾಷೆಯು ಬಹಳ ಲಲಿತವಾಗಿರುತ್ತದೆ. ಈ ಶ್ರೀಕೃಷ್ಣಾರ್ಜುನಸಂವಾದವನ್ನು ಅಧ್ಯಯನಮಾಡಿದವನಿಗೆ ಜ್ಞಾನಯಜ್ಞವನ್ನು ಮಾಡಿದ ಫಲ; ಶ್ರದ್ಧೆಯಿಂದ ಶ್ರವಣಮಾಡಿದವರಿಗೆ ಪುಣ್ಯಲೋಕಪ್ರಾಪ್ತಿ–ಎಂದು ಉಪಸಂಹಾರದಲ್ಲಿ ಬರೆದಿರುವದು ಮೃಷಾಸ್ತುತಿಯೆಂದು ಭಾವಿಸುವದಕ್ಕೆ ಎಂದಿಗೂ ಆಗುವದರದು. ಆದ್ದರಿಂದ ಗೀತಾಗ್ರಂಥವನ್ನು ಓದಿ ತಿಳಿದುಕೊಳ್ಳುವ ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಕು.

ಕಲಿಯುಗದಲ್ಲಿ ರಾಮ, ಕೃಷ್ಣ–ಎಂಬೆರಡು ಭಗವನ್ನಾಮಗಳು ಅತ್ಯಂತ ಪಾವನವೆನಿಸಿವೆ. "ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ | ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ||" ಎಂಬ ಮಂತ್ರವನ್ನು ಮೂರು ವರೆ ಕೋಟಿ ಸಲ ಜಪಿಸಿದವರಿಗೆ ಸಮಸ್ತಪಾಪಗಳೂ ನಾಶವಾಗಿ ಭಗವತ್ಪ್ರಾಪ್ತಿ ಯಾಗುವದೆಂದು ಬರೆದಿದೆ. ಪುರಾಣದಲ್ಲಿ ಇದೇ ಶ್ಲೋಕವನ್ನು "ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ! ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ||" ಎಂಬ ರೂಪದಲ್ಲಿ ಕೊಟ್ಟಿದೆ. ಈ ಮಂತ್ರವನ್ನು ತಮ್ಮ ಶಿಷ್ಯವರ್ಗ ಕ್ಕೆಲ್ಲ ಉಪದೇಶಿಸಿದ ಬಂಗಾಲದ ಶ್ರೀಕೃಷ್ಣಚೈತನ್ಯರು ಎಲ್ಲೆಲ್ಲಿಯೂ ಭಕ್ತಿಯ ಜಾಗೃತಿಯನ್ನು ಮಾಡಿದರೆಂದು ಇತಿಹಾಸದಿಂದ ತಿಳಿಯಬರುತ್ತದೆ. ರಾಮ, ಕೃಷ್ಣ–ಎಂಬ ಎರಡು ನಾಮಗಳಲ್ಲಿ ಭರತಖಂಡದ ಸಂಸ್ಕೃತಿಯನ್ನೆಲ್ಲ ತಮ್ಮೊಳಗೆ ಗರ್ಭೀಕರಿಸಿಕೊಂಡಿರುವ ರಾಮಾಯಣಮಹಾಭಾರತಗಳನ್ನು ಭಟ್ಟಿಯಿಳಿಸಿದೆ ಎಂದರೂ ಅತಿಶಯೋಕ್ತಿಯಾಗಲಾರದು. ಮಹಾಭಾರತವು ಧರ್ಮಬೋಧನೆ ಗಾಗಿ ಬರೆದ ಇತಿಹಾಸವೆಂಬುದು ಆ ಗ್ರಂಥದ ಆದಿಯಲ್ಲಿರುವ ಉಪಕ್ರಮಣಿಕ ಅಧ್ಯಾಯದಲ್ಲಿಯೂ ಭಾರತಸಾವಿತ್ರಿಯನ್ನು ಸಂಗ್ರಹಿಸಿಕೊಟ್ಟಿರುವ ಉಪಸಂಹಾ ರದ ಅಧ್ಯಾಯದಲ್ಲಿಯೂ ವ್ಯಕ್ತವಾಗಿರುತ್ತದೆ. "ಧರ್ಮಕ್ಕೆ ಜಯ" ಎಂಬುದನ್ನು ತಿಳಿಯಿಸುವದಕ್ಕಾಗಿ ಮಹಾಭಾರತಕ್ಕೆ 'ಜಯ' ಎಂಬ ಹೆಸರನ್ನು ಇಟ್ಟಿದ್ದಾರೆ. ಋಷಿತುಲ್ಯರಾದ ರಾಜರುಗಳು ಎಷ್ಟೋ ಮಂದಿ ಧರ್ಮದಲ್ಲಿ ಆಸಕ್ತಿಯನ್ನು ತೋರಿಸಿದ ಕಥೆಗಳೂ ಭಗವದುಪಾಸನೆಯಲ್ಲಿ ನಿರತರಾಗಿದ್ದವರ ಕಥೆಗಳೂ ಪುರಾ ಣಗಳಲ್ಲಿ ಸಿಕ್ಕುತ್ತವೆ. ಇತ್ತೀಚಿನ ಕಾಲದಲ್ಲಿ ಕರ್ಣಾಟಕಸಿಂಹಾಸನಾಧೀಶ್ವರರಾ ಗಿದ್ದ ನಮ್ಮ ಮೈಸೂರುರಾಜ್ಯದ ಪ್ರಭುಗಳಲ್ಲಿಯೂ ಈ ಆಸಕ್ತಿಯು ಎದ್ದು ತೋರಿರುತ್ತದೆ.

ರಾಮಾಯಣಮಹಾಭಾರತಾದಿಗ್ರಂಥಗಳನ್ನುಕೂಡ ಭಗವಂತನ ವಿಭೂತಿ ಯೆಂದೇ ಉಪಾಸನೆಮಾಡಬೇಕು. ರಾಮಕೃಷ್ಣಾದ್ಯವತಾರಗಳನ್ನು ಭಗವದ್ಬುದ್ಧಿ ಯಿಂದ ಉಪಾಸನೆಮಾಡುವ ವಿಧಾನವನ್ನು ಪುರಾಣಗಳಲ್ಲಿ ಹೇಳಿಕೊಟ್ಟಿರುವಂತೆ ಮಾಡುವದನ್ನು ನಾವು ಅಭ್ಯಾಸಮಾಡಬೇಕು. ಭಗವಂತನ ಉಪಾಸನೆಯನ್ನು ಮಾಡುವದರಲ್ಲಿ ಎಂದಿಗೂ ಅನಾಸಕ್ತಿಯನ್ನು ತೋರಿಸಬಾರದು. ಇತಿಹಾಸ ಪುರಾಣಗಳನ್ನು ಗೌರವದಿಂದ ಕಂಡು ಅವುಗಳಲ್ಲಿ ಬೋಧಿತವಾಗಿರುವ ಭಗವ ದುಪಾಸನಾಕ್ರಮವನ್ನು ಅರಿತುಕೊಂಡು ಅನುಷ್ಠಾನಮಾಡಿ ಕೃತಾರ್ಥರಾಗ ಬೇಕು. ನಮ್ಮಗಳ ಪುಣ್ಯದಿಂದ ಈಗ ಶ್ರೀಜಯಚಾಮರಾಜೇಂದ್ರ ಒಡೆಯರವರ ಪ್ರೋತ್ಸಾಹದಿಂದ ಇವುಗಳೆಲ್ಲ ಕನ್ನಡಕ್ಕೆ ಅನುವಾದಿತವಾಗಿರುತ್ತವೆ. ಹೀಗೆ ಸಿದ್ಧವಾಗಿ ನಮಗೆ ದೊರೆಯುತ್ತಿರುವ ಈ ಜ್ಞಾನಭಂಡಾರವನ್ನು ನಾವುಗಳು

ಉಪೇಕ್ಷೆಮಾಡಬಾರದು. 'ಕರದುಂಬ ಕಾಮಧೇನು ಕಳ್ಳರಿಗೆ ಕೊಟ್ಟು ಬರಡೆಮ್ಮೆ ಹಾಲಿಗೆ ಬಾಯ ತೆರೆವುದು ಎಂಥದ್ದು ಸಂಸಾರ!' ಎಂಬ ದಾಸರ ನುಡಿಗೆ ನಾವು ಉದಾಹರಣೆಯಾಗಬಾರದು.

ಭಗವದ್ಗೀತೆಯಲ್ಲಿ ಹೇಳಿರುವ ಭಗವದುಪಾಸನೆಯ ರಹಸ್ಯವು ನಮಗೆ ತಿಳಿಯುವದಿಲ್ಲವೆಂಬ ಕಾರಣವೊಂದರಿಂದಲೇ ಅದು ರಹಸ್ಯವಾಗಿರುತ್ತದೆ. ಅದನ್ನು ನಮ್ಮ ಮನಸ್ಸಿಗೆ ಹಿಡಿಯುವಂತೆ ಎತ್ತಿತೋರಿಸುವ ಗುರುಗಳೂ ಸಿಕ್ಕದೆ ಇರುವದರಿಂದಲೂ ಅದು ರಹಸ್ಯವಾಗಿರುತ್ತದೆ. ಇಲ್ಲಿ ಕೆಲವು ಭಗವದ್ವಚನಗಳನ್ನು ಉದಾಹರಿಸುವೆನು. ಸಾಧನದಲ್ಲಿ ಆದರವುಳ್ಳವರೆಲ್ಲರೂ ಅವನ್ನು ಮನದಟ್ಟು ಮಾಡಿಕೊಳ್ಳಬೇಕು.

ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ |
ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ||

ಗೀ. ೯-೨೯

ಭಗವಂತನು ಎಲ್ಲಾ ಪ್ರಾಣಿಗಳಲ್ಲಿಯೂ ಒಂದೇ ರೂಪದಿಂದ ಇರುತ್ತಾನೆ. ಅವನು ನಮ್ಮೆಲ್ಲರಿಗೂ ಆತ್ಮನೇ. ಆದರೆ ಅಷ್ಟುಮಾತ್ರದಿಂದ ಅವನ ಅನುಗ್ರಹವು ನಮಗೆ ಸಿಕ್ಕುವದಿಲ್ಲ; ಅವನಿಗೂ ನಮಗೂ ಇರುವ ನಿಕಟಸಂಬಂಧವನ್ನು ನಾವು ಮನಸ್ಸಿಗೆ ತಂದುಕೊಂಡರೆ ಮಾತ್ರ ಅವನ ಅನುಗ್ರಹವಾಗುವದು. ಆಗ ಆತನಲ್ಲಿ ನಾವು ಇರುವೆವು, ನಮ್ಮಲ್ಲಿ ಆತನು ಇರುವನು; ಇಬ್ಬರಿಗೂ ತಾದಾತ್ಮ್ಯವು ನಿತ್ಯವಾಗಿರುತ್ತದೆ– ಎಂಬ ಅರಿವು ಉಂಟಾಗುತ್ತದೆ. 'ಭಗವಂತನು ನಮ್ಮ ಶತ್ರುಗಳನ್ನು ನಾಶಮಾಡಲಿ' ಎಂದು ಹಿಂದಿನ ಯುದ್ಧದಲ್ಲಿ ಇಂಗ್ಲಿಷರೂ ಜರ್ಮನರೂ ದೇವರನ್ನು ಪ್ರಾರ್ಥಿಸುತ್ತಿದ್ದರಂತೆ! ಭಗವಂತನೆಂದರೆ ಅಂಥ ಪಕ್ಷಪಾತಿಯಲ್ಲ, ಅವನು ತನ್ನನ್ನು ಪ್ರಾರ್ಥಿಸಿದವರ ಇಷ್ಟಾರ್ಥಗಳನ್ನು ನೆರವೇರಿಸಿ ಕೊಡುತ್ತಾನೆ–ಎಂದರೆ ಭಗವಂತನು ತಮ್ಮ ಆತ್ಮನೆಂದೂ ಸರ್ವರ ಆತ್ಮನೆಂದೂ ತಿಳಿದವರ ಪ್ರಾರ್ಥನೆಗಳನ್ನು ನೆರವೇರಿಸುತ್ತಾನೆ ಎಂದರ್ಥ. ಶಂಕರಾಚಾರ್ಯರು ಈ ವಿಷಯದಲ್ಲಿ ಬರೆದಿರುವದೇನೆಂದರೆ :

ದೂರಸ್ಥಾನಾಂ ಯಥಾಗ್ನಿಃ ಶೀತಂ ನಾಪನಯತಿ ಸಮೀಪಮುಪಸರ್ಪತಾಮ್ ಅಪನಯತಿ, ತಥಾಽಹಂ ಭಕ್ತಾನನುಗೃಹ್ಣಾಮಿ ನೇತರಾನ್ | ಯೇ ಭಜನ್ತಿ ತು ಮಾಮೀಶ್ವರಂ ಭಕ್ತ್ಯಾ ಮಯಿ ತೇ ಸ್ವಭಾವತ ಏವ | ನ ಮಮ ರಾಗನಿಮಿತ್ತಂ ವರ್ತನ್ತೇ | ತೇಷು ಚಾಪ್ಯಹಂ ಸ್ವಭಾವತ ಏವ ವರ್ತೇ ನೇತರೇಷು | ನೈತಾವತಾ ತೇಷು ದ್ವೇಷೋ ಮಮ ||

ಬೆಂಕಿಯು ಸ್ವಭಾವದಿಂದಲೇ ಬಿಸಿಯಾಗಿದ್ದು ಶಾಖವನ್ನು ಹಸರಿಸುತ್ತಿರುತ್ತದೆಯಾದರೂ ಅದರ ಶಾಖದ ಕ್ಷೇತ್ರಕ್ಕೆ ಹೊರಚ್ಚಾಗಿರುವವರಿಗೆ ಅದು ಹೇಗೆ ಚಳಿಯನ್ನು ಹೋಗಲಾಡಿಸೀತು ? ಅದರಂತೆ ಯಾರು ಭಗವಂತನಿಗೆ ಹತ್ತಿರವಾಗಿರುವರೋ ಅವರಿಗೆ ಅವನ ಅನುಗ್ರಹದ ಶಾಖವು ತಗಲುತ್ತದೆ ; ದೂರವಿರುವವರಿಗೆ ತಗಲುವದಿಲ್ಲ. ಇಷ್ಟೇ ಹೊರತು ಭಗವಂತನಿಗೆ 'ಇವನು ನನಗೆ ಹಗೆ, ಇವನು ನನಗೆ ಪ್ರಿಯನು'–ಎಂಬ ವೈಷಮ್ಯವೇನೂ ಇರುವದಿಲ್ಲ. ಇಲ್ಲಿ ಒಂದು ಪ್ರಶ್ನೆ : ಬೆಂಕಿಯು ಕಾಲದೇಶಪರಿಚ್ಛಿನ್ನವಾದ ವಸ್ತುವಾದದ್ದರಿಂದ ಅದರ ಹತ್ತಿರಕ್ಕೆ ಬಂದವರ ಚಳಿಯನ್ನು ಹೋಗಲಾಡಿಸುತ್ತದೆ ಎಂಬುದು ಸರಿಯಾದರೂ ಭಗವಂತನು ಸರ್ವವ್ಯಾಪಿಯಲ್ಲವೆ ? ಅವನಿಗೆ ಹತ್ತಿರವೆಂದರೇನು, ದೂರವೆಂದರೇನು ? ಈ ಪ್ರಶ್ನೆಗೆ ಉತ್ತರವೇನೆಂದರೆ : ಭಗವಂತನು ನಮ್ಮ ಆತ್ಮನೇ ಎಂದರಿತುಕೊಂಡು ಪ್ರೇಮದಿಂದ ಭಜಿಸುವವರಿಗೆ ಹತ್ತಿರವಾಗಿರುತ್ತಾನೆ. ಅವರ ಆತ್ಮನೇ ಅಲ್ಲವೆ, ಆತನು? ಯಾರು ಹಾಗೆ ಭಕ್ತಿಯನ್ನಿಟ್ಟುಕೊಂಡಿರುವದಿಲ್ಲವೋ, ಅವರು ಅವನಿಗೆ ದೂರವಾಗಿರುತ್ತಾರೆ.

ಈಗ ಯಾರಾದರೂ ಹೀಗೆಂದು ಶಂಕಿಸಬಹುದು : ಭಗವಂತನು ಸರ್ವಸಮನು ಮಾತ್ರವಲ್ಲ, ಸರ್ವಶಕ್ತನೂ ಆಗಿರುತ್ತಾನೆ. ಬೆಂಕಿಗಾದರೆ ತಾನು ಮತ್ತೊಬ್ಬರಿಗೆ ಅನುಗ್ರಹಿಸಬೇಕೆಂಬ ಅರಿವಾಗಲಿ, ಚಳಿಯಿಂದ ನಡುಗುತ್ತಿರುವವರ ಹತ್ತಿರಕ್ಕೆ ಓಡಿಬರುವ ಶಕ್ತಿಯಾಗಲಿ ಇರುವದಿಲ್ಲ ; ಆದರೆ ಸರ್ವಜ್ಞನೂ ಸರ್ವಶಕ್ತನೂ ಆಗಿರುವ ಭಗವಂತನು ಭಕ್ತರನ್ನುಳಿದು ಮಿಕ್ಕವರನ್ನೇಕೆ ಕಡೆಗಣಿಸುತ್ತಾನೆ ? ಇದಕ್ಕೆ ಪರಿಹಾರವಿದು ;

(೨) ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಮ್ ।
ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥

ಗೀ. ೪–೧೧.

(೩) ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ ಗೀ. ೬-೪೫.

ಈ ಜಗತ್ತೆಲ್ಲವೂ ಪರಮಾತ್ಮನ ವಿಭೂತಿಯೇ, ಆದ್ದರಿಂದ ನಾವೆಲ್ಲರೂ ಆತ್ಮನಲ್ಲಿಯೇ ಇದ್ದುಕೊಂಡು ಜೀವನವನ್ನು ಮಾಡುತ್ತಾ ವ್ಯವಹರಿಸುತ್ತಿರುವೆವು. ಆದರೆ ಈ ನಿಜವನ್ನು ಅರಿಯದ್ದರಿಂದ ನಾವು ಆತನ ಪರಮಾನುಗ್ರಹಕ್ಕೆ ಪಾತ್ರರಾಗದೆ ಇರುತ್ತೇವೆ. ಕೆಲವರಿಗೆ ಈಶ್ವರನೇ ಇಲ್ಲವೆಂದು ತೋರಬಹುದು ; ಅಧರ್ಮವೇ ವ್ಯವಹಾರದಲ್ಲಿ ಜಯಶೀಲನಾಗುವದಕ್ಕೆ ಸರಿಯಾದ ಮಾರ್ಗವೆಂದು ಭಾಸವಾಗಬಹುದು. ಆದ್ದರಿಂದ ಅಂಥವರಿಗೆ ಅವರ ಭಾವನೆಯಂತೆ ಕೆಟ್ಟಕೆಟ್ಟ ಯೋನಿಗಳಲ್ಲಿಯೇ ಜನ್ಮವಾಗಿ, ಭಗವತ್ಪ್ರಾಪ್ತಿಯ ಮಾರ್ಗವು ಬಹಳ ಸುತ್ತಾ

ಗುವದು. ಇನ್ನು ಕೆಲವರು ಸನ್ಮಾರ್ಗದಲ್ಲಿದ್ದು ತಮ್ಮ ಆರ್ತಿಯನ್ನು ಹರಣ ಮಾಡೆಂದು ಭಗವಂತನನ್ನು ಪ್ರಾರ್ಥಿಸುವರು ; ಅವರಿಗೆ ಆ ಫಲವೇ ದೊರೆಯು ವದು. ಇನ್ನು ಕೆಲವರು ತಮಗೆ ಇಷ್ಟವಾದ ಅರ್ಥವನ್ನು ಕೊಡೆಂದು ಬೇಡು ವರು ; ಮತ್ತೆ ಕೆಲವರು 'ನಮಗೆ ನಿನ್ನ ತತ್ತ್ವವನ್ನು ತಿಳಿಯಿಸಿಕೊಡೆಂದು ಕೋರುವರು ; ಅವರಿಗೆ ಆಯಾ ಫಲಗಳೇ ದೊರೆಯುವವು. ಯಾರಿಗೆ ಯಾವ ಫಲವೇ ದೊರಕಲಿ, ಆ ಫಲವೂ ಭಗವಂತನ ರೂಪಾಂತರವೇ ಆಗಿರುವದರಿಂದ ತಮ್ಮ ತಮ್ಮ ಕಾಮುಕರ್ಮಗಳಿಗನುಗುಣವಾಗಿ ಅವರವರು ಆಯಾ ಫಲವನ್ನು ಪಡೆಯುವರೇ ಹೊರತು ಭಗವಂತನ ರಾಗದ್ವೇಷಗಳೇನೂ ಅದಕ್ಕೆ ಕಾರಣವಲ್ಲ. ನಿಜವಾಗಿ ನೋಡಿದರೆ ಎಲ್ಲರೂ ಭಗವಂತನನ್ನು ಪಡೆಯುವ ಮಾರ್ಗದಲ್ಲಿಯೇ ಇರುತ್ತಾರೆ ; ಕೆಲವರ ದಾರಿಯು ಸುತ್ತಾಗಿರುತ್ತದೆ ಕೆಲವರದು ನೇರವಾಗಿರು ತ್ತದೆ, ಅಷ್ಟೆ. ಸರಿಯಾಗಿ ಪ್ರಯತ್ನಮಾಡುವವರಿಗೆ ಸ್ವಾಭಾವಿಕವಾಗಿಯೇ ನೇರವಾದ ದಾರಿಯು ಸಿಕ್ಕುತ್ತದೆಯಾದರೂ ಅವರು ಮಾಡುವ ಸಾಧನದ ಬಲಾ ಬಲಕ್ಕೆ ಅನುಗುಣವಾಗಿಯೇ ಅವರಿಗೂ ಭಗವತ್ಪ್ರಾಪ್ತಿಯಾಗುವದು. ಪ್ರಯತ್ನ ಪೂರ್ವಕವಾಗಿ ನೇರಾದ ಸಾಧನವನ್ನು ಕೈಗೊಳ್ಳುವವರಿಗೂ ಆಯಾ ಜನ್ಮದಲ್ಲಿ ಯೇ ಫಲವು ಕೈಗೂಡುವದೆಂದು ನಿಶ್ಚಿತವಾಗಿ ಹೇಳುವದಕ್ಕೆ ಆಗುವದಿಲ್ಲ. ಅಂಥ ವರು ಮಾಡುವ ಪ್ರಯತ್ನವು ವ್ಯರ್ಥವಾಗುವದಿಲ್ಲವೆಂಬುದಂತೂ ನಿಶ್ಚಿತ ; ಏಕೆಂ ದರೆ ಅವರು ಸರಿಯಾದ ಮಾರ್ಗದಲ್ಲಿಯೇ ಇರುತ್ತಾರೆ. ಅವರ ಸಾಧನದ ಬಲ ದಿಂದ ಅವರ ವೇಗಕ್ಕೆ ತಕ್ಕಂತೆ ಅಷ್ಟಷ್ಟು ಪಾಪವು ನಾಶವಾಗುತ್ತಾ ಹೋಗು ವದು. ತತ್ತ್ವದರ್ಶನವು ಹತ್ತಿರವಾಗುತ್ತಲೂ ಬರಬವದು. ಸಾಧನದ ಸಂಸ್ಕಾ ರವು ಹೆಚ್ಚಿದಂತೆ ಅಡ್ಡಿಯೆಲ್ಲವೂ ಕಳೆದಕೂಡಲೆ ತತ್ತ್ವಜ್ಞಾನವುಂಟಾಗುವದು.

(೪) ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ |
ಸಾಧುರೇವ ಸ ಮಂತವ್ಯಃ ಸಮ್ಯಗ್ ವ್ಯವಸಿತೋ ಹಿ ಸಃ || ಗೀ. ೯-೩೦

(೫) ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ |
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂ ಗತಿಮ್ ||
ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ |
ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ||
ಗೀ. ೯-೩೨, ೩೩.

ಆದರೆ ಪಾಪಾಚಾರದಲ್ಲಿ ರತರಾಗಿರುವವರಿಗೆ ಗತಿಯೇನು ? ಅವರಿಗೆ ಉಪಾ ಸನೆಯ ಸೋಂಕೇ ಇರುವಂತಿಲ್ಲವಲ್ಲ ! – ಎಂದು ಯಾರಾದರೂ ಕೇಳಬಹುದು. ಇದಕ್ಕೆ ಉತ್ತರವೇನೆಂದರೆ : ಯಾರೊಬ್ಬರೂ, ಅತ್ಯಂತಪಾಪಾಚರಣೆಯಲ್ಲಿ ನಿರತ

ರಾಗಿರುವವರೂ ಕೂಡ- ಚಿತ್ತದಲ್ಲಿ ಸತ್ತ್ವಗುಣದ ಸಂಬಂಧವೇ ಇಲ್ಲವೆನ್ನುವವರು ಇಲ್ಲವೇ ಇಲ್ಲ. ಜೀವರ ಚಿತ್ತವು ಮೂರೂ ಗುಣಗಳಿಂದ ಆಗಿರುತ್ತದೆ. ಆದ್ದರಿಂದ ಒಂದಲ್ಲದಿದ್ದರೆ ಒಂದು ದಿನ ಅವರಿಗೂ ಭಗವತ್ಪ್ರಾಪ್ತಿಗೆ ಅವಕಾಶವು ಇದ್ದೇ ಇದೆ. ಕೆಲವರು ತರ್ಕರಸಿಕರು "ಈಶ್ವರನು ನಮ್ಮನ್ನೇಕೆ ಹೀಗೆ ಸೃಷ್ಟಿಮಾಡಿರುತ್ತಾನೆ? ನಮಗೆ ಪಾಪದ ಕಡೆಗೇ ಒಲಿಯುವಂಥ ಬುದ್ಧಿಯನ್ನು ಕೊಟ್ಟಿರುವದು ಈಶ್ವರನ ತಪ್ಪೇ ಅಲ್ಲವೆ? ಎಲ್ಲರನ್ನೂ ಪುಣ್ಯವಂತರನ್ನಾಗಿಯೇ ಏಕೆ ಹುಟ್ಟಿಸಬಾರದಿತ್ತು?– ಎಂದು ಆಕ್ಷೇಪಿಸುತ್ತಾರೆ. ಮತ್ತೆ ಕೆಲವರು ಈಶ್ವರನ ಅಡ್ವೊಕೇಟರಾಗಿ "ನಿಮ್ಮನ್ನು ಕೇಳಿ ಈಶ್ವರನು ಸೃಷ್ಟಿಸಿಲ್ಲ; ಎಲ್ಲವೂ ಅವನ ಇಚ್ಛೆ. ಕುಂಬಾರನಿಗೆ ಮಡಕೆ, ಕುಡಿಕೆ, ಶ್ರಾವೆ, ಹಣತೆ – ಮುಂತಾದವುಗಳನ್ನು ಹೇಗೆ ಮಾಡಬೇಕೆಂದು ಮನಸ್ಸು ಬರುವದೋ ಹಾಗೆ ಅವನ್ನು ಮಾಡಿಬಿಡುತ್ತಾನೆ. 'ನನ್ನನ್ನು ಹೀಗೇಕೆ ಮಾಡಿದೆ? ಹಾಗೇಕೆ ಮಾಡಲಿಲ್ಲ?' ಎಂದು ಕುಂಬಾರನ ಮೇಲೆ ದೂರು ಹೊರಿಸಿ ಆಕ್ಷೇಪಿಸುವ ಹಕ್ಕು ಮಡಿಕೆಮುಂತಾದವುಗಳಿಗಿದೆಯೆ? ಇಲ್ಲ. ಅದರಂತೆ ನಮ್ಮನ್ನು ಈಶ್ವರನು ಹೇಗೆ ಸೃಷ್ಟಿಸಿದಾನೋ ಹಾಗೆಯೇ ಆಯಾ ದೇಹೇಂದ್ರಿಯಾದಿಗಳನ್ನು ಒಪ್ಪಿಕೊಂಡೇ ನಾವು ವ್ಯವಹರಿಸಬೇಕಾಗಿದೆ" ಎಂದು ಪ್ರತ್ಯುತ್ತರವನ್ನು ಹೇಳುವದುಂಟು. ಇವೆರಡೂ ಕರ್ಮಸಿದ್ಧಾಂತದ ರಹಸ್ಯವನ್ನರಿಯದೆ ಆಡಿದ ಮಾತುಗಳು. ಏಕೆಂದರೆ, ಅನಾದಿಯಾದ ಸಂಸಾರದಲ್ಲಿ ಅವರವರ ಕರ್ಮಕ್ಕನುಗುಣವಾಗಿಯೇ ಅವರವರ ಸೃಷ್ಟಿಯಾಗಿರುತ್ತದೆ; ಆದ್ದರಿಂದ ಈಶ್ವರನೇಕೆ ವಿಷಮಸೃಷ್ಟಿಯನ್ನು ಮಾಡಿದನೆಂದಾಗಲಿ, ಅದರಿಂದ ನಿರ್ದಯನೆಂಬ ದೋಷವು ಅವನಿಗೆ ತಟ್ಟುವದೆಂದಾಗಲಿ ಆಪಾದನೆಮಾಡುವದಕ್ಕೆ ಬರುವಂತಿರುವದಿಲ್ಲ. ನಮ್ಮ ನಮ್ಮ ಕರ್ಮಕ್ಕನುಗುಣವಾಗಿಯೇ ಈಶ್ವರನು ಫಲವನ್ನು ಕೊಟ್ಟಿರುತ್ತಾನೆ; ನಮ್ಮನಮ್ಮ ಕರ್ಮಕ್ಕನುಗುಣವಾಗಿ ನಮ್ಮಗಳಲ್ಲಿ ಈ ವಿಷಮತ್ವವು ಉಂಟಾಗಿರುತ್ತದೆ. ಹೀಗಿದ್ದರೂ ಹಿಂದಿನ ಕರ್ಮವು ನಮ್ಮನ್ನು ಈಗಿರುವ ಕೀಳುಸ್ಥಿತಿಯಲ್ಲಿಯೇ ಬಿದ್ದಿರಬೇಕೆಂದು ಕಟ್ಟುಮಾಡುವದಕ್ಕೆ ಶಕ್ತವಲ್ಲ. ಪಾಪಕ್ಕೆ ಹೆಚ್ಚು ಅವಕಾಶವಿರುವ ಜನ್ಮಗಳಲ್ಲಿಯೇ ಹುಟ್ಟಿರಲಿ, ಪುಣ್ಯಕರ್ಮವನ್ನು ಮಾಡುವದಕ್ಕೆ ಹೆಚ್ಚು ಅವಕಾಶವಿರುವ ಜನ್ಮಗಳಲ್ಲಿಯೇ ಹುಟ್ಟಿರಲಿ, ಜೀವನಿಗೆ ಈ ಜನ್ಮದಲ್ಲಿ ಸರಿಯಾಗಿ ಸದಿಚ್ಛೆ, ಸತ್ಸಂಗ, ಸತ್ಕರ್ಮಾಚರಣೆ– ಮುಂತಾದವುಗಳನ್ನು ದೊರಕಿಸಿಕೊಳ್ಳುವದಕ್ಕೇನೂ ಅಡ್ಡಿಯಿರುವದಿಲ್ಲ. ಹಾಗೆ ಪೂರ್ವಜನ್ಮದ ಸಂಸ್ಕಾರವಿದ್ದು ಪ್ರಯತ್ನಿಸುವವರಿಗೆ ಭಗವಂತನು ಅವಶ್ಯವಾಗಿ ಅವರವರ ಪ್ರಯತ್ನಕ್ಕೆ ತಕ್ಕ ಸತ್ಫಲವನ್ನು ಕೊಟ್ಟೇಕೊಡುತ್ತಾನೆ; ಪುಣ್ಯಯೋನಿಗಳಲ್ಲಿ ಜನಿಸಿದವರು ಪುಣ್ಯಕರ್ಮವನ್ನೇ ಮಾಡುತ್ತಾರೆಂದೂ, ಅವರು ತಪ್ಪುದಾರಿಯಲ್ಲಿ ಹೋಗುವದೇ ಇಲ್ಲವೆಂದೂ ಭರವಸೆಕೊಡುವದಕ್ಕೆ ಅವಕಾಶವಿರುವದಿಲ್ಲ. ಪೂರ್ವಸಂಸ್ಕಾರದಿಂದ ತಪ್ಪುಮಾರ್ಗದಲ್ಲಿ ಪ್ರವಿಷ್ಟರಾದವರೂ ಸುದೈವದಿಂದ ಸನ್ಮಾರ್ಗಕ್ಕೆ ತಿರುಗಿ ಸದ್ಗತಿ

ಯನ್ನು ಪಡೆದುಕೊಂಡದ್ದಕ್ಕೆ, ಉತ್ತಮಜನ್ಮಗಳಲ್ಲಿ ಶರೀರವನ್ನು ಗ್ರಹಿಸಿದವರು ಪಾಪವಾಸನೆಯಿಂದ ಅಡ್ಡದಾರಿಯನ್ನು ಹಿಡಿವದ್ದಕ್ಕೆ ಪುರಾಣಗಳಲ್ಲಿಯೂ ಇತಿಹಾಸದಲ್ಲಿಯೂ ಎಷ್ಟೋ ನಿದರ್ಶನಗಳಿವೆ. ಆದ್ದರಿಂದ ಯಾರೊಬ್ಬರಿಗೂ ಭಗವತ್ಪ್ರಾಪ್ತಿಗೆ ಅವಕಾಶವಿಲ್ಲವೆಂಬುದಿಲ್ಲ ; ಭಗವಂತನು ಕೆಲವರನ್ನು ಮಾತ್ರ ಆರಿಸಿಕೊಂಡು ಉದ್ಧಾರಮಾಡುವನೆಂದು ಭಾವಿಸುವದಕ್ಕೆ ಅವಕಾಶವಿಲ್ಲ.

ಇದುವರೆಗೆ ಹೇಳಿರುವ ಉಪಾಸನಾಸೂತ್ರಗಳ ಸಾರವೆಲ್ಲ ಇಷ್ಟು : ನಮಗೆ ಪ್ರಪಂಚದ ಸುಖವೇ ಬೇಕೆನ್ನುವವರಿಗೆ ಉಪಾಸನೆಯಲ್ಲಿ ಅಧಿಕಾರವಿಲ್ಲ. ಆದರೆ ಯಾರಿಗೆ ಈ ಸುಖದಲ್ಲಿರುವ ದೋಷವು ವ್ಯಕ್ತವಾಗಿ ವೈರಾಗ್ಯವುಂಟಾಗಿರುವದೊ, ಅವರು ತಾವು ಮಾಡುವ ಕರ್ಮಗಳನ್ನು ಭಗವಂತನಿಗೆ ಸಮರ್ಪಣೆಮಾಡುವ ಅಭ್ಯರ್ಚನೆಯನ್ನು ಮಾಡಬೇಕು ; ಜಗತ್ತಿನ ಉತ್ಕೃಷ್ಟಭಾವಗಳನ್ನು ಭಗವಂತ ನೆಂದು ಉಪಾಸನೆಮಾಡುವದನ್ನು ಅಭ್ಯಾಸಮಾಡಬೇಕು ; ಜಗತ್ತನ್ನೇ ಭಗವಂತ ನೆಂದು ಉಪಾಸನೆಮಾಡುವ ಕ್ರಮವನ್ನು ಮುಟ್ಟಬೇಕು. ಗೀತೆಯಲ್ಲಿ ಹೇಳಿರುವ ಸಾಧನೆಯ ಸಾರವೇನು ? ಗೀತೆಯ ಹನ್ನೊಂದನೆಯ ಅಧ್ಯಾಯದ ಕೊನೆಯ ಶ್ಲೋಕಕ್ಕೆ ಅವತರಣಿಕೆಯಾಗಿ ಕೊಟ್ಟಿರುವ ಭಾಷ್ಯವಚನವನ್ನು ಕೇಳಿ : 'ಅಧುನಾ ಸರ್ವಸ್ಯ ಗೀತಾಶಾಸ್ತ್ರಸ್ಯ ಸಾರಭೂತೋಽರ್ಥೋ ನಿಃಶ್ರೇಯಸಾರ್ಥಃ, ಅನುಷ್ಠೇಯತ್ವೇನ ಸಮುಚ್ಚಿತ್ಯ ಉಚ್ಯತೇ–

> ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಙ್ಗವರ್ಜಿತಃ ।
> ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಣ್ಡವ ॥

ಗೀ. ೧೧–೫೫.

" ಸಕಲಗೀತಾಶಾಸ್ತ್ರದ ಸಾರಭೂತವಾಗಿರುವ ಮೋಕ್ಷಕ್ಕಾಗಿ ಮಾಡಬೇಕಾಗಿರುವ ಸಾಧನವನ್ನು ಇಲ್ಲಿ ಒಟ್ಟುಗೂಡಿಸಿ ಹೇಳಲಾಗಿದೆ– ಎಂದು ಆಚಾರ್ಯರು 'ಮತ್ಕರ್ಮಕೃತ್' ಮುಂತಾದ ಶ್ಲೋಕವನ್ನು ನಮ್ಮ ಮುಂದೆ ಇಟ್ಟಿರುತ್ತಾರೆ. ಇದೇ ಅರ್ಥದ ಶ್ಲೋಕವು ಒಂಭತ್ತನೆಯ ಅಧ್ಯಾಯದ ಕೊನೆಯಲ್ಲಿಯೂ ಗೀತೆಯ ಉಪಸಂಹಾರಸಂದರ್ಭದಲ್ಲಿಯೂ ಇರುತ್ತದೆ :

> ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
> ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥

ಗೀ. ೯–೩೪.

> ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
> ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥

ಗೀ. ೧೮–೬೫

ಈ ಮೂರು ಶ್ಲೋಕಗಳಿಗೂ ಒಂದೇ ಅರ್ಥದಲ್ಲಿ ತಾತ್ಪರ್ಯವಿರುತ್ತದೆ. ನಾವು ಮಾಡುವ ಕಾಯಿಕ, ವಾಚಿಕ, ಮಾನಸಿಕಕರ್ಮಗಳೆಲ್ಲವೂ ಭಗವಂತನಿಗೆ ಸಂಬಂಧಪಡಬೇಕು ; ಪರಮಾತ್ಮನ ಭಕ್ತಿಯೇ ಮುಖ್ಯ. ನಮ್ಮ ವ್ಯವಹಾರವು ಪರಮಾತ್ಮನಿಗೆ ಸಂಬಂಧಪಟ್ಟದ್ದರೆ ಹಪ್ಪಳವನ್ನು ಬೆಂಕಿಯಲ್ಲಿ ಸ್ವಲ್ಪ ಸುಟ್ಟಮಾತ್ರ ದಿಂದ ಅದಕ್ಕೆ ಕಮ್ಮನೆಯ ರುಚಿಯು ಸೇರಿಕೊಳ್ಳುವಂತೆ ಪರಮಾತ್ಮನ ಸಂಬಂಧ ದಿಂದ ನಮ್ಮ ಜೀವನದ ವ್ಯವಹಾರವೆಲ್ಲವೂ ಮಧುರವಾಗುವದು.

---

## ೩೯. ಬ್ರಹ್ಮಮಯರಾಗಿ ಸುಖಿಸುವದು

( 19-೯-62 )

'ಮನ್ಮನಾ ಭವ' ಎಂದು ಭಗವಂತನು ಮತ್ತೆಮತ್ತೆ ಉಪದೇಶಿಸಿದ್ದಾನೆ. ಆದರೆ ಮನಸ್ಸಿಗೆ ವಿಷಯಗಳನ್ನು ವಿಕಲ್ಪಿಸುತ್ತಿರುವದೇ ಸ್ವಭಾವ. ಆತ್ಮ, ಅನಾತ್ಮ – ಈ ಇವುಗಳೆರಡರಲ್ಲಿಯೂ ಒಮ್ಮೆಗೇ ಮನಸ್ಸನ್ನು ಇಡುವದಕ್ಕ ಆಗುವಂತಿಲ್ಲ. ಮುಖವನ್ನು ಒಂದೇ ಕಾಲಕ್ಕೆ ಎರಡೂ ಕಡೆಗೆ ತಿರುಗಿಸುವದು ಹೇಗೆ ಸಾಧ್ಯ ವಿಲ್ಲವೋ ಹಾಗೆ ಮನಸ್ಸಿಗೂ ಆಗುವದಿಲ್ಲ. ಆದಕ್ಕೆ ಸಾಮಾನ್ಯವಾಗಿ ಪರಾಗ್ದೃಷ್ಟಿ ಇರುತ್ತದೆ. ಇಂದ್ರಿಯಗಳು ಹೊರಗಡೆಗೇ ನೋಡುವಂತೆ ಸೃಷ್ಟವಾಗಿವೆ, ಆದ್ದರಿಂದ ಮನುಷ್ಯನು ಹೊರಕ್ಕೆ ಇಣಿಕಿನೋಡುತ್ತಿರುವನೇ ಹೊರತು ಒಳಗೆ ಆತ್ಮನನ್ನು ನೋಡುವದಕ್ಕೆ ಹೋಗುವದಿಲ್ಲ – ಎಂದು ಉಪನಿಷತ್ತು ಹೇಳುತ್ತಿದೆ. ಇಂದ್ರಿಯ ಗಳು ತಮ್ಮ ತಮ್ಮ ವಿಷಯದ ಕಡೆಗೆ ಹೋಗುತ್ತಿರುವಾಗ ಮನಸ್ಸು ಸುಮ್ಮನೆ ಕೂತಿರುವದಕ್ಕಾಗುವದಿಲ್ಲ.

ಇನ್ದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ |
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಮ್ಭಸಿ ||

ಇಂದ್ರಿಯಗಳ ಬೆನ್ನಂಟಿಕೊಂಡು ಮನಸ್ಸು ಹೊರಟೇಬಿಡುತ್ತದೆ ; ಆಗ ಅದು ವಿವೇಕಪ್ರಜ್ಞೆಯನ್ನು ನಾಶಗೊಳಿಸಿಬಿಡುತ್ತದೆ. ಗೆಳೆಯನ ಸಂತೋಷಕ್ಕಾಗಿ ಎಂದು ಒಂದು ದಿನ ಸಿನೆಮಕ್ಕೆ ಹೋದವನಿಗೆ, ಆಟ ಮುಗಿಯುವದರೊಳಗೆ 'ಚೆನ್ನಾಗಿದೆ ಯಲ್ಲ ಎಂಬ ಬುದ್ಧಿ, ಬಳಿಕ ಅದರದೇ ನೆನವು, ಆಮೇಲೆ ಟಿಕೆಟ್ ರಿಸರ್ವ್ ಮಾಡಿಸಬೇಕೆಂಬ ವ್ಯಸನ–ಹೀಗೆ ಒಂದರಹಿಂದೊಂದು ತಾವೇ ಉಂಟಾಗುವವು. ವಿಷಯಗಳ ಚಟವು ಇಷ್ಟು ಗಟ್ಟಿಯಾಗಿರುವಾಗ 'ಮನ್ಮನಾ ಭವ' ಎಂದಮಾತ್ರ

ದಿಂದ ಹೋದೀತೆ ? 'ಮನ್ಮನಾ ಭವ ಮದ್ಭಕ್ತಃ' ಎಂದು ಮುಂತಾಗಿ ಮತ್–ನಾನು ಎಂಬುದನ್ನು ಮತ್ತೆ ಮತ್ತೆ ಹೇಳಿರುವದು ಅವಧಾರಣೆಗೆ ; ಭಗವಂತನ ಭಕ್ತನಾಗುವದು, ಆತನನ್ನೇ ಸ್ಮರಿಸುವದು, ಆತನನ್ನೇ ನಮಸ್ಕರಿಸುವದು– ಹೀಗೆ ಮಾಡುತ್ತಿದ್ದರೆ ಆತನನ್ನೇ ಸೇರಿಬಿಡುವೆವು. ಪರಮಾತ್ಮನ ಸ್ಮರಣೆಗೆ ಇಷ್ಟು ಬಲವು ಎಲ್ಲಿಂದ ಬರುತ್ತದೆ ?– ಎಂದು ಕೇಳಬಹುದು ಪರಮಾತ್ಮನು ನಮ್ಮ ನಿಜವಾದ ಆತ್ಮ, ಮಿಕ್ಕವು ನಾವು ಸಾಕಿಕೊಂಡ, ದತ್ತುತೆಗೆದುಕೊಂಡ ಆತ್ಮರು. ಆದ್ದರಿಂದ ಆತ್ಮನ ಸ್ಮರಣೆಯಿಂದ ಅನಾತ್ಮಗಳಲ್ಲಿರುವ ತಾದಾತ್ಮ್ಯವನ್ನು ಗೆದ್ದು ಕೊಳ್ಳಬಹುದು.

ಈಗಿನ ಪರಿಸ್ಥಿತಿಯಲ್ಲಿ ಆತ್ಮನೇ ನಮಗೆ ಹೊಸಬ. ನಾನೇಕೆ ಪರಮಾತ್ಮ ನನ್ನು ಹೊಗಳಬೇಕು ? ಕೊನೆಗೆ ನನ್ನನ್ನು ತಿಂದು ಹಾಕುವ ದೇವರನ್ನು ಹೊಗಳಲೂಬೇಕೆಂಬುದು ಅಷ್ಟು ಅವಶ್ಯವೆ ?– ಎಂದು ಕುತಾರ್ಕಿಕನು ಪ್ರಶ್ನೆಮಾಡಿರುತ್ತಾನಂತೆ. ಪರಮಾತ್ಮನು ನಮ್ಮನ್ನು ಸೃಷ್ಟಿಮಾಡಿ ಸ್ವಲ್ಪಕಾಲ ಆಡಬಿಟ್ಟಿದ್ದು ಕೊನೆಗೆ ತಿಂದುಹಾಕುತ್ತಾನೆ ಎಂದು ತಿಳಿಯುವದು ಎಂಥ ಮೂರ್ಖತನದ ಶಾಸ್ತ್ರ! ಇದು ಸರಿಯಲ್ಲ. ಆಗಲೇ ಹೇಳಿರುವಂತೆ ಸೃಷ್ಟಿಯು ನಮ್ಮ ಕರ್ಮಕ್ಕೆ ಅನುಗುಣವಾಗಿ 'ಗಿದೆ. ಚಿತ್ರಗುಪ್ತರ ಲೆಕ್ಕದಲ್ಲಿರುವ ನಮ್ಮ ಕರ್ಮಗಳಿಗೆ ಫಲವಿಲ್ಲದೆ ಹೇಗೆ ಹೋದೀತು ? ಅಥವಾ ಇನ್ನೂ ಒಳಹೊಕ್ಕು ನೋಡಿದರೆ 'ಇದೆಲ್ಲವೂ ಮಾಯಿಕಸೃಷ್ಟಿ. ನಾವು ಪರಮಾತ್ಮನಿಗೆ ನಿತ್ಯಸಂಬದ್ಧರಾಗಿರುತ್ತೇವೆ ; ಪರಮಾತ್ಮನೇ ಮನಆದ್ಯುಪಾಧಿಗಳ ಸಂಬಂಧದಿಂದ ಜೀವನೆಂದು ತೋರುತ್ತಿರುತ್ತಾನೆ. ಪರಮಾತ್ಮನನ್ನು ಸ್ತೋತ್ರಮಾಡುವದೆಂಬುದು ನಮಗೆ ಹೊರೆಯಲ್ಲ. ನಮ್ಮ ನಿಜವಾದ ಸ್ವರೂಪವನ್ನು ನೆನಪಿಗೆ ತಂದುಕೊಳ್ಳುವ ಸಾಧನವದು. ನಾವು ನಿರಂತರವೂ ಆತ್ಮನ ಸ್ಮರಣೆಯನ್ನು ಮಾಡಿಕೊಂಡಂತೆಲ್ಲ ಅನಾತ್ಮಗಳ ಸಂಬಂಧವು ಕರಗಿಹೋಗುತ್ತಾ ಬರುತ್ತದೆ; ಅಷ್ಟಷ್ಟು ಆಯಾಸವು ಪರಿಹಾರವಾಗುತ್ತದೆ ಸಂತೋಷವೂ ಆಗುತ್ತದೆ. 'ಮದ್ಭಕ್ತಃ–ನನ್ನ ಭಕ್ತನಾಗಿರು" ಎಂಬುದು ವಿಧಿಯಲ್ಲ ; ನಿಜವಾಗಿ ನಮ್ಮನ್ನು 'ಈ ಕಡೆ ನೋಡಿ' ಎಂದದ್ದನ್ನು ಕೇಳಿ ಹಿಂತಿರುಗಿದಮಾತ್ರದಿಂದ ಸುಂದರವಾದೊಂದ ಚಿತ್ರವು ಕಣ್ಣಿಗೆ ಬಿದ್ದರೆ ಹೇಗೆ ಅದರ ಮೇಲೆ ನಮ್ಮ ಮೆಚ್ಚುಗೆಯು ತಾನೇ ಆಗುವದೋ. ಹಾಗೆ ನಮ್ಮ ಆತ್ಮನಲ್ಲಿ ಪ್ರೇಮವುಂಟಾಗುವದು ವಿಧಿವಶವೆನ್ನಲಾಗದು.

'ಮದ್ಯಾಜೀ' ನನ್ನನ್ನೇ ಪೂಜಿಸು ಎಂದು ಭಗವಂತನು ಹೇಳಿರುವದನ್ನು ಕೇಳಿದರೆ ಆತನ ಬಲಾತ್ಕಾರಕ್ಕೆ ನಾವು ಒಲಿಯಬೇಕೆಂಬ ಭಾವನೆ ಬರುವಂತಿದೆ. ಹಿಂದಕ್ಕೆ ಸರಕಾರದವರ ಅಪ್ಪಣೆಯಂತೆ ನಾವು ಸ್ಕೂಲುಗಳಲ್ಲಿ 'ಎಂಪೈರ್ ಡೇ' (ಚಕ್ರಾಧಿಪತ್ಯದ ದಿನ)ವನ್ನು ಆಚರಿಸಿ ರಿಪೋರ್ಟ್ ಮಾಡಬೇಕಾಗಿತ್ತು. ಆದ್ದರಿಂದ ಆಗ ಮನಸ್ಸು ನಿಜವಾಗಿ ಆದಕ್ಕೆ ಒಲಿಯುತ್ತಿರಲಿಲ್ಲ. ಆದರೆ ಈಗ

'ಸ್ವಾತಂತ್ರ್ಯದಿನದ ಆಚರಣೆ' ಎಂದರೆ ಹೇಗೆ ಹಾತುವರಿಯುತ್ತಿದ್ದೇವೆ! ಇದು ನಮಗೇ ಸಂಬಂಧಿಸಿದ್ದಲ್ಲವೆ? 'ಮದ್ಯಾಜೀ' ಎಂದರೆ ನಮ್ಮ ಆತ್ಮನಾದ ಈಶ್ವರನಿಗಾಗಿ ಎಲ್ಲವನ್ನೂ ಕೈಬಿಡುವದು, ಪರಮಾತ್ಮನ ಮಹಿಮೆಯನ್ನು ಮನಸ್ಸಿಗೆ ತಂದುಕೊಂಡರೆ ಅನಾತ್ಮಗಳು ನಮ್ಮನ್ನು ಗೋಳುಗುಟ್ಟಿಸುವದು ತಪ್ಪುತ್ತದೆ. ಪರಮಾತ್ಮನು ನಮ್ಮ ಆತ್ಮನೇ ಆಗಿರುವದರಿಂದಲೇ ಸುಷುಪ್ತಿಯಲ್ಲಿ ಮತ್ತೆಲ್ಲವನ್ನೂ ಬಿಟ್ಟುಬಿಟ್ಟು ಆತನಲ್ಲಿ ಸೇರಿಕೊಳ್ಳುವದಕ್ಕೆಂದು ಸುಷುಪ್ತಿಗೆ ಹಾತುವರಿಯುತ್ತಿರುತ್ತೇವೆ. ಸಕಲಕಲ್ಯಾಣಗುಣಗಳುಳ್ಳವನೂ ಸರ್ವಶಕ್ತನೂ ಆದ ಈಶ್ವರನು ನಮ್ಮ ಆತ್ಮನೇ ಎಂದು ತಿಳಿದರೆ ಆತನನ್ನು ಕೊಂಡಾಡುವದರಲ್ಲಿ ಎಷ್ಟು ಪ್ರೀತಿ! ಸೂಜಿಗಲ್ಲಿಗೆ ತಗಲಿದ ಹಡಗಿನ ಮೊಳೆಗಳೆಲ್ಲ ತಾವೇ ಬಿಟ್ಟುಕೊಳ್ಳುವಂತೆ, ಪರಮಾತ್ಮನನ್ನು ಸೇರುವಾಗ ನಮ್ಮ ಹೊರಗಿನ ಬಂಧಗಳು ಎಷ್ಟು ಮೊಳೆಜಡಿದಷ್ಟು ಬಿಗಿಯಾಗಿದ್ದರೂ ಕಳಚಿಕೊಂಡುಬಿಡುತ್ತವೆ.

ಪರಮಾತ್ಮನಲ್ಲಿಡುವ ಭಕ್ತಿಯ ರಹಸ್ಯವೇನು? ಶಾಂಡಿಲ್ಯಸೂತ್ರದಲ್ಲಿ ಹೇಳಿರುವಂತೆ 'ಸಾ ಪರಾನುರಕ್ತಿರೀಶ್ವರೇ' ಭಕ್ತಿ ಎಂದರೆ ಪರಮಾತ್ಮನಲ್ಲಿರುವ ಅನುರಕ್ತಿಯು. ಅನು ಎಂದರೆ ಪರಮಾತ್ಮಜ್ಞಾನವನ್ನು ಅರಿತುಕೊಂಡಮೇಲೆ ಆಗುವ ರಕ್ತಿಯು. ಪರಮಾತ್ಮನು ಪಾಳೆಯಗಾರನಂತೆ ನಮ್ಮನ್ನು ಅಂಜಿಸುತ್ತಿರುವನೆಂದೂ ಆದ್ದರಿಂದ ಯತ್ನವಿಲ್ಲದೆ ಅವನನ್ನು ಹೊಗಳಬೇಕಾಗಿದೆ ಎಂದೂ ತಿಳಿಯಬಾರದು. ಏಕೆಂದರೆ ಅವನು ನಮ್ಮ ಪರಮಾತ್ಮ– ನಿಜವಾದ ಆತ್ಮ; ಆದ್ದರಿಂದಲೇ

ತದೇತತ್ ಪ್ರೇಯಃ ಪುತ್ರಾತ್ ಪ್ರೇಯೋ ವಿತ್ತಾತ್ ಪ್ರೇಯೋಽನ್ಯಸ್ಮಾತ್ ಸರ್ವಸ್ಮಾತ್ ಅಂತರತರಂ ಯದಯಮಾತ್ಮಾ | ಸ ಯೋಽನ್ಯಮಾತ್ಮನಃ ಪ್ರಿಯಂ ಬ್ರುವಾಣಂ ಬ್ರೂಯಾತ್ ಪ್ರಿಯಂ ರೋತ್ಸ್ಯತೀತಿ | ಈಶ್ವರೋ ಹ ತಥೈವಸ್ಯಾದಾತ್ಮಾನಮೇವ ಪ್ರಿಯಮುಪಾಸೀತ ಸ ಯ ಆತ್ಮಾನಮೇವ ಪ್ರಿಯಮುಪಾಸ್ತೇ ನ ಹಾಸ್ಯ ಪ್ರಿಯಂ ಪ್ರಮಾಯುಕಂ ಭವತಿ || ಬೃ. ೧–೪–೮.

ಆತ್ಮನೆಂದರೆ ಪುತ್ರನಿಗಿಂತ ಪ್ರಿಯನು, ವಿತ್ತಕ್ಕಿಂತ ಪ್ರಿಯತರನು, ಮಿಕ್ಕದ್ದೆಲ್ಲಕ್ಕಿಂತಲೂ ಪ್ರಿಯನು. ಏಕೆಂದರೆ ಅವನು ಎಲ್ಲಕ್ಕಿಂತ ತೀರ ಒಳಗಿರುವ ನಮ್ಮ ಆತ್ಮನಾಗಿರುತ್ತಾನೆ. ಮಿಕ್ಕವಸ್ತುಗಳೂ ನಮಗೆ ಪ್ರಿಯವೆಂದು ಈಗ ತೋರುತ್ತಿರುವದು ನಿಜ; ಆದರೆ ಅದು ಏತಕ್ಕೆ? ನಮಗೆ ಅವೇ ಆತ್ಮನೆಂಬ ಬುದ್ಧಿ ಈಗ ಅವಿದ್ಯೆಯಿಂದ ಉಂಟಾಗಿರುವದರಿಂದ 'ನಿನ್ನೀ ಪ್ರಿಯವೆಂಬುದು ಹಾಳಾಗಿ ಹೋಗುತ್ತದೆ' ಎಂದು ಜ್ಞಾನಿಗಳು ಹೇಳುತ್ತಿರುತ್ತಾರೆ. ಅದು ಹೋಗಿಯೂ ತೀರುತ್ತದೆ; ಆದ್ದರಿಂದ ಆತ್ಮನನ್ನೇ ಪ್ರಿಯವೆಂದು ಉಪಾಸನೆಮಾಡಬೇಕು. ಶಾಸ್ತ್ರದೃಷ್ಟಿಯಿಂದ ಇದನ್ನು ಅರಿತುಕೊಳ್ಳಬೇಕು. 'ನನ್ನಲ್ಲಿಯೇ ಮನಸ್ಸಿಡು;

ನನ್ನ ಭಕ್ತನೇ ಆಗಿರು ; ನನ್ನನ್ನೇ ನಮಸ್ಕರಿಸುತ್ತಿರು ; ಹೀಗಾದರೆ ಆತ್ಮನಾದ ನನ್ನನ್ನೇ ಬಂದು ಸೇರುವೆ' (ಗೀ. ೯-೩೪) ಎಂದು ಭಗವಂತನು ಹೇಳಿದ್ದು ಸುಮ್ಮನೆ ನಮ್ಮನ್ನು ಉಬ್ಬಿಸುವ ಮಾತಲ್ಲ. ಪರಮಾತ್ಮನನ್ನು ನಾವು ನಿಜವಾಗಿ ಎಂದೆಂದಿಗೂ ಸೇರಿಕೊಂಡೇ ಇರುತ್ತೇವೆ ; ಭಕ್ತಿಯಿಂದ ಇದರ ನಿಜವು ನಮಗೆ ಮನದಟ್ಟಾಗುತ್ತದೆ. ಅಷ್ಟೆ.

ಮೈಮೇಲೆ ಒಂದು ಬೊಕ್ಕೆ ಎದ್ದಿದ್ದರೆ ಅದು ತಟಗುಟ್ಟುತ್ತ ನೋವನ್ನು ಉಂಟುಮಾಡುತ್ತಿರುವಾಗ ಅದರಲ್ಲಿಯೇ ನಮ್ಮ ಮನಸ್ಸು ನಿಂತಿರುತ್ತದೆ; ಆದರೆ ಅದು ಉಪಾಸ್ಯವಾದೀತೇನು ? ಅಲ್ಲ. ಏಕೆಂದರೆ ಪ್ರೇಮವೆಂಬ ಮುಖ್ಯವಾದ ಅಂಶವು ಅಲ್ಲಿಲ್ಲ. ನಮ್ಮ ಆತ್ಮನಲ್ಲಲ್ಲದೆ, ನಮಗಿಂತ ಬೇರೆಯಾಗಿರುವ ಅನಾತ್ಮದಲ್ಲಿ ಮನಃಪ್ರತ್ಯಯದ ಪ್ರವಾಹವು ಒಂದೇಸಮನಾಗಿರುತ್ತಿದ್ದರೂ ಪ್ರೇಮವುಂಟಾಗಲಾರದು. ಅನಾತ್ಮವಸ್ತುವನ್ನು ಬಿಟ್ಟು ಒಳಒಳಗಿನ 'ಆತ್ಮ'ವೆಂದೆಣಿಸುವ ವಸ್ತುವಿನ ಬಳಿಗೆ ಮನಸ್ಸು ಹೋದಾಗಲೆಲ್ಲ ಹೆಚ್ಚುಹೆಚ್ಚು ಪ್ರೇಮವು ಉಂಟಾಗುತ್ತದೆ. ಎಲ್ಲಕ್ಕೂ ಅಂತರತರವಾದ ನಿಜವಾದ ಆತ್ಮನಲ್ಲಿಯೇ ನಿಂತಾಗ ನಿಜವಾದ ಆತ್ಯಂತಿಕಪ್ರೇಮವು ತೋರಿಕೊಳ್ಳುತ್ತದೆ. ಪರಮಾತ್ಮನನ್ನೇ ಮತ್ತೆ ಮತ್ತೆ ಪ್ರೀತಿಸಬೇಕು. ಪರಮಾತ್ಮನಲ್ಲಿಯೇ ಮನಸ್ಸಿಟ್ಟು, ಪರಮಾತ್ಮನನ್ನೇ ನಮಸ್ಕರಿಸುತ್ತಾ, ಪರಮಾತ್ಮನ ಕರ್ಮವನ್ನೇ ಮಾಡುತ್ತಿರಬೇಕೆಂಬುದು ಅಪ್ಪಣೆಯ ಫಲವಲ್ಲ. ಪರಮಾತ್ಮನ ಭಕ್ತಿಯು ಹೆಚ್ಚಿದಾಗ ಪ್ರೇಮದಿಂದ ಎಲ್ಲೆಲ್ಲಿಯೂ ಆತನನ್ನೇ ಕಾಣಹತ್ತುವೆವು. ಸರ್ವಭೂತಗಳಲ್ಲಿಯೂ ಆತನನ್ನೇ ಕಾಣುವೆವು. ಆಗ ಭಕ್ತಿ, ಭಕ್ತ, ಭಗವಂತ-ಎಂಬ ತ್ರಿಪುಟಿಯು ಇಲ್ಲವಾಗುತ್ತದೆ. ಹೀಗೆ ನಮ್ಮನ್ನು ಆನಂದಸಾಗರದಲ್ಲಿ ಮುಳುಗಿಸುವದಕ್ಕೆಂದೇ ಸೃಷ್ಟಿಯು ಆಗಿರುತ್ತದೆ, ನಮ್ಮನ್ನು ಗೋಳಾಡಿಸುವದಕ್ಕಲ್ಲ. ಗೀತೆಯಲ್ಲಿ ಪ್ರೇಮಪೂರ್ವಕವಾಗಿ ಭಗವಂತನನ್ನು ಉಪಾಸನೆಮಾಡುವ ಬಗೆಯನ್ನು ಮತ್ತೆ ಮತ್ತೆ ಹೇಳಿರುತ್ತದೆ. ಭಗವದ್ಭಕ್ತಿಯೇ ಆತನ ಸ್ವರೂಪದ ಜ್ಞಾನವನ್ನು ಅರಿಯುವದಕ್ಕೆ ತೀರ ಹತ್ತಿರದ ಮಾರ್ಗವೆಂದು ಮತ್ತೆ ಮತ್ತೆ ಶಂಕರಾಚಾರ್ಯರೂ ಹೇಳಿರುತ್ತಾರೆ. ಆ ಆಚಾರ್ಯರಿಗೆ ಭಕ್ತಿಯಲ್ಲಿ ಅಷ್ಟೇನೂ ಆದರವಿಲ್ಲವೆಂದು ಮೂರ್ಖರು ಎಣಿಸುತ್ತಾರೆ. ಗೀತೆಯ ಹದಿನೆಂಟನೆಯ ಅಧ್ಯಾಯದ ಅವತರಣಿಕೆಯಲ್ಲಿ ಅವರು ಹೇಳಿರುವದನ್ನು ನೋಡಿ ; 'ಸರ್ವಸ್ಯೈವ ಗೀತಾಶಾಸ್ತ್ರಸ್ಯ ಅರ್ಥೋಽಸ್ಮಿನ್ ಅಧ್ಯಾಯೇ ಉಪಸಂಹೃತ್ಯ ಸರ್ವಶ್ಚ ವೇದಾರ್ಥೋ ವಕ್ತವ್ಯ ಇತ್ಯೇವಮರ್ಥೋಽಯಮಧ್ಯಾಯ ಆರಭ್ಯತೇ||' ಈ ಅಧ್ಯಾಯದಲ್ಲಿ ಸರ್ವಗೀತಾಶಾಸ್ತ್ರದ ಅರ್ಥವನ್ನು ಉಪಸಂಹಾರಮಾಡಿರುತ್ತದೆ, ಸರ್ವವೇದಾರ್ಥವನ್ನೂ ಹೇಳಿರುತ್ತದೆ. ಈಗ ಇನ್ನೊಂದು ವಾಕ್ಯ :

ಸ್ವಕರ್ಮಣಾ ಭಗವತೋಽಭ್ಯರ್ಚನಭಕ್ತಿಯೋಗಸ್ಯ ಸಿದ್ಧಿಪ್ರಾಪ್ತಿಃ ಫಲಂ ಜ್ಞಾನನಿಷ್ಠಾಯೋಗ್ಯತಾ। ಯನ್ನಿಮಿತ್ತಾ ಜ್ಞಾನನಿಷ್ಠಾ ಮೋಕ್ಷಫಲಾವಸಾನಾ, ಸ ಭಗವದ್ಭಕ್ತಿಯೋಗೋಽಧುನಾ ಸ್ತೂಯತೇ ಶಾಸ್ತ್ರಾರ್ಥೋಪಸಂಹಾರಪ್ರಕರಣೇ ಶಾಸ್ತ್ರಾರ್ಥನಿಶ್ಚಯದಾರ್ಢ್ಯಾಯ ।

ಸ್ವಕರ್ಮದಿಂದ ಭಗವಂತನನ್ನು ಅಭ್ಯರ್ಚನಮಾಡುವ ಭಕ್ತಿಯೋಗಕ್ಕೆ ಜ್ಞಾನನಿಷ್ಠಾಯೋಗ್ಯತಾಪ್ರಾಪ್ತಿಯೇ ಫಲವು ಯಾವ ಭಕ್ತಿಯಿದ್ದರೆ ಮೋಕ್ಷಫಲದಲ್ಲಿ ಕೊನೆಗಾಣುವ ಜ್ಞಾನನಿಷ್ಠೆಯು ಪ್ರಾಪ್ತವಾಗುವದೋ ಆ ಭಗವದ್ಭಕ್ತಿಯನ್ನು– ಶಾಸ್ತ್ರಾರ್ಥವನ್ನು ಉಪಸಂಹಾರಮಾಡುವ ಈ ಪ್ರಕರಣದಲ್ಲಿ ಇದೇ ಶಾಸ್ತ್ರಾರ್ಥವೆಂಬ ತಿಳಿವಳಿಕೆಯು ಗಟ್ಟಿಯಾಗಲೆಂದು– ಈಗ ಹೊಗಳಿರುತ್ತದೆ. 'ಸರ್ವಕರ್ಮಗಳನ್ನೂ ಯಾವಾಗಲೂ ಮಾಡುತ್ತಿರಲಿ, ಈಶ್ವರನನ್ನೇ ಆಶ್ರಯಿಸಿ ಕೊಂಡಿರುವಾತನು ಈಶ್ವರನ ಅನುಗ್ರಹದಿಂದ ಶಾಶ್ವತವಾದ ಪರಮಪದವನ್ನು ಹೊಂದುತ್ತಾನೆ' (ಗೀ. ಭಾ. ೧೮–೫೬) ಎಂಬುದೇ ಗೀತಾರ್ಥ. ಭಕ್ತಿಯಿಂದ ತತ್ತ್ವವಿಚಾರವನ್ನು ಮಾಡಿ ಜ್ಞಾನನಿಷ್ಠೆಯನ್ನು ಹೊಂದಬೇಕೆಂಬುದೇ ಗೀತಾಶಾಸ್ತ್ರೋಪದೇಶದ ಮುಖ್ಯಲಕ್ಷಣವೆಂಬುದನ್ನು ಈ ಶ್ಲೋಕಗಳಿಂದ ಗೊತ್ತು ಮಾಡಿಕೊಳ್ಳಬಹುದು :

ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।
ಇಷ್ಟೋಽಸಿ ಮೇ ದೃಢಮತಿ ತತೋ ವಕ್ಷ್ಯಾಮಿ ತೇ ಹಿತಮ್ ॥
ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥
ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥

ಉಪನಿಷತ್ತುಗಳ ಉಪದೇಶದ ಸಾರವೂ ಇದೇ :

ಏಷ ಮ ಆತ್ಮಾ ಅನ್ತರ್ಹೃದಯೇ ಏತದ್ ಬ್ರಹ್ಮ ಏತಮಿತಃ ಪ್ರೇತ್ಯ ಅಭಿಸಂಭವಿತಾಸ್ಮೀತಿ ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಸ್ತೀತಿ ಹ ಸ್ಮಾಹ ಶಾಂಡಿಲ್ಯಃ ॥ ಛಾಂ. ೩–೧೪–೪.

ದೇವೋ ಭೂತ್ವಾ ದೇವಾನಪ್ಯೇತಿ ॥ ಬೃ. ೪–೧–೨.

ಮುಂತಾದ ವಚನಗಳಿಂದ ಹೇಳಿರುವ ಭಗವಂತನ ಉಪಾಸನೆಯೊಂದು. ಪರಮಾತ್ಮನು ನಮ್ಮ ಆತ್ಮನೇ ಆಗಿರುವನೆಂಬ ದೃಢಭಾವನೆಯಿಂದ ತನ್ಮಯನಾಗಿ ಆತನ ಸಾಕ್ಷಾತ್ಕಾರವನ್ನು ಹೊಂದಿ ಕೊನೆಗೆ ಆತನ ಸಾಯುಜ್ಯವನ್ನೇ ಪಡೆಯುವ ರಹಸ್ಯವನ್ನು ಅದರಲ್ಲಿ ತಿಳಿಸಿರುತ್ತದೆ.

ಅಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ || ಛಾಂ. ೮-೧೨-೩.

ಏತಂ ವೈ ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ || ಬೃ. ೩-೫-೧.

ಮುಂತಾದ ವಚನಗಳಿಂದ ಸರ್ವಕರ್ಮಸನ್ಯಾಸಪೂರ್ವಕವಾಗಿ ಆತ್ಮಜ್ಞಾನನಿಷ್ಠೆಯನ್ನು ಪಡೆದು ಸದ್ಯೋಮುಕ್ತಿಯನ್ನು ಪಡೆಯಬಹುದೆಂಬ ಉಪದೇಶವು ಇನ್ನೊಂದು. ಅದರಲ್ಲಿ ಎಂದೆಂದಿಗೂ ನಿಷ್ಕ್ರಿಯಾತ್ಮನಾದ ಪರಮಾತ್ಮನಿಗೂ ನಮಗೂ ಇರುವ ನಿತ್ಯತಾದಾತ್ಮ್ಯವನ್ನು ತಿಳಿಸಿಕೊಟ್ಟಿರುತ್ತದೆ.

ಪ್ರಪಂಚವನ್ನು ಬಿಟ್ಟೆನೆಂದು ಹೃದಯವನ್ನು ಬರಿದುಮಾಡಿಕೊಳ್ಳಬಾರದು; ಆಗ ಅದರಲ್ಲಿ ಸೈತಾನನು ಸೇರಿಕೊಳ್ಳುತ್ತಾನೆಂದು ಕ್ರಿಸ್ತಿಯನ್ನರು ಹೇಳುತ್ತಾರೆ. ಹೃದಯದಲ್ಲಿ ಪರಮಾತ್ಮನನ್ನೇ ಇಟ್ಟುಕೊಂಡರೆ ಮತ್ತೆ ಯಾವ ಭಯವೂ ಇರುವದಿಲ್ಲ. ನಾವು ತಿಳಿದುಕೊಂಡಿರುವ ಪ್ರಪಂಚವು ದುಃಖಮಯವಾಗಿರುತ್ತದೆ. ಶಾಸ್ತ್ರದೃಷ್ಟಿಯನ್ನವಲಂಬಿಸಿ ಉಪಾಸನೆಯಿಂದಾಗಲಿ, ತತ್ತ್ವವಿಚಾರದಿಂದುಂಟಾದ ಜ್ಞಾನದಿಂದಲಾಗಲಿ ಬ್ರಹ್ಮಮಯವಾಗಿರುವ ಪ್ರಪಂಚವನ್ನು ಕಂಡುಕೊಂಡು ಆ ಬ್ರಹ್ಮದಲ್ಲಿಯೇ ನಿಂತು ಸುಖಿಸಬೇಕು. 'ಸರ್ವಾಃ ಸುಖಮಯಾ ದಿಶಃ' ಎಂಬಂತೆ ಎಲ್ಲೆಲ್ಲಿಯೂ ಆನಂದರೂಪವಾದ ಬ್ರಹ್ಮವೇ ಆಗ ನಮಗೆ ಅನುಭವಕ್ಕೆ ಬರುವದು.

---

## ೩೮. ಅಂತಕಾಲದಲ್ಲಿಯೂ ಸ್ಮರಣೆ

(2.-8-6?)

ಉಪಾಸನೆ, ಜ್ಞಾನ–ಎರಡನ್ನೂ ಶಾಸ್ತ್ರದಲ್ಲಿ ಹೇಳಿರುತ್ತದೆ. ಇವೆರಡಕ್ಕೂ ವೈಲಕ್ಷಣ್ಯವೇನೆಂದರೆ ಜ್ಞಾನವು ವಸ್ತುತಂತ್ರ ; ನಾವು ಒಮ್ಮೆ ವಸ್ತುವಿನ ತತ್ತ್ವವನ್ನು ಅರಿತುಕೊಂಡುಬಿಟ್ಟರೆ, ಆಯಾ ಪ್ರಮಾಣವು ವಸ್ತುವಿನ ತತ್ತ್ವವನ್ನು ಇದ್ದಂತೆ ತಿಳಿಸಿಬಿಟ್ಟರೆ, ಆಯಿತು ; ಮುಂದಕ್ಕೆ ಎಂದೆಂದಿಗೂ ಹಾಗೆಯೇ ಆ ಜ್ಞಾನವು ಉಳಿದುಕೊಂಡುಬಿಡುವದು. ದ್ವೈತಪ್ರಪಂಚದಲ್ಲಿ ಕೆಲವು ವಸ್ತುಗಳ ಜ್ಞಾನವು ನಮಗೆ ಮರೆತುಹೋಗುವದಕ್ಕೆ ಮತ್ತೆ ಬೇರೆ ವಸ್ತುಗಳಲ್ಲಿ ಅದರ

ವುಂಟಾಗುವದೇ ಕಾರಣ ; ಆದರೆ ಪರಮಾರ್ಥವು ಅದ್ವಿತೀಯವಾಗಿರುವದರಿಂದ ಅದರ ಜ್ಞಾನವು ಉಂಟಾದ ಬಳಿಕ ಎಂದೆಂದಿಗೂ ಹಾಗೆಯೇ ಇದ್ದು ಬಿಡುತ್ತದೆ.

ಉಪಾಸನೆಯ ವಿಷಯವು ಹಾಗಲ್ಲ. ಅದು ಪುರುಷತಂತ್ರವಾಗಿರುವದರಿಂದ ಅದನ್ನು ಬೇಕಾದರೆ ಮಾಡಬಹುದು, ಇಲ್ಲದಿದ್ದರೆ ಬಿಡಬಹುದು, ಅಥವಾ ಬೇರೆಯ ರೀತಿಯಲ್ಲಿಯೂ ಮಾಡಿಕೊಳ್ಳಬಹುದು , ಮಾಡದೆ ಬಿಟ್ಟೇ ಬಿಡಲೂಬಹುದು. ಹೀಗಿರುವದರಿಂದ ಪರಮಾತ್ಮನ ಉಪಾಸನೆಯಿಂದ ಲಾಭವನ್ನು ಪಡೆದುಕೊಳ್ಳ ಬೇಕೆಂದು ಬಯಸುವವರು ಪ್ರಯತ್ನಪೂರ್ವಕವಾಗಿ ಮತ್ತೊಂದು ಪ್ರತ್ಯಯವು ನಡುವೆ ಬರದಂತೆ ಎಚ್ಚರಿಕೆಯಿಂದ ನೋಡಿಕೊಂಡು ಆತ್ಮಪ್ರತ್ಯಯವನ್ನೇ ನಿರಂ ತರವಾಗಿ ಆವೃತ್ತಿಮಾಡುತ್ತಿರಬೇಕು. ಹೀಗೆ ಸಾಯುವವರೆಗೂ ತನ್ಮಯರಾಗಿ ಮಾಡುತ್ತಿದ್ದರೆ ಅದು ಫಲಕಾರಿಯಾಗುತ್ತದೆ. ಆದ್ದರಿಂದಲೇ ಭಗವಂತನು–

ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ |
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ||

'ಮತ್ತೆ ಯಾವ ವಿಷಯದಲ್ಲಿಯೂ ಚಿತ್ತವನ್ನಿಟ್ಟುಕೊಳ್ಳದೆ ಸಂತತವಾಗಿ ಯಾವನು ನನ್ನನ್ನೇ ನಿತ್ಯವಾಗಿ ಸ್ಮರಿಸುತ್ತಿರುವನೋ ಅಂಥ ನಿತ್ಯಯುಕ್ತನಾದ ಯೋಗಿಗೆ ನಾನು ಅನಾಯಾಸವಾಗಿ ಲಭಿಸುವೆನು' ಎಂದು ಹೇಳಿರುವನಲ್ಲದೆ ಈ ಉಪದೇಶ ದಲ್ಲಡಗಿರುವ ತತ್ತ್ವವನ್ನು ಹೀಗೆ ತಿಳಿಸಿಕೊಟ್ಟಿರುತ್ತಾನೆ :

ಅನ್ತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಮ್ |
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ||
ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್ |
ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ||

ಗೀ. ೮–೫, ೬.

ಸಾಯುವ ಕಾಲದಲ್ಲಿಯೂ ಭಗವಂತನನ್ನೇ ಸ್ಮರಣೆಮಾಡುತ್ತಿರುವವನೇ ಭಗವಂತ ನನ್ನು ಸೇರುತ್ತಾನೆ ಎಂಬುದಕ್ಕೆ ಕಾರಣವೇನು ? ಎಂದರೆ, ಮನುಷ್ಯನು ಯಾವ ಯಾವ ದೇವತಾವಿಶೇಷವನ್ನು ಸ್ಮರಿಸುತ್ತಾ ಶರೀರವನ್ನು ಬಿಡುತ್ತಾನೋ ಅದರ ಭಾವದಿಂದ ಭಾವಿತನಾಗಿರುವದರಿಂದ ಆಯಾ ದೇವತೆಯನ್ನೇ ಸೇರುತ್ತಾನೆ. ಮನ ಸ್ಸಿನ ಒಂದು ವೃತ್ತಿಯು ತನ್ನ ಮುಂದಿನ ವೃತ್ತಿಯು ಎದ್ದುಕೊಳ್ಳುವವರೆಗೇ ತನ್ನ ಪ್ರಭಾವವನ್ನು ಮನುಷ್ಯನ ಮೇಲೆ ಬೀರುತ್ತಿರುತ್ತದೆ. ವೃತ್ತಿಗಳು ಬಲವಾಗಿಯೇ ಇರುವದು ಸ್ವಾಭಾವಿಕವಾದ್ದರಿಂದ ಅದೇ ಬಗೆಯ ವೃತ್ತಿಯನ್ನು ಆವೃತ್ತಿಮಾಡು ತ್ತಿದ್ದರೆ ಅದರ ವಾಸನೆಯು ಪ್ರಬಲವಾಗುತ್ತದೆ. ಲೌಕಿಕವ್ಯವಹಾರದಲ್ಲಿಕೂಡ ಒಂದೊಂದು ವಿಷಯವನ್ನೇ ಕುರಿತು ದೀರ್ಘಕಾಲ ಎಡೆಬಿಡದೆ ಮನಸ್ಸಿನಲ್ಲಿ

ಹೊರಹೊಡಿಸಿ ಆಯಾ ಉದ್ಯೋಗದಲ್ಲಿ ಜನರು ಜಾಣರೆನಿಸಿಕೊಂಡಿರುತ್ತಾರೆ ಜನರು ನಿದ್ರಿಸಲಿರುವಾಗ ಯಾವ ಯೋಚನೆಯನ್ನು ಬಲವಾಗಿ ಮಾಡಿಕೊಳ್ಳುವರೋ ಆ ಯೋಚನೆಯು ಸುಪ್ತವಾಗಿದ್ದರೂ ಬೆಳಗ್ಗೆ ಮತ್ತೆ ಅದೇ ಯೋಚನೆಯೇ ಮೇಲಕ್ಕೇಳುತ್ತದೆ ; ಆದರೆ ಕನಸಿನಲ್ಲಿ ಎಷ್ಟೋ ಹೊಸ ವೃತ್ತಿಗಳು ಎದ್ದು ಕೊಂಡು ನಿದ್ರಿತರನ್ನು ಗೋಳುಗುಟ್ಟಿಸುವದರಿಂದ ಆ ವೃತ್ತಿಯು ಅಳಿಸಿಯೇ ಹೋಗಬಹುದಾಗಿದೆ. "ರಾಮಂ ಸ್ಕಂದಂ ಹನೂಮನ್ತಂ ವೈನತೇಯಂ ವೃಕೋದರಮ್" ಎಂದುಮುಂತಾಗಿ ವೀರ್ಯವಂತರೂ ಧರ್ಮಾತ್ಮರೂ ಆಗಿರುವವರ ಸ್ಮರಣೆಯನ್ನು ಮಾಡಿಕೊಂಡು ಮಲಗಿದವರಿಗೆ ದುಃಸ್ವಪ್ನಗಳು ಬರುವದಿಲ್ಲವೆಂದು ಹಿರಿಯರು ಹೇಳುತ್ತಾರೆ. ಈಗ ನವನಾಗರಿಕತೆಯ ಪ್ರಭಾವಕ್ಕೆ ಒಳಗಾದ ಜನರಿಗೆ ನಿದ್ರೆಹತ್ತುವದೇ ಕಷ್ಟತರವಾಗಿರುತ್ತದೆ. ನಿದ್ರೆಹತ್ತುವದಕ್ಕೂ ಮನಃಶಾಂತಿಗೂ ಲಕ್ಷಗಟ್ಟಲೆಯ ಮಾತ್ರೆಗಳೂ ಔಷಧಗಳೂ ವಿದೇಶಗಳಲ್ಲಿ ಪ್ರತಿ ವರ್ಷವೂ ಖರ್ಚಾಗುತ್ತಿವೆ. ಇವುಗಳನ್ನು ಮಿತಿಮೀರಿ ಉಪಯೋಗಿಸುವದರಿಂದ ಅಪಾಯವೂ ಉಂಟು. ಇದಕ್ಕೆ ಕಾರಣವೇನೆಂದರೆ ಅಶಾಂತಿಯನ್ನುಂಟುಮಾಡುವ ವಿಕ್ಷೇಪಕಾರಿಯಾದ ವಿಚಾರಗಳು ಮನುಷ್ಯನ ಮನಸ್ಸಿನಲ್ಲಿ ಹೆಚ್ಚಾಗಿ ಎದ್ದು ಕೊಂಡಿರುವದೇ. ಆಗಾಗ್ಗೆ ಭಗವಂತನ ಸ್ಮರಣೆಯನ್ನು ಮಾಡುವದು, ನಿದ್ರೆಯನ್ನು ಮಾಡುವದಕ್ಕೆಂದು ಮಲಗುವಾಗ ವಿಶೇಷವಾಗಿ ಉತ್ತಮಭಾವನೆಗಳನ್ನು ಮನಸ್ಸಿಗೆ ತಂದುಕೊಳ್ಳುವದು–ಇವುಗಳಿಂದ ಈ ಅನವಶ್ಯವಾದ ವೆಚ್ಚವನ್ನು ಉಳಿಸಿಕೊಳ್ಳಬಹುದು.

ನಿದ್ರೆ, ಮರಣಕಾಲ, ಪ್ರಲಯ – ಈ ಅವಸ್ಥೆಗಳಲ್ಲಿರುವ ನಮ್ಮ ಮನಸ್ಸಿನ ಭಾವನೆಯು ಮತ್ತೆ ಎಚ್ಚರ, ಜನ್ಮ, ಸೃಷ್ಟಿ – ಇವುಗಳುಂಟಾಗುವಾಗ ನಮಗೆ ಮೊದಲು ಅಂಕುರಿಸುವ ಭಾವನೆಗಳಿಗೆ ನಿಮಿತ್ತವಾಗುತ್ತದೆ. ಎಂಥ ಭಾವನೆಗಳು ನಮ್ಮ ಮನಸ್ಸನ್ನು ಯಾವಾಗಲೂ ಆವರಿಸಿಕೊಂಡಿರುವವೋ ಅವೇ ನಿದ್ರೆಯ ಸಮಯಕ್ಕೆ, ಮರಣದ ಸಮಯಕ್ಕೆ, ಪ್ರಲಯಕಾಲಕ್ಕೂ ನಮ್ಮನ್ನು ಹಿಡಿದುಕೊಳ್ಳುವವೆಂದು ನಿರೀಕ್ಷಿಸತಕ್ಕದ್ದಾಗಿದೆ. ಆದ್ದರಿಂದಲೇ ಭಗವಂತನು 'ಸದಾ ತದ್ಭಾವಭಾವಿತಃ' ಯಾವಾಗಲೂ ಆ ಭಾವವೇ ಊಡಿಕೊಂಡಿರುವ ಮನಸ್ಸಿನವನು ಅಂತಕಾಲದಲ್ಲಿ ನನ್ನನ್ನು ಸ್ಮರಿಸುತ್ತಾನೆ ಎಂದಿರುತ್ತಾನೆ. ಅಂತಕಾಲದಲ್ಲಿ ನಾವು ಮಾಡಿದ ಭಗವಂತನ ಸ್ಮರಣೆಯು– ಬ್ಯಾಂಕಿನಲ್ಲಿ ಮುದ್ರೆಯೊತ್ತಿ ನ್ಯಾಸವಾಗಿ ಇಟ್ಟಿರುವ ಆಭರಣಗಳ ಪೆಟ್ಟಿಗೆಯಂತೆ ಅದೇ ರೂಪದಿಂದ ಮತ್ತೆ ನಮ್ಮ ಮನದಲ್ಲಿ ತೋರಿಕೊಳ್ಳುತ್ತದೆ. ವೃತ್ತಿಗಳು ಒಂದರ ಹಿಂದೊಂದು ಬರುವಾಗ ಕೊನೆಯ ಕಾಲಕ್ಕೆ ನಮ್ಮ ಮನಸ್ಸಿನಲ್ಲಿರುವ ಭಾವನೆಯು ಎಲ್ಲಕ್ಕೂ ಮೇಲೆ ಪೇರಿಸಿಟ್ಟಂತಿರುವದರಿಂದ ಆದಕ್ಕೇ ಫಲಕೊಡುವ ಮೊದಲನೆಯ ಅವಕಾಶವು ದೊರೆಯುತ್ತದೆ. ಈ

ಕಾರಣದಿಂದಲೇ ನಮ್ಮ ಮರಣಕಾಲದ ವಾಸನೆಯು ಮುಂದಿನ ಜನ್ಮಕ್ಕೆ ಹೆಚ್ಚಿನ ಕಾರಣವಾಗುತ್ತದೆ ಎಂದು ಬಲ್ಲವರು ಹೇಳುತ್ತಾರೆ.

ಹೀಗಿರುವದರಿಂದ ಒಂದೇ ಭಾವನೆಯನ್ನು ಮತ್ತೆ ಮತ್ತೆ ಅಭ್ಯಾಸಮಾಡು ವದರಿಂದ ಅದಕ್ಕೆ ಪ್ರಾಬಲ್ಯವುಂಟಾಗುವದೆಂಬುದು ಯುಕ್ತವಾಗಿರುತ್ತದೆ. ಭಗವಂತನೂ

ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ |
ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿನ್ತಯನ್ ||

ಗೀ. ೮-೮.

'ಅಭ್ಯಾಸಯೋಗದಿಂದ ಎಂದರೆ ಅದೇ ಭಾವನೆಯನ್ನು ಮತ್ತೆಮತ್ತೆ ಮಾಡುವ ದೆಂಬ ಯೋಗದಿಂದ ಕೂಡಿದ ಅನನ್ಯಗಾಮಿಯಾದ ಚಿತ್ತವೃತ್ತಿಯುಳ್ಳವನು ಭಗವಂತನನ್ನೇ ಸ್ಮರಿಸುತ್ತಾ ಕೊನೆಗೆ ಭಗವಂತನನ್ನೇ ಸೇರಿಕೊಳ್ಳುತ್ತಾನೆ'- ಎಂದು ಹೇಳಿರುತ್ತಾನೆ. 'ಅನನ್ಯಚಿತ್ತನಾಗಿ ಸತತವೂ ನನ್ನನ್ನೇ ಸ್ಮರಿಸುವ ಯೋಗಿಗೆ ನಾನು ಸುಲಭವಾಗಿ ದೊರೆಯುತ್ತೇನೆ'-ಎಂಬ ವಾಕ್ಯದಲ್ಲಿ ಈ ಎಲ್ಲಾ ಅರ್ಥವೂ ಅಡಗಿರುತ್ತದೆ. ಅನೇಕ ಜನರು ತಾವು ಸ್ವತಂತ್ರವಾಗಿ ವಿಚಾರಮಾಡಿ ವ್ಯವಹರಿಸುತ್ತಿದೇವೆಂದು ಭ್ರಾಂತಿಯಿಂದ ತಿಳಿದುಕೊಂಡಿರುತ್ತಾರೆ ; ನಿಜವಾಗಿ ಭಾವನಾಪರವಶರಾಗಿಯೇ ನಾವು ಬಲು ಮಟ್ಟಿಗೆ ಎಲ್ಲಾ ವ್ಯವಹಾರವನ್ನೂ ಮಾಡುತ್ತಿರುತ್ತೇವೆ. ನಮ್ಮ ಭಾವನೆಗಳನ್ನು ನಮಗೂ ಗೊತ್ತಿಲ್ಲದೆ ನಮಗೆ ಕಂಡ ವಸ್ತುಗಳಲ್ಲೆಲ್ಲ ಹಾಕುತ್ತಿರುತ್ತೇವೆ. ವರ್ತಮಾನಪತ್ರಿಕೆಗಳನ್ನು ಓದಿಓದಿ ಬೇರೆಬೇರೆಯ ಭಾವನೆಗಳನ್ನು ನಮ್ಮ ಮನಸ್ಸಿನಲ್ಲಿ ತುಂಬಿಕೊಳ್ಳುತ್ತಿದ್ದೇವೆ. ಬರೆದ ಕಾಗದಗಳಿಗೆಲ್ಲ ಅಂಚೆಯ ಕಚೇರಿಯಲ್ಲಿ ಮುದ್ರೆ ಬೀಳುವಂತೆ ಯಾವ ಭಾವನೆಯು ನಮ್ಮ ಮನಸ್ಸಿಗೆ ತಾಕಿದರೂ ಮುದ್ರೆಯೊತ್ತಿದಂತೆ ಅಲ್ಲಿಯೇ ನಿಂತುಬಿಡುತ್ತದೆ. ಯಾವ ಭಾವನೆಯನ್ನು ಮತ್ತೆಮತ್ತೆ ಅಭ್ಯಾಸಮಾಡುವೆವೋ ಅದು ಅವಶ್ಯವಾಗಿ ಮರಣಕಾಲದಲ್ಲಿ ನಮ್ಮನ್ನು ಹಿಡಿದುಕೊಂಡುಬಿಡುತ್ತದೆ ; ಏಕೆಂದರೆ ಆಗ ನಮ್ಮ ನರಗಳು ಸಡಿಲವಾಗಿ ಆ ಭಾವನೆಗೆ ಪರವಶವಾಗಿಯೇ ಕೆಲಸಮಾಡಲಾರಂಭಿಸಿರುತ್ತವೆ. ಹೀಗಿರುವದರಿಂದ ಸಾತ್ತ್ವಿಕಭಾವನೆಗಳನ್ನೇ ಮನಸ್ಸಿನೊಳಕ್ಕೆ ಬಿಡಬೇಕು, ಅವುಗಳನ್ನೇ ಮತ್ತೆಮತ್ತೆ ಅಭ್ಯಾಸಮಾಡುತ್ತಿರ ಬೇಕು. ಭಗವದುಪಾಸನೆಯನ್ನು ಶಾಸ್ತ್ರದಲ್ಲಿ ವಿಧಿಸುವಾಗ ಈ ತತ್ತ್ವವನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳಿರುತ್ತದೆ.

ಯಾವಾಗಲೂ ಅಭ್ಯಸ್ತವಾಗಿರುವ ಭಾವನೆಗಳೇ ಅಂತಕಾಲದಲ್ಲಿ ಎದ್ದು ಕೊಳ್ಳುವದೆಂಬುದು ಸಾಮಾನ್ಯದಿಯಮ. ಆದರೆ ಅಕಸ್ಮಾತ್ತಾಗಿ ಕಾರಣಾಂತರ

ದಿಂದ ಅಭ್ಯಾಸವಿಲ್ಲದವರಿಗೂ ಭಗವತ್ಸ್ಮರಣೆಯು ಮನಸ್ಸಿನಲ್ಲಿ ಎದ್ದುಕೊಳ್ಳಲೂ ಬಹುದು. ಇದಕ್ಕೆ ಅಜಾಮಿಳನ ಕಥೆಯನ್ನು ದೃಷ್ಟಾಂತವಾಗಿ ಕೊಡಬಹುದು. ಅವನು ಮಾಡಿದ ಅತ್ಯುತ್ಕಟಪಾಪದ ಫಲವಾಗಿ ಸಾಯುವ ಕಾಲಕ್ಕೆ ಯಮದೂತರು ಅವನಿಗೆ ಕಾಣಿಸಿಕೊಂಡರು ಮಗನಮೇಲಿನ ಅತಿರೇಕವಾದ ಮೋಹದಿಂದ ಇವರು ಅವನನ್ನೇನುಮಾಡುವರೋ ಎಂದು 'ನಾರಾಯಣ' ಎಂಬುದಾಗಿ ಹೆಸರಿಟ್ಟು ಕೂಗಿದನು. ಕಾಲಕರ್ಮಸಂಯೋಗದಿಂದ ಅಲ್ಲಿಗೆ ವಿಷ್ಣುಪಾರ್ಷದರೂ ಆಗಲೇ ಬಂದರು. ಸಾಂಕೇತಿಕವಾಗಿ ನಾರಾಯಣಶಬ್ದವನ್ನುಚ್ಚರಿಸಿದ ಪುಣ್ಯದಫಲವೆಂದು ಅವನನ್ನು ಯಮದೂತರಿಂದ ಬಿಡಿಸಿದರು. ಮುಂದೆ ಆ ಬ್ರಾಹ್ಮಣನು ಗಂಗಾತೀರಕ್ಕೆ ಹೋಗಿ ಯೋಗಾಭ್ಯಾಸವನ್ನು ಮಾಡಿ ವಿಷ್ಣುಲೋಕವನ್ನು ಸೇರಿದನು—ಎಂದು ಆ ಕಥೆಯಲ್ಲಿಯೂ ಬರಿಯ ಅಂತಕಾಲಸ್ಮರಣೆಯಿಂದ ಭಗವತ್ಪ್ರಾಪ್ತಿಯನ್ನು ಹೇಳಿಲ್ಲ. ಸತತವಾಗಿ ಅಭ್ಯಾಸಮಾಡಿದ ಭಗವಂತನ ಸ್ಮರಣೆಯಿಂದಲೇ ಅವನಿಗೆ ಸದ್ಗತಿಯು ದೊರಕಿತೆಂದು ಹೇಳಿದೆ.

ಭಗವದ್ಗೀತೆಯಲ್ಲಿ ಹೇಳಿರುವ ಅಭ್ಯಾಸಯೋಗದಲ್ಲಿ :

ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ |
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ||

ಗೀ. ೮—೧೩,

ಎಂದು ಅಂತಕಾಲದಲ್ಲಿ ಓಂಕಾರವನ್ನು ಸ್ಮರಿಸುತ್ತಲೂ ಇದರ ಅರ್ಥವಾದ ಭಗವಂತನನ್ನು ಸ್ಮರಿಸುತ್ತಲೂ ದೇಹವನ್ನು ಬಿಟ್ಟವನು ಪರಗತಿಯನ್ನು ಪಡೆಯುವನು—ಎಂದಿದೆ. ಓಂಕಾರಜಪವು ಸಂನ್ಯಾಸಿಗಳಿಗೆ ಹೇಳಿದ್ದು. ಪ್ರಶ್ನೋಪನಿಷತ್ತಿನಲ್ಲಿ ಓಂಕಾರೋಪಾಸನೆಯನ್ನು ಹೇಳಿರುತ್ತದೆ. ಅಲ್ಲಿಂದ

'ಸ ಯೋ ಹ ವೈ ತದ್ ಭಗವನ್ ಮನುಷ್ಯೇಷು ಪ್ರಾಯಣಾಂತಮೋಂಕಾರಮಭಿಧ್ಯಾಯಿೀತ| ಕತಮಂ ವಾವ ಸ ತೇನ ಲೋಕಂ ಜಯತಿ' || ಪ್ರ. ೫—೧.

ಎಂದಿರುವ ವಾಕ್ಯದಲ್ಲಿ 'ಅಭಿಧ್ಯಾಯಿೀತ" ಎಂಬ ಶಬ್ದಕ್ಕೆ ಅರ್ಥವನ್ನು ಬರೆಯುವಾಗ ಶಂಕರಾಚಾರ್ಯರು ಹೀಗೆಂದು ಭಾಷ್ಯವನ್ನು ಬರೆದಿರುತ್ತಾರೆ :

'ಆತ್ಮಪ್ರತ್ಯಯಸಂತಾನಾವಿಚ್ಛೇದೋ ಭಿನ್ನಜಾತೀಯಪ್ರತ್ಯಯಾನ್ತರಾಖಿಲೀಕೃತೋ ನಿರ್ವಾತಸ್ಥದೀಪಶಿಖಾಸಮೋಽಭಿಧ್ಯಾನಶಬ್ದಾರ್ಥಃ ; ಸತ್ಯಬ್ರಹ್ಮಚರ್ಯಾಹಿಂಸಾಽಪರಿಗ್ರಹತ್ಯಾಗಸಂನ್ಯಾಸಶೌಚಸಂತೋಷಾಮಾಯಾವಿತ್ವಾದ್ಯನೇಕಯಮನಿಯಮಾನುಗೃಹೀತಃ ಸ ಏವಂ ಯಾವಜ್ಜೀವವ್ರತಧಾರಣಃ........' ಪ್ರ. ಭಾ. ೫—೧.

ಆತ್ಮಪ್ರತ್ಯಯಸಂತತಿಯನ್ನು ಕಡಿವಡೆಯುಗೊಡದೆ ಭಿನ್ನಜಾತೀಯಪ್ರತ್ಯಯದಲ್ಲಿ ಅದನ್ನು ಖಿಲಗೊಳಿಸದೆ ಗಾಳಿಯಿಲ್ಲದೆಡೆಯಲ್ಲಿರುವ ಸೊಡರಿನ ಕುಡಿಯಂತಿರು ವದೇ ಅಭಿಧ್ಯಾನವು. ಸತ್ಯ, ಬ್ರಹ್ಮಚರ್ಯ, ಅಹಿಂಸೆ, ಅಪರಿಗ್ರಹ, ತ್ಯಾಗ, ಸಂನ್ಯಾಸ, ಶೌಚ, ಸಂತೋಷ, ಅ ಮಾಯಾವಿತ್ವ– ಮುಂತಾದ ಅನೇಕ ಯಮ ನಿಯಮಾನುಗೃಹೀತನಾಗಿ ಯಾವಜ್ಜೀವವೂ ವ್ರತವನ್ನು ಧಾರಣೆಮಾಡಿರುವಾತನು ಅದರಿಂದ ಯಾವ ಲೋಕವನ್ನು ಜಯಿಸುವನು ?" ಈ ವ್ಯಾಖ್ಯಾನದಲ್ಲಿ ಸೇರಿ ಸಿರುವ ಅಧಿಕಾರಿಯ ವಿಶೇಷಣಗಳಲ್ಲಿ ಸಂನ್ಯಾಸವನ್ನು ಸೇರಿಸಿದೆ ಎಂಬುದನ್ನು ಲಕ್ಷಿಸಬೇಕು. ಗೀತೆಯ ಲನೆಯ ಅಧ್ಯಾಯದಲ್ಲಿಯೂ ಇದೇ ಉಪಾಸನೆಯನ್ನು ಪರಾಮರ್ಶಿಸಿರುತ್ತದೆ ಎಂದು ಭಾಷ್ಯದಲ್ಲಿ ಬರೆದಿರುವದರಿಂದ ಈ ಉಪಾಸನೆಯೂ ಸಂನ್ಯಾಸಿಗಳಿಗೇ ಹೇಳಿದ್ದೆಂದು ಸ್ಪಷ್ಟವಾಗುತ್ತದೆ. ಓಂಕಾರಕ್ಕೆ ಅಧಿಕಾರಿಗಳಲ್ಲ ದವರಿಗೆ ಈ ಉಪಾಸನೋಪದೇಶದಿಂದ ಆಗಬೇಕಾದದ್ದೇನು ? – ಎಂದು ಕೈಬಿಡ ಬಾರದು. ಅಧಿಕಾರಿಗಳಲ್ಲದವರು ಅಂತಕಾಲದಲ್ಲಿ ಭಗವನ್ನಾಮವನ್ನು ಜಪಿಸುತ್ತ ಅದರ ಅರ್ಥವಾದ ಭಗವಂತನನ್ನು ಅನುಸ್ಮರಣೆಮಾಡುತ್ತಾ ಇದ್ದರೂ ಭಗವತ್ಪ್ರಾಪ್ತಿಯಾಗುತ್ತದೆ ಎಂಬ ಆಶಯವನ್ನು ಈ ಪ್ರಕರಣಕ್ಕೆ ಊಹಿಸಬೇಕು. ರಾಮಾಯಣದ ಮೊಟ್ಟಮೊದಲೇ ವಾಲ್ಮೀಕರು ಭಗವನ್ನಾರದರನ್ನು ಪ್ರಶ್ನೆಮಾಡಿ ದಾಗ ಅವರು ಶ್ರೀರಾಮನ ಗುಣಗಳನ್ನು ಪಟ್ಟಿಮಾಡಿದಂತೆ ಹೇಳಿರುತ್ತಾರೆ. ಶ್ರೀರಾಮಭಕ್ತರಾದವರು ಆ ಕಲ್ಯಾಣಗುಣಗಳನ್ನು ಮನಸ್ಸಿಗೆ ತಂದುಕೊಳ್ಳುತ್ತ ಶ್ರೀರಾಮನಾಮವನ್ನು ಜಪಿಸಿದರೆ ಭಕ್ತರಿಗೆ ಶ್ರೀರಾಮನ ಸಾಯುಜ್ಯವೇ ದೊರಕು ವದರಲ್ಲಿ ಸಂಶಯವಿಲ್ಲ. ಶ್ರೀ ರಾಮಾವತಾರದಲ್ಲಿ ಭಗವಂತನು ತೋರ್ಪಡಿಸಿ ಕೊಂಡ ಗುಣಕರ್ಮಲೀಲೆಗಳನ್ನು ಮನದಂದಂತೆಲ್ಲ ಕಲ್ಮಷಗಳು ನೀಗಿ ಮನಸ್ಸಿಗೆ ಏಕಾಗ್ರತೆಯುಂಟಾಗುವದು. ರಾಮಾಯಣದ ಕಥೆಗಳಲ್ಲಿ ಭಗವಂತನಾದ ಮಹಾ ವಿಷ್ಣುವೇ ದೇವತೆಗಳಿಗೆ ಮಾಡಿದ ವಾಗ್ದಾನದಂತೆ ಶ್ರೀರಾಮಾದಿಗಳ ರೂಪದಿಂದ ಅವತರಿಸಿ ಧರ್ಮಸ್ಥಾಪನೆಯನ್ನು ಮಾಡಿ ಲೋಕೋದ್ಧಾರವನ್ನು ಮಾಡಿರು ತ್ತಾನೆ. ಆ ನಿರ್ಗುಣಭಗವಂತನೇ ಶ್ರೀರಾಮನೆಂಬ ಸಗುಣಸಾಕಾರರೂಪದಿಂದ ತೋರಿಕೊಂಡಿರುತ್ತಾನೆ– ಎಂಬ ಭಾವನೆಯಿಂದ ರಾಮನಾಮವನ್ನು ಜಪಿಸು ವವರಿಗೆ ನಿರ್ಗುಣಭಾವನೆಯ ಫಲವೂ ದೊರಕೀತು.

ಹಾಗೆ ನಿರ್ಗುಣಭಾವನೆಯಿಂದ ರಾಮನಾಮವನ್ನು ಜಪಿಸುವವರಿಗೆ ರಾಮ ನಾಮವೇ ಓಂಕಾರವು ; ಓಂಕಾರದ ನಾಲ್ಕು ಮಾತ್ರೆಗಳೂ ರಾಮನಾಮದಲ್ಲಿರು ತ್ತವೆ ; ರಾಮನು ರಾಮಲಕ್ಷ್ಮಣಭರತಶತ್ರುಘ್ನರೆಂಬ ನಾಲ್ಕು ರೂಪದಿಂದ ತೋರಿಕೊಂಡಿರುವದು ವಿಶ್ವತೈಜಸಪ್ರಾಜ್ಞತುರೀಯರುಗಳೆಂಬ ನಾಲ್ಕು ಪಾದಗಳ ನೆನಪುಕೊಡುವದಕ್ಕೆ. ರಾಮನೇ ತುರೀಯನು. ರಾಮನಾಮವನ್ನು ರಾಮನ ಅಭಿಧಾನವೆಂದೂ ಪ್ರತೀಕವೆಂದೂ – ಸಂನ್ಯಾಸಿಗಳು ಓಂಕಾರವನ್ನು ಉಪಾಸನೆ

ಮಾಡುವಂತೆಯೇ ಮಿಕ್ಕವರೂ ಉಪಾಸನೆಮಾಡಬಹುದು. ರಾಮನಾಮಕ್ಕೂ ರಾಮನಿಗೂ ಅಭೇದವೆಂಬ ತತ್ತ್ವವನ್ನು ವಿಚಾರದಿಂದಲೂ ಮನಗಾಣಬಹುದು. ಇದನ್ನು ಈ ಮುಂದಿನ ಪದದಲ್ಲಿ ವಿಶದಗೊಳಿಸಿರುತ್ತದೆ. ಇದರ ಅಭಿಪ್ರಾಯವನ್ನು ಮನದಟ್ಟುಮಾಡಿಕೊಂಡು ರಾಮನಾಮವನ್ನು ಜಪಿಸುತ್ತ ಅರ್ಥಾನುಸಂಧಾನವನ್ನು ಮಾಡುವವರಿಗೆ ಪರಮಪುರುಷಾರ್ಥವೇ ದೊರಕುತ್ತದೆ.

ರಾಗ : ಮೋಹನ–ಆದಿತಾಳ

ರಾಮನ ನಾಮವೆ ಎಲ್ಲವಿದು | ರಾಮನ ಬಿಟ್ಟರೆ ಜಗವಿರದು || ಪ ||
ರಾಮನಾಮಗಳ ಭೇದವನುಡುಗಿಸೆ |
ರಾಮತತ್ತ್ವವೇ ಉಳಿಯುವದು || ಅನು. ಪ. ||

೧ ರಾಮನಾಮವೆ ಓಂಕಾರ | ರಾಮನೆ ಬ್ರಹ್ಮವು ಸಾಕಾರ
ರಾಮನೆ ನಾಮವು ನಾಮವೆ ರಾಮನು | ರಾಮತತ್ತ್ವ ವಿಗತಾಕಾರ ||

೨ ರಾಮನಾಮದ ಗಾತ್ರಗಳು | ಓಮೆಂಬುದರಾ ಮಾತ್ರೆಗಳು |
ರಾಮನೆ ಮಂತ್ರವು ರಾಮತತ್ತ್ವವೆಂ | ದೇ ಮುನಿಗಳ ಸೂತ್ರಗಳು ||

೩ ರಾಮರಾಮಾನುಜಭೇದಗಳು | ರಾಮನ ನಾಲ್ಕೂ ಪಾದಗಳು |
ರಾಮನ ಪಾದಗಳೋಮಿನ ಮಾತ್ರೆಗ |
ಳೀ ಮೊರೆಯುತ್ತಿವೆ ವೇದಗಳು ||

೪ ರಾಮನು ತುರ್ಯನು ಪರಮಾತ್ಮ | ನಾಮವಮಾತ್ರವು ಅವನಾತ್ಮ |
ಈ ಮಹಿಯೊಳಗಿದನರಿದವನಾತ್ಮಾ |
ರಾಮನ ಹೊಗುವನು ರಾಮಾತ್ಮ ||

೫ ರಾಮನಾಮವನು ಉಚ್ಚರಿಸಿ | ರಾಮಬುದ್ಧಿಯನು ಎಚ್ಚರಿಸಿ |
ನಾಮಪ್ರಣವದ ಪಾರಾಯಣಕೀ | ರಾಮಾಯಣದಲಿ ಸಂಚರಿಸಿ ||

೬ ರಾಮನೆ ಗುರು ರಾಮನೆ ಶಿಷ್ಯ | ರಾಮನಾಮವೇ ಅವಿನಾಶ್ಯ |
ರಾಮನೆ ಅದ್ವಯ ಸಚ್ಚಿದಾನಂದನು | ರಾಮನಾಮವೇ ಅನ್ವೇಷ್ಯ ||

——— ———

ಕೋ ಧರ್ಮಃ ಸರ್ವಧರ್ಮಾಣಾಂ ಭವತಃ ಪರಮೋ ಮತಃ |
ಕಿಂ ಜಪನ್ಮುಚ್ಯತೇ ಜನ್ತುರ್ಜನ್ಮಸಂಸಾರಬನ್ಧನಾತ್ ||

ಲೋಕದೊಳಗೆಲ್ಲ ಒಬ್ಬನೇ ಆಗಿರುವ ದೇವನು ಯಾರು ? ಎಲ್ಲರೂ ಕೊನೆಗೆ ಸೇರಬೇಕಾಗಿರುವ ಪರಮಗತಿ ಯಾವದು ? ಯಾವನನ್ನು ಸ್ತೋತ್ರಮಾಡಿದರೆ, ಅರ್ಚಿಸಿದರೆ, ಅವರಿಗೆ ಒಳ್ಳೆಯದಾದೀತು ? ಯಾವದನ್ನು ಜಪಿಸಿದರೆ ಜೀವನು ಈ ಜನ್ಮಸಂಸಾರದ ಬಂಧನದಿಂದ ಬಿಡುಗಡೆಯಾದಾನು ?

ಈ ಪ್ರಶ್ನೆಯಲ್ಲಿ ನಮಗೆಲ್ಲರಿಗೂ ಬೇಕಾದ ವಿಷಯವೇ ಇದೆ ಎನ್ನುವದಕ್ಕೆ ಸಂಶಯವಿಲ್ಲ ಆಸ್ತಿಕರಾದವರು ಲೋಕದಲ್ಲಿ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ– ಈ ಎಲ್ಲಾ ಭಾವಗಳಿಗೂ ಅಭಿಮಾನಿಯಾದ ಒಂದೊಂದು ದೇವತೆಯುಂಟೆಂದು ನಂಬಿರುತ್ತಾರೆ. ಆದರೆ ದೇವದೇವನಾದ ಪರಮೇಶ್ವರನು ಯಾರು? ದೇವತೆಗಳಿಗೂ ದೇವತಾತ್ವವು ಯಾವ ದೇವನ ಅನುಗ್ರಹದಿಂದ ಬಂದಿರುತ್ತದೆ ? ಅಂಥ ಮಹಾದೇವನು ಯಾರು? ಯಾವನು ದೇವತೆಗಳು, ಋಷಿಗಳು, ಮನುಷ್ಯರು –ಎಲ್ಲರಿಗೂ ಆತ್ಮನಾಗಿರುತ್ತಾನೋ, ಯಾವನೊಬ್ಬನೇ ನಮ್ಮೆಲ್ಲರಿಗೂ ಜೀವಕಳೆಯನ್ನು ಕೊಟ್ಟಿರುತ್ತಾನೋ ಅಂಥ ಆತ್ಮರುಗಳಿಗೂ ಆತ್ಮನಾದ ಪರಮಾತ್ಮನು ಯಾರು ? ಮನುಷ್ಯನು ವಿಷಯಗಳ ಹೆಸರನ್ನೇ ಜಪಿಸುತ್ತಾ ಜನ್ಮಸಂಸಾರದಿಂದ ಬದ್ಧನಾಗಿರುತ್ತಾನೆ ; ಈ ಬಂಧದಿಂದ ಬಿಡುಗಡೆಯು ಯಾವ ದೇವನ ನಾಮದ ಜಪಮಾತ್ರದಿಂದ ಆದೀತು ?–ಎಂದು ಧರ್ಮರಾಯನು ಎಲ್ಲರಿಗೂ ಕಲ್ಯಾಣಕಾರಕವಾದ ಪ್ರಶ್ನೆಯನ್ನು ಮಾಡಿರುತ್ತಾನೆ. ಭಾರತಯುದ್ಧವಾದ ಬಳಿಕ ಅವನಿಗೆ ವೈರಾಗ್ಯವುಂಟಾಗಿದ್ದ ಸಮಯದಲ್ಲಿ ಮಾಡಿದ ನಿಃಸ್ವಾರ್ಥವಾದ ಪ್ರಶ್ನೆಯಿದು.

ಭೀಷ್ಮರು ಕುರುವೃದ್ಧರು, ಧರ್ಮರಾಯನೇ ಮುಂತಾದವರನ್ನು ಸಾಕಿದವರು ; ಕರ್ತವ್ಯವೆಂದು ಯುದ್ಧದಲ್ಲಿ ತೊಡಗಿ ಸ್ವೇಚ್ಛೆಯಿಂದ ಶರಪಂಜರದಲ್ಲಿ ಮಲಗಿಕೊಂಡು ಉತ್ತರಾಯಣಕಾಲವನ್ನು ನಿರೀಕ್ಷಿಸಿಕೊಂಡಿರುವವರು. ಆಗ ಅವರು ಯಾವ ಸ್ವಾರ್ಥದಿಂದಲೂ ಉಪದೇಶಮಾಡಿದರೆಂದು ಹೇಳುವದಕ್ಕಿಲ್ಲ. ಮುಂದೆ ಕಲಿಯುಗವು ಪ್ರಬಲಿಸುವದು, ಜನರು ಧರ್ಮಭ್ರಷ್ಟರಾಗುವ ಸಂಭವವೇ ಹೆಚ್ಚಾಗಿದೆ. ಎಲ್ಲರಿಗೂ ಕಲ್ಯಾಣಕಾರಣವಾದ ತತ್ತ್ವವನ್ನೇ ಹೇಳಬೇಕು ಎಂಬ ಸರ್ವಹಿತೇಚ್ಛೆಯಿಂದಲೇ ಅವರು ಈಗ ಉತ್ತರವನ್ನು ಕೊಡುವದಕ್ಕೆ ಮೊದಲು ಮಾಡಿರುತ್ತಾರೆ. ಅವರು ಕೊಟ್ಟ ಉತ್ತರವಿದು :

ಜಗತ್ಪ್ರಭುಂ ದೇವದೇವಮನನ್ತಂ ಪುರುಷೋತ್ತಮಮ್ |
ಸ್ತುವನ್ನಾಮಸಹಸ್ರೇಣ ಪುರುಷಃ ಸತತೋತ್ಥಿತಃ ||
ತಮೇವ ಚಾರ್ಚಯನ್ ನಿತ್ಯಂ ಭಕ್ತ್ಯಾ ಪುರುಷಮವ್ಯಯಮ್ |
ಧ್ಯಾಯನ್ ಸ್ತುವನ್ ನಮಸ್ಯಂಶ್ಚ ಯಜಮಾನಸ್ತಮೇವ ಚ ||

ಅನಾದಿನಿಧನಂ ವಿಷ್ಣುಂ ಸರ್ವಲೋಕಮಹೇಶ್ವರಮ್ ।
ಲೋಕಾಧ್ಯಕ್ಷಂ ಸ್ತುವನ್ನಿತ್ಯಂ ಸರ್ವದುಃಖಾತಿಗೋ ಭವೇತ್ ॥
ಬ್ರಹ್ಮಣ್ಯಂ ಸರ್ವಧರ್ಮಜ್ಞಂ ಲೋಕಾನಾಂ ಕೀರ್ತಿವರ್ಧನಮ್ ।
ಲೋಕನಾಥಂ ಮಹದ್ಭೂತಂ ಸರ್ವಭೂತಭವೋದ್ಭವಮ್ ॥
ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ ।
ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಸ್ಸದಾ ॥

'ಜಗತ್ಪ್ರಭುವಾಗಿರುವ ದೇವದೇವನನ್ನು ಭಕ್ತಿಯಿಂದ ಯಾವಾಗಲೂ ಸ್ತೋತ್ರಮಾಡಿ ಪೂಜಿಸುವದೇ ಧರ್ಮಗಳೊಳಗೆಲ್ಲ ಹೆಚ್ಚಿನ ಧರ್ಮವೆಂದು ನನ್ನ ಮತವು; ಆತನನ್ನೇ ಧ್ಯಾನಮಾಡಿ, ಆತನನ್ನೇ ಸ್ತೋತ್ರಮಾಡುತ್ತಾ, ಆತನನ್ನೇ ನಮಸ್ಕರಿಸುತ್ತಾ, ಆತನ ಪೂಜೆಯನ್ನೇ ಮಾಡುತ್ತಾ, ಲೋಕಾಧ್ಯಕ್ಷನಾದ ಆತನನ್ನೇ ನಿತ್ಯವೂ ಸ್ತುತಿಮಾಡುತ್ತಿದ್ದರೆ ಸರ್ವದುಃಖಗಳನ್ನೂ ಮೀರುತ್ತಾನೆ' ಎಂಬುದು ಉತ್ತರದ ಸಾರ.

ಭಗವಂತನ ಸ್ತೋತ್ರವು ಧರ್ಮಗಳಲ್ಲೆಲ್ಲ ಹೆಚ್ಚಿನದೆಂಬುದಕ್ಕೆ ಉಪಪತ್ತಿಯೂ ಇದೆ. ಒಂದು ದೃಷ್ಟಿಯಿಂದ ಇಂದ್ರಿಯಗಳೊಳಗೆ ನಾಲಗೆಯೇ ಮುಖ್ಯವೆನ್ನಬಹುದು. ಏಕೆಂದರೆ ಸ್ವಭಾವದಿಂದ ಅದು ಸುಮ್ಮನಿರುವದಿಲ್ಲ. ಯಾವದಾದರೊಂದು ಮಾತನ್ನು ಆಡುತ್ತಲೇ ಇರುತ್ತದೆ. ಮಾತನ್ನು ನಿಲ್ಲಿಸಿದಾಗಲೂ ಜನರು ಮನಸ್ಸಿನಿಂದಲೇ ತಮ್ಮಲ್ಲಿತಾವು ಮಾತನಾಡುತ್ತಿರುವರು ; ಅದು 'ತೂಷ್ಣೀಂ ವಾಕ್' ಎನ್ನಬಹುದು. ನಾಲಗೆಯು ರಸನೇಂದ್ರಿಯಕ್ಕೂ ವಾಗಿಂದ್ರಿಯಕ್ಕೂ ಸ್ಥಾನವಾಗಿರುತ್ತದೆ. ಜನರು ಸುಮ್ಮನೆ ಏನನ್ನಾದರೂ ಮಾತನಾಡುತ್ತಿರುವದು ಎಷ್ಟು ಹೆಚ್ಚಾಗಿದೆ ಎಂದರೆ ಅನವಶ್ಯವಾದ, ಅಥವಾ ಮನಸ್ಸನ್ನು ಹೊಲಸುಮಾಡುವ ಮಾತುಗಳಿಲ್ಲದಿದ್ದರೆ ಅವರಿಗೆ ತೃಪ್ತಿಯೇ ಇಲ್ಲ. ಹಾಗಿಲ್ಲದಿದ್ದರೆ ವರ್ತಮಾನಪತ್ರಿಕೆಗಳಿಗೆ ಇಷ್ಟು ಬೆಲೆ ಎಲ್ಲಿಂದ ಬರುತ್ತಿತ್ತು ? ವ್ಯವಹಾರದಲ್ಲಿ 'ಬಾಯುಳ್ಳವನು ಬರದಲ್ಲಿಯೂ ಬದುಕಿದ' ಎಂಬ ಗಾದೆಗೆ ಸ್ವಲ್ಪ ಅರ್ಥವಿದೆ; ಆದರೆ ಬರಿಯ ಮಾತಿನಮಲ್ಲರಿಂದ ಯಾವ ಕೆಲಸವೂ ಆಗಲಾರದೆಂಬುದು ನಿಶ್ಚಯ. ಮಾತಿನ ಮೂಲಕ ಮನಸ್ಸನ್ನು ಕೆಡಿಸಿಕೊಳ್ಳಬಾರದು, ಮಿಕ್ಕ ಮಾತನ್ನು ಬಿಟ್ಟು ಪರಮಾತ್ಮನ ಮಾತನ್ನೇ ಆಡುವದಕ್ಕೆ ಮೊದಲುಮಾಡಿದರೆ ಅದೇ ಅಮೃತತ್ವಕ್ಕೆ ಕಾರಣವು ಎಂದು ಶ್ರುತಿ ಹೇಳುತ್ತದೆ.

ವಾಗಿಂದ್ರಿಯದ ಉಪಯೋಗವನ್ನು ಹೇಗೆ ಮಾಡಿಕೊಳ್ಳಬೇಕು ? ಪರಮಾತ್ಮನನ್ನೇ ನಮ್ಮ ಅಭೀಷ್ಟವನ್ನು ನೆರವೇರಿಸೆಂದು ಪ್ರಾರ್ಥಿಸುತ್ತಿರುವ ಪದ್ಧತಿಯನ್ನು ಮೊದಲು ಇಟ್ಟುಕೊಳ್ಳಬೇಕು. ಅಭೀಷ್ಟವೆಂದರೆ ನಮಗೆ ಶ್ರೇಯಸ್ಸಾಗುವ ಸಾತ್ತ್ವಿಕವಿಚಾರಗಳು, ಸಾತ್ತ್ವಿಕವಸ್ತುಗಳು ಮತ್ತು ಸಾತ್ತ್ವಿಕ

ಆಚಾರಗಳು. ಭಗವಂತನನ್ನು ಸ್ತೋತ್ರಮಾಡುವದಕ್ಕೆ ನಾಲಗೆಯನ್ನು ಉಪಯೋಗಿಸಿಕೊಳ್ಳಬಹುದು. ಪರಮಾತ್ಮನು ಸಕಲಕಲ್ಯಾಣಗುಣಗಳಿಗೆ ಆಕರನಾಗಿರುತ್ತಾನಲ್ಲವೆ ? ಅವುಗಳನ್ನು ಒಂದೊಂದಾಗಿ ಮನದಂದುಕೊಂಡು ಸ್ತೋತ್ರಮಾಡುವದರಿಂದ ಮನಸ್ಸು ಶುದ್ಧವಾಗುತ್ತದೆ. ಭಗವಂತನ ಎಲ್ಲಾ ಗುಣಗಳನ್ನೂ ನಾವು ಅರಿತುಕೊಳ್ಳಲಾರೆವಾದರೂ ಪುಷ್ಪದಂತನು ಶಿವಮಹಿಮ್ನಸ್ತೋತ್ರದಲ್ಲಿ ಹೇಳಿರುವಂತೆ ನಮನಮಗೆ ಗೊತ್ತಾಗಿರುವಷ್ಟು ಗುಣಗಳನ್ನು ಮನಸ್ಸಿಗೆ ತಂದುಕೊಳ್ಳುವದಕ್ಕಾಗಿ ಸ್ತೋತ್ರಮಾಡಿದರೂ ಧನ್ಯರಾಗುವೆವು.

ಎರಡನೆಯದಾಗಿ ಪರಮಾತ್ಮನ ನಾಮಮಾತ್ರವನ್ನು ಜಪಿಸುವದು ಸಾಧಕರಿಗೆ ಬಹಳ ಲಾಭದಾಯಕವಾಗಿರುತ್ತದೆ. ಋಷಿಗಳು ಜನರ ಉಪಯೋಗಕ್ಕಾಗಿ ನಾಮಾಷ್ಟಕ, ದ್ವಾದಶನಾಮಗಳು, ಅಷ್ಟೋತ್ತರಶತನಾಮಗಳು, ಸಹಸ್ರನಾಮಗಳು- ಎಂದು ಕಲಿಯುಗದಲ್ಲಿ ಜನರಿಗೆ ಭಗವಂತನ ಗುಣಗಳನ್ನು ನೆನಪಿಗೆ ತರುವ ಬಗೆಬಗೆಯ ನಾಮಕದಂಬಗಳನ್ನು ಸಂಗ್ರಹಿಸಿಕೊಟ್ಟಿರುತ್ತಾರೆ. ಆ ನಾಮಗಳನ್ನು ಶ್ಲೋಕರೂಪದಿಂದ ಪಠಿಸುವದು, ಒಂದೊಂದು ನಾಮವನ್ನು ಹೇಳಿಕೊಂಡು ತುಳಸಿ, ಬಿಲ್ವಪತ್ರೆ, ಕುಂಕುಮ, ಮಲ್ಲಿಗೆಯೇ ಮೊದಲಾದ ಹೂಗಳು- ಮುಂತಾದವುಗಳಿಂದ ಭಗವಂತನನ್ನು ಅರ್ಚಿಸುವದು- ಈ ಸಾಧನಗಳಿಗೂ ಆ ನಾಮಗಳು ಉಪಯೋಗಕ್ಕೆ ಬರುತ್ತವೆ. ಆದರೆ ಭಗವಂತನ ಅನಂತ ನಾಮಗಳಲ್ಲಿ ತನಗೆ ಅಭೀಷ್ಟವಾದ ಯಾವದಾದರೊಂದನ್ನು ಗುರೂಪದೇಶಪೂರ್ವಕವಾಗಿ ಜಪಕ್ಕೆ ಇಟ್ಟುಕೊಳ್ಳುವದು ಅಂತಃಕರಣದಮೇಲೆ ಬಹಳ ಹೆಚ್ಚಿನ ಪರಿಣಾಮವನ್ನುಂಟುಮಾಡುವ ಸಾಧನವಾಗುವದು. ಕೆಲಕೆಲವರು ಮಹನೀಯರು ಪರಮಾತ್ಮನ ಗುಣಗಳನ್ನು ಭಾವಿಸುತ್ತಿರುವರಲ್ಲದೆ ಯಾವದಾದರೂ ವಿಶೇಷ ಗುಣಗಳನ್ನು ಅಭಿವ್ಯಕ್ತಿಗೊಳಿಸುವ ಒಂದೇ ನಾಮವನ್ನು ದೀರ್ಘಕಾಲದವರೆಗೆ ಭಾವನಾಪೂರ್ವಕವಾಗಿ ಜಪಿಸಿ ಭಗವಂತನ ಅನುಗ್ರಹಕ್ಕೆ ಪಾತ್ರರಾಗಿರುತ್ತಾರೆ. ಅಂಥ ಭಗವಂತನ ಪ್ರತಿನಿಧಿಗಳಾದ ಮಹಾತ್ಮರ ಉಪದೇಶವು ಕರ್ಣಕುಹರದಿಂದ ಹೃದಯದೊಳಕ್ಕೆ ಹೊಕ್ಕರೆ ಅಲ್ಲಿ ನವೀನಸಂಸ್ಕಾರವೊಂದು ಏರ್ಪಡುವದು. ಮತ್ತೆಮತ್ತೆ ಆ ನಾಮವನ್ನು ಅರ್ಥದ ಮನನಪೂರ್ವಕವಾಗಿ ಜಪಿಸುತ್ತಿದ್ದರೆ ಅದು 'ಮಂತ್ರ'ವಾಗುತ್ತದೆ ; ಮನನಮಾಡಿದವರನ್ನು (ತ್ರಾಣ = )ರಕ್ಷಣೆಮಾಡುವದರಿಂದಲೇ ಆದಕ್ಕೆ 'ಮಂತ್ರ' ಎಂಬ ಅನ್ವರ್ಥವಾದ ಹೆಸರು ಬಂದಿರುತ್ತದೆ. ಮಂತ್ರವನ್ನು ಗಟ್ಟಿಯಾಗಿ ಉಚ್ಚಾರಣೆಮಾಡುವದರಿಂದ ಅದರ ಅರ್ಥವನ್ನು ಅನುಸಂಧಾನಮಾಡುವದಕ್ಕೆ ಮೊದಮೊದಲು ಸಹಾಯಕವಾಗುತ್ತದೆಯಾದರೂ ಅದು ಮನಸ್ಸಿನಲ್ಲಿ ಬೇರುಬಿಟ್ಟುಕೊಂಡಂತೆಲ್ಲ ಹಾಗೆಯೇ ಮನಸ್ಸಿನಲ್ಲಿ ಹೊರಳಾಡಿಸಿದರೂ ಸಾಕು. ಹಣ್ಣುಗಳನ್ನು ಒತ್ತೆ ಹಾಕಿದಹಾಗೆ ಮಂತ್ರವನ್ನು ಕಾಲಕ್ರಮದಲ್ಲಿ ಹಣ್ಣುಮಾಡಿಕೊಳ್ಳಬಹುದು. ಒಬ್ಬ ಮಹಾಪುರುಷರ ಉಪದೇಶವು

ನನಗೆ ಆದಾಗ ಹತ್ತಿರವಿದ್ದವರಿಗೆ ಆದರ ಸದ್ದು ಕೇಳದೆ ಇದ್ದರೂ ನನಗೆ ಬಹಳ ಗಟ್ಟಿಯಾಗಿ ಹೇಳಿದಂತೆ ಕೇಳಿಸುತ್ತಿತ್ತು. ಆ ಬಳಿಕ ನಾನು ಎಲ್ಲೆಲ್ಲಿ ಹೋದರೂ ಕಿವಿಯಲ್ಲಿ ಆ ಮಂತ್ರವನ್ನು ಯಾರೋ ಉಚ್ಚರಿಸಿದಂತೆಯೇ ಆಗುತ್ತಿತ್ತು ! ಅದೆಲ್ಲ ಭಾವನಾಮಾತ್ರವೆಂದು ನೀವು ಎಣಿಸಬಹುದು ; ನಿಜ, ಅದಕ್ಕೆ ಶಿಷ್ಯನಾದವನ ಭಾವನೆಯೂ ಅತ್ಯಾವಶ್ಯವಾಗಿ ಬೇಕು. ಆದರೆ ಮಹಾತ್ಮರು ಪುರಶ್ಚರಣೆ ಮಾಡಿ ಸಾಕಿಕೊಂಡಿರುವ ಮಂತ್ರಗಳು ತಳಿಬೀಜದಂತೆ ಇರುತ್ತವೆ. ಸದ್ಗುರುವು ಪ್ರೇಮಪೂರ್ವಕವಾಗಿ ಉಪದೇಶಿಸುವ ಮಂತ್ರವು ಶ್ರದ್ಧಾವಂತನಾದ ಸಚ್ಛಿಷ್ಯನ ಕಿವಿಯ ಮೂಲಕ ಅವನ ಹೃದಯವನ್ನು ಪ್ರವೇಶಿಸಿದ ಬಳಿಕ ಅನರ್ಘವಾದ ರತ್ನವೊಂದನ್ನು ಭದ್ರವಾದ ಭರಣಿಯಲ್ಲಿಟ್ಟುಕೊಳ್ಳುವಂತೆ ಅದನ್ನು ಅವನು ಶ್ರದ್ಧಾಪೂರ್ವಕವಾಗಿ ಪೂಜ್ಯಬುದ್ಧಿಯಿಂದ ಕಾಪಾಡಿಕೊಳ್ಳುತ್ತಾನೆ. ವೈರಾಗ್ಯದ ಗೊಬ್ಬರದಿಂದಲೂ ಭಕ್ತಿಯ ಅಮೃತಸೇಕದಿಂದಲೂ ಆ ಬೀಜವನ್ನು ಪೋಷಿಸಿ ಅಂಕುರಿಸುವಂತೆ ಮಾಡಿಕೊಳ್ಳುತ್ತಾನೆ. ಅಂದಿನಿಂದ ಅವನಿಗೆ ಪುನರ್ಜನ್ಮವಾಯಿತೆಂದು ತಿಳಿಯಬೇಕು. ಅವನು ಗುರುಪುತ್ರನಾದನು ಸಕ್ಕರೆಯ ಗುಳಿಗೆಯೊಂದನ್ನು ಬಿಸಿನೀರಿನಲ್ಲಿ ಹಾಕಿದರೆ ಆದರ ಸಿಹಿಯು ಎಲ್ಲೆಲ್ಲಿಯೂ ವ್ಯಾಪಿಸುವಂತೆ ಆ ಮಂತ್ರದ ಜಪವು ಫಲಿಸುವದಕ್ಕೆ ಆರಂಭಿಸುತ್ತದೆ. ತನ್ನ ಭರ್ತೃವಿನ ಅನುಗ್ರಹದಿಂದ ಗರ್ಭಿಣಿಯಾದ ಸತೀಮಣಿಯ ಮುಖದಲ್ಲಿ ವರ್ಚಸ್ಸು ಹೊರ ತೋರುವಂತೆ ಇಂಥ ಶಿಷ್ಯನ ಮುಖವು ಬ್ರಹ್ಮವರ್ಚಸ್ಸಿನಿಂದ ಹೊಳೆಯಲಾರಂಭಿಸುವದು. ಸರ್ವೇಂದ್ರಿಯಗಳೂ ಶುದ್ಧಿಯನ್ನು ಪಡೆಯುವವು. ಸಾಧಕನ ವರ್ತನೆಯೂ ದಿನದಿನಕ್ಕೆ ಹೆಚ್ಚುಹೆಚ್ಚು ಸಾತ್ತ್ವಿಕವಾಗುವದು. ಇಂಥ ಮಹಿಮೆ, ಸದ್ಗುರೂಪದಿಷ್ಟವಾದ ಮಂತ್ರದ ಜಪದ್ದು !

ಉಪದೇಶವನ್ನು ಪಡೆಯುವ ಶಿಷ್ಯನು ಮೊದಲೇ ನಿರ್ಮಲಚಿತ್ತನಾಗಿದ್ದು, ಭಗವತ್ಪ್ರಾಪ್ತಿಗೆ ಹಾತುವರಿಯುತ್ತಿದ್ದರೆ ಜಪದ ಫಲವು ಶೀಘ್ರವಾಗಿ ಕಾಣಿಸಿಕೊಳ್ಳುವದು. ಆದರೆ ಚಿತ್ತದೋಷಗಳು ಹೆಚ್ಚಾಗಿರುವವರ ಮೇಲೆ ಇಂಥ ಮಂತ್ರಗಳ ಜಪದಿಂದ ಏನೂ ಪರಿಣಾಮವಾಗಲಾರದೆಂದು ಭಾವಿಸಬಾರದು. 'ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ | ಅನಿಚ್ಛಯಾಪಿ ಸಂಸ್ಪೃಷ್ಟೋದಹತ್ಯೇವ ಹಿ ಪಾವಕಃ'|| ಬೇಕೆಂತ ಮುಟ್ಟದೆ ಇದ್ದರೂ ಮುಟ್ಟಿದ ಬೆಂಕಿಯು ಸುಡದೆ ಇರುವದೆ ? ಆದ್ದರಿಂದ ಭಗವಂತನನ್ನು ಅವನ ನಾಮಜಪದ ಮೂಲಕ ಭಜಿಸಿದರೆ ಪಾಪಗಳನ್ನು ಅವನು ಅವಶ್ಯವಾಗಿ ನಾಶಗೊಳಿಸುವನು. ಈ ಜಗತ್ತು ಸಂಸಾರಿಗಳಿಗೆ ದುಃಖಮಯವಾಗಿಯೇ ಇರುತ್ತದೆ. ಕತ್ತಲೆಯಲ್ಲಿ ಎತ್ತ ಹೋದರೂ ಏನನ್ನಾದರೂ ಎಡವಿಯೇ ತೀರುವಂತೆ ಸಂಸಾರಿಗಳು ಮತ್ತೆಮತ್ತೆ ದುಃಖವನ್ನು ಪಡೆಯುತ್ತಲೇ ಇರುತ್ತಾರೆ. ಅವರಲ್ಲಿ

ಯೂ ಕಲಿಯುಗದಲ್ಲಿ ಶಾಸ್ತ್ರೀಯವಾದ ಕರ್ಮಗಳ ಅನುಷ್ಠಾನವನ್ನು ಮಾಡಿ ಚಿತ್ತಶುದ್ಧಿಯನ್ನು ಹೊಂದುವದು ಬಹುಜನರಿಗೆ ಸಾಧ್ಯವೇ ಇಲ್ಲ. ಜನರು ಧರ್ಮದ ಮಾತುಗಳನ್ನು ಆಡುವರು, ತಾವು ಮಾಡಿದ ಅಲ್ಪಸ್ವಲ್ಪಧರ್ಮವನ್ನು ಹೊರಗೆ ಪ್ರಕಟಿಸಿಕೊಳ್ಳುವರು, ಪಾಪವನ್ನು ಮಾಡುತ್ತಲೇ ಇರುವರು. 'ಕಲೌ ಕಲ್ಮಷಚಿತ್ತಾನಾಂ ಪಾಪದ್ರವ್ಯೋಪಜೀವಿನಾಮ್ ! ವಿಧಿಕ್ರಿಯಾವಿಹೀನಾನಾಂ ಗತಿರ್ಗೋವಿನ್ದಕೀರ್ತನಮ್ ||' ಪಾಪದಿಂದ ಚಿತ್ತವನ್ನು ಕಲುಷಿತವಾಗಿ ಮಾಡಿ ಕೊಂಡು ಪಾಪದಿಂದಲೇ ಧನಾರ್ಜನೆಯನ್ನು ಮಾಡುತ್ತಿರುವವರಿಗೆ ವಿಹಿತಕ್ರಿಯೆ ಯನ್ನು ಮಾಡುವದಾಗಲಿ, ನಿಷಿದ್ಧಕರ್ಮವನ್ನು ಬಿಡುವದಾಗಲಿ ಹೇಗೆ ಆದೀತು ? ಪ್ರತಿದಿನವೂ ಕೆಸರಿನಲ್ಲಿಯೇ ಅದ್ದುತ್ತಿರುವ ಬಟ್ಟೆಯನ್ನು ಎಷ್ಟು ಒಗೆದರೆತಾನೆ ಶುದ್ಧವಾದೀತು ? ಇಂಥವರಿಗೆ ಗತಿಯೇನು ? ಅವರಿಗೆ ಸದ್ಗತಿ ಯಾಗುವದಕ್ಕೆ ಅವಕಾಶವೇನಾದರೂ ಇದೆಯೆ ? ಎಂದರೆ– 'ಗತಿರ್ಗೋವಿನ್ದ ಕೀರ್ತನಮ್' ಪರಮಾತ್ಮನ ನಾಮಕೀರ್ತನೆಯೇ ಅವರಿಗೆ ಗತಿ !

ಪರಮಾತ್ಮನ ದಯೆಗೆ ಯಾವಾಗಲೂ ಕೊರತೆಯಿರುವದಿಲ್ಲ. ಯಾರಿಗೆ ಅನ್ನವನ್ನು ತಿಂದು ಅರಗಿಸಿಕೊಳ್ಳುವ ಶಕ್ತಿಯಿರುವದಿಲ್ಲವೋ, ಯಾರಿಗೆ ಗಂಜಿಯೂ ಬಾಯಿಂದ ಒಳಕ್ಕೆ ಹೋಗುವಹಾಗಿಲ್ಲವೋ ಅಂಥವರಿಗೂ ವೈದ್ಯರು 'ಚರ್ಮಾ ಹಾರ' (skin-Food) ಎಂದು ಚರ್ಮಕ್ಕೆ ತಿಕ್ಕುವಮೂಲಕ ಆಹಾರವನ್ನು ಕೊಡುತ್ತಾರೆ ; ಹಿಂದೆ ಕೆಲವು ಸಂದರ್ಭಗಳಲ್ಲಿ ಹೊಟ್ಟೆಗೆ ಮೊಸರನ್ನವನ್ನು ಕಟ್ಟು ತ್ತಿದ್ದ ಪದ್ಧತಿಯಿದ್ದದ್ದನ್ನು ನಿಮ್ಮಲ್ಲಿ ಹಿರಿಯರಾದವರು ನೆನಪಿಗೆ ತಂದುಕೊಳ್ಳ ಬಹುದು. ಹಾಗೆಯೇ ಕಲಿಯುಗದಲ್ಲಿ ಪಾಪಮಯರಾಗಿ ಪಾಪದಲ್ಲಿಯೇ ಮುಳು ಗಿರುವವರಿಗೆ ಸತ್ಕರ್ಮಾನುಷ್ಠಾನದ ಅವಕಾಶವೇ ಇಲ್ಲವಲ್ಲ! ಗುರುಶಾಸ್ತ್ರೋಪದೇಶ ಗಳು ಕೂಡ ದೊರಕುವಂತಿಲ್ಲವಲ್ಲ ! ಇವರು ಹೇಗಾದರೂ ಉದ್ಧಾರವಾಗಲಿ ! –ಎಂದು ಭಗವಂತನು ಋಷಿಗಳ ಮೂಲಕವಾಗಿ ಭಗವನ್ನಾಮಕೀರ್ತನೆ ಎಂಬ ಉಪಾಯವನ್ನು ಹುಡುಕಿಸಿಕೊಟ್ಟಿರುತ್ತಾನೆ. ಮಧ್ಯಯುಗದ ಸಾಧುಗಳು–ರಾಮ ದಾಸ ತುಕಾರಾಮ, ನಾಮದೇವ, ಕಬೀರದಾಸ, ಕನಕದಾಸ, ಪುರಂದರದಾಸ ಮುಂತಾದವರು– ಭಗವಂತನನ್ನು ಹಾಡಿಹೊಗಳಿ ಭಗವಂತನ ಕೀರ್ತನೆಯಿಂದ ಆಗುವ ಸತ್ಫಲವನ್ನು ಮನಗಾಣಿಸಿಕೊಟ್ಟಿರುತ್ತಾರೆ.

ಅವಿವೇಕಿಗಳಾದವರು 'ಶಾಸ್ತ್ರದಲ್ಲಿ ಹೇಳಿರುವ ಸಾಧನಗಳೆಷ್ಟೋ ಇರುವಾಗ ನಮಗೇಕೆ ನಾಮಕೀರ್ತನೆ' ? ಎಂದು ಅದನ್ನು ಅಸಡ್ಡೆಮಾಡುತ್ತಾರೆ. ಕಲಿದೋಷ ದಿಂದ ಕೆಟ್ಟುಹೋಗದಿರಲಿ ಎಂದು ಭಗವಂತನು ಭಕ್ತರ ಮೂಲಕ ಎಲ್ಲೆಲ್ಲಿಯೂ ಹರಡಿರುವ ಸುಲಭೋಪಾಯವು ನಮ್ಮ ಹತ್ತಿರದಲ್ಲಿಯೇ ಇರುತ್ತಿದ್ದರೂ ಅದನ್ನು ಕಡೆಗಣಿಸಿದರ ತಪ್ಪು ಯಾರದು ? ನಾಮವೆಂಬುದು ಬರಿಯ ಶಬ್ದಮಾತ್ರವೆಂದು

ತಿಳಿಯಬಾರದು. ಭಗವಂತನು. ರಾಮಾವತಾರವನ್ನು ಮಾಡಿ ಜಗತ್ತಿನಲ್ಲಿ ಹರಡಿದ್ದ ರಕ್ಕಸಗನ್ನೆಲ್ಲ ಸದೆಬಡಿದ ಬಳಿಕ ತನ್ನ ಪಾಪಹರವಾದ ಕೀರ್ತಿಯನ್ನು ಜಗತ್ತಿನಲ್ಲಿಟ್ಟು ಮೊದಲಿನ ಬ್ರಹ್ಮತ್ವವನ್ನು ಹೊಂದಿದನು– ಎಂದು ಅಧ್ಯಾತ್ಮರಾಮಾಯಣದಲ್ಲಿ ವರ್ಣಿಸಿದೆ. ಆದ್ದರಿಂದ ನಮಗೆ ಈಗ ಭಗವಂತನ ಕೀರ್ತಿಯನ್ನು ಸಾರುವ ನಾಮವೇ ಸಿಕ್ಕಿರುತ್ತದೆ. ಕೃಷ್ಣಚೈತನ್ಯರು ಹೇಳಿರುವಂತೆ ನಾಮ, ನಾಮಿ– ಎಂದು ಭಗವಂತನಿಗೆ ಎರಡುರೂಪಗಳು ; ಇವುಗಳಲ್ಲಿ ನಾಮಿಯಾದ ಭಗವಂತನ ರೂಪವು ಮರೆಯಾದಮೇಲೂ 'ನಾಮ'ರೂಪವು ಎಲ್ಲೆಲ್ಲಿಯೂ ಹರಡಿಕೊಂಡು ಸಂಸಾರಿಗಳನ್ನು ಉದ್ಧಾರಮಾಡುತ್ತಿರುತ್ತದೆ. ಕಲಿಯುಗದಲ್ಲಿ ಪಾಪವು ಹೆಚ್ಚುತ್ತಲೇ ಇದೆ ಎಂಬುದಕ್ಕೆ ಸಂಶಯವಿಲ್ಲ ; ಆದರೆ ಭಗವನ್ನಾಮಕ್ಕೆ ಪಾಪನಿರ್ಹರಣ ಶಕ್ತಿ ಎಷ್ಟಿದೆಯೋ ಅಷ್ಟು ಪಾಪವನ್ನು ಯಾರೊಬ್ಬಗೂ ಮಾಡಲಾರದು. ಸರ್ವರಿಗೂ ನಾಮಕೀರ್ತನೆಯಿಂದ ಪುರುಷಾರ್ಥವು ದೊರಕುತ್ತದೆ.

---

# ೪೦. ಧ್ಯಾನಯೋಗ

(8 . 7—62)

ಭಗವಂತನು ತನ್ನ ವಿಭೂತಿಗಳಲ್ಲಿ ಮುಖ್ಯವಾದವನ್ನು ತಿಳಿಯಿಸಿದಮೇಲೆ, 'ಇದನ್ನೆಲ್ಲ ಇಷ್ಟಿಷ್ಟಾಗಿ ತಿಳಿದುಕೊಂಡು ಆಗಬೇಕಾದದ್ದೇನು ? ಈ ಇಡಿಯ ಜಗತ್ತೇ ನನ್ನ ವಿಭೂತಿಯಾಗಿದ್ದು ನನ್ನ ಒಂದಂಶದಿಂದ ತೋರಿಕೊಂಡಿದೆಯೆಂದು ತಿಳಿ' ಎಂದು ಉಪಸಂಹಾರವನ್ನು ಮಾಡಿದನು. ಆ ಬಳಿಕ ಅಂಥ ವಿಶ್ವರೂಪವನ್ನು ತೋರಿಸಿ :

ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ |
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರನ್ತಪ ||

ಗೀ. ೧೧–೫೪

ಅನನ್ಯವಾದ ಭಕ್ತಿಯಿಂದ ಮಾತ್ರವೇ ಈ ವಿಶ್ವರೂಪನಾದ ನನ್ನನ್ನು ಅರಿತುಕೊಂಡು ಕಂಡುಕೊಂಡು ಅದರಲ್ಲಿಯೇ ಪ್ರವಿಷ್ಟನಾಗುವದು ಶಕ್ಯವು –ಎಂದು ಉಪಸಂಹಾರಮಾಡಿರುತ್ತಾನೆ, ಸಾಧಕನಾದವನು ತನ್ನ ಹೃದಯವನ್ನು ವಿಶಾಲಪಡಿಸಿಕೊಳ್ಳುತ್ತಾ ಜಗತ್ತೆಲ್ಲವೂ ಪರಮಾತ್ಮನ ವಿಭೂತಿಯೆಂದೇ ಮನಸ್ಸಿನಲ್ಲಿ ಭಾವನೆಯು ಮೂಡುವವರೆಗೂ ಭಗವದ್ಭಾವನೆಯನ್ನು ಹಿಗ್ಗಿಸಿಕೊಳ್ಳುತ್ತಾ ಹೋಗಬೇಕು.

ಮನುಷ್ಯನಿಗೆ ಹೃದಯವು ಸಂಕುಚಿತವಾದರೆ ತನ್ನೊಬ್ಬನ ಹೊರತು ಮತ್ತೆ ಯಾರಲ್ಲಿಯೂ ಪ್ರೇಮವೇ ಆಗುವಂತಿರುವದಿಲ್ಲ. ವಿಶಾಲವಾದ ಹೃದಯವುಳ್ಳವನಿಗೆ ಕುಟುಂಬ, ನೆರೆಯವರು, ತನ್ನವರು, ತನ್ನ ದೇಶ, ಇಡಿಯ ಭೂಲೋಕ– ಹೀಗೆ ಎಂಲ್ಲೆಲ್ಲಿಯೂ ಪ್ರೇಮವು ಹರಡಿರುತ್ತದೆ. ಮೈಮೇಲೆ ಒಂದು ಕುರು ಎದ್ದಿದ್ದರೆ ಅದು ತಟಗುಟ್ಟುತ್ತಲೇ ಇರುತ್ತಿರುವದರಿಂದ ಅದರಲ್ಲಿಯೇ ಮನಸ್ಸು ನಿಂತುಬಿಡುವಂತೆ ಮನುಷ್ಯನಿಗೆ 'ಅಹಮ್' ಎಂಬ ಕುರು ಮನಸ್ಸಿನಲ್ಲಿ ಹುಟ್ಟಿಕೊಂಡಿರುವಾಗ ಅವನು ಅದನ್ನೇ ಮನದಂದುಕೊಳ್ಳುತ್ತಾ ಇರುತ್ತಾನೆ. ಭಗವಂತನ ವಿಶ್ವರೂಪವನ್ನು ನೋಡಿದಾಗ, ಭಗವಂತನ ಸರ್ವವ್ಯಾಪಕತೆಯ ಅರಿವೂ 'ಪಾಂಡವಾನಾಂ ಧನಂಜಯಃ' ಎಂದು ತಿಳಿಸಿದ್ದ ಒಂದಂಶದ ಅಲ್ಪತನದ ಅರಿವೂ ಒಮ್ಮೆಗೇ ಅರ್ಜುನನಿಗೆ ಮನದಟ್ಟಾಯಿತು. ಅಹಂಕಾರವು ತೀರ ಕಡಿಮೆಯಾಗಿ 'ಏತಾವಾನಸ್ಯ ಮಹಿಮಾ' ಭಗವಂತನ ಮಹಿಮೆಯು ಎಷ್ಟು! –ಎಂದು ಅರಿವಾದಾಗ 'ಈ ಭೂಮಂಡಲದಲ್ಲಿ ನಮ್ಮ ಊರು ಎಷ್ಟು ಚಿಕ್ಕದು ! ನನ್ನ ದೇಹೇಂದ್ರಿಯ ಸಂಘಾತವು ಎಷ್ಟು ಅಲ್ಪವಾಯಿತು !' ಎಂದು ತೋರುವಂತೆ ಭಗವದ್ಧ್ಯಾನದ ಯ ಫಲವು ದೊರಕುತ್ತದೆ.

ಹೊರಗೆ ವಿಭೂತಿಗಳ ಉಪಾಸನೆ, ಒಳಗೆ ಮಾನಸಪೂಜೆ, ಸಂಭಾಷಣೆ, ಶರಣಾಗತಿ– ಇವುಗಳೆಲ್ಲವೂ ಭಾವನಾಪ್ರಧಾನಗಳಾದವುಗಳೇ. ಇವುಗಳಲ್ಲಿ ನಮಗೆ ಭಗವಂತನ ಮಹಿಮೆಯನ್ನು ಅಳೆಯುವದಕ್ಕೆ ಬಾರದಿದ್ದರೂ ಶಾಸ್ತ್ರಗುರುಗಳ ಉಪದೇಶದಿಂದ ಹಾಗೆಯೇ ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವೆವು. ಆದರೆ ಭಗವಂತನನ್ನು ನೇರಾಗಿ ನೋಡಿ ಅರಿತುಕೊಳ್ಳುವದಕ್ಕೆ ಸಹಕಾರಿಯಾದ ಉಪಾಸನೆಯು ಯಾವದಾದರೂ ಇದೆಯೆ ? –ಎಂದರೆ ಇದೆ ; ಮಿಕ್ಕ ಸಿದ್ಧಾಂತದವರೂ ಮತಾಚಾರ್ಯರೂ ಸಿದ್ಧಾಂತದ ಕೊನೆಯ ಮಾತಿನ ವಿಷಯಕ್ಕೆ ಕಚ್ಚಾಡುತ್ತಿರುವರು ; ತಮ್ಮತಮ್ಮ ಸಿದ್ಧಾಂತಕ್ಕೆ ಅನುಗುಣವಾಗಿ ಉಪಾಸನಾಕ್ರಮವನ್ನು ಬೋಧಿಸುತ್ತಿರುತ್ತಾರೆ. ಆಧ್ಯಾತ್ಮಿಕಭಾವನೆಯೇ ಆ ಎಲ್ಲಾ ಸಾಧನಗಳಿಗೂ ಆಧಾರ. ಆದರೆ ಅದ್ವೈತವೇದಾಂತದಲ್ಲಿ ಒಂದು ವಿಶೇಷವಿದೆ. ಅದ್ವೈತವೇದಾಂತದಂತೆ ಈಗಲೇ ನಾವೆಲ್ಲರೂ ಪರಮಾತ್ಮಸ್ವರೂಪರಾಗಿರುತ್ತೇವೆ ; ಈಗಲೇ ಪ್ರಪಂಚವೆಲ್ಲವೂ ಪರಮಾರ್ಥರೂಪದಿಂದ ಪರಮಾತ್ಮನೇ ಆಗಿರುತ್ತದೆ ; ಆದ್ದರಿಂದ ಇಲ್ಲಿ ಸರ್ವಭೂತಗಳೂ ಪರಮಾತ್ಮಸ್ವರೂಪವಾಗಿವೆ –ಎಂಬುದನ್ನು ತಾಯಿತಂದೆಗಳನ್ನು ದೇವರೆಂದೂ ಪುಸ್ತಕವನ್ನು ಸರಸ್ವತಿಯೆಂದೂ ಭಾವಿಸುವಂತೆ, ಅಲ್ಲಿ ಕಂಡುಕೊಳ್ಳಬೇಕಾಗುವದು. ಹೇಗೆ ಭೌತಿಕವಿಜ್ಞಾನಶಾಸ್ತ್ರಾಭ್ಯಾಸಿಗಳು ಪ್ರಯೋಗಶಾಲೆಯಲ್ಲಿ ಮನಸ್ಸಿನ ಏಕಾಗ್ರೀಕರಣಪೂರ್ವಕವಾಗಿ ವಿಷಯಗಳನ್ನು ಲಕ್ಷ್ಯವಿಟ್ಟು ನೋಡುವರೋ ರತ್ನತತ್ತ್ವವನ್ನು ಪರೀಕ್ಷೆಮಾಡಬೇಕೆನ್ನುವವನು ಅದರಲ್ಲಿಯೇ

ಲಕ್ಷ್ಯವಿಟ್ಟು ಹೇಗೆ ನೋಡುವನೋ ಹಾಗೆಯೇ ಇಲ್ಲಿಯೂ ಆತ್ಮತತ್ತ್ವವನ್ನು ಮನಸ್ಸಿನ ಏಕಾಗ್ರೀಕರಣದಿಂದ ನೋಡಬೇಕಾಗಿರುತ್ತದೆ. ಇಂದ್ರಿಯಗಳು ಹೊರಗಿನ ವಿಷಯಗಳನ್ನು ನಿರೀಕ್ಷಿಸುವದಕ್ಕೆ ಹೇಗೆ ಸಾಧನವೋ ಹಾಗೆ ಮನಸ್ಸೊಂದೇ ಇಲ್ಲಿ ಆತ್ಮತತ್ತ್ವವನ್ನು ಅರಿತುಕೊಳ್ಳುವದಕ್ಕೆ ಪ್ರಯೋಜನಕಾರಿಯಾಗಿರುತ್ತದೆ.

ಪರಮಾತ ತತ್ತ್ವವು ಅನರ್ಘವಾದ ರತ್ನವಿದ್ದಂತೆ ಇದೆ. ಸರಿಯಾಗಿ ಅದನ್ನು ನಿರೀಕ್ಷಿಸಿ ನೋಡಿ ಅದರ ಬೆಲೆಯನ್ನು ಅರಿತುಕೊಳ್ಳಬಲ್ಲವರಿಗೆ ಮಾತ್ರ ಅದು ರತ್ನವು; ಉಳಿದವರಿಗೆ ಅದು ಬರಿಯ ಒಂದು ಕಲ್ಲು! ಪರಮಾತ್ಮನು ನಮ್ಮೆಲ್ಲರ ಆತ್ಮನೇ ಎಂದು ಶ್ರುತಿಯು ಸಾರುತ್ತಿದೆಯಾದರೂ ನಾವು ನಮ್ಮ ಒಳಕ್ಕೆ ನೋಡುವದಿಲ್ಲ. ನೋಡುವ ಕ್ರಮವನ್ನು ತಿಳಿದುಕೊಳ್ಳುವದಕ್ಕೂ ಯತ್ನಿಸುವದಿಲ್ಲ. 'ಶಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯತಿ | ಸರ್ವಮಾತ್ಮಾನಂ ಪಶ್ಯತಿ' || ಬೃ (೪-೪-೨೩.) ಬಾಹ್ಯಾಂತಃಕರಣಗಳ ವ್ಯಾಪಾರವನ್ನು ತಡೆದುಕೊಂಡು ಸರ್ವಕ್ರಿಯೆಗಳಿಂದಲೂ ಉಪರತನಾಗಿ ದ್ವಂದ್ವಸಹಿಷ್ಣುವಾಗಿ ತನ್ನ ಸ್ವರೂಪದಲ್ಲಿ ಮನಃಸಮಾಧಾನವನ್ನು ಮಾಡಿಕೊಂಡರೆ ಆತ್ಮನನ್ನು ಕಾಣುತ್ತಾನೆ, ಸರ್ವವೂ ಆತ್ಮನೇ ಎಂದು ಕಂಡುಕೊಳ್ಳುತ್ತಾನೆ-ಎಂದು ಸಾರುತ್ತಿರುವ ಶ್ರುತಿಯನ್ನು ಮನಸ್ಸಿಗೆ ಹತ್ತಿಸಿಕೊಂಡು ಅಭ್ಯಾಸ ಮಾಡುವವರಿಗೆ ಮಾತ್ರವೇ ಆತ್ಮದರ್ಶನವು ಲಭಿಸೀತು. ಗುಂಡುಮುಳುಗನ ಹಕ್ಕಿ ಎಂಬುದು ಮೇಲೆಯೇ ಆಕಾಶದಲ್ಲಿ ಹಾರಾಡುತ್ತಿದ್ದು ನದಿಯಲ್ಲಿ ಸಂಚರಿಸುತ್ತಿರುವ ಮೀನನ್ನು ಸರಕ್ಕನೆ ಕೆಳಕ್ಕೆ ಹಾರಿಬಂದು ಹಿಡಿಯುವಂತೆ ಮನಸ್ಸನ್ನು ಏಕಾಗ್ರೀಕರಣಮಾಡಿಕೊಂಡು ಆತ್ಮನಲ್ಲಿಯೇ ಅದನ್ನು ಕರಗಿಸಿಕೊಳ್ಳಬೇಕು. ಇದಕ್ಕೆ 'ಧ್ಯಾನಯೋಗ'ವೆಂದು ಗೀತೆಯಲ್ಲಿ ಹೆಸರನ್ನು ಕೊಟ್ಟಿರುತ್ತದೆ ಕಠೋಪನಿಷತ್ತಿನಲ್ಲಿ 'ಅಧ್ಯಾತ್ಮಯೋಗ'ವೆಂದು ಕರೆದಿರುವದೂ ಇದನ್ನೇ; ಶ್ರೀಗೌಡಪಾದಾಚಾರ್ಯರು ಅದ್ವೈತಪ್ರಕರಣದಲ್ಲಿ ಹೇಳಿರುವ "ಮನೋನಿಗ್ರಹ"ವೂ ಇದೇ, 'ನಿದಿಧ್ಯಾಸನ'ವೆಂಬ ಶಬ್ದದಿಂದ ವೇದಾಂತಿಗಳು ಹೇಳುವ ಸಾಧನವೂ ಇದೇ.

> ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ |
> ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ||
> ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ |
> ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ||
> ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ |
> ಉಪವಿಶ್ಯಾಸನೇ ಯುಂಜ್ಯಾದ್ ಯೋಗಮಾತ್ಮವಿಶುದ್ಧಯೇ ||

ಗೀ. ೬-೧೦ ರಿಂದ ೧೨

ಸಕಲಬಾಹ್ಯಪ್ರಪಂಚದ ಆಸಕ್ತಿಯನ್ನೂ ತೊರೆದು ವೈರಾಗ್ಯದಿಂದ ನನ್ನದೆಂಬು ದೇನನ್ನೂ ಇಟ್ಟುಕೊಳ್ಳದವನಾಗಿ ಏಕಾಂತದಲ್ಲಿದ್ದುಕೊಂಡು ಸ್ಥಿರಸುಖವಾದ ಆಸನವನ್ನು ಒಲಿದು ಈ ಯೋಗವನ್ನು ಮಾಡಬೇಕು. ಇದೇ ಮೊದಲಾದ ಯೋಗದ ಸಿದ್ಧತೆಯನ್ನು ಗೀತೆಯ ಆರನೆಯ ಅಧ್ಯಾಯದಲ್ಲಿ ವಿಸ್ತರಿಸಿ ಹೇಳಿದೆ. ಇದೆಲ್ಲ ಹೊರಗಿನ ಸಿದ್ಧತೆ, ನಿಜವಾಗಿ ಮಾಡತಕ್ಕದ್ದೇನು ?– ಎಂದರೆ

ಶನೈಃಶನೈರುಪರಮೇದ್ ಬುದ್ಧ್ಯಾ ಧೃತಿಗೃಹೀತಯಾ |
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಞ್ಚಿದಪಿ ಚಿನ್ತಯೇತ್ ||

ಗೀ. ೬–೨೫.

ಇಂದ್ರಿಯಗಳು ಅತ್ತಿತ್ತ ಹರಿದಾಡುತ್ತಲೇ ಇರುತ್ತವೆ. ಇವುಗಳ ವ್ಯಾಪಾರ ವನ್ನು ನಿಲ್ಲಿಸಿಕೊಳ್ಳುವದು ಕಷ್ಟ ; ಬೆದರುಕುದುರೆಯಂತಿರುವದರಿಂದ ಇವುಗಳಿಂ ದಾಗುವ ವಿಕ್ಷೇಪವನ್ನು ಮೆಲ್ಲಮೆಲ್ಲಗೆ ನಿಲ್ಲಿಸಿಕೊಳ್ಳಬೇಕು. ಬಳಿಕ ಒಳಕ್ಕೆ ಸೆಳೆದುಕೊಂಡ ಮನಸ್ಸನ್ನು ಆತ್ಮನಲ್ಲಿಯೇ ನಿಲ್ಲಿಸಿಕೊಳ್ಳಬೇಕು, ಮತ್ತೇನನ್ನೂ ಚಿಂತಿಸಬಾರದು. ಇದು ದೀರ್ಘಕಾಲದ ಆದರದಿಂದ ಮಾಡುವ ಅಭ್ಯಾಸದಿಂದ ಫಲಕಾರಿಯಾಗುತ್ತದೆ.

ಹೊರಗಿನ ವಿಷಯಗಳತ್ತ ಚಿತ್ತವು ಹರಿಯದೆ, ದೇಹ, ಇಂದ್ರಿಯ, ಮನಸ್ಸು –ಮುಂತಾದವುಗಳಲ್ಲಿ ನಾನು ಎಂಬ ಅಭಿಮಾನವು ಕಳೆದುಹೋದಂತೆಲ್ಲ ಮನಸ್ಸು ಆತ್ಮನಿಗೆ ಹತ್ತಿರಹತ್ತಿರವಾಗಿ ಕೊನೆಗೆ ಪರಮಾತ್ಮನೇ ಆಗಿಬಿಡುತ್ತದೆ. ನಾರದರು ಪರಮಾತ್ಮನ ಭಕ್ತಿಯಿಂದ ಆಗುವ ಫಲವನ್ನು ವ್ಯಾಸರಿಗೆ ಹೇಳಿದಾಗ ತಮ್ಮ ಹಿಂದಿನ ಜನ್ಮದ ವೃತ್ತಾಂತವನ್ನು ವಿವರಿಸಿ ತಮಗೆ ಆಗ ಇಂಥ ದರ್ಶನವು ಆಯಿತೆಂದಿರುತ್ತಾರೆ. "ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್" (ಗೀ. ೯–೨೯) ಯಾರು ನನ್ನನ್ನು ಭಕ್ತಿಯಿಂದ ಭಜಿಸುವರೋ ಅವರ ನನ್ನಲ್ಲಿಯೂ ನಾನು ಅವರಲ್ಲಿಯೂ ಇರುವೆನು– ಎಂದು ಭಗವಂತನು ಹೇಳಿರುವದಕ್ಕೆ ಇದೇ ಅಭಿಪ್ರಾಯ.

ಯುಞ್ಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ |
ಸುಖೇನ ಬ್ರಹ್ಮಸಂಸ್ಪರ್ಶಮತ್ಯನ್ತಂ ಸುಖಮಶ್ನುತೇ || ಗೀ. ೬–೨೮.

ಶಾಸ್ತ್ರೋಕ್ತರೀತಿಯಿಂದ ಧ್ಯಾನಯೋಗವನ್ನು ಎಡೆಬಿಡದೆ ಮಾಡುತ್ತಿದ್ದರೆ ಬ್ರಹ್ಮಸಂಸ್ಪರ್ಶವೆಂಬ ಪರಮಾನಂದವನ್ನು ಹೊಂದುತ್ತಾನೆ. ಬ್ರಹ್ಮಸಂಸ್ಪರ್ಶ ವೆಂದರೆ ಪರಮಾತ್ಮನನ್ನು ಮುಟ್ಟುವದಲ್ಲ; ಏಕೆಂದರೆ ಪರಮಾತ್ಮನಿಗೂ ನಮಗೂ ಅತ್ಯಂತಾಭೇದವೇ ಯಾವಾಗಲೂ ಇದ್ದುಕೊಂಡಿರುತ್ತದೆ. ದೂರದಲ್ಲಿರುವ ಗ್ರಾಮಾದಿಗಳನ್ನು ನಾವು ಹೋಗಿ ಮುಟ್ಟಬೇಕಾಗುತ್ತದೆ. ಆದರೆ ನಾವೇ

ನಮ್ಮ ಸ್ವರೂಪವನ್ನೇ ಮುಟ್ಟುವದೆಂದರೆ ಅರ್ಥವಿಲ್ಲ; ಅದ್ದರಿಂದ ಅನಾತ್ಮೀಯಿಂದಾಗಿರುವ ಅನಾತ್ಮಗಳ ಸಂಸ್ಪರ್ಶವನ್ನು ಕಳಚಿಕೊಳ್ಳುವದೇ "ಬ್ರಹ್ಮಸಂಸ್ಪರ್ಶ"ವೆಂದು ತಿಳಿಯಬೇಕು. ವಿಷಯಗಳ ಸ್ಪರ್ಶದಿಂದ ಆಗುವ ಸುಖವು ಕ್ಷಣಿಕವಾಗಿರುತ್ತದೆ; ಏಕೆಂದರೆ ವಿಷಯಗಳೂ ಇಂದ್ರಿಯಗಳೂ ವಿಕಾರವನ್ನು ಹೊಂದುತ್ತಲೇ ಇರುತ್ತವೆ ಆ ಎರಡೂ ಸೇರಿರುವದರಿಂದಾಗುವ ಸುಖವು ಎಷ್ಟುಕಾಲ ವಿದ್ದೀತು ? ಇದಲ್ಲದೆ ಆ ಭೋಗಗಳು 'ದುಃಖಯೋನಯ ಏವ' ದುಃಖಕ್ಕೇ ಕಾರಣವಾಗಿರುತ್ತವೆ ಎಂದು ಭಗವಂತನು ಹೇಳಿರುತ್ತಾನೆ. ಆದರೆ ಇಲ್ಲಿ ಬ್ರಹ್ಮವೇ ಪರಮಾನಂದಸ್ವರೂಪವಾಗಿರುವದರಿಂದ ಯೋಗದಿಂದಾದ ಬ್ರಹ್ಮಸಂಸ್ಪರ್ಶದ ಸುಖವು ಕೊನೆಗಾಣುವ ಅಂಜಿಕೆಯೇ ಇರುವದಿಲ್ಲ. ಇತರ ಅನಾತ್ಮಗಳ ಸಂಸ್ಪರ್ಶವು ತಪ್ಪಿತೆಂದರೆ ಕೂಡಲೆ ಬೇಸಗೆಯಲ್ಲಿ ಮಂಜುಗಡ್ಡೆಯನ್ನು ತಿಂದಾಗ ಆಗುವ ತಂಪಿನ ಸುಖದ ವೇದನೆಯಂತೆ ಬ್ರಹ್ಮಾನಂದದ ಸವಿಯು ಹತ್ತುತ್ತದೆ.

ಇದು ಬರಿಯ 'ಪಾತಂಜಲಯೋಗ'ವೆಂದು ತಿಳಿಯಬಾರದು. ಆ ಯೋಗದಲ್ಲಿ ಚಿತ್ತವೃತ್ತಿಗಳನ್ನೆಲ್ಲ ತಡೆಗಟ್ಟಿ ಏಕಾಗ್ರತೆಯಿಂದ ಸಮಾಧಾನವನ್ನು ಪಡೆಯಲಾಗಿ ಆತ್ಮನು ಚಿತ್ತಕ್ಕಿಂತ ಬೇರೆಯಾಗಿರುವನೆಂಬ ಅರಿವು ಉಂಟಾಗುತ್ತದೆ. ಚಿತ್ತವೂ ಚಿತ್ತೂ ಒಂದಕ್ಕಿಂತ ಒಂದು ಬೇರೆ- ಎಂಬ ಬುದ್ಧಿಯುಂಟಾದರೆ ಆ ಯೋಗದ ಕೊನೆಯನ್ನು ಮುಟ್ಟಿದಂತೆ ಆಯಿತು. ಇಲ್ಲಿಯಾದರೊ,

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ |
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ || ಗೀ. ೬-೨೯.

ಎಲ್ಲಾ ಪ್ರಾಣಿಗಳಲ್ಲಿಯೂ ನನ್ನ ಆತ್ಮನೇ ಆತ್ಮನಾಗಿರುತ್ತಾನೆ; ಎಲ್ಲಾ ಪ್ರಾಣಿಗಳೂ ಆತ್ಮನನ್ನೇ ಅವಲಂಬಿಸಿಕೊಂಡಿರುತ್ತವೆ- ಎಂಬ ಬ್ರಹ್ಮಾತ್ಮೈಕತ್ವದರ್ಶನವು ಧ್ಯಾನಯೋಗಿಗೆ ಲಭಿಸುತ್ತದೆ. ಇಲ್ಲಿ ನಮ್ಮ ಆತ್ಮನು ಇಲ್ಲವಾಗುವದಿಲ್ಲ; ಅವನೇ ಎಲ್ಲಕ್ಕೂ ಆತ್ಮನೆಂಬ ಅರಿವು ಅನುಭವದಲ್ಲಿ ಮಿಂಚುತ್ತದೆ.

ಧ್ಯಾನಯೋಗವೆಂಬುದೊಂದು ವೇದಾಂತೋಪದಿಷ್ಟವಾದ ಕಲೆ. ನಾನೆಂಬುದನ್ನು ಆತ್ಮನಲ್ಲಿ ಕರಗಿಸಿಕೊಂಡು ಸರ್ವಕ್ಕೂ ತಿರುಳಾಗಿರುವ ಬ್ರಹ್ಮಾನಂದವನ್ನು ಯಾರುಬೇಕಾದರೂ ತಕ್ಕ ಸಾಧನವನ್ನು ಅಳವಡಿಸಿಕೊಂಡು ಪ್ರಯತ್ನಪೂರ್ವಕವಾಗಿ ಪಡೆದುಕೊಳ್ಳಬಹುದಾಗಿದೆ.

---

# ೪೧. ಸಂನ್ಯಾಸ

(29-೩-62)

ಕರ್ಮಯೋಗದಲ್ಲಿ ಯೋಗ, ಸಂನ್ಯಾಸ- ಎಂಬ ಎರಡಂಶಗಳೂ ಅಡಕ ವಾಗಿವೆ.

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ |
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ||

ಗೀ. ೬-೧

'ಕರ್ಮಫಲವನ್ನು ಆಶ್ರಯಿಸದೆ ಮಾಡಬೇಕಾದ ಕರ್ಮವನ್ನು ಯಾವನು ಮಾಡುತ್ತಿರುವನೋ ಅವನು ಸಂನ್ಯಾಸಿಯೂ ಯೋಗಿಯೂ ಆಗಿರುತ್ತಾನೆ' ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡುತ್ತಾ ಫಲತ್ಯಾಗವನ್ನು ಮಾಡಿರುವದರಿಂದ ಅವನು ಸಂನ್ಯಾಸಿ; ಚಿತ್ತಸಮಾಧಾನವುಳ್ಳವನಾಗಿರುವದ ರಿಂದ ಅವನು ಯೋಗಿ-ಎಂದು ಕರ್ಮಯೋಗವನ್ನು ಹೊಗಳಿರುತ್ತದೆಯಷ್ಟೆ? ಕರ್ಮಯೋಗವು ಯಾವ ಧ್ಯಾನಯೋಗಕ್ಕೆ ಬಹಿರಂಗವಾಗಿರುವದರಿಂದ ತಾನೂ ಯೋಗವೆನಿಸಿಕೊಂಡಿರುವದೋ ಆ ಧ್ಯಾನಯೋಗವನ್ನು ವಿವರಿಸಿದ್ದರಿಂದ "ಯೋಗ"ಶಬ್ದಾರ್ಥದ ವ್ಯಾಪಕತ್ವವನ್ನು ತೋರಿಸಿಕೊಟ್ಟದ್ದಾಯಿತು. ಈಗ 'ಸಂನ್ಯಾಸಶಬ್ದಾರ್ಥ'ವನ್ನು ಕುರಿತು ವಿಚಾರಮಾಡಬೇಕು.

ಯೋಗವೆಂಬ ಶಬ್ದಕ್ಕೆ ಆಸನಪ್ರಾಣಾಯಾಮಾದಿಗಳನ್ನು ಮಾತ್ರ ಅರ್ಥ ವಾಗಿ ಇಟ್ಟುಕೊಳ್ಳುವಂತೆಯೇ ಸಂನ್ಯಾಸಶಬ್ದಕ್ಕೂ ಶಿರೋಮುಂಡನ, ಕಾವಿಯ ಬಟ್ಟೆ, ದಂಡಕಮಂಡಲ್ವಾದಿಗಳನ್ನು ಧರಿಸುವದು-ಇಷ್ಟೇ ಅರ್ಥವೆಂದು ಜನರು ತಪ್ಪಾಗಿ ಇಟ್ಟುಕೊಂಡಿರುವದು ಕಂಡುಬರುತ್ತದೆ. ಆದ್ದರಿಂದ ಸಂನ್ಯಾಸವೆಂದ ರೇನೆಂಬುದನ್ನು ಸರಿಯಾಗಿ ತಿಳಿದುಕೊಳ್ಳುವದು ಅವಶ್ಯವಾಗಿರುತ್ತದೆ. ಸರಿಯಾಗಿ ನೋಡಿದರೆ ಸಂನ್ಯಾಸವೆಂಬುದನ್ನು ಅರಿತರೆ ಸರ್ವವೇದಾಂತದ ಸಾರವನ್ನೂ ಗ್ರಹಿಸಿದಂತೆ ಆಗುತ್ತದೆ. ಕಾಷಾಯವಸ್ತ್ರವನ್ನೂ ಮುಂಡನವನ್ನೂ ಅಂತರಂಗದಲ್ಲಿ ಮಾಡಿರುವ ಸಂನ್ಯಾಸಕ್ಕೆ ಜ್ಞಾಪಕವಾಗಿ ಉಪಯೋಗಿಸಿಕೊಳ್ಳಬಹುದು; ಆದರೆ ಕಾಷಾಯಾದಿಗಳೇ ಸಂನ್ಯಾಸವೆಂಬ ಹುಚ್ಚುಕಲ್ಪನೆಯನ್ನು ನಾವು ಎಷ್ಟು ಬೇಗನೆ ಬಿಟ್ಟರೆ ಅಷ್ಟು ಒಳ್ಳೆಯದು. ಉತ್ತರದೇಶದಲ್ಲಿ ಒಂದಾನೊಂದು ಪ್ರಸಿದ್ಧವಾದ ಸಂನ್ಯಾಸಾಶ್ರಮದ ಅಧ್ಯಕ್ಷರಲ್ಲಿ ಒಮ್ಮೆ ಒಬ್ಬನು ಬಂದು 'ಸ್ವಾಮಿ, ನನಗೊಂದು ಕಾಷಾಯವಸ್ತ್ರವನ್ನು ಕೊಡಿಸಿ' ಎಂದು ಕೇಳಿಕೊಂಡನಂತೆ. 'ನಿನಗೆ ಅದರಿಂದೇ ನಾಗಬೇಕು?' ಎಂದು ಸ್ವಾಮಿಗಳು ಕೇಳಿದ್ದಕ್ಕೆ 'ಆಕಡೆ ಕಾಷಾಯವಸ್ತ್ರವಿದ್ದವರಿಗೆ ಮಾತ್ರ ರೊಟ್ಟಿಯನ್ನು ಕೊಡುತ್ತಾರೆ; ಆದ್ದರಿಂದ ನನಗೂ ಕಾಷಾಯವಸ್ತ್ರವು

ಅವಶ್ಯವಾಗಿದೆ' -ಎಂದು ಅವನು ಹೇಳಿದನಂತೆ ' ಸ್ವಾಮಿಗಳು ನಕ್ಕು 'ನಿನಗೆ ನಾನು ಇಲ್ಲಿಯೇ ರೊಟ್ಟಿಯನ್ನು ಕೊಡಿಸಿದರೆ ಆಯಿತೊ, ಇಲ್ಲವೊ ? ಕಾಷಾಯ ವೇಕೆ?' ಎಂದರಂತೆ ! ಹೇಗಿದೆ, ಕಾಷಾಯವಸ್ತ್ರಕ್ಕೆ ಜನರು ಕೊಟ್ಟಿರುವ ಬೆಲೆ ! ಒಮ್ಮೆ ಜನಕರಾಯನು 'ನಾನು ಮುಂಡನವನ್ನು ಮಾಡಿಸಿಕೊಂಡು ಕಾಷಾಯ ವಸ್ತ್ರವನ್ನು ಧರಿಸುವೆನು' ಎಂದು ಸೂಚಿಸಿದಾಗ ಅವನ ಪತ್ನಿಯು ಕ್ಷತ್ರಿಯರಿಗೆ ದಂಡವೇ ಮುಖ್ಯ, ಮುಂಡನವಲ್ಲ ; ಅನಿಷ್ಕಷಾಯನಾದವನಿಗೆ ಕಾಷಾಯ ವೆಂಬುದು ಜೀವನಾರ್ಥವಾದ ವ್ಯಾಪಾರಕ್ಕಾದೀತೇ ಹೊರತು ಮತ್ತೇತಕ್ಕೂ ಬಾರದು' ಎಂದು ಎಚ್ಚರಿಸಿದಳಂತೆ. ಕಷಾಯವು ಕರ್ಮಗಳಿಂದ ಪಕ್ವವಾಗಲು ಆ ಬಳಿಕ ಜ್ಞಾನವುಂಟಾಗುತ್ತದೆ; ಅದರ ಚಿಹ್ನೆಯಾಗಿ ನಿಜವಾದ ಪರಿವ್ರಾಜಕರು ಕಾಷಾಯವನ್ನು ಧರಿಸುತ್ತಾರೆ. ಅವರಿಗೆ 'ನನ್ನದು' ಎಂಬುದು ಏನೂ ಇಲ್ಲ ವಾದ್ದರಿಂದ ಅವರು ಭಿಕ್ಷಾಶನದಿಂದ ಸ್ವಸ್ಥರಾಗಿ ಅಲ್ಲಲ್ಲಿ ಸಂಚರಿಸುತ್ತಿರುತ್ತಾರೆ 'ಭಿಕ್ಷಾಶನಾ ದಿಕ್ಷು ಪರಿಭ್ರಮನ್ತಃ' ಎಂಬ ಉಕ್ತಿಗೆ ಇದೇ ಅರ್ಥವೇ ಹೊರತು ಹೊಟ್ಟೆಯನ್ನು ಹೊರೆದುಕೊಳ್ಳುವದಕ್ಕೆ ಭಿಕ್ಷೆಯನ್ನು ಮಾಡುತ್ತಾ 'ನಿಮ್ಮ ವೃತ್ತಿ ಯೇನು ?' ಎಂದರೆ 'ಭಿಕ್ಷಾವೃತ್ತಿ' ಎನ್ನುವ ಸೋಮಾರಿಗಳವರು ಎಂದೇನೂ ಅಭಿಪ್ರಾಯವಲ್ಲ. ವಾನಪ್ರಸ್ಥರು ಕೆಲವರು ಪರ್ಣಾಶನರಾಗಿ ಅಥವಾ ವಾತಾಶನ ರಾಗಿರುತ್ತಾರೆ ; ನಾವೂ ಸೊಪ್ಪಿನ ಪಲ್ಯವನ್ನು ತಿನ್ನುವದರಿಂದ ಪರ್ಣಾಶನರೆನಿಸಿ ಕೊಂಡೇವೇನು ? ಉಸಿರಾಡುವದಕ್ಕೆ ಗಾಳಿಯನ್ನು ಸೇವಿಸುವದರಿಂದ 'ವಾತಾಶನ'ರಾದೇವೇನು ? ಹೀಗೆಯೇ, ನಾಳೆಗೆ ಊಟಕ್ಕೇನು ? – ಎಂಬ ಚಿಂತೆಯಿಲ್ಲದೆ ಪರಮಾತ್ಮಚಿಂತೆಯಲ್ಲಿಯೇ ಕಾಲವನ್ನು ಕಳೆಯುತ್ತಾ ಇರುವ ಭಿಕ್ಷಾಶನರಾದ ಪರಮಾರ್ಥಸಂನ್ಯಾಸಿಗಳೆಲ್ಲಿ, ನಾಚಿಕೆಯನ್ನು ಬಿಟ್ಟು ಮನೆ ಮನೆಗೂ ಅಲೆಯುತ್ತಾ ಭಿಕ್ಷಾವೃತ್ತಿಯಿಂದಲೇ ಜೀವನವನ್ನು ಸಾಗಿಸುವದಕ್ಕೆ ಹೊರಡುವ ಭಿಕಾರಿಗಳೆಲ್ಲಿ !

ಸಂನ್ಯಾಸ, ತ್ಯಾಗ– ಎಂಬ ಶಬ್ದಗಳಿಗೆ ಸರ್ವಕರ್ಮತ್ಯಾಗ, ಸರ್ವಕಾಮತ್ಯಾಗ ಎಂಬುದೇ ನಿಜವಾದ ಅರ್ಥ. 'ತ್ಯಾಗೇನೈಕೇ ಅಮೃತತ್ವಮಾನಶುಃ' ಎಂಬ ಶ್ರುತಿ ಯಲ್ಲಿ ಹೇಳಿರುವ ತ್ಯಾಗದ ಆಳವನ್ನು ಅರಿತುಕೊಳ್ಳಬೇಕು. ಇದೇ ಗೀತೆಯಲ್ಲಿ ನಿರ್ಣಯಿಸಿರುವ ಪ್ರಧಾನಾರ್ಥ. ಭಗವದ್ಗೀತೆಯ ಕೊನೆಯ ಅಧ್ಯಾಯದಲ್ಲಿ ಅರ್ಜುನನು ಸಂನ್ಯಾಸತ್ಯಾಗಗಳ ತತ್ತ್ವವನ್ನು ಮತ್ತೂ ಹೇಳೆಂದು ಕೇಳಿರುವದೇಕೆ ?– ಎಂದರೆ ಭಗವಂತನು ಬಗೆಬಗೆಯ ಸಂನ್ಯಾಸವನ್ನು ಅಲ್ಲಲ್ಲ ಹೇಳಿರುತ್ತಾನೆ. ಮುಮುಕ್ಷುವಾದವನು ಕಾಮ್ಯಕರ್ಮಗಳನ್ನು ಬಿಡುವದು, ನಿತ್ಯಕರ್ಮವನ್ನು ಮಾಡಿ ಸಂಗತ್ಯಾಗಫಲತ್ಯಾಗಗಳನ್ನು ಮಾಡುವದು, ಕರ್ಮತ್ಯಾಗವನ್ನು ಮಾಡಿ ಧ್ಯಾನಯೋಗವನ್ನು ಮಾಡುವದು, ಜ್ಞಾನದಿಂದ ನೈಷ್ಕರ್ಮ್ಯವನ್ನು ಪಡೆದು

ಕೊಳ್ಳುವದು– ಇವೆಲ್ಲವೂ 'ಸಂನ್ಯಾಸ'ವೇ. ಆದ್ದರಿಂದ ಸಂನ್ಯಾಸದ ತತ್ತ್ವವೇನು ? ಹೇಗೆ ನಡೆದುಕೊಂಡರೆ ಸಂನ್ಯಾಸವನ್ನು ಮಾಡಿದಂತಾಯಿತು ? –ಎಂದು ಅರ್ಜುನನು ಕೇಳಿರುತ್ತಾನೆ.

ಯಾರು ತ್ಯಾಗವನ್ನು ಮಾಡಬಲ್ಲರೋ ಅವರಿಗೇ ವೇದಾಂತಸಾರವಾಗಿರುವ ಗೀತಾರ್ಥವು ಸರಿಯಾಗಿ ತಿಳಿದೀತು ; ಯಾರುಯಾರು ಎಷ್ಟರಮಟ್ಟಿಗೆ ತ್ಯಾಗಿಗಳಾಗುವರೋ ಅವರವರಿಗೆ ಅಷ್ಟಷ್ಟುಮಟ್ಟಿಗೆ ಆತ್ಮನ ಸರಿಯಾದ ಜ್ಞಾನವು ಲಭಿಸುವದು. ಆತ್ಮಜ್ಞರಲ್ಲದವರು ಮೊಟ್ಟಮೊದಲು ಕಾಮ್ಯಕರ್ಮಗಳನ್ನು ಬಿಡಬೇಕು; 'ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ' ಕಾಮ್ಯಕರ್ಮಗಳನ್ನು ಬಿಡುವದನ್ನು ಬಲ್ಲವರು ಸಂನ್ಯಾಸವೆಂದೆಣಿಸುತ್ತಾರೆ. ಕಾಮಕಾಮಿಗಳಿಗೆ ಬಹಿರ್ವಿಷಯಗಳ ಸೆಳೆತವೇ ಬಲವಾಗಿರುವಲ್ಲಿ ಆತ್ಮಜ್ಞಾನವೆಲ್ಲಿಯದು ? ಆದರೂ ನಿಷಿದ್ಧಕರ್ಮವನ್ನು ಮಾಡಿ ಕಾಮಗಳನ್ನು ಪರಿಪೂರ್ತಿ ಮಾಡಿಕೊಳ್ಳುವದಕ್ಕೆಳಸುವವರಿಗಿಂತ ಇವರು ಮೇಲು. ಇಂಥವರಿಗಾಗಿ ಕಾಮ್ಯಕರ್ಮವನ್ನು ವೇದದಲ್ಲಿ ಹೇಳಿರುತ್ತದೆ.

> ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ
> ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯನ್ತೇ |
> ತೇ ಪುಣ್ಯಮಾಸಾದ್ಯ ಸುರೇನ್ದ್ರಲೋಕ-
> ಮಶ್ನನ್ತಿ ದಿವ್ಯಾನ್ ದಿವಿ ದೇವಭೋಗಾನ್ || ಗೀ. ೯–೨೦.

ಯಜ್ಞಗಳನ್ನು ಮಾಡಿ ದೇವತೆಗಳನ್ನುದ್ದೇಶಿಸಿ ಸ್ವತ್ವತ್ಯಾಗವನ್ನು ಮಾಡುವದರಿಂದ ಪಾಪಗಳಿಂದ ಬಿಡುಗಡೆಯಾಗುತ್ತದೆ. ಹೀಗೆಯೇ ದಾನಾದಿಗಳಿಂದಲೂ ತ್ಯಾಗವನ್ನು ಅಭ್ಯಾಸಮಾಡಿ ಪವಿತ್ರರಾಗಬೇಕು. ಕಾಮ್ಯಕರ್ಮವನ್ನು ಬಿಟ್ಟು ನಿತ್ಯನೈಮಿತ್ತಿಕಕರ್ಮಗಳನ್ನು ಮಾತ್ರ ಮಾಡುತ್ತಿದ್ದರೆ ಅಜ್ಞಾತಪಾಪಗಳುಕೂಡ ಹೋಗುತ್ತವೆ. ನಿತ್ಯಕರ್ಮಕ್ಕೂ ಫಲವಿರುವದರಿಂದ ಸಂಗವನ್ನು ಬಿಟ್ಟು ಫಲಾಭಿಸಂಧಿಯಿಲ್ಲದೆ ಅದನ್ನು ಮಾಡುವದರಿಂದ ಚಿತ್ತಶುದ್ಧಿಯು ದೊರಕುತ್ತದೆ. ಧ್ಯಾನಯೋಗಕ್ಕೆ ಅರ್ಹನಾದವನೂ ಕರ್ಮತ್ಯಾಗವನ್ನು ಮಾಡಿ ಪರಮಾತ್ಮಚಿಂತನೆಯಲ್ಲಿಯೇ ನಿರತನಾಗುತ್ತಾನೆ.

ಕರ್ಮಸಂನ್ಯಾಸವನ್ನು ಮಾಡಿ ವಿಷಯಧ್ಯಾನವನ್ನು ಮಾಡುತ್ತಿರುವವರು ಮಿಥ್ಯಾಚಾರಿಗಳು, ನಿಜವಾದ ಸಂನ್ಯಾಸಿಗಳಲ್ಲ ; ಧ್ಯಾನಯೋಗಕ್ಕೆ ಅರ್ಹರಲ್ಲದವರು ಕರ್ಮವನ್ನು ಬಿಟ್ಟು ಉಭಯಭ್ರಷ್ಟರಾದಾರು. ಆದ್ದರಿಂದಲೇ ಭಗವಂತನು ಅಂಥವರಿಗೆ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಮೇಲು ಎಂದು ಹೇಳಿರುತ್ತಾನೆ. ಈಗ ಕೆಲವು ಆಶ್ರಮಗಳಲ್ಲಿ ಸಂನ್ಯಾಸದೀಕ್ಷೆಯನ್ನು ಕೊಡುವ ದಿನವೆಂತ ಒಂದೊಂದು ದಿನವನ್ನು ಗೊತ್ತುಮಾಡಿ ಜನರಿಗೆ ತುರೀಯಾಶ್ರಮ

ಸ್ವೀಕಾರವನ್ನು ಮಾಡಿಸುತ್ತಾರೆ; ಕೆಲವರಂತೂ ದೂರದಿಂದಲೇ ತಂತಿಯಮೂಲಕ ವೂ ಆಶ್ರಮಸ್ವೀಕಾರಕ್ಕೆ ಅನುಜ್ಞೆ ಕೊಡುತ್ತಾರೆಂತ ಕೇಳಿರುತ್ತೇನೆ! ಸಂನ್ಯಾಸ ವೆಂಬುದೊಂದು ಬಗೆಯ ಕರ್ಮವೆಂದು ಭಾವಿಸಬಾರದು. "ಸಂನ್ಯಾಸ"ವೆಂಬ ಶಬ್ದಕ್ಕೆ ಬಿಡುವದು ಎಂದು ಅರ್ಥ. ಎಷ್ಟೋ ಜನರು ಸಂನ್ಯಾಸಸ್ವೀಕಾರವೆಂಬು ದೊಂದು ಗೌರವಸಂಪಾದನೆಗೆಂದು ಹಾಕಿಕೊಳ್ಳುವ ವೇಷವೆಂದು ಭಾವಿಸಿರುವಂತೆ ತೋರುತ್ತದೆ. ಮತ್ತೆ ಕೆಲವರು ಸಾಲಸೋಲಗಳ ಬಾಧಾನಿವಾರಣೆಗಾಗಿ, ಕೆಲವು ಕ್ರಿಮಿನಲ್ ಅಪರಾಧವನ್ನು ಮಾಡಿ ವೇಷಾಂತರದಿಂದ ತಲೆಮರೆಸಿಕೊಳ್ಳುವದ ಕ್ಕಾಗಿ, ಅಥವಾ ಕುಟುಂಬದಲ್ಲಿ ಹೊಂದುಗೆಯ ಸೌಖ್ಯವು ಸಿಕ್ಕದೆ ಆಶ್ರಮ ಸ್ವೀಕಾರಮಾಡುವದೂ ಉಂಟು. ಇವುಗಳಲ್ಲಿ ಯಾವದೊಂದೂ ನಿಜವಾದ ಸಂನ್ಯಾಸವಾಗಲಾರದು. 'ವೇದಸಂನ್ಯಸನಾಚ್ಛೂದ್ರಃ' ಬ್ರಾಹ್ಮಣನಾದವನು ವೇದವನ್ನಾಗಲಿ ವೇದೋಕ್ತಕರ್ಮವನ್ನಾಗಲಿ ಸಂನ್ಯಾಸಮಾಡಿದರೆ ಶೂದ್ರನಾಗು ತ್ತಾನೆಂದು ಸ್ಮೃತಿಯಿದೆ. ಕರ್ಮದಿಂದಾಗಬೇಕಾದ ಫಲದಲ್ಲಿ ವಿರಕ್ತಿಯುಂಟಾ ದದ್ದರಿಂದ ಮಾತ್ರವೇ ಭಗವಂತನ ಧ್ಯಾನಕ್ಕೆಂದೇ ಕರ್ಮಸಂನ್ಯಾಸವನ್ನು ಮಾಡ ತಕ್ಕದ್ದು. ಮುಮುಕ್ಷುಗಳಾಗದವರು ಬಿಡತಕ್ಕದ್ದೇ ಅಲ್ಲದೆ, ಹಿಡಿಯತಕ್ಕ ಧರ್ಮವೂ ಇದೆ ಅದಕ್ಕೆ ನಿವೃತ್ತಿಧರ್ಮವೆಂದು ಹೆಸರು. ಆದಕ್ಕೆ ಯೋಗ್ಯತೆ ಇಲ್ಲದವರು ಆದಕ್ಕೆ ಬಹಿರಂಗವಾದ ಕರ್ಮಯೋಗವನ್ನು ಮಾಡುವದೇ ಶ್ರೇಯ ಸ್ಕರ; ಏಕೆಂದರೆ ಕರ್ಮಯೋಗದಲ್ಲಿ ಹಿಂದೆ ಹೇಳಿರುವಂತೆ ಸಂನ್ಯಾಸದ ಅಂಶವೂ ಇರುವದರಿಂದ ಪರಮಾರ್ಥಸಂನ್ಯಾಸಕ್ಕೆ ಅದು ಉಪಾಯವೇ ಆಗಿರುತ್ತದೆ.

> ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಙ್ಕ್ಷತಿ |
> ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬನ್ಧಾತ್ ಪ್ರಮುಚ್ಯತೇ ||
> ಗೀ. ೫-೩

ರಾಗದ್ವೇಷಗಳನ್ನು ಬಿಟ್ಟು ಇರುವವನೇ ನಿತ್ಯಸಂನ್ಯಾಸಿಯು; ಆದ್ದರಿಂದ ಕರ್ಮಯೋಗಿಯೂ ಈ ಅರ್ಥದಲ್ಲಿ ಸಂನ್ಯಾಸಿಯೇ ಆಗಿರುತ್ತಾನೆ. ನಾಮ ಮಾತ್ರಕ್ಕೆ ಸಂನ್ಯಾಸಿಯಾಗಿ ಇಂಥಿಂಥ 'ಆನಂದ' ಎಂದು ಹೆಸರಿಟ್ಟುಕೊಂಡು ಈಗಿ ನವರಿಗೆ ಮೆಚ್ಚಾಗುವಂತೆ ಕಷಾಯದ ಜುಬ್ಬ ಅಥವಾ ನಿಲುವಂಗಿ, ಬೂಟ್ಸು, ಕೊಡೆ ಮುಖಕ್ಷೌರ–ಮುಂತಾದ ನವೀನವೇಷವನ್ನು ಧರಿಸಿಕೊಳ್ಳುವವರಿಗಿಂತ ಕರ್ಮಯೋಗಿಗಳಾಗಿ ಮುಮುಕ್ಷುಗಳಾಗಿರುವವರು ಸಾವಿರಪಾಲಿಗೆ ಮೇಲು.

ಆದರೆ ಧ್ಯಾನಯೋಗಕ್ಕೆ ಬೇಕಾದ ಯಮನಿಯಮಾದಿಗಳನ್ನು ಆಚರಿಸು ವದಕ್ಕೆ ಶಕ್ತರಾಗಿರುವವರು ಕರ್ಮತ್ಯಾಗವನ್ನು ಮಾಡುವದು ಸರಿಯಲ್ಲವೆಂಬುದೇ ನನ್ನ ಅಭಿಪ್ರಾಯವೆಂತ ಯಾರೂ ಕಲ್ಪಿಸಬಾರದು. ಯಾರು ವಿರಕ್ತರಾಗಿರು ವರೋ ಅವರು ವಿರಕ್ತಿಯುಂಟಾದ ದಿನವೇ ಪಾರಿವ್ರಾಜ್ಯಸ್ವೀಕಾರವನ್ನು ಮಾಡ

ಬೇಕೆಂತ ಶ್ರುತಿಯು ಹೇಳುತ್ತದೆ. ಅಂಥವರಿಗೆ ಜ್ಞಾನಪ್ರಾಪ್ತಿಗೆಂದು ಮಾಡುವ ವಿವಿದಿಷಾಸಂನ್ಯಾಸವೇ ಧ್ಯಾನಯೋಗದ ದ್ವಾರದಿಂದ ಶ್ರೇಯಃಪ್ರಾಪ್ತಿಗೆ ಕಾರಣವಾಗುವದು.

---

## ೪೨. ಪರಮಾರ್ಥಸಂನ್ಯಾಸ

(30–8–62)

ಆತ್ಮಜ್ಞಾನವಿಲ್ಲದ ಮುಮುಕ್ಷುಗಳು ಮಾಡುವ ಕರ್ಮಯೋಗದಲ್ಲಿ ಫಲತ್ಯಾಗರೂಪವಾದ ಸಂನ್ಯಾಸಾಂಶವಿದೆ ಎಂದೂ ಧ್ಯಾನಯೋಗಕ್ಕೆ ತಕ್ಕ ಯೋಗ್ಯತೆಯಿರುವವರು ಮಾಡುವ ಕರ್ಮಸಂನ್ಯಾಸವು ಶಮದಮಾದಿನಿವೃತ್ತಿಧರ್ಮದ ಸಂಗಡವೇ ಇರಬೇಕೆಂದೂ ತಿಳಿದುಕೊಂಡದ್ದಾಯಿತಷ್ಟೆ? ಈ ಫಲಸಂನ್ಯಾಸ ಮತ್ತು ವಿವಿದಿಷಾಸಂನ್ಯಾಸ– ಎರಡೂ ಗೌಣಸಂನ್ಯಾಸಗಳೇ. ಮುಖ್ಯಸಂನ್ಯಾಸದ ಮರ್ಮವು ಬೇರೆಯಿದೆ.

> ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ |
> ಅಹಙ್ಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ||
> ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ |
> ಗುಣಾ ಗುಣೇಷು ವರ್ತನ್ತ ಇತಿ ಮತ್ವಾ ನ ಸಜ್ಜತೇ ||
>
> ಗೀ. ೩–೨೭, ೨೮

ಜೀವನಿಗೆ ಕರ್ಮಸಂಗವು ಹೇಗೆ ಆಗುತ್ತದೆ; ಕರ್ಮಬಂಧದಿಂದ ಅವನು ನರಳುವದಕ್ಕೆ ಏನು ಕಾರಣ?–ಎಂಬ ಪ್ರಶ್ನೆಗೆ ಸಾಂಖ್ಯದರ್ಶನಗುಣತ್ರಯವಿಚಾರವನ್ನು ಮನದಂದುಕೊಳ್ಳಬೇಕಾಗುತ್ತದೆ ನಿದ್ರಾಲಸ್ಯಾದಿದೋಷಗಳು ತಮೋಗುಣದ, ಕಾಮಕ್ರೋಧಾದಿಗಳೂ ಕರ್ಮವೂ ರಜೋಗುಣದ, ಮತ್ತು ಜ್ಞಾನಸುಖಾದಿಗಳು ಸತ್ತ್ವಗುಣದ ಕಾರ್ಯಗಳು. ಇದನ್ನು ಆಗಲೆ ಹಿಂದೆ (೨೬ನೆಯ ಉಪದೇಶದಲ್ಲಿ) ವಿವರಿಸಲಾಗಿದೆ. ಈ ಮೂರು ಗುಣಗಳು ಶರೀರೇಂದ್ರಿಯಮನಸ್ಸುಗಳಾಗಿ ಪರಿಣಮಿಸಿರುತ್ತವೆ; ಅವಿವೇಕದಿಂದ ಅವುಗಳನ್ನು ನಾನು ಎಂದುಕೊಂಡಿರುವ ಅಭಿಮಾನವೇ 'ನಾನು ಕರ್ತೃ' ಎಂಬ ಮಿಥ್ಯಾಜ್ಞಾನಕ್ಕೆ ಕಾರಣವಾಗಿರುತ್ತದೆ. ಜ್ಞಾನೇಂದ್ರಿಯಗಳಲ್ಲಿಯೂ ಕರ್ಮೇಂದ್ರಿಯಗಳಲ್ಲಿಯೂ ನಾನು ಎಂಬ ಬುದ್ಧಿಯುಂಟಾಗಿರುವದರಿಂದ ಆ ಇಂದ್ರಿಯಗಳು ವಿಷಯಗಳಲ್ಲಿ ತೊಡಗುವದನ್ನು ತನ್ನ ಕಾರ್ಯವೆಂದೇ ಮೋಹಿತನಾಗುತ್ತಾನೆ. ನಿಜವಾಗಿ

ನೋಡಿದರೆ ಹೊರಗಿನ ವಿಷಯಗಳು ಈ ಗುಣಗಳ ಕಾರ್ಯವೇ, ಒಳಗಿನ ದೇಹೇಂದ್ರಿಯಮನಸ್ಸುಗಳೂ ಈ ಗುಣಗಳ ಕಾರ್ಯವೇ, ಈ ಒಂದೊಂದು ಇಂದ್ರಿಯದ ವ್ಯಾಪಾರವನ್ನೂ ತನ್ನದೆಂದು ತಿಳಿದಿರುವದರಿಂದ ಜೀವನು ಬದ್ಧನಾಗಿರುತ್ತಾನೆ. ವಿವೇಕಿಯಾದವನಿಗೆ- ನೀರಿನಲ್ಲಿರುವ ಅಲೆಗಳು ಒಂದರಮೇಲೊಂದು ಬಿದ್ದರೆ ನಮಗೇನಾಯಿತು? ಹಾಗೆಯೇ ಇಂದ್ರಿಯರೂಪವಾಗಿರುವ ಗುಣಗಳು ವಿಷಯಗಳ ರೂಪವಾಗಿರುವ ಗುಣಗಳ ಮೇಲೆ ಬಿದ್ದರೆ ನನಗೇನಾಯಿತು ?-ಎಂಬ ಅಸಂಗತ್ವದ ಅರಿವಾಗಿರುತ್ತದೆ. ವಿಷಯಗಳ ಸಂನಿಧಿಯಲ್ಲಿ ಇಂದ್ರಿಯಗಳು ಬಗೆಬಗೆಯ ವಿಕಾರವನ್ನೈದುತ್ತಿರುವವು. ಆದರೆ ಈ ಪ್ರಪಂಚದಲ್ಲಿ ಭೂಮಿಯಮೇಲಾಗಲಿ ಅಂತರಿಕ್ಷದಲ್ಲಾಗಲಿ ಸ್ವರ್ಗದಲ್ಲಾಗಲಿ ಈ ಮೂರು ಗುಣಗಳ ವಿಕಾರವಲ್ಲದ್ದು ಯಾವದು ತಾನೆ ಇದೆ ? ಆದ್ದರಿಂದ ಇಂದ್ರಿಯಗಳು ವಿಷಯಗಳಲ್ಲಿ ವರ್ತಿಸಿದರೆ ನನಗೇನೂ ಆಗಿರುವದಿಲ್ಲ. ನನಗೆ ಕರ್ತೃತ್ವವಾಗಲಿ ಭೋಕ್ತೃತ್ವವಾಗಲಿ ನಿಜವಾಗಿರುವದೇ ಇಲ್ಲ ಎಂಬ ವಿವೇಕವನ್ನು ಹೊಂದಿದವರಿಗೆ ಗುಣಗಳಲ್ಲಿ ಸಂಗವಾಗುವದಿಲ್ಲ.

ಇದುವರೆಗೂ ವರ್ಣಿಸಿರುವದು ಸಾಂಖ್ಯದರ್ಶನದ ಪ್ರಕ್ರಿಯೆಯನ್ನು ಅವಲಂಬಿಸಿದೆ. ವೇದಾಂತಿಗಳ ದೃಷ್ಟಿಯಲ್ಲಿಯೊ, ಎಂದರೆ, ಇಂದ್ರಿಯಗಳಾಗಲಿ, ವಿಷಯಗಳಾಗಲಿ- ವಿಷಯಗಳ ಸಂಬಂಧದಿಂದ ಇಂದ್ರಿಯಗಳಲ್ಲಾಗುವ ವಿಕಾರಗಳಾಗಲಿ ನಿಜವಾಗಿರುವದೇ ಇಲ್ಲ. ಅವೆಲ್ಲ ಅವಿದ್ಯಾವಿಲಾಸಮಾತ್ರವಾಗಿರುತ್ತವೆ. ಅವಿದ್ಯಾಕೃತವಾದ ಅನಾತ್ಮದ ಮತ್ತು ನಿತ್ಯಶುದ್ಧಬುದ್ಧಸ್ವಭಾವನಾದ ಆತ್ಮನ ಪರಸ್ಪರಾಧ್ಯಾಸರೂಪವಾದ ಅವಿದ್ಯೆಯಿಂದಲೇ ಕರ್ತೃತ್ವಭೋಕ್ತೃತ್ವಬುದ್ಧಿಯು ಜೀವನಿಗೆ ಉಂಟಾಗಿರುತ್ತದೆ. ವಿವೇಕಿಗಳ ದೃಷ್ಟಿಯಲ್ಲಿ ಯಾವ ಗುಣದ ಕರ್ಮವೂ ಆತ್ಮನಿಗೆ ಸಂಬಂಧಿಸಿರುವದಿಲ್ಲ; ಯಾವದರ ಕರ್ಮಾಭಾವವೂ ಆತ್ಮನಿಗೆ ಸಂಬಂಧಿಸಿರುವದಿಲ್ಲ.

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ |
ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ||

ಗೀ. ೪-೧೮

ಆತ್ಮನು ಅಕರ್ಮನು, ಕರ್ಮದ ಸಂಬಂಧವು ಒಂದಿಷ್ಟೂ ಇಲ್ಲದವನು, ಕೂಟಸ್ಥನಿತ್ಯನು, ಗುಣದ ಕಾರ್ಯವಾಗಿರುವ ಕಾರ್ಯಕರಣಸಂಘಾತದ ವಿಕಾರಗಳಿಂದಾಗಿರುವ ಕರ್ಮವನ್ನು ಇಂಥ ಆತ್ಮನಲ್ಲಿ ಎಲ್ಲರೂ ಅಧ್ಯಾರೋಪಮಾಡಿಕೊಂಡು 'ನಾನು ಕರ್ತನು" ಎಂದು ತಿಳಿದವರುಕೂಡ ಭ್ರಾಂತರಾಗಿರುತ್ತಾರೆ. ನೋಡುತ್ತೇನೆ, ಕೇಳುತ್ತೇನೆ, ಮೂಸುತ್ತೇನೆ, ಮುಟ್ಟುತ್ತೇನೆ, ಚಿಂತಿಸುತ್ತೇನೆ, ನಿಶ್ಚಯಿಸುತ್ತೇನೆ, ಹೋಗುತ್ತೇನೆ, ಬರುತ್ತೇನೆ- ಎಂದು ಕರ್ಮೇಂದ್ರಿಯಗಳ ಮತ್ತು ಜ್ಞಾನೇಂದ್ರಿಯಗಳ ಕರ್ಮವನ್ನು ಆತ್ಮನಿಗೆ ಅಂಟಿಸಿಕೊಂಡು ಎಲ್ಲರೂ ವ್ಯವಹರಿ

ಸುತ್ತಿರುತ್ತಾರೆ. ರೈಲು ನಡೆಯುತ್ತಿರುವಾಗ ನಾವೇ ಇಂಥಲ್ಲಿಗೆ ಹೋಗುತ್ತಿದೇವೆ ಎಂದು ಜನರು ತಿಂಡುಕೊಳ್ಳುತ್ತಿರುವಂತೆ ಕರ್ಮರಹಿತವಾದ ಆತ್ಮನಲ್ಲಿ ಕರ್ಮ ವನ್ನು ಕಲ್ಪಿಸುವದು ಒಂದು ಭ್ರಾಂತಿ. ಪಕ್ಕದ ರೈಲುಗಾಡಿಯು ಹೋಗುತ್ತಿರು ವಾಗ ನಾವು ಕುಳಿತಿರುವ ರೈಲುಗಾಡಿಯೇ ಹೋಗುತ್ತಿದೆಯೆಂದು ತಿಳಿಯುವದೂ ನಮ್ಮ ಗಾಡಿಯೇ ಹೋಗುತ್ತಿರುವಾಗ ಪಕ್ಕದಲ್ಲಿ ನಿಂತಿರುವ ತಂತಿಯ ಕಂಬಗಳು ಚಲಿಸುತ್ತಿವೆಯೆಂದು ಭಾವಿಸುತ್ತಿರುವದೂ ನಮ್ಮಲ್ಲನೇಕರ ಅನುಭವದಲ್ಲಿದೆಯಷ್ಟೆ. ಹಾಗೆಯೇ ದೇಹೇಂದ್ರಿಯಸಂಘಾತವು ಮಾಡುವ ಕರ್ಮವನ್ನು ತಮ್ಮ ಆತ್ಮನಲ್ಲಿ ಹುಟ್ಟುಗಟ್ಟಿಕೊಳ್ಳುವದೂ ಆ ಸಂಘಾತವು ಯಾವ ಕೆಲಸವನ್ನೂ ಮಾಡದೆ ಇದ್ದರೆ, ನಾವೇ ಕೆಲಸವನ್ನು ಬಿಟ್ಟು ಸುಮ್ಮನಿರುವೆವೆಂದು ಭಾವಿಸುವದೂ ಅಜ್ಞರಿಗೆ ಸ್ವಭಾವವಾಗಿಬಿಟ್ಟಿರುತ್ತದೆ. 'ನಾನು ಸುಮ್ಮನೆ ಇರುತ್ತಿದೇನೆ' ಎಂಬುದೂ ಕರ್ತೃತ್ವಾಭಿಮಾನದಿಂದಲೇ ಆಗಿರುತ್ತದೆಯಾದ್ದರಿಂದ ಆ ಅಕರ್ಮವೂ ನಿಜವಾಗಿ ಕರ್ಮವೇ ಆಗಿವೆಯೆಂದೂ ನಾವು ಕರ್ಮವನ್ನು ಮಾಡುತ್ತೇವೆಂದು ತಿಳಿದಿರುವದಂತೂ ನಮಗೆ ಅಂಟದೆ ಇರುವದರಿಂದ ನಮ್ಮಲ್ಲಿ ಯಾವ ಕರ್ಮವೂ ಇಲ್ಲವೆಂದೂ ತಿಳಿಯುವದೇ ಸರಿಯಾದ ಜ್ಞಾನವೆಂದಾಯಿತು. ಹೀಗೆ ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ಅರಿತು ನಿಷ್ಕ್ರಿಯಾತ್ಮಸ್ವರೂಪ ದಿಂದ ನೆಲೆನಿಲ್ಲುವದೇ ಪರಮಾರ್ಥಸಂನ್ಯಾಸವು. ಅಜ್ಞಾನದಿಂದಾಗಿದ್ದ ಕರ್ಮ ವನ್ನು ಜ್ಞಾನದಿಂದ ಬಿಡುವದರಿಂದ ಇದು ಆತ್ಯಂತಿಕಸಂನ್ಯಾಸವು, ಮುಖ್ಯ ಸಂನ್ಯಾಸವು. ಹಿಂದೆ ಹೇಳಿದ್ದ ಕರ್ಮಯೋಗಿಯ ಸಂನ್ಯಾಸವೂ ಧ್ಯಾನ ಯೋಗಕ್ಕೇರಿದವನು ಮಾಡಿರುವ ವಿವಿದಿಷಾಸಂನ್ಯಾಸವೂ ಕರ್ತೃತ್ವಬುದ್ಧಿಯಿರು ವಾಗಲೇ ಮಾಡಿರುವ ಸಂನ್ಯಾಸವಾದ್ದರಿಂದ ಅವೆರಡೂ ಗೌಣಸಂನ್ಯಾಸವೆನಿಸು ತ್ತವೆ.

ಈಗ ಗೀತಾಪುಸ್ತಕಗಳು ಅಗ್ಗವಾಗಿ ಸಿಕ್ಕುತ್ತಿರುವದರಿಂದ ಎಲ್ಲರೂ ವೇದಾಂತಿಗಳೇ ಆಗಿರುತ್ತಾರೆನ್ನುವಹಾಗಿದೆ. ಎಲ್ಲರ ಬಾಯಿಯಲ್ಲಿಯೂ ಆತ್ಮ, ಅನಾತ್ಮ–ಮುಂತಾದ ಮಾತುಗಳು ನಲಿದಾಡುತ್ತಿರುವವು. ಕೆಲವರಂತೂ ಓದಿದ ಮೂರ್ಖರಾಗಿ ಆತ್ಮವಂಚಕರಾಗಿ ವರ್ತಿಸುತ್ತಾ ಮತ್ತೊಬ್ಬರನ್ನು ತಪ್ಪಿನಗುಂಡಿ ಯಲ್ಲಿ ಕೆಡಹುತ್ತಿರುವರು. ತಾವು ವೇದಾಂತಿಗಳೆಂದೂ ಜ್ಞಾನಸಿದ್ಧರೆಂದೂ ನಟಿಸುತ್ತಾ 'ತತ್ತದಿಂದ್ರಿಯಗಳು ತತ್ತದ್ವ್ಯಾಪಾರವನ್ನು ಮಾಡುತ್ತಿರುವವು. ನಾವು ನಿರ್ಲಿಪ್ತರು'–ಎಂದು ಕೊಚ್ಚಿಕೊಳ್ಳುತ್ತಾ ಕಪಟವ್ಯಾಪಾರಗಳಲ್ಲಿ ತೊಡಗು ತ್ತಿರುವರು. ತಾವು ನಿಷಿದ್ಧವ್ಯಾಪಾರವನ್ನು ಮಾಡಿದರೂ ತಮಗೆ ಏತರ ಅಂಟೂ ಇಲ್ಲವೆಂದು ಹೇಳಿಕೊಳ್ಳುತ್ತಿರುವರು. ಕೆಲವರು ಹೆಂಗಸರ ಕೈಯಲ್ಲಿ ಬೀಗದಕ್ಕೆ ಕೊಟ್ಟು ತಾವು ವಿರಕ್ತರೆಂದೂ ಲೋಕವ್ಯವಹಾರದಿಂದ ದೂರವಾಗಿರುವೆವೆಂದೂ

ನಟಿಸುತ್ತಿರುವರು. ಆದರೆ ವಿಷಯಗಳ ಚಿಂತೆಯಾಗಲಿ ವ್ಯವಹಾರದ ಅಭಿಮಾನ ವಾಗಲಿ ಅವರಲ್ಲಿ ಎಳ್ಳಷ್ಟೂ ಕಡಿಮೆಯಾಗಿರುವದಿಲ್ಲ. ಇಂಥವರ ಬಲೆಗೆ ಬಿದ್ದು ಸಾಧಕರು ಮೋಸಹೋಗಬಾರದು. ಶರೀರೇಂದ್ರಿಯಮನಸ್ಸುಗಳಿಗೆ ತಾದಾತ್ಮ್ಯ ದಿಂದ ಗಂಟುಹಾಕಿಕೊಂಡಿರುವವರು ಎಷ್ಟೇ ವೇದಾಂತದ ಮಾತುಗಳನ್ನು ಬಳಸು ತ್ತಿದ್ದರೂ ಅವರಿಗೆ ಸಂಸಾರದ ಕೋಪತಾಪಗಳು ಗಂಟುಬಿದ್ದೇ ಇರುತ್ತವೆ ಎಂಬುದು ಅವರ ವರ್ತನೆಯಿಂದಲೇ ಸ್ಫುಟವಾಗಿ ಕಾಣುತ್ತಿರುತ್ತದೆ 'ಗುಣಾ ಗುಣೇಷು ವರ್ತನ್ತೇ' ಎಂದು ಎಷ್ಟು ಬಲವಾಗಿ ಅವರು ಸಾರುತ್ತಿದ್ದರೂ ಅವರೂ ಗುಣಪರವಶರಾಗಿಯೇ ಇರುತ್ತಾರೆ. ನಿಜವಾಗಿ ಜ್ಞಾನಿಗಳಾದವರು :

> ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇನ್ದ್ರಿಯಃ ||
> ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ || ಗೀ. ೫-೭

ಎಲ್ಲರಿಗೂ ಆತ್ಮನಾಗಿ ಎವ ಆತ್ಮನೇ ನಮ್ಮ ಆತ್ಮನೆಂದು ಕಂಡುಕೊಂಡಿರುವದ ರಿಂದ ಅವರ ಅಂತಃಕರಣವು ಪರಿಶುದ್ಧವಾಗಿರುತ್ತದೆ; ಕಾರ್ಯಕರಣಸಂಘಾತವು ವಶವಾಗಿರುತ್ತದೆ ; ವ್ಯವಹಾರದೃಷ್ಟಿಯಿಂದ ಅವರು ಕರ್ಮವನ್ನು ಮಾಡುತ್ತಲೇ ಇದ್ದರೂ ಅವರಿಗೆ ಅದರ ಲೇಪವು ಆಗುವದಿಲ್ಲ. ಇಂದ್ರಿಯಜಯವೆಂದರೇನು ? ಇಂದ್ರಿಯಗಳನ್ನು ಬಿಗಿಹಿಡಿಯುವದಲ್ಲ ; ಯಾರು ಬಲಾತ್ಕಾರದಿಂದ ಇಂದ್ರಿಯ ವನ್ನು ಬಿಗಿಹಿಡಿದುಕೊಂಡಿರುವರೋ ಅವರಿಗೆ ಮನಸ್ಸಿನಲ್ಲಿ ವಿಷಯಗಳ ಆಶೆಯು ಎಂದಿಗೂ ಉಳಿದುಕೊಂಡೇ ಇರುತ್ತದೆ. ಆದ್ದರಿಂದ ನಿಜವಾಗಿ ಇಂದ್ರಿಯಜಯ ವೆಂದರೆ 'ಇಂದ್ರಿಯಗಳು ಅವಿದ್ಯಾಕಾರ್ಯವಾದ ಗುಣಗಳ ವೇಷಾಂತರವೇ ; ನಾನು ಅವಕ್ಕೆ ಸಾಕ್ಷಿಯಾಗಿರುವವನು' ಎಂಬ ಅನುಭವವನ್ನು ಪಡೆದುಕೊಳ್ಳು ವದೇ. ಏಕೆಂದರೆ ಆಗ ಪ್ರಕೃತಿಗೆ ಪುರುಷನ ಅಧ್ಯಾಸದಿಂದ ಆಗಿದ್ದ ಬಲವೆಲ್ಲವೂ ಕುಗ್ಗಿಹೋಗುವದು. ಸಾಂಖ್ಯರು ಹೇಳುವಂತೆ ;

> ಪ್ರಕೃತೇಃ ಸುಕುಮಾರತರಂ ನ ಕಿಞ್ಚಿದಸ್ತೀತಿ ಮೇ ಭಾತಿ |
> ಯಾ ದೃಷ್ಟಾಸ್ಮೀತಿ ಪುನರ್ನ ದರ್ಶನಮುಪೈತಿ ಪುರುಷಸ್ಯ ||
>
> ಸಾಂಖ್ಯಕಾರಿಕಾ ೬೧

ಪ್ರಕೃತಿಯು ಬಹಳ ಲಜ್ಜಾವತಿ, ಪುರುಷನು ಅವಳಮೇಲೆ ಕಣ್ಣುಹಾಕಿದ ನೆಂದರೆ ಕೂಡಲೆ ಮೈಗರೆಯುವಳು ಇದು ಅಧ್ಯಾಸದ ಕಾರ್ಯವೆಂದು ಗೊತ್ತಾಗುವವರೆಗೇ ಅನಾತ್ಮವು ಸತ್ಯವೆಂದು ತೋರುತ್ತಿರುತ್ತದೆ. ಅಲ್ಲಿಯವರೆಗೇ ಗುಣಗಳಲ್ಲಿ ಸಂಗವೂ ಕರ್ತೃತ್ವವೂ ಇರುವವರಿಂದ ಸುಖದುಃಖಗಳನ್ನು ಅನು ಭವಿಸುತ್ತಿರಬೇಕಾಗುವದು.

> ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್ |
> ಕಾರಣಂ ಗುಣಸಙ್ಗೋಽಸ್ಯ ಸದಸದ್ಯೋನಿಜನ್ಮಸು || ಗೀ, ೧೩-೨೧,

ಎಂಬ ಶ್ಲೋಕದಲ್ಲಿ ಅವಿದ್ಯಾಕಾಮಗಳೇ ಸಂಸಾರಕ್ಕೆ ಕಾರಣವೆಂದು ಸ್ಪಷ್ಟವಾಗಿ ಭಗವಂತನು ಹೇಳಿರುತ್ತಾನೆ. ಯಾವಾಗ ಅಧ್ಯಾಸರೂಪವಾದ ಅವಿದ್ಯೆಯು ಬಾಧಿತವಾಗುವದೋ ಆ ಕೂಡಲೇ ಕರ್ತೃತ್ವವು ಮಾಯವಾಗಿಬಿಡುವದು, ಪರಮಾರ್ಥಸಂನ್ಯಾಸವು ಲಭಿಸುವದು.

ಯಸ್ಯ ನಾಹಙ್ಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ |
ಹತ್ವಾಪಿ ಸ ಇಮಾಲ್ಲೋಕಾನ್ ನ ಹನ್ತಿ ನಿಬಧ್ಯತೇ || ಗೀ. ೧೮-೧೭

ಯಾವನಿಗೆ ಅಧಿಷ್ಠಾನ, ಶರೀರ, ಅಹಂಕಾರ, ದ್ವಾದಶಕರಣಗಳು, ಪ್ರಾಣಾಪಾನಾದಿವಾಯುವಿನಯವ್ಯಾಪಾರಗಳು, ಚಕ್ಷುರಾದ್ಯನುಗ್ರಾಹಕದೇವತೆಗಳು-ಇವುಗಳೊಳಗೆ ಒಂದೂ ನಾನಲ್ಲ ಎಂಬ ಭಾವವು ಉಂಟಾಗಿರುವದೋ, ಯಾವನಿಗೆ 'ಇಂಥಿಂಥ ಕರ್ಮಗಳನ್ನು ಮಾಡಿರುವದರಿಂದ ನನಗೆ ಸದ್ಗತಿಯಾಗಲಿ ದುರ್ಗತಿಯಾಗಲಿ ಆಗುವದು' ಎಂಬ ಭಾವನೆಯು ಆಗುವದಿಲ್ಲವೋ, ಅವನು ಲೌಕಿಕದೃಷ್ಟಿಯಿಂದ ಯಾವ ಕರ್ಮವನ್ನೇ ಮಾಡಿರಲಿ, ಅವನಿಗೆ ಕರ್ತೃತ್ವವೂ ಇಲ್ಲ, ಆ ಕರ್ಮಫಲದ ಭೋಕ್ತೃತ್ವವೂ ಇರುವದಿಲ್ಲ. ಅವನೇ ಪರಮಾರ್ಥಸಂನ್ಯಾಸಿ.

ನೈವ ಕಿಞ್ಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ !
ಪಶ್ಯಞ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ||
ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ |
ಇನ್ದ್ರಿಯಾಣೀನ್ದ್ರಿಯಾರ್ಥೇಷು ವರ್ತನ್ತ ಇತಿ ಧಾರಯನ್ ||
ಗೀ. ೫-೮, ೯

ಪರಮಾರ್ಥವಾಗಿಯೂ ಸರ್ವಕರ್ಮಸಂನ್ಯಾಸವನ್ನು ಮಾಡಿದವನು ಲೌಕಿಕದೃಷ್ಟಿಯಿಂದ ಇದೇ ದೇಹದಲ್ಲಿಯೇ ಇರುತ್ತಾನಾದರೂ ನಿಜವಾಗಿ ಏನನ್ನೂ ಮಾಡುವದಿಲ್ಲ. ಏಕೆಂದರೆ ನೋಡುವದು, ಕೇಳುವದು, ಮುಟ್ಟುವದು, ಮೂಸುವದು, ತಿನ್ನುವದು, ಹೋಗುವದು, ನಿದ್ರಿಸುವದು, ಉಸಿರಾಡುವದು, ಮಾತಾಡುವದು, ಮಲಮೂತ್ರವಿಸರ್ಗವನ್ನು ಮಾಡುವದು, ಹಿಡಿಯುವದು, ಕಣ್ಣು ಬಿಡುವದು, ಮುಚ್ಚುವದು-ಮುಂತಾದ ಯಾವ ವ್ಯಾಪಾರವನ್ನಾದರೂ ಮಾಡುವಂತೆ ಕಾಣಿಸುತ್ತಿದ್ದರೂ 'ಇಂದ್ರಿಯರೂಪವಾದ ಗುಣಗಳು ವಿಷಯರೂಪವಾದ ಗುಣಗಳಲ್ಲಿ ವರ್ತಿಸುತ್ತಿವೆ, ಇವುಗಳೆಲ್ಲವೂ ಅವಿದ್ಯಾಕಲ್ಪಿತವಾದ್ದರಿಂದ ನಾನು ಏನನ್ನೂ ಮಾಡುತ್ತಿಲ್ಲ' ಎಂಬ ನಿಶ್ಚಯವುಳ್ಳವನಾಗಿರುತ್ತಾನೆ. ಇದೇ ಸಂನ್ಯಾಸದ ಕೊನೆಯ ಭೂಮಿಕೆ.

---

## ೪೩. ಭಕ್ತಿ

(31-8-52)

ಪ್ರಕೃತಿಯು ಇಂದ್ರಿಯಗಳ ರೂಪವಾಗಿಯೂ ವಿಷಯಗಳ ರೂಪವಾಗಿಯೂ ಪರಿಣಮಿಸಿರುತ್ತದೆಯಾದರೂ ಇಂದ್ರಿಯಗಳಲ್ಲಿರುವ ಅಭಿಮಾನದಿಂದ 'ನಾನು ಇದನ್ನು ಅನುಭವಿಸುತ್ತೇನೆ", "ಇದನ್ನು ಮಾಡುತ್ತೇನೆ"-ಎಂದು ಪ್ರಕೃತಿಯ ತಾದಾತ್ಮ್ಯವನ್ನು ಪಡೆದು ಜೀವನು ಸಂಸಾರದುಃಖವನ್ನು ಅನುಭವಿಸುತ್ತಿರುತ್ತಾನೆ. ಗುಣಗಳಿಂದ ಮೋಹಿತನಾಗಿರುವದೇ ಇವನಿಗೆ ಕರ್ತೃತ್ವಭೋಕ್ತೃತ್ವಕ್ಕೆ ಕಾರಣ; "ಗುಣಗಳು ಗುಣಗಳಲ್ಲಿ ವರ್ತಿಸುತ್ತವೆ, ನಾನು ಅಸಂಗನೇ" ಎಂಬ ಬುದ್ಧಿಯಿಂದ ಕರ್ತೃತ್ವವನ್ನು ಕಳಚಿಕೊಳ್ಳುವದೇ ಪರಮಾರ್ಥಸಂನ್ಯಾಸವು -ಎಂದು ತಿಳಿದುಕೊಂಡದ್ದಾಯಿತು. ಇಷ್ಟಾನಿಷ್ಟಮಿಶ್ರಫಲಗಳು ಕರ್ಮಿಗಳಿಗೆ ಮಾತ್ರವೇ ಆಗುತ್ತವೆ, ಗುಣಾತೀತರಾದ ಪರಮಾರ್ಥಸಂನ್ಯಾಸಿಗಳಿಗೆ ಎಂದಿಗೂ ಆಗುವದಿಲ್ಲ (ಗೀ. ೧೮-೧೨). ಈ ಗುಣಗಳನ್ನು ಮೀರುವದು ಹೇಗೆ? ಇದಕ್ಕೆ ಭಗವಂತನು ಒಂದೇ ಒಂದು ಉಪಾಯವನ್ನು ಹೇಳಿರುತ್ತಾನೆ :

> ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ |
> ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ||
>
> ಗೀ. ೭-೧೪
>
> ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ |
> ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ||
>
> ಗೀ. ೧೪-೨೬.

ತ್ರಿಗುಣಾತ್ಮಕವಾದ ಮಾಯೆಯಲ್ಲಿ ತಾದಾತ್ಮ್ಯಬುದ್ಧಿಯನ್ನು ಹೊಂದಿರುವವರು ಅದರಿಂದ ಮೋಹಿತರಾಗಿ ಸಂಸಾರದಲ್ಲಿಯೇ ತೊಳಲುತ್ತಿರುವರು ; ಮಾಯೆಯನ್ನು ದಾಟುವದು ಅವರಿಂದ ಎಂದಿಗೂ ಆಗಲಾರದು. ಆದರೆ ಯಾವಾತನ ವಶದಲ್ಲಿ ಈ ಮಾಯೆಯು ಇರುವದೋ ಆ ಭಗವಂತನನ್ನೇ ಅವ್ಯಭಿಚರಿತಭಕ್ತಿಯಿಂದ ಯಾರು ಶರಣುಹೊಗುವರೋ ಅವರು ಈ ಗುಣಾತ್ಮಕವಾದ ಮಾಯೆಯನ್ನು ದಾಟಿ ಭಗವದ್ಭಾವವನ್ನೇ ಪಡೆದುಕೊಂಡುಬಿಡುತ್ತಾರೆ.

ಲೋಕದಲ್ಲಿ ಎರಡು ದೃಷ್ಟಿಯ ಜನರಿರುತ್ತಾರೆ. ಬಹುಜನರು ಅವಿದ್ಯಾರಾತ್ರಿಯಲ್ಲಿ ನಿದ್ರಿಸುತ್ತಾ ಬಗೆಬಗೆಯ ಕನಸನ್ನು ಕಾಣುತ್ತಾ ಇದೇ ಪರಮಾರ್ಥಸತ್ಯವೆಂದು ತಿಳಿದಿರುವರು. ಆ ಪರಾಗ್ದೃಷ್ಟಿಯ ಜನರಿಗೆ ಭಗವತ್ತತ್ತ್ವವೆಂಬುದೊಂದು ಇದೆ ಎಂಬ ಅರಿವೇ ಇರುವದಿಲ್ಲ. ಆದರೆ ಹೊರನೋಟವನ್ನು ಬಿಟ್ಟು

ಒಳಕ್ಕೇ ನೋಡುವ ಸ್ವಭಾವದ ಜ್ಞಾನಿಗಳು ಇರುತ್ತಾರಷ್ಟೆ, ಅವರಿಗೆ ಪ್ರಪಂಚ ವೆಂಬುದೊಂದು ಇದೆ ಎಂಬುದೇ ತಿಳಿಯದು. ಅವರ ದೃಷ್ಟಿಯಲ್ಲಿ ಇದೆಲ್ಲವೂ ಬ್ರಹ್ಮವೇ, ಇದನ್ನು ಭಗವಂತನು ಹೀಗೆಂದು ತಿಳಿಸಿಕೊಟ್ಟಿರುತ್ತಾನೆ :

> ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ |
> ಯಸ್ಯಾಂ ಜಾಗ್ರತಿ ಭೂತಾನಿ ಸ ನಿಶಾ ಪಶ್ಯತೋ ಮುನೇಃ ||
>
> ಗೀ. ೨-೬೯

ಮಾಯಾಸಂಸಾರದ ಕೋಟಲೆಯಿಂದ ಪಾರಾಗುವದಕ್ಕೆ ಒಂದೇಒಂದು ಉಪಾಯವಿದೆ. ಭಗವಂತನ ಕಡೆಗೆ ತಿರುಗುವದೊಂದೇ ಆ ಉಪಾಯ. ಭಕ್ತಿಯೊಂದೇ ಮುಖ್ಯವಾದ ಸಾಧನ ; ಮಿಕ್ಕ ಸಾಧನಗಳೆಲ್ಲ ಈ ಸಾಧನಕ್ಕೆ ಸಾಧನ. ಒಲೆಯನ್ನು ಹೊತ್ತಿಸಿಕೊಳ್ಳುವದಕ್ಕೆ ಊದುವದು ಮುಂತಾದದ್ದನ್ನು ಅಡಿಗೆಯನ್ನು ಮಾಡುವ ಸಾಧನವೆಂದೇ ಬಗೆಯುವಂತೆ, ಕರ್ಮಾದಿಗಳನ್ನೂ ಸಾಧನವೆನ್ನುವರು.

ಜಗತ್ತಿನಲ್ಲಿ ಸುಖವೂ ಇದೆ, ದುಃಖವೂ ಇದೆ; ರೋಗಗಳಿಂದ ಪದಾರ್ಥಗಳು ಕಹಿಯಾಗಿ ತೋರುವಂತೆ ನಮ್ಮ ಬಾಹ್ಯದೃಷ್ಟಿಯ ದೋಷದಿಂದ ನಮಗೆ ಪ್ರಪಂಚವು ದುಃಖಮಯವಾಗಿ ತೋರುತ್ತಿದೆ. ಆದರೆ ಈ ದುಃಖವನ್ನು ಸಾಧನಾನುಷ್ಠಾನದ ದುಃಖವನ್ನು ಸ್ವೀಕರಿಸುವದರಿಂದ–ಹಾಗಲುಕಾಯಿ, ಕ್ವಿನೈನ್, ಬೇವಿನಹೂ ಮುಂತಾದವುಗಳಿಂದ ಜ್ವರದಿಂದಾಗಿರುವ ನಾಲಗೆಯ ಕಹಿಯನ್ನು ಕಳೆದುಕೊಳ್ಳುವಂತೆ–ಕಳೆದುಕೊಳ್ಳಬೇಕಾಗಿದೆ. ಸಾಧನಸ್ವೀಕಾರವೆಂದರೆ ವಿಷಯಗಳಿಗೆ ಪರಾಙ್ಮುಖರಾಗಿ ಭಗವಂತನ ಕಡೆಗೆ ತಿರುಗುವದು. ಸಾಧನವನ್ನು ಮಾಡಿದಮೇಲೆಯೇ ಏತಕ್ಕೆ ನಮಗೆ ಪರಮಪುರುಷಾರ್ಥವು ದೊರೆಯಬೇಕು ! ನಮ್ಮನ್ನು ಸಂಸಾರದಲ್ಲಿಟ್ಟು ಬಳಿಕ ಸಾಧನದಿಂದ ಅದನ್ನು ತಪ್ಪಿಸಿಕೊಳ್ಳಬೇಕೆಂದು ಏತಕ್ಕೆ ಪರಮಾತ್ಮನು ಮಾಡಿರುತ್ತಾನೆ?– ಎಂದು ಕೆಲವರು ಕೇಳುತ್ತಾರೆ. ನಿಜವನ್ನು ಅರಿಯದೆ ಅವರ ಈ ಆಕ್ಷೇಪಣೆ ಎದ್ದಿದೆ ಕರ್ತೃಭೋಕ್ತೃರೂಪರಾಗಿ ಕಾಣುತ್ತಿರುವ ನಾವೇ ನಿಜವಾಗಿ ಭಕ್ತಿಸ್ವರೂಪರು. ಪುಣ್ಯವಶದಿಂದ ಶಾಸ್ತ್ರಾಚಾರ್ಯರ ಉಪದೇಶವು ದೊರೆತಾಗ ನಮ್ಮೊಳಗೆ ನಾವು ನೋಡಿಕೊಂಡ ಮಾತ್ರದಿಂದ ನಾವು ಎಂದೆಂದಿಗೂ ಆ ನಿತ್ಯಮುಕ್ತಸ್ವರೂಪದಲ್ಲಿಯೇ ಇರುತ್ತೇವೆಂದೂ ತಪ್ಪು ತಿಳಿವಳಿಕೆಯಿಂದಲೇ ಸಂಸಾರದುಃಖವು ನಮ್ಮಲ್ಲಿ ಕಾಣುತ್ತಿತ್ತೆಂದೂ ಸ್ಫುಟವಾಗಿಬಿಡುತ್ತದೆ. ಯಜಮಾನನು ಬೇರೆಬೇರೆಯಾಗಿ ರುಚಿಯಾದ ಆಹಾರವನ್ನು ಹಾಕಿದಾಗಲೂ ನಾಯಿಗಳು ಎಂಜಲಹಾಳೆಗೆ ಕಚ್ಚಾಡುತ್ತಾ ಬಗಳುತ್ತಿರುವಂತೆ ಜೀವರು ವಿಷಯಸುಖಕ್ಕಾಗಿ ಒಬ್ಬರೊಡನೊಬ್ಬರು ಜಗಳ ಮಾಡುತ್ತಾ ತಮ್ಮದೇ ಆಗಿರುವ ಭಗವತ್ಸ್ವರೂಪವನ್ನು ಕಾಣದೆ ದುಃಖಪಡು

ತ್ತಿರುವರು. ಆದರೆ ಭಕ್ತಿಯಿಂದ ಭಗವಂತನನ್ನು ಶರಣುಹೊಕ್ಕರೆ, ಆತನ ಕಡೆಗೆ ತಿರುಗಿದರೆ ಸಾಕು, ವಿಷಯವಿಷಯಿಭಾವದ ಆಯಾಸವಿಲ್ಲದ ನಿರಾಯಾಸವಾದ ಸುಖವು ದೊರೆಯುತ್ತದೆ. ವಿಷಯಭೋಗದಿಂದ ಬೇಗಬೇಗನೆ ಮೃತ್ಯುವಿನ ಕಡೆಗೆ ಸಾಗುತ್ತಾನೆ, ಆದರೆ ಭಗವಂತನ ಕಡೆಗೆ ತಿರುಗಿದಂತೆ ಅಮೃತನಾಗುತ್ತಾನೆ. ಈ ಶಾಶ್ವತಸುಖವನ್ನು ಪಡೆಯುವದೇ ಮನುಷ್ಯಜನ್ಮದ ಸಾರ್ಥಕ್ಯ.

ಪರಮಾತ್ಮನ ಕಡೆಗೆ ತಿರುಗುವ ಭಕ್ತನಾಗಬೇಕು, ಭಗವಂತನ ಸೇವಕನಾಗಬೇಕು ಎಂದರೆ ಸಂಬಳದ ಆಳಿನಂತೆ ದುಡಿಯುವದಲ್ಲ, ತಂದೆಯನ್ನು ಪ್ರೀತಿಯಿಂದ ಸೇವಿಸಿ ಅವನ ಪ್ರೀತಿಗೆ ಪಾತ್ರನಾಗಿ ಇಹಪರಗತಿಗೆ ಪಾತ್ರನಾಗುವ ಮಗನಂತೆ ಭಗವತ್ಪ್ರಾಪ್ತಿಗೆ ತಕ್ಕವನಾಗುವದು. ಇದನ್ನೇ 'ಬ್ರಹ್ಮಭೂಯಾಯ ಕಲ್ಪತೇ' (ಗೀ. ೧೪–೨೬) ಎಂದು ಹೇಳಿರುವದು. ಅಧ್ಯಾತ್ಮಸಾಧನದ ಪರಮ ಗುಹ್ಯವು ಯಾವದು ? ಇದಕ್ಕೆ ಭಗವಂತನು ಸ್ಪಷ್ಟವಾಗಿ ಉತ್ತರವನ್ನು ಹೇಳಿರುತ್ತಾನೆ :

> ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ |
> ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ||
> ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |
> ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ||
>
> ಗೀ. ೧೮–೬೪, ೬೫

ಗೀತೆಯಲ್ಲಿರುವ ಈ ಎರಡು ಶ್ಲೋಕಗಳಿಗೆ ಬಹಳ ಹೆಚ್ಚಿನ ಬೆಲೆಯಿರುತ್ತದೆ. ಭಗವದ್ಗೀತೆಗೆ 'ಕರ್ಮಯೋಗ'ವೇ ರಹಸ್ಯ, 'ಅನಾಸಕ್ತಿಯೋಗ'ವೇ ರಹಸ್ಯ–ಎಂದು ತಮತಮಗೆ ತೋಚಿದಂತೆ ಬೇರೆಬೇರೆಯ ಸಾಧನದಲ್ಲಿ ತಾತ್ಪರ್ಯವನ್ನು ಕಲ್ಪಿಸಿರುವರು. ಆದರೆ ಭಗವಂತನೇ ಇದು 'ಗುಹ್ಯತಮ' ರಹಸ್ಯಗಳಲ್ಲೆಲ್ಲ ರಹಸ್ಯ ಎಂದು ಹೇಳಿರುತ್ತಾನೆ ; 'ಪರಮಂ ಶೃಣು ಮೇ ವಚಃ" ಇದೇ ನನ್ನ ಪರಮೋತ್ತಮವಚನವು ಎಂದಿರುತ್ತಾನೆ. ನಿನಗೆ 'ಹಿತ" ವಾದ ಪರಮಪುರುಷಾರ್ಥಸಾಧನವನ್ನು ಹೇಳಿರುತ್ತೇನೆ ಎಂದು 'ಮನ್ಮನಾ ಭವ....' -ಮುಂತಾದ ಸಾಧನವೇ ಭಗವತ್ಪ್ರಾಪ್ತಿಗೆ ಕಾರಣವೆಂದು "ಪ್ರತಿಜಾನೇ" ಪ್ರತಿಜ್ಞೆಮಾಡಿ ಹೇಳುತ್ತೇನೆ– ಎಂದಿದಾನೆ. ಇದಕ್ಕಿಂತ ಮತ್ತೇನು ಬೇಕು ? ಆರನೆಯ ಅಧ್ಯಾಯದಲ್ಲಿ ಪರಮಾತ್ಮನಲ್ಲಿಯೇ ಮನಸ್ಸನ್ನಿಟ್ಟು ಮತ್ತೇನನ್ನೂ ಚಿಂತಿಸದೆ ಇರಬೇಕು–ಎಂದು ಉಪದೇಶಿಸಿದಮೇಲೂ

> ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ |
> ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು || ಗೀ. ೭–೧

ಎಂದಿರುತ್ತಾನೆ. ಯೋಗವನ್ನು ಹೇಗೆ ಮಾಡಬೇಕು ? ಎಂಬ ಪ್ರಶ್ನೆಗೆ ವಿಸ್ಪಷ್ಟ ವಾದ ಉತ್ತರವಿಲ್ಲಿದೆ. ಪರಮಾತ್ಮನಲ್ಲಿ ಮನಸ್ಸು ಆಸಕ್ತವಾಗಿರಬೇಕು, ಆತ ನನ್ನೇ ಲಕ್ಷ್ಯವಾಗಿಟ್ಟುಕೊಳ್ಳಬೇಕು ; ಅದಕ್ಕೆ ಸಾಧನವಾಗಿ ಭಗವಂತನನ್ನೇ ಆಶ್ರಯಿಸಬೇಕು, ಮತ್ತೆ ಯಾವ ಸಾಧನವನ್ನೂ ಇಟ್ಟುಕೊಳ್ಳಬೇಕಾದದ್ದಿಲ್ಲ-ಎಂಬುದನ್ನು 'ಮದಾಶ್ರಯಃ' ಎಂಬ ವಿಶೇಷಣವು ತಿಳಿಸುತ್ತದೆ ಶರೀರೇಂದ್ರಿಯಮನಸ್ಸುಗಳು ಸಾಧನವಾಗಿರುವದು ನಿಜ ; ಆದರೆ ಅವನು ಇವುಗಳನ್ನು ಪರಮಾತ್ಮನ ಕಡೆಗೆ ಒಯ್ಯುವಂತೆ ಮಾಡಬೇಕಾಗಿದೆ ಎಂಬುದನ್ನು ನಾವು ನೆನಪಿಡಬೇಕು. ಈ ಅಲ್ಪಶಕ್ತಿಯ ಮನಆದಿಗಳು ಎಷ್ಟು ತಿಣುಕಿದರೆತಾನೆ ಭಗವಂತನನ್ನು ಮುಟ್ಟುವದಾದೀತು ? ಮಗು ತನ್ನ ಪುಟ್ಟಕೈಗಳನ್ನು ಮೇಲಕ್ಕೆತ್ತಿ ತಂದೆಯ ತಲೆಯನ್ನು ಮುಟ್ಟುವದಕ್ಕೆ ಎಷ್ಟು ಪ್ರಯತ್ನಿಸಿದರೂ ಆಗುವದಿಲ್ಲ ವಾದರೂ ತಂದೆಯು ಪ್ರೇಮದಿಂದ ಅದನ್ನು ಎತ್ತಿ ತನ್ನ ಹೆಗಲಮೇಲೆ ಕೂರಿಸಿಕೊಂಡು ತಲೆಯನ್ನು ಮುಟ್ಟಲು ಅನುವಾಗುವಂತೆ, ಭಗವಂತನೇ ನಮ್ಮ ಪ್ರಯತ್ನವನ್ನು ಸಫಲವಾಗಿಸಬೇಕಾಗಿರುತ್ತದೆ. ನೀರಿನಮೇಲೆ ಹಲಗೆಯನ್ನು ಬಿಟ್ಟು ಅದರಮೇಲೆ ಕುಳ್ಳಿರುವಂತೆ ಭಗವದ್ಭಕ್ತಿಯನ್ನು ಉಪಯೋಗಿಸಿಕೊಂಡು ಈ ಸಂಸಾರಸಾಗರದ ಭಯವಿಲ್ಲದೆ ಎಷ್ಟೋಜನ ಬಲ್ಲವರು ಹಾಯಾಗಿ ತೇಲಾಡುವದನ್ನು ಕಲಿತಿದ್ದಾರೆ; ಅಜ್ಞರು ಮಾತ್ರ ವಿಷಯಗಳೆಂಬ ಕಲ್ಲನ್ನು ಕಟ್ಟಿಕೊಂಡು ಈ ಸಾಗರದಲ್ಲಿ ದಿಟ್ಟತನದಿಂದ ಹಾರಿಕೊಳ್ಳುತ್ತಿದಾರೆ ! "ದೇವ, ನೀನೇ ನನ್ನ ಸಾಧನವನ್ನು ಪೂರ್ಣಗೊಳಿಸಬೇಕು, ನಿನ್ನ ಅನುಗ್ರಹದಿಂದಲೇ ನಾನು ನಿನ್ನನ್ನು ಸೇರಬೇಕಾಗಿದೆ' ಎಂದು ಆರ್ತರಾಗಿ ಆ ಭಗವಂತನಲ್ಲಿ ಮೊರೆಯಿಡಬೇಕು. 'ನಾಲ್ಕು ವಿಧರಾದ ಸುಕೃತಿಗಳು ನನ್ನನ್ನು ಭಜಿಸುತ್ತಾರೆ, ದುಷ್ಕೃತಿಗಳಾ ಮೂಢರು ಭಜಿಸುವದಿಲ್ಲ' ಎಂದು ಭಗವಂತನೇ ಹೇಳಿಲ್ಲವೆ ? ನಮಗೆ ಎಂಥ ಕಷ್ಟವೇ ಬಂದಿರಲಿ, ಆರ್ತಿಹಂತೃವಾದ ಭಗವಂತನು ಅದರಿಂದ ನಮ್ಮನ್ನು ಪಾರುಮಾಡುವನು ; ನಮಗೆ ಏತರ ಆಶೆಯೇ ಇರಲಿ, ಭಗವಂತನೇ ನಮ್ಮನ್ನು ಕುಬೇರಪದವಿಗಾದರೂ ಏರಿಸುವನು; ನಮಗೆ ತತ್ತ್ವಜ್ಞಾನದ ಹಂಬಲೇ ಇರಲಿ, ಭಗವಂತನೇ 'ನನ್ನನ್ನು ಶರಣುಹೊಕ್ಕಿರುವ ಮುಮುಕ್ಷುವೀತನು' ಎಂದು ಕರುಣೆಯಿಂದ ನಮ್ಮ ಹೃದಯದಲ್ಲಿ ಜ್ಞಾನದೀಪವನ್ನು ಹತ್ತಿಸಿ ಅಜ್ಞಾನದಿಂದುಂಟಾಗಿರುವ ಮಿಥ್ಯಾಪ್ರತ್ಯಯದ ಕತ್ತಲೆಯನ್ನೆಲ್ಲ ಚದುರಿಸುವನು. ಆಚಾರ್ಯರು :

ತೇಷಾಮೇವಾನುಕಮ್ಪಾರ್ಥಮಹಮಜ್ಞಾನಜಂ ತಮಃ |
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ || ಗೀ. ೧೦-೧೧

ಎಂಬ ಶ್ಲೋಕದಲ್ಲಿ ಜ್ಞಾನದೀಪವನ್ನು ಹಿಂದಿನ ಕಾಲದ ಹಣತೆಯದೀಪದ ದೃಷ್ಟಾಂತದಿಂದ ಹೇಗೆ ವರ್ಣಿಸಿದ್ದಾರೆ ನೋಡಿರಿ !

'ವಿವೇಕಪ್ರತ್ಯಯರೂಪೇಣ ಭಕ್ತಿಪ್ರಸಾದಸ್ನೇಹಾಭಿಷಿಕ್ತೇನ
ಮದ್ಭಾವನಾಭಿನಿವೇಶವಾತೇರಿತೇನ ಬ್ರಹ್ಮಚರ್ಯಾದಿಸಾಧನ
ಸಂಸ್ಕಾರವತ್ಪ್ರಜ್ಞಾವರ್ತಿನಾ ವಿರಕ್ತಾನ್ತಃಕರಣಾಧಾರೇಣ
ವಿಷಯವ್ಯಾವೃತ್ತಚಿತ್ತರಾಗದ್ವೇಷಾಕಲುಷಿತನಿವಾತಾಪವರಕಸ್ಥೇನ
ನಿತ್ಯಪ್ರವೃತ್ತೈಕಾಗ್ರ್ಯಧ್ಯಾನಜನಿತಸಮ್ಯಗ್ದರ್ಶನಭಾಸ್ವತಾ
ಜ್ಞಾನದೀಪೇನೇತ್ಯರ್ಥಃ ||

ಜ್ಞಾನವೆಂಬುದು ವಿವೇಕಪ್ರತ್ಯಯವು. ಭಕ್ತಿಯ ತಿಳಿಯಾದ ಎಣ್ಣೆಯಲ್ಲಿ ಅದ್ದಿ, ಭಗವದ್ಭಾವನೆಯಲ್ಲಿಯೇ ತಾತ್ಪರ್ಯವಿರುವದೆಂಬ ಸುಳಿಗಾಳಿಯಿಂದ ಉರಿಯುವದಾಗಿ, ಬ್ರಹ್ಮಚರ್ಯವೇ ಮುಂತಾದ ಸಾಧನಗಳೆಂಬ ಸಂಸ್ಕಾರವನ್ನು ಮಾಡಿದ ಪ್ರಜ್ಞೆ ಎಂಬ ಬತ್ತಿಯುಳ್ಳದ್ದಾಗಿ, ವಿರಕ್ತಾಂತಃಕರಣವೆಂಬ ಹಣತೆಯಲ್ಲಿರುವದಾಗಿ, ವಿಷಯಗಳನ್ನು ಬಿಟ್ಟ ಚಿತ್ತವುಳ್ಳ ರಾಗದ್ವೇಷಾದಿಕಲ್ಮಷಗಳಿಲ್ಲದ ಗಾಳಿಯ ಹೊಡೆತವಿಲ್ಲದ ಕೋಣೆಯಲ್ಲಿರುವಹಾದ, ಒಂದೇಸಮನೆ ನಡೆದಿರುವ ಏಕಾಗ್ರತೆಯ ಧ್ಯಾನದಿಂದುಂಟಾದ ಸಮ್ಯಗ್ದರ್ಶನದಿಂದ ಬೆಳಬೆಳಗುತ್ತಿರುವ ಜ್ಞಾನದೀಪದಿಂದ ಎಂದರ್ಥ. ಇಲ್ಲಿ ಭಕ್ತಿಯೆಂಬ ತಿಳಿಯೆಣ್ಣೆಯಲ್ಲಿ ಅದ್ದಿದ ಬತ್ತಿಯಿಂದುರಿಯುವದು ಜ್ಞಾನದೀಪ- ಎಂದು ಹೇಳಿರುವದನ್ನು ಲಕ್ಷಿಸಬೇಕು. 'ಶಂಕರಾಚಾರ್ಯರು ಜ್ಞಾನವನ್ನೇ ಹೆಚ್ಚು ಲಕ್ಷ್ಯದಲ್ಲಿಟ್ಟುಕೊಂಡಿರುತ್ತಾರೆ, ಅವರ ದೃಷ್ಟಿಯಲ್ಲಿ ಭಕ್ತಿಯು ಕಡಿಮೆಯ ಸಾಧನ' ಎನ್ನುವವರನ್ನು ಕುರಿತು ಏನು ಹೇಳಬೇಕು ! Save me from my friends (ಈ ನನ್ನ ಸ್ನೇಹಿತರ ಕೋಟಲೆಯಿಂದ ನನ್ನನ್ನು ಹೇಗಾದರೂ ರಕ್ಷಿಸಿ !) ಎಂಬ ಆಂಗ್ಲೋಕ್ತಿಯಂತೆ ಇಂಥ ಅನುಯಾಯಿಗಳಿಂದ ಹೇಗೆ ತಪ್ಪಿಸಿಕೊಳ್ಳಬೇಕೆಂದು ಆಚಾರ್ಯರಿಗೆ ಚಿಂತೆಯಾಗಿರಬಹುದು.

ಅಮಾನಿತ್ವವೇ ಮುಂತಾದ ಜ್ಞಾನಸಾಧನಗುಣಗಳನ್ನು ಹೇಳುತ್ತಿರುವ ಸಂದರ್ಭದಲ್ಲಿ ಭಗವಂತನು 'ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ' ಎಂದು ಭಕ್ತಿಯನ್ನೊಂದು ಸಾಧನವಾಗಿ ಹೇಳಿರುತ್ತಾನೆ. ಅಲ್ಲಿ ಆಚಾರ್ಯರು ಬರೆದಿರುವದೇನು ?

'ಮಯಿ ಈಶ್ವರೇ ಅನನ್ಯಯೋಗೇನ ಅಪೃಥಗ್ಭಾವಸಮಾಧಿನಾ
ನಾನ್ಯೋ ಭಗವತೋ ವಾಸುದೇವಾತ್ ಪರೋಽಸ್ತಿ, ಅತಃ ಸ
ಏವ ನೋ ಗತಿಃ ಇತ್ಯೇವಂ ನಿಶ್ಚಿತಾ ಅವ್ಯಭಿಚಾರಿಣೀ ಬುದ್ಧಿ-

ರನನ್ಯಯೋಗಃ, ತೇನ ಭಜನಂ ಭಕ್ತಿಃ ನ ವ್ಯಭಿಚರಣಶೀಲಾ ಅವ್ಯಭಿಚಾರಿಣೀ' || ಗೀ. ಭಾ. ೧೩–೧೦

ಈಶ್ವರನಾದ ನನ್ನಲ್ಲಿ ಅನನ್ಯಯೋಗದಿಂದ ಎಂದರೆ ಬೇರೆಯಾಗದ ಸಮಾಧಿಯಿಂದ 'ವಾಸುದೇವನಿಗಿಂತ ಹೆಚ್ಚಿನವರು ಮತ್ತೆ ಯಾರೂ ಇಲ್ಲ! ಆದ್ದರಿಂದ ಆತನೇ ನಮಗೆ ಗತಿ!' ಎಂದು ನಿಶ್ಚಯಿಸಿ ಮಾಡಿರುವ ಸ್ವಲ್ಪವೂ ಅತ್ತಿತ್ತ ಚಲಿಸದ ಬುದ್ಧಿಯೇ ಅನನ್ಯಯೋಗವು; ತಪ್ಪದೆ ಇರುವ ಇಂಥ ಭಜನವೇ ಭಕ್ತಿಯು ಎಂಬುದು ಭಾಷ್ಯದ ವಾಕ್ಯಾರ್ಥ.

ನಾರದಭಕ್ತಿಸೂತ್ರದಲ್ಲಿ 'ಸಾ ತ್ವಸ್ಮಿನ್ ಪರಮಪ್ರೇಮರೂಪಾ' ಆ ಭಕ್ತಿ ಎಂಬುದು ಈ ಪರಮಾತ್ಮನಲ್ಲಿರುವ ನಿರತಿಶಯವಾದ ಪ್ರೇಮವು-ಎಂದು ಹೇಳಿದೆ; ಶಾಂಡಿಲ್ಯಸೂತ್ರದಲ್ಲಿ 'ಸಾ ಪರಾನುರಕ್ತಿರೀಶ್ವರೇ' ಭಕ್ತಿ ಎಂದರೆ ಪರಮೇಶ್ವರನ ಮಾಹಾತ್ಮ್ಯವನ್ನು ಅರಿತುಕೊಂಡದ್ದರಿಂದುಂಟಾಗುವ ಪರಮ ಪ್ರೇಮವು ಎಂದಿದೆ. ಮಿಕ್ಕ ಸಾಧನಗಳನ್ನೆಲ್ಲ ತಕ್ಕಡಿಯ ಒಂದು ಪಡಿಗೆ ಹಾಕಿದರೆ ಭಕ್ತಿಯು ತೂಕವೇ ಒಂದು ಸ್ವಲ್ಪ ಹೆಚ್ಚಾದೀತು ಹೀಗಿದೆ ಭಕ್ತಿಯ ಸ್ಥಾನ! ಮಿಕ್ಕದ್ದರಲ್ಲಿರುವ ರಾಗವನ್ನೆಲ್ಲ ಮರೆಯಿಸುವ ರಾಗವಿದು, ಭಕ್ತಿಯೆಂದರೆ ಭಗವಂತನು ಹೀಗೆನ್ನುತ್ತಿದ್ದಾನೆ. "ನೀವೆಲ್ಲರೂ ನಿತ್ಯಾನಂದಸ್ವರೂಪನಾದ ನನಗಿಂತ ಅಭಿನ್ನರೇ. ಹೀಗಿದ್ದರೂ ಏತಕ್ಕೆ ವಿಷಯಗಳಲ್ಲಿಗೆ ಸುಖದ ಭಿಕ್ಷೆಗೆಂದು ಜೋಳಿಗೆಯೆತ್ತಿಕೊಂಡು ಹೋಗುತ್ತಿರುವಿರಿ? ನನ್ನ ಕಡೆಗೆ ತಿರುಗಿರಿ, ಮಿಕ್ಕದ್ದನ್ನು ಬಿಡಿರಿ! ನನ್ನ ಸರ್ವಸ್ವವೂ ನಿಮ್ಮದೇ!' ಈ ಪ್ರೇಮದ ಕರೆಗೆ ನೀವು ಕಿವಿಗೊಡಬೇಕು, ಕೃತಾರ್ಥರಾಗಬೇಕು.

---

## ೪೪. ಜ್ಞಾನೇಚ್ಛಾಕ್ರಿಯೆಗಳು

### (1—9—62)

ವೇದಾಂತಕ್ಕೂ ಇತರ ಶಾಸ್ತ್ರಗಳಿಗೂ ಒಂದು ಮುಖ್ಯವೈಲಕ್ಷಣ್ಯವಿದೆ. ಮಿಕ್ಕ ಶಾಸ್ತ್ರಗಳೆಲ್ಲವೂ ಇಂದ್ರಿಯಪ್ರಧಾನವಾಗಿರುವ ಪರಾಗ್ದೃಷ್ಟಿಯಿಂದ ವಿಷಯ ಪರಿಶೀಲನೆಯನ್ನು ಮಾಡುತ್ತವೆ. ವೇದಾಂತವು ಎಲ್ಲಕ್ಕೂ ತಿರುಳಾಗಿರುವ ನಮ್ಮ ಶರೀರ ಒಳಗಿನ ಆತ್ಮನ ತತ್ತ್ವವನ್ನು ಹುಡುಕುವದಕ್ಕಾಗಿ ಬಳಸುವ ಪ್ರತ್ಯಗ್ದೃಷ್ಟಿಯನ್ನವಲಂಬಿಸಿ ತತ್ತ್ವಪರಿಶೀಲನೆಯನ್ನು ಮಾಡುವದಕ್ಕೆ ಹೊರಟಿರುತ್ತದೆ.

ಪರಾಗ್ದೃಷ್ಟಿಯಿಂದ ವಿಷಯಗಳನ್ನು ಪರಿಶೀಲಿಸುವಾಗ ಅಂತಃಕರಣದಲ್ಲಿರುವ ಜ್ಞಾನೇಚ್ಛಾಕ್ರಿಯಾಶಕ್ತಿಗಳು ಕುದುರುತ್ತವೆ. ಮೊದಲು ಹೊರಗಿನ

ವಿಷಯವು, ಕನ್ನಡಿಯಲ್ಲಿ ಮುಖವು ಪ್ರತಿಬಿಂಬಿಸುವಂತೆ ಅಂತಃಕರಣದಲ್ಲಿ ತೋರಿಕೊಂಡು ಅದನ್ನು ಅಲುಗಾಡಿಸುತ್ತದೆ, ಅದರಲ್ಲಿ ಒಂದಾನೊಂದು ವಿಕಾರ ವನ್ನುಂಟುಮಾಡುತ್ತದೆ. ಅದೇ ಜ್ಞಾನ. ಅಂತಃಕರಣದಲ್ಲಿ ವಿಷಯಗಳ ಅರಿವಾಗಿ ಅಷ್ಟಕ್ಕೇ ಸುಮ್ಮನಾಗುವದಿಲ್ಲ; ಆ ಬಳಿಕ ಅದರಲ್ಲಿ ಸಂಕಲ್ಪವೂ ಇಚ್ಛಾದ್ವೇಷಗಳೂ ಎದ್ದುಕೊಳ್ಳುತ್ತವೆ. ಅಂತಃಕರಣದಲ್ಲಿ ಹೀಗೆ ವಿಕ್ಷೋಭ ವುಂಟಾಗಲು ವಿಷಯಗಳ ಕಡೆಗೆ ಹೋಗುವ ಪ್ರವೃತ್ತಿಯುಂಟಾಗುತ್ತದೆ. ನೀರಿನಲ್ಲಿ ಆಲೆದಾಡುತ್ತಿರುವ ಮೀನುಗಳನ್ನು ಮೇಲೆ ಹಾರಾಡುವ ಪಕ್ಷಿಯು ತಟ್ಟನೆ ಬಂದು ಹಿಡಿದುಕೊಳ್ಳುವಂತೆ, ಮನಸ್ಸು ಇಂದ್ರಿಯಗಳ ಮೂಲಕವಾಗಿ ಹೊರಕ್ಕೆ ಬಂದು ವಿಷಯಗಳನ್ನು ಹಿಡಿಯುತ್ತದೆ. ಈ ಜ್ಞಾನೇಚ್ಛಾಕ್ರಿಯೆ ಗಳಿಗೆ ವಿಷಯವಾಗಿರುವ ಪ್ರಮೇಯಗಳನ್ನು ವಿಂಗಡಿಸಿ ಪರಿಶೀಲನೆಮಾಡುವದ ಕ್ಕೆಂದೇ ಶಾಸ್ತ್ರಗಳು ಹುಟ್ಟಿರುತ್ತವೆ. ವೈಶೇಷಿಕದರ್ಶನವು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ಸಮವಾಯ, ವಿಶೇಷ- ಎಂದು ಈ ಪ್ರಮೇಯಗಳ ತಿಳಿ ವಳಿಕೆಯನ್ನೇ ವ್ಯವಸ್ಥೆಗೊಳಿಸಿ ಹೇಳುವದರಿಂದ "ಶಾಸ್ತ್ರ"ವೆನಿಸಿರುತ್ತದೆ. ಇದೇ ರೀತಿಯಲ್ಲಿ ಭೌತಿಕವಿಜ್ಞಾನವೂ ಪರಾಗ್ದೃಷ್ಟಿಗೆ ಗೋಚರವಾದ ವಿಷಯಗಳನ್ನೇ ತನ್ನದೇ ಆದ ಪ್ರಕ್ರಿಯೆಯಿಂದ ಪರಿಶೀಲಿಸಿ ತಿಳಿಸುತ್ತದೆ. ಆದ್ದರಿಂದ ಇಂಥ ಶಾಸ್ತ್ರಗಳೆಲ್ಲ ಜ್ಞಾನೇಚ್ಛಾಕ್ರಿಯಾಶಕ್ತಿಗಳ ಬೆಳವಣಿಗೆಗೆ ಕಾರಣವಾಗಿರುತ್ತವೆ. ಭೌತಿಕಶಾಸ್ತ್ರವು ಬರಿಯ ಇಂದ್ರಿಯಗಳನ್ನೇ ಅಲ್ಲದೆ ಅವಕ್ಕೆ ಸಹಕಾರಿಗಳಾಗಿ ದುರ್ಬಿನ್ನು, ಧ್ವನಿವಾಹಕ-ಮುಂತಾದ ಯಂತ್ರಗಳನ್ನೂ ಉಪಯೋಗಿಸಿಕೊಂಡು ಅದೇ ಪ್ರಮೇಯಗಳನ್ನು ಪರಿಶೀಲಿಸುತ್ತದೆ. ಸಾಮಾನ್ಯಜನರು ವಿಷಯಪರೀಕ್ಷೆ ಮಾಡುವದಕ್ಕಿಂತಲೂ ವಿಜ್ಞಾನಶಾಸ್ತ್ರವು ಹೆಚ್ಚು ಸೂಕ್ಷ್ಮವಾದ ವಸ್ತುಗಳನ್ನು ಉಪಕರಣಗಳ ಸಹಾಯದಿಂದ ಪರೀಕ್ಷಿಸುತ್ತದೆಯಾದರೂ ಅದಕ್ಕೆ ಇಂದ್ರಿಯಗಳೆ ಮೂಲಸಾಧನ. ಹಿಂದಿನಕಾಲಕ್ಕೆ ಬಗನೆಕಡ್ಡಿ, ಲಾಳದಕಡ್ಡಿ-ಇವುಗಳನ್ನು ಉಪ ಯೋಗಿಸುತ್ತಿದ್ದರೆ ಈಚಿನವರು ಸ್ವಲ್ಪಕಾಲ ಉಕ್ಕಿನ ಲೇಖನಿಗಳನ್ನೂ ನಿಬ್ಬು ಗಳನ್ನೂ ಇತ್ತೀಚೆಗೆ ಫೌಂಟನ್‌ಪೆನ್ನುಗಳೆಂಬ ಲೇಖನಿಗಳನ್ನೂ ಉಪಯೋಗಿ ಸುವ ಕಲೆಯನ್ನು ಕಂಡುಹಿಡಿದಿರುವರಾದರೂ ಮನುಷ್ಯನು ಬರೆಯುವದಕ್ಕೆ ಈಗಲೂ ಕೈಯನ್ನೇ ಉಪಯೋಗಿಸುತ್ತಿರುತ್ತಾನೆ. ಇದರಂತೆ ಸೂಕ್ಷ್ಮದರ್ಶಕ, ದೂರದರ್ಶಕ - ಮುಂತಾದ ಯಂತ್ರಗಳನ್ನುಪಯೋಗಿಸುವಾಗಲೂ ಚಕ್ಷುರಿಂದ್ರಿ ಯವೇ ಮೊದಲು ಕೆಲಸಮಾಡಬೇಕಾಗಿರುತ್ತದೆ. ಆದ್ದರಿಂದ ಈ ಶಾಸ್ತ್ರಗಳೆಲ್ಲ ಇಂದ್ರಿಯಗೋಚರವಾದ ಸ್ಥೂಲವಸ್ತುಗಳನ್ನೇ ಪರೀಕ್ಷಿಸುತ್ತಿವೆಯೆನ್ನಬೇಕಾ ಯಿತು ; ಇವಕ್ಕೆಲ್ಲ ಪರಾಗ್ದೃಷ್ಟಿಯೇ ಪ್ರಧಾನವಾಗಿರುತ್ತದೆ. ಈ ಶಾಸ್ತ್ರಗಳು ಎಷ್ಟೇ ಬೆಳೆದರೂ ಮನುಷ್ಯನ ಜ್ಞಾನ, ಇಚ್ಛೆ, ಕ್ರಿಯೆ-ಈ ಮೂರು ಶಕ್ತಿಗಳಿಗೇ ಹೆಚ್ಚಿನ ಸಂಸ್ಕಾರವನ್ನು ಕೊಟ್ಟು ಅವನ್ನು ಸಾಕುತ್ತಿರುವವು.

ಪರಾಗ್ದೃಷ್ಟಿಯ ಶಾಸ್ತ್ರಗಳಿಂದಾಗುವ ತಿಳಿವಳಿಕೆಯಿಂದ ಮನುಷ್ಯನಿಗೆ ಕಾಮವನ್ನು ತತ್ಕಾಲಕ್ಕೆ ತೃಪ್ತಿಗೊಳಿಸಿಕೊಳ್ಳುವ ಉಪಾಯಗಳು ಸಿಕ್ಕುವವೇ ಹೊರತು ಕಾಮವನ್ನೇ ಅಡಗಿಸುವದು ಅವುಗಳಿಂದ ಆಗುವಹಾಗಿಲ್ಲ. ಕಾಮ ಗಳನ್ನು ಭೋಗಿಸುವದರಿಂದ ಎಂದಿಗಾದರೂ ಕಾಮವು ಆರೀತೆ ? ಇನ್ನಷ್ಟು ಬೆಳೆಯುತ್ತದೆ. ವಿಜ್ಞಾನಶಾಸ್ತ್ರವನ್ನುಪಯೋಗಿಸಿಕೊಂಡು ನಾಗರಿಕನಾಗಿದ್ದೇ ನೆಂದು ಕೊಚ್ಚಿಕೊಳ್ಳುತ್ತಿರುವ ಮನುಷ್ಯನು ಇಂದು ಪಶುಗಳಿಗಿಂತಲೂ ಹೆಚ್ಚಾಗಿ ಈ ಜ್ಞಾನೇಚ್ಛಾಕ್ರಿಯೆಗಳಿಗೆ ವಶನಾಗಿರುತ್ತಾನೆ. ಇದಕ್ಕೇನಾದರೂ ಪರಿಹಾರ ವಿದೆಯೆ ? ಮನುಷ್ಯನು ಉನ್ನತಿಯನ್ನು ಪಡೆಯುವದಕ್ಕೆ ಈ ಜ್ಞಾನಾದಿಶಕ್ತಿ ಗಳನ್ನು ವಶಕ್ಕೆ ತಂದುಕೊಳ್ಳಬೇಕು : ಕ್ರಿಯೆಯು ಇಚ್ಛೆಗೆ ವಶವಾಗಿರುತ್ತದೆ, ಇಚ್ಛೆಯು ಜ್ಞಾನದಿಂದ ಆಗುತ್ತದೆ–ಎಂಬುದನ್ನು ಕಂಡುಕೊಂಡು ಸರ್ವಕ್ಕೂ ಮೂಲವಾಗಿರುವ ಜ್ಞಾನದ ತತ್ತ್ವವೇನು ?– ಎಂಬುದನ್ನು ಅರಿತುಕೊಳ್ಳು ವದಕ್ಕೆ ಪ್ರಯತ್ನಿಸಬೇಕಿತ್ತು. ಈಗ್ಗೆ ಅದು ತಲೆಕೆಳಕಾಗಿದೆ.

ಜ್ಞಾನೇಚ್ಛಾದಿಶಕ್ತಿಗಳನ್ನು ಸುಮ್ಮನೆ ತಡೆದುಕೊಳ್ಳಬೇಕೆಂದೇನೂ ಅಭಿ ಪ್ರಾಯವಲ್ಲ ; ಅವಕ್ಕೆ ತಕ್ಕ ಸಂಸ್ಕಾರವನ್ನೂ ಮಾಡಿಕೊಳ್ಳಬೇಕು.. ಮಕ್ಕಳಿಗೆ ಬರೆಯುವದು ಗೊತ್ತಿಲ್ಲದಿದ್ದರೂ ಲೇಖನಿಯನ್ನು ತೆಗೆದುಕೊಂಡು ಕಾಗದದ ಮೇಲೆ ಗೀಚುವಂತೆ, ಹಾರ್ಮೋನಿಯಂ ಸದ್ದು ಎಲ್ಲಿಂದ ಬರುತ್ತದೆ ಎಂಬುದನ್ನು ತಿಳಿಯುವದಕ್ಕೆ ಅದನ್ನೇ ಕುಟ್ಟಿನೋಡುವಂತೆ, ಮನುಷ್ಯನು ಕಾಮದಿಂದ ಇಂದ್ರಿಯಗಳ ಸಂತೃಪ್ತಿಗೇ ತಹತಹಪಡುತ್ತಿದ್ದಾನೆ ವಿಷಯಭೋಗಗಳಿಂದ ಇಂದ್ರಿಯಗಳ ತೇಜಸ್ಸು ಸವೆಯುತ್ತಾಬರುತ್ತದೆ ; ಆದರೂ ಮನುಷ್ಯನು ತಾನು ಭೋಗದಿಂದಲೇ ಮುಂದುವರಿಯುತ್ತಿದೇನೆಂದು ತಿಳಿಯುತ್ತಾನೆ. ಇಂತಿಷ್ಟನೆಯ ಹುಟ್ಟಿದ ಹಬ್ಬವನ್ನು ಮಾಡಿಕೊಳ್ಳುತ್ತೇನೆಂದು ಹಿಗ್ಗುತ್ತಿರುವನೇ ಹೊರತು ಅಷ್ಟಷ್ಟು ಆಯುಸ್ಸು ಮುಗಿದು ಸಾವಿಗೆ ಹತ್ತಿರವಾಗುತ್ತಿದೇನೆಂದು ಗೊತ್ತು ಮಾಡಿಕೊಳ್ಳಲಾರದೆ ಇರುತ್ತಾನೆ. ಆದ್ದರಿಂದ ಸ್ವಾಭಾವಿಕವಾಗಿರುವ ಈ ಪ್ರವೃತ್ತಿ ಯಿಂದ ಜ್ಞಾನೇಚ್ಛಾದಿಗಳನ್ನು ತಪ್ಪುಹಾದಿಯಲ್ಲಿ ಬಿಡುವದನ್ನು ನಿಲ್ಲಿಸಿ ಆಧ್ಯಾತ್ಮಶಾಸ್ತ್ರದಲ್ಲಿ ಹೇಳಿರುವಂತೆ ಅವುಗಳಿಗೆ ಸಂಸ್ಕಾರವನ್ನು ಉಂಟುಮಾಡಿ ಕೊಳ್ಳುವದಕ್ಕೆ ಯತ್ನಿಸಬೇಕು.

ಮೊಟ್ಟಮೊದಲು ನೈಸರ್ಗಿಕಭಾವನೆಯನ್ನು ಬಿಟ್ಟು ಅದರ ಬದಲು ಶಾಸ್ತ್ರೀಯಭಾವನೆಯನ್ನು ಅಭ್ಯಾಸಮಾಡಬೇಕು. 'ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ' ಎಂಬ ಶ್ರುತಿಯು ಹೇಳುವಂತೆ ಆದರಿಂದ ನಮ್ಮ ಕರ್ಮವೂ ಜ್ಞಾನವೂ ಸಂಸ್ಕಾರವನ್ನು ಹೊಂದಿ ನಮ್ಮನ್ನು ಅಮೃತತ್ವ ಕ್ಕೆ ಒಯ್ಯುತ್ತದೆ. ದೇವತಾರ್ಚನೆಮಾಡಿ, ಅತಿಥಿಸತ್ಕಾರವನ್ನು ಮಾಡಿದ ಬಳಿಕ

ಊಟಮಾಡುವದು, ಫಲಾಸಕ್ತಿಯಿಲ್ಲದೆ ಕರ್ಮವನ್ನು ಮಾಡುವದು-ಇವುಗಳಿಂದ ಕಾಮಪ್ರಧಾನವಾದ ಲೌಕಿಕಕರ್ಮದ ಹಿಡಿತವನ್ನು ತಪ್ಪಿಸಿಕೊಳ್ಳಬೇಕು. ಲೌಕಿಕಜ್ಞಾನವನ್ನು ಉಪಾಸನೆಯಿಂದ ಗೆದ್ದುಕೊಳ್ಳಬೇಕು. ಆಗ ಭಗವಂತನು ಹೇಳಿದಂತೆ ಅಭ್ಯಾಸದಿಂದ ಭಗವತ್ಪ್ರಾಪ್ತಿಯನ್ನು ಮಾಡಿಕೊಳ್ಳಬೇಕೆಂಬ ಸದಿಚ್ಛೆಯು ಉತ್ಪತ್ತಿಯಾಗುತ್ತದೆ. ಹೀಗೆ ಲೌಕಿಕಜ್ಞಾನೇಚ್ಛಾಕ್ರಿಯೆಗಳಿಗೆ ಸಂಸ್ಕಾರವನ್ನುಂಟುಮಾಡಿಕೊಂಡರೆ ನಿಜವಾದ ಜ್ಞಾನವು ತಲೆದೋರುವದಕ್ಕೆ ಮಾರ್ಗವನ್ನು ಕಲ್ಪಿಸಿಕೊಂಡಂತೆ ಆಗುತ್ತದೆ. ಇದನ್ನೆಯ ಹೆನ್ರಿ ಎಂಬಾತನು ರಾಜನಾಗುವ ಮುಂ[illegible]– ತುಂಟರ ಸಹವಾಸಮಾಡುತ್ತಿದ್ದವನು ರಾಜನಾಗುತ್ತಲೂ ಅವರನ್ನೆಲ್ಲ 'ಈಗ ನೀವು ನನ್ನ ರಾಜ್ಯಭಾರಕ್ರಮಕ್ಕೆ ನೆರವಾಗಬೇಕು' ಎಂದು ಹೇಳಿಕೊಂಡಂತೆ ಕವಿ ವರ್ಣಿಸಿರುತ್ತಾನೆ. ಹೀಗೆಯೇ ಸಾಧಕನಾದವನು ಸ್ವಾಭಾವಿಕಪ್ರವೃತ್ತಿಯಿಂದ ವಿಷಯಗಳಕಡೆಗೆ ಜಗ್ಗುತ್ತಿದ್ದ ಜ್ಞಾನೇಚ್ಛಾದಿಗಳನ್ನೇ ಭಗವತ್ಪ್ರಾಪ್ತಿಗೆ ಸಹಾಯಕವಾಗುವಂತೆ ಸಂಸ್ಕಾರದಿಂದ ಸರಿಪಡಿಸಿಕೊಳ್ಳಬೇಕು. ಆಗ ನಿವೃತ್ತಿಧರ್ಮದ ದಾರಿಯನ್ನು ಹಿಡಿದಂತೆ [illegible]ಗುತ್ತದೆ.

ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾऽऽತ್ಮಾನಂ ನಿಯಮ್ಯ ಚ |
ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ||
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ |
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ |
ಅಹಙ್ಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ |
ವಿಮುಚ್ಯ ನಿರ್ಮಮಃ ಶಾನ್ತೋ ಬ್ರಹ್ಮಭೂಯಾಯ ಕಲ್ಪತೇ ||

ಗೀ. ೧೮-೫೧, ೫೩

ವಿಷಯಗಳನ್ನು ಬಿಟ್ಟು, ಕಾರ್ಯಕರಣಗಳನ್ನು ಬಿಗಿಹಿಡಿದುಕೊಂಡು ಒಳಕ್ಕೆ ಸರಿಯುವದು ಪ್ರಪಂಚವನ್ನೆಲ್ಲ ಬಿಟ್ಟಂತೆ ಎಂದು ಮೊದಲು ಕಂಡರೂ, ನಿಜವು ಹೀಗಲ್ಲ. ಅಂತರ್ಮುಖನಾಗಿ ತನ್ನೊಳಗೇ ನೋಡಿಕೊಳ್ಳುವವನಿಗೆ ಈವರೆಗೆ ಕಾಣಿಸದೆಇದ್ದ ವಿಶಾಲತರಪ್ರಪಂಚವೊಂದು ಮನಸ್ಸಿನ ಕಣ್ಣಿಗೆ ಗೋಚರವಾಗುವದು. ಆಶೆಗೆ ತೊತ್ತಾಗಿರುವವರು ಎಲ್ಲರಿಗೂ ತೊತ್ತಾಗಿರುತ್ತಾರೆ; ಆಶೆಯನ್ನು ಬಿಟ್ಟವರು ಸರ್ವರ ಆತ್ಮನಾದ ಬ್ರಹ್ಮವೇ ಆಗಿಬಿಡುತ್ತಾರೆ. ನಿವೃತ್ತಿಮಾರ್ಗದಲ್ಲಿ ಹೆಜ್ಜೆಯಿಟ್ಟವರು ದೇಹೇಂದ್ರಿಯಾದಿಗಳಲ್ಲಿ ಆತ್ಮಭಾವವನ್ನು ಬಿಟ್ಟು, ಕಾಮರಾಗಾದಿಯುಕ್ತವಾದ ಬಲವನ್ನು ತ್ಯಜಿಸಿ, ಧರ್ಮವನ್ನು ಮೀರಿ ನಡೆಯುತ್ತಿದ್ದ ದರ್ಪವನ್ನೂ ಕಾಮಕ್ರೋಧಗಳನ್ನೂ ತ್ಯಜಿಸಿ ನನ್ನದೆಂಬುದೆಲ್ಲವನ್ನೂ ಬಿಟ್ಟು ಉಪಶಾಂತರಾಗಿ ಸರ್ವಗತವಾದ ಪರಮಾತ್ಮಸ್ವರೂಪದಲ್ಲಿ ನಿಲ್ಲುತ್ತಾರೆ.

ಕಾಮವಶರಾದವರಿಗೆ ಶೋಕವು ಕಟ್ಟಿಟ್ಟಬುತ್ತಿ : ಆದರೆ ಯಾರು ನಿವೃತ್ತಿಧರ್ಮಪರರಾಗಿ ಹಿಂದಕ್ಕೆ ಸರಿದುಕೊಳ್ಳುವರೋ ಅವರು ಕಡಿಮೆಯ ಜ್ಞಾನೇಚ್ಛಾಕ್ರಿಯೆಗಳನ್ನು ಜಯಿಸಿಕೊಂಡು ಅಥವಾ ಅವುಗಳನ್ನು ಸರಿಯಾದ ವಿನಿಯೋಗದಿಂದ ಉನ್ನತಿಗೆ ಏರಿಸಿಕೊಂಡು ಎಲ್ಲೆಲ್ಲಿಯೂ ಇರುವ ಬ್ರಹ್ಮ ವನ್ನು ತಮ್ಮ ಆತ್ಮನಾಗಿ ಕಂಡುಕೊಂಡು ಸರ್ವಭೂತಗಳಲ್ಲಿಯೂ ಒಬ್ಬನೇ ಪರಮಾತ್ಮನನ್ನು ಕಂಡುಕೊಳ್ಳುವ ಪರಮಜ್ಞಾನವೆಂಬ ಪರಭಕ್ತಿಯ ಸವಿಯನ್ನು ಕಂಡುಕೊಳ್ಳುವರು.

ಹೀಗೆ ಜ್ಞಾನೇಚ್ಛಾಕ್ರಿಯೆಗಳನ್ನು ಶುದ್ಧಿಕೊಳ್ಳುವ, ಕಸವನ್ನು ರಸಮಾಡಿ ಕೊಳ್ಳುವ, ಒಂದಾನೊಂದು ವಿದ್ಯೆಯೂ ಕಲೆಯೂ ಆಗಿರುವ ಈ ರಹಸ್ಯವು ಎಲ್ಲರಿಗೂ ದಕ್ಕದು. ಆದರೆ ಅದನ್ನು ಅಳವಡಿಸಿಕೊಂಡಿರುವ ಮಹಾತ್ಮರು ಇಂಥ ಕಲಿಗಾಲದಲ್ಲಿಯೂ ಇರುತ್ತಾರೆ. ಅವರೇ ಜ್ಞಾನಿಗಳು, ಅವರೇ ಕೃತ ಕೃತ್ಯರು. ಮಿಕ್ಕವರಿಗೆ ತನ್ನೊಳಗೆ ನೋಡಿಕೊಳ್ಳುವದೆಂದರೆ ಬಹಳ ಅಂಜಿಕೆ. ಶ್ರೀ ಗೌಡಪಾದಾಚಾರ್ಯರು ಹೇಳಿರುವಂತೆ

ಅಸ್ಪರ್ಶಯೋಗೋ ವೈ ನಾಮ ದುರ್ದರ್ಶಃ ಸರ್ವಯೋಗಿಭಿಃ ।
ಯೋಗಿನೋ ಬಿಭ್ಯತಿ ಹ್ಯಸ್ಮಾದಭಯೇ ಭಯದರ್ಶಿನಃ ॥ ಗೌ. ಕಾ. ೩-೩೯.

ಇಂಥ ಮಹನೀಯರಿಗೆ ಸಿಕ್ಕುವ ಪರಮಾರ್ಥವಾದ ತತ್ತ್ವಜ್ಞಾನವು ಆತ್ಮಸಂಸ್ಥ ವಾಗಿ ತನ್ನಲ್ಲಿ ತಾನಿದ್ದು ಪಡೆದುಕೊಳ್ಳುವ ನಿತ್ಯಾನಂದವಾಗಿರುತ್ತಿದ್ದು ವಿಷಯ ಗಳನ್ನು ಇಂದ್ರಿಯಗಳಿಂದ ಸಂಸ್ಪರ್ಶಮಾಡಿ ಪಡೆಯುವಂಥದ್ದಲ್ಲವಾದ್ದರಿಂದ ಇದನ್ನು ದೊಡ್ಡವರು ' ಅಸ್ಪರ್ಶಯೋಗ ' (ಯಾವದನ್ನೂ ಮುಟ್ಟದ ಯೋಗ) ಎಂದು ಕರೆಯುತ್ತಾರೆ. ಈ ನಿವೃತ್ತಿಮಾರ್ಗದಲ್ಲಿ ಕಾಲಿಟ್ಟವರಿಗಲ್ಲದೆ ಮಿಕ್ಕವರಿಗೆ ಅವರು ಎಂಥ ಉತ್ಕೃಷ್ಟಸಾಧನವನ್ನು ಮಾಡುತ್ತಿರಲಿ ಎಂದಿಗೂ ಅನುಭವಕ್ಕೆ ಬರಲಾರದು. ಅವರು ತನ್ನೊಳಕ್ಕೇ ಸರಿದು ತಮ್ಮದೇ ಆಗಿರುವ ಈ ಪರಮಾ ನಂದವನ್ನು ಕಂಡುಕೊಳ್ಳುವದೆಂದರೆ ಆತ್ಮನಾಶವೇ, ಸರ್ವಸ್ವವನ್ನೂ ಕಳೆದು ಕೊಂಡಂತೆಯೇ- ಎಂದು ಅಭಯವಾಗಿರುವವದರಲ್ಲಿ ಭಯವನ್ನು ಕಾಣುತ್ತಾ, ಅದರತ್ತ ಸುಳಿಯದೆ ಆತ್ಮವಂಚಕರಾಗುತ್ತಿರುವರು.

ಇದೊಂದು ವೇದಾಂತದ ರಹಸ್ಯವಲ್ಲದ ರಹಸ್ಯ. ಶರೀರಬುದ್ಧಿಯಿರುವವ ರೆಲ್ಲರೂ ಚರ್ಮಮಾಂಸದ ವ್ಯಾಪಾರದಲ್ಲಿ ತೊಡಗಿರುವ ಚಂಡಾಲರಿದ್ದಂತೆ, ಆದರೆ ಯಾವನು ಅನಾತ್ಮವನ್ನೆಲ್ಲ ಕಿತ್ತೊಗೆದು ತನ್ನೊಳಗೆತಾನೇ ಸರಿದುಕೊಂಡು, ತನ್ನ ಸ್ವರೂಪದಲ್ಲಿಯೇ ನಿಲ್ಲುವನೋ ಅವನೊಬ್ಬನೇ ಬ್ರಾಹ್ಮಣನು, ಅವನಿಗೇ ನಿತ್ಯಬ್ರಾಹ್ಮಣ್ಯದ ಪ್ರಾಪ್ತಿಯಾಗುವದು.

## ೬೫. ಸಿಂಹಾವಲೋಕನ

(2-9ವ62)

ಈವರೆಗೆ ಹೇಳಿರುವದನ್ನು ಕ್ರೋಢೀಕರಿಸಿ ಹೇಳಿದರೆ ಇಷ್ಟಾಗುವದು : ಜನರನ್ನು ಅವರ ಮನಃಸ್ಥಿತಿಯ ದೃಷ್ಟಿಯಿಂದ ಪ್ರಾಕೃತರು, ವಿಷಯಿಗಳು, ಮುಮುಕ್ಷುಗಳು, ಮುಕ್ತರು-ಎಂದು ನಾಲ್ಕು ಪಂಗಡಗಳಾಗಿ ವಿಂಗಡಿಸಬಹುದು ಪ್ರಾಕೃತರು ಪ್ರಕೃತಿಗೆ ವಶರಾಗಿರುತ್ತಾರೆ. ಆಹಾರ, ನಿದ್ರೆ, ಭಯ-ಮುಂತಾದವುಗಳಲ್ಲಿ ಅವರಿಗೂ ಪಶುಗಳಿಗೂ ಯಾವ ವಿಶೇಷವೂ ಇರುವದಿಲ್ಲ. ಅವರಿಗೆ ಇಂದ್ರಿಯಗಳಿವೆ ; ಅವುಗಳನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದು ತಿಳಿಯದು, ಅವು ತಮ್ಮನ್ನು ಎತ್ತ ಎಳೆದರೆ ಅತ್ತ ಹೋಗುತ್ತಿರುತ್ತಾರೆ. ಮನುಷ್ಯನೆಂದರೇನು ?-ಎಂದರೆ ನೆಟ್ಟಗೆ ನಿಂತುಕೊಳ್ಳಬಲ್ಲ ಪ್ರಾಣಿ, ಮಾತನಾಡುವ ಪ್ರಾಣಿ, ನಗುವ ಪ್ರಾಣಿ, ರೆಕ್ಕೆಗಳಿಲ್ಲದ ಎರಡು ಕಾಲಿನ ಪ್ರಾಣಿ-ಎಂದು ಮುಂತಾಗಿ ವರ್ಣಿಸುವದು ಈ ಪಂಗಡದ ಜನರಿಗೆ ಹೊಂದುತ್ತದೆ. ಇಂಥವರಿಗೆ ಯಾವ ಶಾಸ್ತ್ರದಿಂದಲೂ ಯಾವ ಪ್ರಯೋಜನವೂ ಆಗಲಾರದು.

ವಿಷಯಿಗಳು ಎರಡನೆಯ ಗುಂಪಿನವರು. ಇವರ ವಿಷಯಭೋಗಕ್ಕಾಗಿಯೇ ಮನುಷ್ಯನು ಹುಟ್ಟಿರುತ್ತಾನೆ ಎಂದು ಎಣಿಸುವವರು. ಇವರು ವಿಷಯಭೋಗಗಳಿಂದ ಸುಖವು ಸಿಕ್ಕುತ್ತದೆ ಎಂದು ಬಗೆಯುವವರು; ಆದ್ದರಿಂದ ವಿಷಯಗಳ ಜ್ಞಾನವನ್ನು ಮಾಡಿಕೊಳ್ಳುವದಕ್ಕೇ ಹವಣಿಸುತ್ತಿರುತ್ತಾರೆ ವಿಷಯಸಂಬಂಧದಿಂದ ಸುಖವು ತೋರುತ್ತದೆ ಎಂಬುದು ಇವರಿಗೆ ಚೆನ್ನಾಗಿ ತಿಳಿದಿದೆ; ಅದರಿಂದ ದುಃಖವೂ ಬರುತ್ತದೆ ಎಂಬ ಅರಿವೂ ಇದೆ. ದುಃಖವನ್ನು ಆದಷ್ಟು ಕಡಿಮೆಮಾಡಿಕೊಂಡು ಆದಷ್ಟು ಹೆಚ್ಚಿನ ಸುಖವನ್ನು ಸಂಪಾದಿಸಿಕೊಳ್ಳಬೇಕು ಎನ್ನುವದೇ ಇವರ ಗುರಿ. ಇಹಲೋಕದಲ್ಲಿ ಸುಖಿಗಳಾಗಿ ಬಾಳಬೇಕು- ಎನ್ನುವವರೆಲ್ಲ ಈ ಪಂಗಡದವರೇ. ಪ್ರಾಕೃತರನ್ನು ಬಿಟ್ಟರೆ ಇವರೇ ಹೆಚ್ಚಿನ ಸಂಖ್ಯೆಯವರು. ಲೌಕಿಕವಿದ್ಯಾಭ್ಯಾಸದಿಂದ ಇವರಿಗೆ ಪ್ರಯೋಜನವುಂಟು. ಭೌತಿಕವಿಜ್ಞಾನವೂ ಲೋಕವ್ಯವಹಾರದ ತಿಳಿವಳಿಕೆಯೂ ಇವರಿಗೆ ಮುಖ್ಯಸಾಧನ. ಅರ್ಥಶಾಸ್ತ್ರದ ತಿಳಿವಳಿಕೆ ಇಂಥ ವಿಷಯಿಗಳಿಗಾಗಿಯೇ ಹುಟ್ಟಿದೆ. ಧರ್ಮಶಾಸ್ತ್ರದ ತಿಳಿವಳಿಕೆಯೂ ಇದ್ದರೆ ಇವರಿಗೆ ಹೆಚ್ಚಿನ ಲಾಭವಾದೀತು ; ಏಕೆಂದರೆ ಸ್ವೇಚ್ಛಾಪ್ರವೃತ್ತಿಯಿಂದ ವಿಷಯಭೋಗಗಳನ್ನು ಅನುಭವಿಸಿ ಬೇಗನೆ ದುಃಖಕ್ಕೆ ಈಡಾಗುವ ಅಸುರಸಂಪತ್ತಿನವರಿಗಿಂತ ಧರ್ಮಕ್ಕೆ ಕಟ್ಟುಬಿದ್ದೇ ಸುಖವನ್ನು ಸಂಪಾದಿಸಿಕೊಳ್ಳುವವರು ದೀರ್ಘಾಯುಗಳಾಗುವರು ; ಬಲ, ಪ್ರಜ್ಞೆ, ಯಶಸ್ಸು-ಮುಂತಾದವುಗಳನ್ನು ಸಂಪಾದಿಸಿಕೊಳ್ಳುವರು. ಪುಣ್ಯಾಪಾಪಗಳು, ಜನ್ಮಾಂತರ,

ಲೋಕಾಂತರ– ಮುಂತಾದವುಗಳ ತಿಳಿವಳಿಕೆಯು ಇರುವ ದೂರದರ್ಶಿಗಳು ಎಂದಿಗೂ ಧರ್ಮಕ್ಕೆ ವಿರುದ್ಧವಾಗಿ ನಡೆಯಲಾರರು. ಆದ್ದರಿಂದಲೇ ಭಗವಂತನು ತನ್ನ ವಿಭೂತಿಗಳನ್ನು ಹೇಳಿಕೊಳ್ಳುವಾಗ 'ಧರ್ಮಾವಿರುದ್ಧಃ ಕಾಮೋಽಸ್ಮಿ' (ಗೀ. ೭–೧೧) ವಿಶುದ್ಧವಾದ ಕಾಮವೂ ನಾನೇ ಎಂದು ಹೇಳಿರುತ್ತಾನೆ.

ಇನ್ನು ಮುಮುಕ್ಷುಗಳು ಎಂಬ ಮೂರನೆಯ ಪಂಗಡದವರ ವಿಚಾರ. ಇವರು ಬರಿಯ ಭೋಗಗಳಿಂದ ತೃಪ್ತರಾಗುವಹಾಗಿಲ್ಲ. ಏಕೆಂದರೆ ಇಂದ್ರಿಯ ವಿಷಯಗಳ ಸಂಯೋಗದಿಂದಾಗುವ ಸುಖಗಳು ಕೊನೆಗೆ ದುಃಖವನ್ನೇ ಕೊಡುವವು ಎಂಬ ಅರಿವು ಅವರಿಗೆ ಆಗಿಬಿಟ್ಟಿರುತ್ತದೆ. ಅವರಿಗೆ ಇಂದ್ರಿಯಗಳನ್ನು ಗೆಲ್ಲುವದಕ್ಕೆ ಯಾವದಾದರೂ ಒಂದು ಉಪಾಯವಿದೆಯೆ ? ಮನಸ್ಸು, ನಮ್ಮನ್ನು ಗೋಳಾಡಿಸದಂತೆ ಮಾಡಿಕೊಳ್ಳುವದಕ್ಕೆ, ಯಾವದಾದರೂ ಉಪಾಯವಿದೆಯೆ ? ನಿತ್ಯವಾಗಿರುವ ಸುಖವೆಂಬುದು ನಿಜವಾಗಿ ಇದೆಯೆ ? ಇದ್ದರೆ ಅದರ ಪ್ರಾಪ್ತಿಗೆ ಉಪಾಯವೇನು ?– ಎಂಬೀ ಪ್ರಶ್ನೆಗಳೇ ಅವರ ಮನಸ್ಸಿನಲ್ಲಿ ಮತ್ತೆ ಮತ್ತೆ ಎದ್ದುಕೊಳ್ಳುತ್ತಿರುವವು. ಅವರಿಗೆ ಈ ಸಂಸಾರದ ಕಷ್ಟದಿಂದ ಪಾರಾಗಿ ನಿತ್ಯತೃಪ್ತರಾಗಿರುವ ಮಹಾತ್ಮರೂ ಇದ್ದಾರೆಯೆ ? ಇದ್ದರೆ ಅವರನ್ನು ಕಂಡು ಅವರ ಉಪದೇಶದಿಂದ ತಾವು ಮುಕ್ತರಾಗಬೇಕು, ಪರಮಪುರುಷಾರ್ಥವನ್ನು ಪಡೆಯಬೇಕು–ಎಂಬ ಹಂಬಲಿಕೆಯು ಬಲವಾಗಿ ಇರುತ್ತದೆ ಈ ಹಂಬಲಿಕೆಯ ಪರಿಪೂರ್ತಿಗಾಗಿಯೇ ವೇದಾಂತದರ್ಶನವು ಮಾರ್ಗದರ್ಶಿಯಾಗಿ ಬಂದಿರುವದು. ವೇದಾಂತವೆಂದರೆ ಇಲ್ಲಿ ಶ್ರುತಿಸ್ಮೃತಿಪುರಾಣಗಳು, ಭಗವದ್ಗೀತೆ, ವೇದಾಂತ ಸೂತ್ರ–ಇವುಗಳ ಅಭಿಪ್ರಾಯವನ್ನು ನಿರ್ಣಯಿಸಿಕೊಡುವ ಭಾಷ್ಯಾದಿಗಳು– ಇವುಗಳೆಲ್ಲವನ್ನೂ ಗ್ರಹಿಸಬೇಕು.

ಅಧ್ಯಾತ್ಮಗ್ರಂಥಗಳಲ್ಲಿ ಹೇಳಿರುವ ಸ್ಥಿತಪ್ರಜ್ಞ, ಪರಭಕ್ತ, ತ್ರಿಗುಣಾತೀತ– ಈ ಲಕ್ಷಣಗಳು ಯಾರಲ್ಲಿ ಹೆಚ್ಚಾಗಿ ಎದ್ದು ಕಾಣುವವೋ ಅವರು ಮುಕ್ತರು, ಕೃತಕೃತ್ಯರು. ಮುಮುಕ್ಷುಗಳಾದವರು ಹೇಗೆ ನಡೆದುಕೊಳ್ಳಬೇಕು ?– ಎಂದರೆ 'ಮುಕ್ತರನ್ನು ನೋಡಿ, ಅವರ ಮೇಲುಪಙ್ಕ್ತಿಯನ್ನು ಅನುಕರಿಸಿರಿ'– ಎಂದು ವೇದಾಂತವು ಹೇಳಿಕೊಡುತ್ತದೆ. ಶ್ರೀಶಂಕರಾಚಾರ್ಯರು ಈ ವಿಷಯದಲ್ಲಿ ಬರೆದಿರುವದೇನೆಂದರೆ: 'ಸರ್ವತ್ರೈವ ಹಿ ಅಧ್ಯಾತ್ಮಶಾಸ್ತ್ರೇ ಕೃತಾರ್ಥಲಕ್ಷಣಾನಿ ಯಾನಿ ತಾನ್ಯೇವ ಸಾಧನಾನ್ಯುಪದಿಶ್ಯನ್ತೇ ಯತ್ನಸಾಧ್ಯತ್ವಾತ್ ||' ಅಧ್ಯಾತ್ಮ ಶಾಸ್ತ್ರದಲ್ಲೆಲ್ಲ ಯಾವವು ಕೃತಾರ್ಥರ ಲಕ್ಷಣವಾಗಿರುವವೋ ಕೃತಕೃತ್ಯರಾಗಿರುವ ಜ್ಞಾನಿಗಳು ಎಂಥ ನಡೆನುಡಿಗಳುಳ್ಳವರಾಗಿರುವರೋ ಅವುಗಳೇ ಮುಮುಕ್ಷುಗಳಿಗೆ ಸಾಧನಗಳೆಂದು ಉಪದಿಷ್ಟವಾಗಿರುತ್ತವೆ. ಏಕೆಂದರೆ ಆ ಲಕ್ಷಣಗಳು ಪ್ರಯತ್ನದಿಂದ ಸಾಧಿಸಿಕೊಳ್ಳತಕ್ಕವುಗಳಾಗಿರುತ್ತವೆ. ಲೋಕದಲ್ಲಿ ಯಾವನೊಬ್ಬನೂ 'ನಾನು ಮುಕ್ತನು, ಕೃತಕೃತ್ಯನು ; ನನ್ನಂತೆ ನಡೆದುಕೊಂಡು ನೀವೂ

ಕೃತಕೃತ್ಯರಾಗಿರಿ' ಎಂದು ಸಾರುವ ಧಾರ್ಷ್ಟ್ಯವನ್ನು ವಹಿಸಿರುವದಿಲ್ಲ. ಏಕೆಂದರೆ ಇಂಥ ಧಾರ್ಷ್ಟ್ಯವೇ ಅಜ್ಞಾನದ ಗುರುತು. ಆದರೂ ಸಾಧಕ ರಾದವರು ಪ್ರಯತ್ನಪೂರ್ವಕವಾಗಿ ಹುಡುಕಿದರೆ ಶ್ರೋತ್ರಿಯರೂ ಬ್ರಹ್ಮನಿಷ್ಠರೂ ಆದ ಸದ್ಗುರುಗಳು ಸಿಕ್ಕುವದೇನೂ ಕಷ್ಟವಲ್ಲ ; ಶಾಸ್ತ್ರೋಕ್ತವಾದ ಕೃತಕೃತ್ಯರ ಲಕ್ಷಣಗಳಿಂದ ಯಾರು ಕೂಡಿರುವರೋ 'ಇಂಥ ಮಹನೀಯರಿಂದ ನನಗೆ ಉಪಕಾರ ವಾದೀತು, ನನ್ನನ್ನು ಇವರು ಸಂಸಾರಬಂಧದಿಂದ ಬಿಡಿಸಿಯಾರು'–ಎಂಬ ವಿಶ್ವಾಸವು ಎಲ್ಲಿ ಆಗುವದೋ ಅಂಥವರನ್ನೇ ಆಶ್ರಯಿಸಿ ಅವರ ಉಪದೇಶದಿಂದ ಮುಮುಕ್ಷು ಗಳು ತಮ್ಮ ಗುರಿಯನ್ನು ಮುಟ್ಟಬೇಕು.

ಮತಗಳಲ್ಲಿಯೂ ಜನರಿಗೆ ಸಾಧನಗಳನ್ನು ಉಪದೇಶಿಸಿರುತ್ತದೆ. ಇಂಥಿಂಥ ನಿಯಮಗಳನ್ನು ಅನುಸರಿಸಿ ನೀವು ನಡೆದುಕೊಂಡರೆ ನಿಮಗೆ ಪರಲೋಕ ದಲ್ಲಿ ಸದ್ಗತಿಯಾಗುವದು– ಎಂಬುದೇ ಮುಖ್ಯವಾಗಿ ಮತಗಳು ಮಾಡುವ ಉಪದೇಶವು. ಅನೇಕ ಮತಗಳಲ್ಲಿ ತಾವುತಾವು ಒಪ್ಪಿರುವ ಧರ್ಮಗ್ರಂಥ ಗಳನ್ನು ಪ್ರಮಾಣವೆಂದು ಒಪ್ಪಬೇಕೆಂಬ ನಿರ್ಬಂಧವಿದೆ ; ತಾವುತಾವು ಹೇಳಿರುವ ಲಕ್ಷಣವುಳ್ಳವನೇ ಪರಮೇಶ್ವರನು, ಅವನನ್ನು ಶ್ರದ್ಧಾಭಕ್ತಿಗಳಿಂದ ಸೇವಿಸುವದ ರಿಂದ ಸರಿಯಾದ ಮಾರ್ಗವೂ ಪರಸುಖವೂ ದೊರಕುವದು –ಎಂಬುದು ಅವುಗಳ ಬೋಧೆ. ಆದರೆ 'ಕನ್ನಡಿಯೊಳಗಿನ ಗಂಟಿಗಿಂತ ಕೈಯೊಳಗಿನ ದಂಟೇ ಲೇಸು' ಎನ್ನುವ, ಐಹಿಕಸುಖಭೋಗವೇ ಪ್ರಧಾನವಾಗಿರುವ, ಈ ಕಾಲಕ್ಕೆ 'ಪರಲೋಕ ವಿದೆಯೊ, ಇಲ್ಲವೊ, ಈಶ್ವರನು ಇದಾನೆಂಬುದಕ್ಕೆ ಪ್ರಮಾಣವೇನು ?' ಎಂದು ಯುಕ್ತಿಪ್ರಧಾನರಾಗಿ ಪ್ರಶ್ನಿಸುವವರೇ ಹೆಚ್ಚಾಗಿರುವ ಈ ಕಾಲಕ್ಕೆ ಮತಗಳಿ ಗಿಂತಲೂ ಅವುಗಳ ಸಾರವನ್ನೆಲ್ಲ ಒಳಗೊಂಡು ಈಗಲೇ ಇಲ್ಲಿಯೇ ಫಲವನ್ನು ಕೊಡುವ ದಾರಿಯನ್ನು ತೋರಿಸಿಕೊಡುವ, ಭಗವದ್ಭಕ್ತಿಯೇ ಮುಂತಾದವುಗಳ ಶ್ರೈಷ್ಠ್ಯವನ್ನು ಯುಕ್ತ್ಯನುಭವಗಳಿಂದಲೇ ಮನಗಾಣಿಸುವ ವೇದಾಂತವು ಸರ್ವಾದರಣೀಯವಾಗಿರುತ್ತದೆ. 'ಅತ್ರ ಬ್ರಹ್ಮ ಸಮಶ್ನುತೇ', (ಕಾ.) 'ತರತಿ ಶೋಕಮಾತ್ಮವಿತ್' (ಛಾಂ.)–ಮುಂತಾದ ಶ್ರುತಿಗಳೂ 'ಈಶ್ವರಃ ಸರ್ವಭೂತಾ ನಾಂ ಹೃದ್ದೇಶೇಽರ್ಜುನ ತಿಷ್ಠತಿ | ಭ್ರಾಮಯನ್ ಸರ್ವಭೂತಾನಿ ಯನ್ತ್ರಾ ರೂಢಾನಿ ಮಾಯಯಾ | ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ | ತತ್ಪ್ರಸಾ ದಾತ್ ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ||' (ಗೀ. ೧೮–೬೨), ಮುಂತಾದ ಸ್ಮೃತಿಗಳೂ 'ಸಕಲಮಿದಮಹಂ ಚ ವಾಸುದೇವಃ' (ವಿ. ಪು.೩–೭– ೩೨) –ಮುಂತಾದ ಪುರಾಣಗಳೂ ನಿಃಸಂಶಯವಾದ ವಚನಗಳಿಂದ ಹೀಗೆಂದು ಸಾರುತ್ತಿರುವವು.

ವೇದಾಂತವು 'ಹೀಗೆಹೀಗೆ ನಡೆದುಕೊಂಡರೆ, ಲೋಕಾಂತರದಲ್ಲಿ ಯಾವದೋ ಒಂದು ವಿನೋದಕಾಲಕ್ಷೇಪವನ್ನು ಮಾಡುವಂಥ ಭೋಗರಾಶಿಯು ಸಿಕ್ಕುತ್ತದೆ'

ಎಂದಾಗಲಿ, 'ಹೀಗೆ ನಡೆದುಕೊಳ್ಳದೆ ಇದ್ದರೆ ಇಂಥಿಂಥ ಯಾತನೆಗಳನ್ನು ಅನುಭವಿಸಬೇಕಾಗುತ್ತದೆ' ಎಂದಾಗಲಿ, ಆಶಾಪ್ರತೀಕ್ಷೆಗಳನ್ನೋ ಅಂಜಿಕೆಗಳನ್ನೋ ತೋರಿಸಿ ಜನರನ್ನು ತನ್ನ ಮಾರ್ಗಕ್ಕೆ ಸೆಳೆದುಕೊಳ್ಳುವದಕ್ಕೆ ಪ್ರಯತ್ನಿಸುವದಿಲ್ಲ. 'ಈ ಜನ್ಮದಲ್ಲಿಯೇ ನಿತ್ಯವಾದ ಶಾಂತಿಸುಖಗಳ ಅನುಭವವು ತನಗೆ ತೋರಬೇಕಾದರೆ ಇಂಥಿಂಥ ಕಟ್ಟುಪಾಡುಗಳಿಗೆ ಸಾಧಕನು ಒಳಪಡಬೇಕು' ಎಂಬುದೇ ವೇದಾಂತದ ಉಪದೇಶ. 'ಇಂತಿಷ್ಟು ಕಾಲ ನಿಯಮದಿಂದ ವಿದ್ಯಾಭ್ಯಾಸಮಾಡುವವರಿಗೆ ಇಷ್ಟುಮಟ್ಟಿನ ಜ್ಞಾನವು ವಶವಾಗುವದು' ಎಂದು ವಿಶ್ವವಿದ್ಯಾನಿಲಯಗಳು ಗೊತ್ತುಮಾಡಿರುವಂತೆಯೇ ಈ ಉಪದೇಶದ ಅಭಿಪ್ರಾಯವನ್ನು ನಿಶ್ಚಯಿಸಬೇಕು. ಈ ಕಟ್ಟುಪಾಡುಗಳಿಗೆ ಒಳಪಟ್ಟು ತತ್ತ್ವವಿಚಾರವನ್ನು ಮಾಡುವವರಿಗೆ ಮಾತ್ರವೇ ಇಲ್ಲಿ ಹೇಳಿರುವ ಪುರುಷಾರ್ಥದ ಅಪರೋಕ್ಷವಾದ ಅನುಭವವಾಗುವದು. ಇಲ್ಲದಿದ್ದರೆ ಇಲ್ಲ. ಈ ಕಟ್ಟುಪಾಡುಗಳೇ ಸಾಧನಗಳು. ಇವನ್ನು ಮಾಡಿಯೇ ಸಾಧಕನು ಕೃತಕೃತ್ಯನಾಗಬೇಕಾಗಿರುತ್ತದೆ. ಶಾಸ್ತ್ರದಲ್ಲಿ ಹೇಳಿರುವ ಕಟ್ಟುಪಾಡುಗಳಿಗೆ ತಾನೇ ತನ್ನ ಶ್ರೇಯಸ್ಸಿಗಾಗಿ ಒಳಪಡಬೇಕು; ಇದೇನೂ ಅಪರಾಧಿಗಳಿಗೆ ನ್ಯಾಯಾಧಿಪತಿಯು ವಿಧಿಸುವ ದಂಡನೆಯಲ್ಲ. ವೈದ್ಯನು ರೋಗಿಗೆ ತಿಳಿಯಿಸಿಕೊಡುವ ಪಥ್ಯಕ್ರಮದಂತೆ ಸಾಧಕನ ಹಿತಕ್ಕಾಗಿಯೇ ಈ ಸಾಧನಗಳು ವಿಹಿತವಾಗಿರುತ್ತವೆ. ಉತ್ಕೃಷ್ಟವಾದ ಮೇಲುಮಟ್ಟದ ಜೀವನದ ಆನಂದವು ಬೇಕೆ? ಹಾಗಾದರೆ ಇವುಗಳನ್ನು ಅನುಸರಿಸಿ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು; ಅದು ಸಾಗದವರು ಸ್ವಾಭಾವಿಕವಾದ ಸುಖದುಃಖಗಳ ಹೊಡೆತದ ಸಂಸಾರದಲ್ಲಿ ಬಿದ್ದು ನರಳುತ್ತಿರಬೇಕಾಗುವದು. ಅಷ್ಟೆ. ಸಾಧನಗಳನ್ನು ಮಾಡುವದೆಂದರೆ–ಈಚೆಗೆ ವಿಜ್ಞಾನಶಾಸ್ತ್ರಜ್ಞರು ಕಂಡುಹಿಡಿದಿರುವ ಲೆಕ್ಕಮಾಡುವ ಯಂತ್ರ, ಭಾಷಾಂತರಕ್ಕೆ ಅನುವಾದಮಾಡುವ ಯಂತ್ರ, ಕೀಲುಕೊಟ್ಟರೆ ನೂರಾರುವರ್ಷಗಳು ನಡೆಯುವ ಗಡಿಯಾರ ಮುಂತಾದವುಗಳಂತೆ– ಸುಮ್ಮನೆ ಮಾಡುತ್ತಿರಬೇಕಾದ ಕರ್ತವ್ಯಗಳ ರಾಶಿಯಲ್ಲ. ಇವಕ್ಕೆ ಕ್ರಮವುಂಟು, ಪ್ರಮಾಣವುಂಟು, ಮಿತಿಯುಂಟು; ಜ್ಞಾನವೇ ಇವಕ್ಕೆಲ್ಲ ಗುರಿ. ಇವನ್ನು ಒಂದು ಸೋಪಾನಕ್ರಮದಿಂದ ಮಾಡಬೇಕು, ಮಜಲನ್ನು ಮುಟ್ಟಬೇಕು.

ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ |
ನಾಶಾಂತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ||
ಕಾ. ೧–೨–೨೪

ಮೊಟ್ಟಮೊದಲು ದೇಹದಲ್ಲಿರುವ ಆತ್ಮಬುದ್ಧಿಯನ್ನು ಕಳೆದುಕೊಳ್ಳಬೇಕು. ಯಾವನನ್ನು 'ದೇಹನೇ ನಾನು' ಎಂಬ ಬುದ್ಧಿಯು ಆವರಿಸಿಕೊಂಡಿರುವದೋ ಅವನು ದೇಹದ ಸುಖಕ್ಕಾಗಿ ಯಾವ ಪಾಪವನ್ನೂ ಮಾಡುವದಕ್ಕೆ ಹೇಸುವದಿಲ್ಲ. ಅಂಥವನಿಗೆ ಪರಮಾತ್ಮನ ಜ್ಞಾನವು ಹೇಗೆ ಬರಬೇಕು? ದೇಹವನ್ನು ಗೆದ್ದ

ಕೊಂಡ ಬಳಿಕ ಇಂದ್ರಿಯಲೌಲ್ಯದಿಂದ ಬಿಡುಗಡೆಹೊಂದಬೇಕು; ಇಂದ್ರಿಯಗಳು ವಿಷಯಗಳಲ್ಲಿಯೇ ಆಡುತ್ತಿರುವಂಥವನಿಗೆ ಸರ್ವಾಂತರಾತ್ಮನಾದ ಪರಮಾತ್ಮನ ಜ್ಞಾನವು ಎಂದಿಗಾದರೂ ಆದೀತೆ? ಇಲ್ಲ. ಆದ್ದರಿಂದ ಸಾಧಕನು ಇಂದ್ರಿಯಗಳ ಚಾಪಲ್ಯದಿಂದ ಉಪರತನಾಗಬೇಕು ವೇದಾಂತವೆಂಬುದು ಜೀವಂತದರ್ಶನ. ಜೀವನದ ಗುರಿ ಏನು?-ಎಂಬುದನ್ನು ತಿಳಿಯುವದಕ್ಕೆ ಇಚ್ಛಿಸದವರಿಗೆ ಈ ದರ್ಶನದಿಂದ ಯಾವ ಉಪಯೋಗವೂ ಇಲ್ಲ. ಜೀವನವು ಇಹಕ್ಕೆ ಎಂದು ಕೆಲವರು, ಪರಕ್ಕೆ ಎಂದು ಮತ್ತೆ ಕೆಲವರು; ಆದರೆ ಇದು ಇಲ್ಲಿಯೇ ಪರಮಪುರುಷಾರ್ಥವನ್ನು ಪಡೆದುಕೊಳ್ಳುವದಕ್ಕೆ- ಎಂದು ವೇದಾಂತವು ಹೇಳುತ್ತದೆ. ಶಾಸ್ತ್ರಾಚಾರ್ಯರು ಹೇಳುವ ಉಪದೇಶವು ಇಲ್ಲಿ ಜೀವನದ ಗುರಿಗೆ ಮುಟ್ಟುವದಾಗಿರಬೇಕು; ಮುಂದೆ ಆಗುವ ತನ್ನ ಅನುಭವಕ್ಕೂ ಅದು ಹೊಂದುಗೆಯಾಗಬೇಕು. ಆದ್ದರಿಂದ ವಿಷಯಲೋಲುಪತೆಯಿಂದ ಇಂದ್ರಿಯಗಳನ್ನು ಹಿಂಜಗ್ಗಿಕೊಂಡು ಸಮಾಹಿತನಾಗಬೇಕು. ಸಮಾಧಾನವನ್ನು ಪಡೆಯುವದಕ್ಕೆ ಮೊದಲು ಕರ್ಮಯೋಗವನ್ನು ಮಾಡಬೇಕು. ದ್ವಂದ್ವಗಳನ್ನು ಮಾರಿ, ಕರ್ಮಸಂಗ, ಫಲಾಸಕ್ತಿ-ಇವುಗಳನ್ನು ಬಿಟ್ಟು ಈಶ್ವರಪ್ರೀತ್ಯರ್ಥವಾಗಿಯೇ ಕರ್ಮವನ್ನು ಮಾಡುವದೆಂಬ ಅಂಶತ್ರಯಯುಕ್ತವಾದದ್ದೇ ಕರ್ಮಯೋಗವೆಂದು ಹಿಂದೆ ಹೇಳಿದೆ. ಇದರಲ್ಲಿ ಈಶ್ವರನಲ್ಲಿಯೇ ಮನಸ್ಸಿಡುವದೆಂಬ ಚಿತ್ತಸಮಾಧಾನದ ಅಂಶವೂ ಸೇರಿರುತ್ತದೆ. ಈ ಬಹಿರಂಗಸಾಧನವು ಅಳವಟ್ಟಬಳಿಕ ಧ್ಯಾನಯೋಗದಿಂದ ಚಿತ್ತಸಮಾಧಾನವನ್ನು ಮಾಡಿಕೊಳ್ಳಬೇಕು. ಯಾವನ ಚಿತ್ತವು ಸ್ವಲ್ಪವೂ ಚಾಂಚಲ್ಯವಿಲ್ಲದಂತೆ ಸಮಾಹಿತವಾಗುವದೋ, ಯಾವನು ಆ ಸಮಾಧಿಯಿಂದಾಗುವ ಸುಖದ ಆಶೆಯನ್ನು ಕೂಡ ತೊರೆದುಕೊಳ್ಳುವನೋ ಅವನಿಗೇ ಆತ್ಮಪ್ರಜ್ಞಾನವುಂಟಾಗುವದು. ಆ ಪ್ರಜ್ಞಾನದಿಂದ ಆತ್ಮಪ್ರಾಪ್ತಿಯೂ ಆಗುವದು.

ನಾವು ಉದಾಹರಿಸಿರುವ ಕಾಠಕಶ್ರುತಿಯ ಅಭಿಪ್ರಾಯವನ್ನು ಈವರೆಗೆ ವರ್ಣಿಸಿದ್ದಾಯಿತು. ಈ ಸಾಧನಸೋಪಾನವನ್ನು ಕ್ರಮಕ್ರಮವಾಗಿ ಏರಿದವರಿಗೆ ಪರಮಾತ್ಮನ "ಪ್ರಜ್ಞಾನ"ವಾಗುವದು ಎಂದು ಶ್ರುತಿಯಲ್ಲಿ ಹೇಳಿರುತ್ತದೆಯಷ್ಟೆ; ಈ ಪ್ರಜ್ಞಾನದ ವಿಶೇಷವೇನು? ಇದು ಗಣಿತಶಾಸ್ತ್ರವೇ ಮುಂತಾದವುಗಳ ಜ್ಞಾನದಂತೆ ಕೇವಲ ಬುದ್ಧಿಯಿಂದ ಸಂಪಾದಿಸಿಕೊಳ್ಳುವ ಜ್ಞಾನವಲ್ಲ; ಕೆಲವು ಶಾಸ್ತ್ರದ ಪಙ್ಕ್ತಿಗಳನ್ನು ಗಟ್ಟಿಮಾಡಿಕೊಂಡು ಒಪ್ಪಿಸುವವರ ಜ್ಞಾನವೂ ಅಲ್ಲ. ಇದೊಂದು ಅನುಭವವಿಶೇಷ, ಶಾಸ್ತ್ರೀಯಕರ್ಮ, ಕರ್ಮಯೋಗ, ಧ್ಯಾನಯೋಗ- ಇವುಗಳನ್ನು ಕ್ರಮಕ್ರಮವಾಗಿ ಅಭ್ಯಾಸಮಾಡಿಕೊಂಡಿರುವಾತನಿಗೆ ಆಗುವ ಈ ಜ್ಞಾನವು ಒಂದಾನೊಂದು ಅನುಭವವಿಶೇಷವು. "ಸರ್ವಭೂತ

ಗಳಲ್ಲಿಯೂ ಬೇರೆಬೇರೆಯಾಗಿ ಇರುವಂತೆ ತೋರುವ ಒಬ್ಬನೇ ಆತ್ಮನಿರುತ್ತಾನೆ ; ಅವನೇ ನನ್ನ ಆತ್ಮನು. ಆ ಆತ್ಮನನ್ನು ಆಧಾರವಾಗಿಟ್ಟುಕೊಂಡೇ ಎಲ್ಲರೂ ಇರುತ್ತಾರೆ" ಎಂಬ ಅನುಭವವು ಆಗ ಆಗುತ್ತದೆ. ಈ ಜ್ಞಾನವನ್ನು ಪರಭಕ್ತಿಯೆಂದೂ ಕರೆಯುತ್ತಾರೆ.

ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ |
ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ |
ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್ ||

ಗೀ. ೧೮-೫೪, ೫೫.

ಪರಮಾತ್ಮನಲ್ಲಿ ಆಗುವ ಈ ಪರಭಕ್ತಿಯೂ ಪರಜ್ಞಾನವೂ ಒಂದೇ ; ಬೆಂಕಿಯಲ್ಲಿರುವ ಬಿಸಿಯೂ ಬೆಳಕೂ ಬೇರೆಬೇರೆ ಅರ್ಥಕ್ರಿಯೆಗಳಿಂದ ಒಂದೇ ವಸ್ತುವಿನ ಸ್ವಭಾವಕ್ಕೆ ಕೊಟ್ಟ ಹೆಸರಾಗಿರುವಂತೆ ಜ್ಞಾನ, ಭಕ್ತಿ-ಎಂಬ ಎರಡು ಹೆಸರುಗಳೂ ಒಂದೇ ಒಂದು ಅನುಭವಕ್ಕೆ ಕೊಟ್ಟವುಗಳಾಗಿವೆ. ಈ ಅನುಭವ ವುಂಟಾಗಿರುವವರು ನಿತ್ಯಶಾಂತರಾಗಿ, ನಿತ್ಯತೃಪ್ತರಾಗಿರುತ್ತಾರೆ; ಅವರ ಬಳಿಯಲ್ಲಿ ಇರುವವರಿಗೆಕೂಡ ಸಂಸಾರತಾಪದ ಬೇಗೆಯು ಕಾಣಿಸುವದಿಲ್ಲ. ಹಿಂದೆ ಋಷ್ಯಾಶ್ರಮಗಳಲ್ಲಿ ಹುಲಿ, ಜಿಂಕೆ-ಮುಂತಾದ ಪ್ರಾಣಿಗಳುಕೂಡ ಪರಸ್ಪರ ಪ್ರೇಮದಿಂದ ಇರುತ್ತಿದ್ದವೆಂದು ವರ್ಣಿಸಿರುವದನ್ನು ನೀವು ಕೇಳಿರಬಹುದು. ಇಂಥ ಜ್ಞಾನವು ಈಗಲೇ ಸಾಧಕರೆಲ್ಲರಿಗೂ ದೊರೆಯುವ ಸಂಭವವಿದೆ ಎಂದಾದರೆ ನಾವೇಕೆ ಪ್ರಯತ್ನಿಸಬಾರದು ?

ವೇದಾಂತದಲ್ಲಿ ತೀರ ಕೆಳಗಿನ ಅಂತಸ್ತಿನವರಿಗೂ ತಿದ್ದಿಕೊಳ್ಳುವ ಅವಕಾಶ ವಿದೆ. ಬೇರೆಬೇರೆಯ ಅಂತಸ್ತಿನವರಿಗೂ ಅವರವರಿಗೆ ತಕ್ಕ ಸಾಧನವಿಶೇಷಗಳನ್ನು ಉಪದೇಶಿಸಿದೆ. ಎಲ್ಲರೂ ಇದನ್ನು ಅನುಷ್ಠಾನಮಾಡಿ ಜ್ಞಾನೇಚ್ಛಾಕ್ರಿಯಾ ಶಕ್ತಿಗಳಿಗೆ ಸಂಸ್ಕಾರವನ್ನು ತಂದುಕೊಳ್ಳಬಹುದು. ಅಂತ್ಯದಲ್ಲಿ ಪರಮಾರ್ಥ ಜ್ಞಾನವನ್ನು ಸಂಪಾದಿಸಿಕೊಳ್ಳಬಹುದು. ಈ ತಿಳಿವಳಿಕೆಯು ಮನುಷ್ಯಜೀವನದ ಎಲ್ಲಾ ಭಾಗಗಳಿಗೂ ಮೆರುಗನ್ನು ಕೊಡುತ್ತದೆ; ಈ ತಿಳಿವಳಿಕೆಯನ್ನು ಸಂಪಾದಿಸುವದಕ್ಕೆ ಪ್ರಯತ್ನಿಸುವವರುಕೂಡ, ತಮ್ಮ ವೈಯಕ್ತಿಕಜೀವನವೇ ಅಲ್ಲದೆ, ಕುಟುಂಬ, ಸಮಾಜ, ರಾಷ್ಟ್ರದ ಸುಸ್ಥಿತಿ- ಮುಂತಾದ ಎಲ್ಲಾ ಐಹಿಕಶಾಖೆಗಳಲ್ಲಿಯೂ ವ್ಯವಸ್ಥಿತಕ್ರಮದಿಂದ ಕರ್ತವ್ಯವನ್ನು ನೆರವೇರಿಸುವದಕ್ಕೆ ಅವಕಾಶವಿದೆ. ಆದ್ದರಿಂದ ಇದು ಜೀವಂತದರ್ಶನವೆಂದು ಹೇಳಿದ್ದು ಒಣಹೆಮ್ಮೆಯ ಮಾತಲ್ಲ. ಪೂರ್ಣಾರ್ಥದಲ್ಲಿಯೂ ವೇದಾಂತವು ಜೀವಂತದರ್ಶನವೇ ಆಗಿರುತ್ತದೆ.

---

# ೪೬. ಮನುಷ್ಯಪ್ರಧಾನವಾದರೂ ವೇದಾಂತವು ಪೂರ್ಣದರ್ಶನ

(3—9—62)

ವೇದಾಂತವು ಮನುಷ್ಯಪ್ರಧಾನವಾದ ದರ್ಶನವೆಂದೂ ಆದ್ದರಿಂದ ಇದು ಜೀವಂತದರ್ಶನವೆಂದೂ ಹೇಳಲಾಯಿತು. ಹಾಗಾದರೆ ಇದನ್ನು ಪೂರ್ಣದರ್ಶನ ವೆನ್ನಬಹುದೆ ? –ಎಂಬ ಪ್ರಶ್ನೆಯೊಂದು ಎದ್ದುಕೊಳ್ಳುವ ಸಂಭವವಿದೆ. ಇಡಿಯ ಬ್ರಹ್ಮಾಂಡದಲ್ಲಿ ಮಾನವನ ಸ್ಥಾನವೇನು ? ಇದರಲ್ಲಿ ಮೇಲೆ ಕಾಣುವ ಸೂರ್ಯ ಚಂದ್ರನಕ್ಷತ್ರಾದಿಗಳು, ಅಂತರಿಕ್ಷದಲ್ಲಿರುವ ಹಕ್ಕಿಗಳು, ಸಣ್ಣಪ್ರಾಣಿಗಳು ಇವೆ. ಅನೇಕ ಗ್ರಹಗಳೊಳಗೆ ಒಂದಾಗಿರುವ ಈ ಭೂಮಿಯೇ ಎಷ್ಟರದಾದೀತು? ಇದರಲ್ಲಿ ರುವ ಬೆಟ್ಟ, ನದಿ, ಸಮುದ್ರ ; ಕಾಡುಗಳಲ್ಲಿರುವ ಪ್ರಾಣಿಗಳು, ಕ್ರಿಮಿಕೀಟಗಳು, ಇವುಗಳೊಳಗೆ ಮನುಷ್ಯನೊಬ್ಬನು 'ನಾನು' ಎಂದು ಅಭಿಮಾನದಿಂದ ಹೇಳಿ ಕೊಂಡರೆ ಅವನ ಮಾತಿಗೆ ಯಾವ ಮನ್ನಣೆ ಬಂದೀತು ? ವಿಜ್ಞಾನಶಾಸ್ತ್ರಜ್ಞರು ಹೇಳುತ್ತಿರುವದೇನೆಂದರೆ : ಈ ಲೋಕದಲ್ಲಿ ಪ್ರಾಣವೆಂಬುದು ಉಂಟಾದದ್ದು ಐನೂರು ಅಥವಾ ಸಾವಿರ ಮಿಲಿಯ (ದಶಲಕ್ಷ) ವರ್ಷಗಳ ಕೆಳಗೆ, ಆ ಪ್ರಾಣ ವೆಂಬುವೇ ಈಗ ನಮಗೆ ಕಾಣುತ್ತಿರುವ ವಿಧವಿಧವಾದ ರೂಪಗಳಿಂದ ತೋರು ತ್ತಿರುತ್ತದೆ. ಸಸ್ಯಗಳ ಮತ್ತು ಪ್ರಾಣಿಗಳ ಎಲ್ಲಾ ಜಾತಿಗಳೂ ಒಂದೇ ವಂಸಕ್ಕೆ ಸೇರಿದವುಗಳು. ಅಮೀಬಾ ಎಂಬ ಸೂಕ್ಷ್ಮತಮವಾದ ಸಜೀವವಸ್ತುವಿನಿಂದ ಬಗೆ ಬಗೆಯ ಜಾತಿಯ ಪ್ರಾಣಿಗಳಾಗಿ ವಿಕಾಸವಾಗುತ್ತಾ ವಾನರಜಾತಿಯ ದ್ವಾರ ದಿಂದ ಈಗಿನ ನರನಾಗಿರುತ್ತಾನೆ. ಈ ವಿಕಾಸಕ್ರಮದಲ್ಲಿ ಮೊನ್ನೆಮೊನ್ನೆ ಸುಮಾರು ಒಂದುಲಕ್ಷವರ್ಷಗಳ ಕೆಳಗೆ ಕಣ್ಣುಬಿಟ್ಟ ಮನುಷ್ಯನನ್ನು ಪ್ರಧಾನವಾಗಿ ಮಾಡಿ ಕೊಂಡ ದರ್ಶನವು ಪೂರ್ಣವೆಂದು ಹೇಗೆತಾನೆ ಹೇಳಬಹುದು ? ಇನ್ನು ಮನುಷ್ಯನ ಹೆಚ್ಚುಗಾರಿಕೆಯೇನು ? –ಎಂದರೆ ಅವನ ಬುದ್ಧಿ ಎಂದು ಕೆಲವರು, ಹೃದಯವು ಎಂದು ಕೆಲವರು. ಬುದ್ಧಿಗೆ ಮೆಚ್ಚಾದದ್ದೇ ಯಾವಾಗಲೂ ಹೃದಯಕ್ಕೆ ಮೆಚ್ಚಾ ಗುವದೆಂತ ಹೇಳಲಾಗುವದಿಲ್ಲ. ಮನುಷ್ಯನು ತನ್ನ ಬುದ್ಧಿಯನ್ನುಪಯೋಗಿಸಿ ಯೇ ಕೆಲಸಮಾಡುವದಿಲ್ಲ ; ಭಯಾದಿಗಳಿಂದ ತತ್ಕಾಲಕ್ಕೆ ತೋರಿದಂತೆ ಯಾವ ದಾದರೊಂದು ಕೆಲಸವನ್ನು ಮಾಡಿ, ಆಮೇಲೆ ಅದಕ್ಕೆ ಕಾರಣವನ್ನು ಕೊಡು ವದಕ್ಕೆಂದು ತರ್ಕವನ್ನು ಮುಂದುಮಾಡುತ್ತಾನೆ. ಅಷ್ಟೆ. ಅವನ ಹೆಚ್ಚುಗಾರಿಕೆ ಯೇನೇ ಇರಲಿ, ಅವನೂ ಮಿಕ್ಕ ಪ್ರಾಣಿಗಳಂತೆಯೇ ವಿಕಾಸಕ್ರಮದಿಂದ ಹುಟ್ಟಿದ ಪ್ರಾಣಿಮಾತ್ರವಾಗಿರುತ್ತಾನಷ್ಟೆ ? ಹೀಗಿರುವಲ್ಲಿ ಮನುಷ್ಯಪ್ರಧಾನವಾಗಿರುವ ದರ್ಶನವು ಪೂರ್ಣವೆಂತಾದೀತು ?

ಈ ಆಕ್ಷೇಪವು ಐತಿಹಾಸಿಕದೃಷ್ಟಿಯಿಂದ ಮಾಡಿದ್ದಾಗಿದೆ. ಜಗತ್ತು ಒಂದಾನೊಂದು ಕಾಲದಲ್ಲಿ ಸೃಷ್ಟಿಯಾಯಿತೆಂದೂ ಅದರಲ್ಲಿ ಮನುಷ್ಯನನ್ನು ಪರಮೇಶ್ವರನು ವಿಶೇಷರೀತಿಯಿಂದ ಸೃಷ್ಟಿಸಿಟ್ಟನೆಂದೂ ಹೇಳುತ್ತಿದ್ದ ಮತಗಳಲ್ಲಿ ವಿಶ್ವಾಸವಿಡದೆ ಭೌತಿಕಶಾಸ್ತ್ರಜ್ಞರು ನಿರ್ಮಿಸಿದ ಒಂದಾನೊಂದು ವಾದವೇ ವಿಕಾಸ ವಾದವೆಂಬುದು (Theory of Evolution). ಈಶ್ವರನು ಜಗತ್ತನ್ನು ಒಂದಾ ನೊಂದು ಕಾಲದಲ್ಲಿ ಸೃಷ್ಟಿಮಾಡಿದನೆಂಬುದು ಸರಿಯಾಗಲಿ ತಪ್ಪಾಗಲಿ, ವಿಕಾಸ ವಾದವು ಸರಿ- ಎನ್ನುವದಕ್ಕೆ ಕಾರಣವೇನೂ ಇಲ್ಲ. ವಿಕಾಸವಾದವು ಇನ್ನೂ ಅಪೂರ್ಣಾವಸ್ಥೆಯಲ್ಲಿಯೇ ಇದೆ ; ಅದರ ಅನುಯಾಯಿಗಳಲ್ಲಿಯೂ ಒಳಪಂಗಡ ಗಳಿವೆ. ಅದೂ ಹೋಗಲಿ. ಮತವು ಒಪ್ಪಿದ ಇತಿಹಾಸವು ತಪ್ಪಾದರೆ ವಿಕಾಸವಾದಿ ಗಳ ಇತಿಹಾಸವು ಸರಿಯೆನ್ನುವದಕ್ಕೆ ಪ್ರಮಾಣವೇನಿದೆ? ಐತಿಹಾಸಿಕದೃಷ್ಟಿಯನ್ನೇ ಅವಲಂಬಿಸಿ ತತ್ತ್ವನಿರ್ಣಯವನ್ನು ಮಾಡಬೇಕೆಂದು ಒತ್ತಾಯಪಡಿಸುವವರಿ ಗಾದರೂ ಯಾವ ಅಧಿಕಾರವಿದೆ ? ಬೈಬಲಿನಲ್ಲಿಯೇ ಪೂರ್ಣವಿಶ್ವಾಸವನ್ನಿಟ್ಟಿರುವ ಕ್ಯಾಥೋಲಿಕಕ್ರಿಸ್ತಿಯನ್ನರು ಈಗಲೂ ಪರಮೇಶ್ವರನು ಮನುಷ್ಯನನ್ನು ವಿಶೇಷ ಕ್ರಮದಿಂದಲೇ ಸೃಷ್ಟಿಸಿದನೆಂದು ನಂಬುತ್ತಾರೆ. ಕೆಲವು ವರ್ಷಗಳ ಹಿಂದೆ ಅಮೇರಿಕದಲ್ಲಿ ಮನುಷ್ಯನು ವಾನರಕುಲದವನೆಂದು ಉಪದೇಶಿಸುತ್ತಿದ್ದ ಶಾಲಾ ಧ್ಯಾಪಕನಮೇಲೆ ವಾನರನ ಮೊಕದ್ದಮೆ (Monkey-case) ಎಂಬ ಹೆಸರಿನಿಂದ ಕೋರ್ಟಿನಲ್ಲಿ ಒಂದು ವ್ಯವಹಾರವನ್ನೇ ಹೂಡಿದ್ದರೆಂದು ವರ್ತಮಾನಪತ್ರಿಕೆಗಳಲ್ಲಿ ಸುದ್ದಿಯನ್ನು ಹಾಕಿದ್ದರು ಒಂದು ಮಗುವಿಗೆ ರೋಗವಾಗಿದ್ದರೆ ಭೀತಿಶಂಕೆ ಯೆಂದು ಮಾಂತ್ರಿಕನೂ, ಗ್ರಹಚಾರವು ಸರಿಯಾಗಿಲ್ಲವೆಂದು ಜ್ಯೋತಿಷ್ಕನೂ, ಇದು ಹಿಸ್ಟೀರಿಯವೆಂದು ಡಾಕ್ಟರನೂ, ಇಂಥ ಧಾತುವಿಕಾರವೆಂದು ಆಯುರ್ವೇದಿಯೂ ಹೇಳುತ್ತಿದ್ದರೆ, ಯಾವ ದೃಷ್ಟಿಯನ್ನವಲಂಬಿಸಿ ನಿರ್ಣಯಿಸಬೇಕೆಂಬುದಕ್ಕೆ ಯಾವ ವಿಶೇಷಕಾರಣವೂ ಹೇಗೆ ಅಲ್ಲವೋ ಹಾಗೆಯೇ ತತ್ತ್ವವಿಚಾರಕ್ಕೆ ಐತಿಹಾಸಿಕದೃಷ್ಟಿ ಯೇ ಸರಿಯೆಂಬುದಕ್ಕೂ ವಿಶೇಷಕಾರಣವೇನೂ ಅಲ್ಲ. ಇನ್ನೂ ಒಂದು ಮಾತು. ಇತಿ ಹಾಸಕ್ಕೆ ಕಾಲವು ಆಧಾರ. ಆ ಕಾಲದ ತತ್ತ್ವವೇನೆಂಬುದನ್ನು ಯಾವ ವಿಜ್ಞಾನ ಶಾಸ್ತ್ರಜ್ಞನೂ ನಿರ್ಣಯಮಾಡಿಲ್ಲ ಇತ್ತೀಚೆಗೆ ಅದರ ವಿಷಯವಾಗಿ ಚರ್ಚೆಮಾಡು ತ್ತಿರುವ ಪಾಶ್ಚಾತ್ಯರು ಕಾಲ ಬೇರೆ, ಆಕಾಶ ಬೇರೆ-ಎಂಬುದನ್ನೊಪ್ಪದೆ 'ಆಕಾಶ ಕಾಲ' (Space-Time) ಎಂಬ ಒಂದೇ ತತ್ತ್ವವಿದೆ ಎಂದು ಹೇಳುತ್ತಿದಾರೆ ; ಆಗಲೂ ಅದರ ತತ್ತ್ವವೇನು? -ಎಂಬ ಪ್ರಶ್ನೆ ಉಳಿದುಕೊಳ್ಳುತ್ತದೆ. ಮತಗ್ರಂಥ ಗಳಲ್ಲಿ ಹೇಳಿರುವ ದೇವರನ್ನು ಪದಚ್ಯುತನನ್ನಾಗಿ ಮಾಡಿ ಈ ಆಕಾಶಕಾಲವನ್ನು ಅವನ ಸ್ಥಾನದಲ್ಲಿ ಪಟ್ಟಾಭಿಷೇಕಮಾಡಿಸುವದರಿಂದ ಆಗುವ ಲಾಭವಾದರೂ ಯಾವದು ? ಆದ್ದರಿಂದ ಈ ಹಿಂದೆ ಹೇಳಿದ ಆಕ್ಷೇಪಕ್ಕೆ ಇಲ್ಲಿ ಅವಕಾಶವಿಲ್ಲ.

ಇದೂ ಅಲ್ಲದೆ, ವೇದಾಂತವು ಮನುಷ್ಯಪ್ರಧಾನವಾಗಿದೆ ಎನ್ನುವಾಗ ಮನುಷ್ಯನೆಂದರೆ ಏನು?-ಎಂಬುದನ್ನು ವಿವೇಚಿಸದೆ ಇಂಥ ಆಕ್ಷೇಪಗಳು ಎದ್ದು ಕೊಳ್ಳುತ್ತವೆ. ಮನುಷ್ಯನೆಂದರೆ ಬುದ್ಧಿಪ್ರಧಾನರಾದ ಪ್ರಾಣಿಯೆಂದೂ ಮನುಷ್ಯ ಬುದ್ಧಿಸಾಪೇಕ್ಷವಾಗಿಯೇ ಪರಮಾರ್ಥತತ್ತ್ವವು ನಿರ್ಣೀತವಾಗಬೇಕೆಂದೂ ವೇದಾಂತಿಗಳೇನೂ ಹೇಳುತ್ತಿಲ್ಲ. ನಿಜವಾಗಿ ನೋಡಿದರೆ ತತ್ತ್ವವು ಬುದ್ಧಿ ಸಾಪೇಕ್ಷವೆಂದು ನಂಬಿರುವವರು ವಿಜ್ಞಾನಶಾಸ್ತ್ರದವರು ; ನಿರೀಕ್ಷಣಪರೀಕ್ಷಣ ಗಳಿಂದ ಲಭಿಸಿದ ವಿಷಯಗಳನ್ನು ಕುರಿತು ವಿಚಾರಮಾಡಿ ಬಂದ ನಿರ್ಣಯವನ್ನೇ ಅಲ್ಲವೆ, ವಿಜ್ಞಾನಶಾಸ್ತ್ರದವರು ಸಿದ್ಧಾಂತವೆನ್ನುತ್ತಿರುವದು ? ಬುದ್ಧಿಯ ವಿಚಾರ ಕ್ರಮವು ಬದಲಾಯಿಸಿದಂತೆಲ್ಲ ಆ ಸಿದ್ಧಾಂತವೂ ಮಾರ್ಪಡುತ್ತಲೇ ಇರುವದ ರಿಂದಲೇ 'ಇತ್ತೀಚಿನ ವೈಜ್ಞಾನಿಕಸಿದ್ಧಾಂತವಿದು' ಎಂದೇ ಆ ಶಾಸ್ತ್ರದವರು ಮತ್ತೆ ಮತ್ತೆ ವೃತ್ತಾಂತಪತ್ರಿಕೆಗಳಂತೆ ಹೊಸ ಹೊಸ ಸುದ್ಧಿಗಳಿಗೆ ದೂತರಾಗುತ್ತಿರುವರು. ವೇದಾಂತದೃಷ್ಟಿಯಲ್ಲಿ ಮನುಷ್ಯನ ಬುದ್ಧಿಗಲ್ಲ, ಪ್ರಾಧಾನ್ಯ ; ಮತ್ತೇನೆಂದರೆ ಅನುಭವಕ್ಕೆ. ಮಾನವಸಾಮಾನ್ಯಕ್ಕಿರುವ ಅನುಭವವನ್ನು ಆಧಾರವಾಗಿಟ್ಟು ಕೊಂಡೇ ವೇದಾಂತದಲ್ಲಿ ವಿಚಾರಮಾಡಲಾಗುತ್ತದೆ.

ಹಾಗಾದರೆ ಮನುಷ್ಯನ ಅನುಭವಕ್ಕೇನು ಬೆಲೆ ? ದೇವತೆಗಳ ಅನುಭವ ಹೇಗಿರುವದೋ ಯಾರು ಬಲ್ಲರು ? ಮನುಷ್ಯನಿಗಿಂತ ಹೆಚ್ಚಿನ ಅನುಭವವು ಯಾರಿಗೂ ಇಲ್ಲವೆಂದು ಹೇಗೆ ಹೇಳುವದು ? –ಎಂಬ ಆಕ್ಷೇಪವು ಸರಿಯಲ್ಲ. ಏಕೆಂದರೆ ಮನುಷ್ಯನಲ್ಲಿ ತೋರಿಕೊಳ್ಳುತ್ತಿರುವದೆಂಬ ಅನುಭವವು ಮನುಷ್ಯನಿಗೆ ಸೇರಿದ್ದೇನೂ ಇಲ್ಲ ; ಮನೆಯೊಳಗೆ ತೋರುವ ಬಿಸಿಲು ಮನೆಗೆ ಸೇರಿದ್ದೆಂಬುದು ಹೇಗೆ ಸಲ್ಲದ ಯುಕ್ತಿಯೋ ಹಾಗೆ ಮಾನವನಲ್ಲಿರುವ ಸಾರ್ವತ್ರಿಕಾನುಭವವು ಮಾನವನಿಗೇ ಸೇರಿದ್ದೆಂಬುದೂ ಸಲ್ಲದ ಯುಕ್ತಿ. ಇದಲ್ಲದೆ ಭಗವಂತನು ಗೀತೆಯಲ್ಲಿ 'ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ' (ಗೀ. ೯–೪) ಎಂದು ಹೇಳಿರುವಂತೆ ಈ ಅನುಭವದಲ್ಲಿಯೇ ಎಲ್ಲಾ ಬ್ರಹ್ಮಾಂಡವೂ ಇರುತ್ತದೆ; ಬ್ರಹ್ಮಾಂಡ ದೊಳಗೆ ಮನುಷ್ಯನು, ಮನುಷ್ಯನೊಳಗೆ ಅನುಭವ– ಹೀಗೆ ಒಂದರೊಳಗೆ ಒಂದು ಇದೆ ಎಂದು ತಿಳಿಯಬಾರದು. ಮನುಷ್ಯನಲ್ಲಿ ಸುಖದುಃಖ– ಮುಂತಾದವುಗಳ ಅನುಭವವು ತೋರುವದು ನಿಜ ; ಅದು ಆಯಾ ಮನುಷ್ಯನಿಗೇ ಸೇರಿದ್ದು. ಆದರೆ ಎಲ್ಲಾ ಮನುಷ್ಯರೊಳಗೂ ತೋರಿಕೊಳ್ಳುವ ಅನುಭವವಿದೆಯಲ್ಲ, ಅದೇ ಮನುಷ್ಯನ ನಿಜವಾದ ರೂಪ, ಅದೇ ಅವನ ಆತ್ಮ, ಅದೇ ಪರಮಾತ್ಮ. ಆ ಅನುಭವದಿಂದಲೇ ಮನುಷ್ಯನು ಯಾವದನ್ನಾದರೂ ಅರಿಯುತ್ತಿದ್ದಾನೆ, ಯಾವ ದನ್ನಾದರೂ ಮಾಡಬಲ್ಲವನಾಗಿರುತ್ತಾನೆ. ಆದ್ದರಿಂದಲೇ ಶ್ರುತಿಯು ಹೀಗೆಂದಿರು ತ್ತದೆ :

'ಆತ್ಮೈವಾಸ್ಯ ಜ್ಯೋತಿರ್ಭವತೀತ್ಯಾತ್ಮನೈವಾಯಂ ಜ್ಯೋತಿಷಾಽಽಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತಿ || ಬೃ. ೪-೩-೬.

'ಆತ್ಮನೇ ಇವನಿಗೆ ಜ್ಯೋತಿಯಾಗಿರುತ್ತಾನೆ, ಆತ್ಮನ ಬೆಳಕಿನಿಂದಲೇ ಇವನು ಕುಳ್ಳಿರುತ್ತಾನೆ, ಹೋಗುತ್ತಾನೆ, ಕರ್ಮವನ್ನು ಮಾಡುತ್ತಾನೆ. ಹಿಂದಕ್ಕೆ ಬರುತ್ತಾನೆ' ಈ ನನ್ನೆಲ್ಲರೊಳಗೆ ಇರುವ ಅನುಭವರೂಪನಾದ ಆತ್ಮನೇ ನಿಜವಾದ ಮನುಷ್ಯ. ಸರ್ವಸಿದ್ಧವಾದ ಆತ್ಮನ ಸ್ವರೂಪವನ್ನು ಮನುಷ್ಯನು ಮಾತ್ರ ಅರಿತು, ಅದರ ಫಲವಾದ ಪರಮಪುರುಷಾರ್ಥವನ್ನು ಅನುಭವಿಸಬಲ್ಲವನಾದ್ದರಿಂದ ಇದನ್ನು ತಿಳಿಸಿಕೊಡುವ ದರ್ಶನವು ಮನುಷ್ಯಪ್ರಧಾನವಾಗಿದೆ- ಎನ್ನುತ್ತೇವೆ.

ಈ ಆತ್ಮನು ಇದಾನೆಂಬುದು ವೇದಾಂತವು ಇಟ್ಟುಕೊಂಡಿರುವ ಸ್ವತಃಸಿದ್ಧ (Axiom) ಅಥವಾ ಅಭ್ಯುಪಗಮ (Postulate) ಎಂದು ನೀವು ಅಸಡ್ಡೆಯಿಂದ ಹೇಳಬಹುದು. ಆದರೇನು; ನೀವು ಹಾಗೆ ಹೇಳುವದೂ ಈ ಆತ್ಮನ ಬಲದಿಂದಲೇ ; ಆತ್ಮನು ಇದಾನೆನ್ನುವದೂ ಇಲ್ಲವೆನ್ನುವದೂ ಈ ಅನುಭವರೂಪನಾದ ಆತ್ಮನನ್ನು ಆಶ್ರಯಿಸಿಯೇ ಹೊರತು ಮತ್ತೆ ಬೇರೊಂದರಿಂದಲ್ಲ.

ಈ ಅನುಭವಕ್ಕೇಕೆ ಬೆಲೆ ? ಈ ಅನುಭವವಿದೆ ಎಂಬುದನ್ನು ನಾವು ಎಚ್ಚರವಾಗಿದ್ದಾಗ ಮೆದುಳಿನಲ್ಲಾಗುವ ಕೆಲವು ನರಗಳ ವಿಕಾರಗಳಿಂದಾಗುವ ಭಾವನೆಗಳಿಂದ ನಿಶ್ಚಯಿಸುತ್ತೇವಲ್ಲವೆ ? ಮೆದುಳಿಗೆ ಏನಾದರೂ ಧಕ್ಕೆತಗಲಿದಾಗ ಸ್ಮೃತಿಯೇ ಹೋಗಿಬಿಡುತ್ತದೆ ; ವೈದ್ಯರು ಸ್ಮೃತಿಯು ಇಲ್ಲದ್ದನ್ನು ನೋಡಿ ಮೆದುಳಿಗೆ ಏನೋ ಅಪಾಯವಾಗಿದೆ ಎಂಬುದನ್ನು ಕಂಡುಹಿಡಿಯುತ್ತಾರೆ. ನನಗೆ ಗೊತ್ತಿದ್ದ ಒಬ್ಬ ಪ್ರಸಿದ್ಧವೇದಾಂತಿಗಳಿಗೆ ವಾರ್ಧಕದಲ್ಲಿ ಪಾರ್ಶ್ವವಾಯು ಬಂದಾಗ ಅವರಿಗೆ ಅತ್ಯಂತಪರಿಚಿತರಾದವರ ಹೆಸರುಗಳುಕೂಡ ಸ್ಮೃತಿಗೆ ಬರುತ್ತಿರಲಿಲ್ಲ. ಸಾಯುವಾಗ ಜನರಿಗೆ ಹೊರಗಿನ ಅರಿವುಕೂಡ ಹೋಗಿಬಿಡುತ್ತದೆ. ಇದೆಲ್ಲ ಮೆದುಳಿನಲ್ಲಾವ ವಿಕಾರದ ಫಲವೇ ಎಂದಾಗುವದಿಲ್ಲವೆ ?–ಎಂದರೆ ಇದಕ್ಕೆ ಉತ್ತರವನ್ನು ಕೆಲವರು ವಿಜ್ಞಾನಶಾಸ್ತ್ರಜ್ಞರೇ ಹೇಳಿರುತ್ತಾರೆ. ಮೆದುಳಿಗೆ ಬಹಳ ತೊಂದರೆಯಾದಾಗಲೂ ಒಂದು ವರ್ಷದವರೆಗೆ ಒಬ್ಬನಿಗೆ ಬುದ್ಧಿ ಸರಿಯಾಗಿತ್ತಂತೆ; ('Before Death' By Prof. Flammarion) ವೇದಾಂತಕ್ಕೆ ಎಚ್ಚರದವಸ್ಥೆಯೊಂದೇ ವಿಚಾರಕ್ಷೇತ್ರವಲ್ಲ, ಕನಸಿನಲ್ಲಿಯೂ ನಾವು ವಿವಿಧಸುಖದುಃಖಗಳನ್ನು ಅನುಭವಿಸಿದಂತೆ ತೋರುತ್ತಿರುತ್ತದೆ. ಆಗ ಇರುವ ಶರೀರೇಂದ್ರಿಯ ಮನಸ್ಸುಗಳು ಎಚ್ಚರದವಲ್ಲ ; ಆದ್ದರಿಂದ ಅಲ್ಲಿ ಈ ಮೆದುಳು ಕೆಲಸಮಾಡಿತೆಂದು ಹೇಳುವದಕ್ಕೆ ಆಗುವದೇ ಇಲ್ಲ. ಕನಸು ಬರಿಯ ಕನಸೇ ಅಲ್ಲವೆ ? ಅದು ನಿಜವಲ್ಲವಲ್ಲ ! –ಎನ್ನುವದಕ್ಕೆ ಬರುವದಿಲ್ಲ ; ಏಕೆಂದರೆ ಎಚ್ಚರವೆಂದು ಭಾವಿಸಿ ಹುಸಿಯಾದ ಕನಸುಗಳೂ ಇವೆ. ಈಗ ನಾವು ಎಚ್ಚರವೆಂಬುದು ಕನಸಲ್ಲವೆಂಬು

ದಕ್ಕೆ ಪ್ರಮಾಣವೇನು ? ಇದು ಹಾಗಿರಲಿ 'ಎಚ್ಚರಕನಸುಗಳೆರಡೂ ನನಗೆ ಆಗುತ್ತವೆ' ಎಂದು ಒಂದೇ ಅನುಭವದ ಆಧಾರದಿಂದ ಹೇಳುತ್ತೇವಲ್ಲವೆ ? ಆದ್ದರಿಂದ ಈ ಅನುಭವವು ಎಚ್ಚರಕ್ಕೇ ಸೇರಿದ್ದು, ಅಥವಾ ಕನಸಿಗೇ ಸೇರಿದ್ದು-ಎನ್ನುವದಕ್ಕೆ ಬರುವದಿಲ್ಲ. ಈ ಅನುಭವವು ಎರಡು ಅವಸ್ಥೆಗಳಿಗಿಂತಲೂ ಹೊರಚಾಚಿಗಿರುತ್ತದೆ. ಸುಷುಪ್ತಿಯಲ್ಲಿ ಎಚ್ಚರದ ಅಥವಾ ಕನಸಿನ ಶರೀರಾದಿಗಳ ಸಂಪರ್ಕವಿಲ್ಲದ ಅನುಭವವೂ ನನಗೆ ಆಗುತ್ತದೆ. ಆ ಅನುಭವವೇ ಮನುಷ್ಯನ ಸಾರವಾಗಿರುತ್ತದೆ.

ನಮ್ಮ ದೇಶದ ಅಥವಾ ಪಾಶ್ಚಾತ್ಯದೇಶದ ತಾರ್ಕಿಕರುಗಳು ಕಲ್ಪನಾಮಾತ್ರಶರಣರಾಗಿರುತ್ತಾರಾದ್ದರಿಂದ ಅವರು "ಹೀಗಿರಬೇಕಾಯಿತು, ಹೀಗಿರಬೇಕಾಯಿತು" ಎಂದು ಅವರವರ ಮೂಗಿನ ನೇರಕ್ಕೆ ನೋಡಿದ ವಿಷಯಗಳ ಆಧಾರದಿಂದ ಮಾಡಿದ ಕಲ್ಪನೆಗಳೆಲ್ಲಕ್ಕೂ ಅನುಭವವೇ ಸಮಾನವಾಗಿರುತ್ತದೆ ; ತರ್ಕಗಳು ಮಾತ್ರ ಒಂದಕ್ಕೊಂದು ಹೊಂದುವದಿಲ್ಲ. ಮನುಷ್ಯನ ಬುದ್ಧಿ, ಹೃದಯ, ವೇದನೆಗಳು-ಎಲ್ಲವನ್ನೂ ವ್ಯಾಪಿಸಿರುವದು ಈ ಅನುಭವ. ಅನೇಕ ಬೇರೆಬೇರೆ ನಗರಗಳಲ್ಲಿ ಅಂಗಡಿಯಿಟ್ಟಿರುವ ಮುಂಡಿಸಾಹುಕಾರನಂತೆ ಅನುಭವವು ಎಲ್ಲಾ ಅವಸ್ಥೆಗಳ ಎಲ್ಲಾ ದೃಶ್ಯವಿಷಯಗಳನ್ನೂ ಬೆಳಗುತ್ತಾ, ಯಾವದೊಂದಕ್ಕೂ ಗಂಟುಬೀಳದೆ ಇರುತ್ತದೆ. ಎಲ್ಲ ತೋರಿಕೆಗಳಿಗೂ ಇದೇ ನಿಜವಾದ ಆತ್ಮನಾಗಿರುತ್ತದೆ. ಅನುಭವಾಧಾರವುಳ್ಳ ತರ್ಕವನ್ನೇ ಶ್ರುತಿಯಲ್ಲಿ ಉಪಯೋಗಿಸಿರುವದರಿಂದ ಶುಷ್ಕತರ್ಕಕ್ಕಿಂತ ವೇದಾಂತದ ತರ್ಕಕ್ಕೆ ಬೆಲೆ ಹೆಚ್ಚು.

ಈ ರೀತಿಯಲ್ಲಿ ಸಾಮಾನ್ಯಮನುಷ್ಯನ ಏಕದೇಶದ ಅನುಭವವನ್ನು ಕೈಬಿಟ್ಟು, ಅವನ ದೇಹ, ಇಂದ್ರಿಯ- ಮುಂತಾದ ಕಲ್ಪಿತಾತ್ಮರುಗಳನ್ನು ಆತ್ಮರೆಂದು ಗಣಿಸದೆ, ಸಾರ್ವತ್ರಿಕವಾಗಿ ಸರ್ವವ್ಯಾಪಕವಾಗಿರುವ ಅನುಭವವನ್ನೇ ಹಿಡಿದು ಅವನ ನಿಜವಾದ ಆತ್ಮನನ್ನೇ ಅವನ ಸ್ವರೂಪವೆಂದು ಗಣಿಸಿರುವದು ವೇದಾಂತವೊಂದರಲ್ಲಿಯೇ. "ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ" ॥ ( ಛಾಂ. ೬-೮-೭ ) ಇದೇ ಎಲ್ಲಕ್ಕೂ ಸ್ವರೂಪವು. ಅದೇ ಸತ್ಯವು,ಅದೇ ಆತ್ಮನು, ಅದೇ ನೀನಾಗಿರುವೆ-ಎಂಬ ಶ್ರುತಿಯು ಹೇಳುವಂತೆ ಈ ಆತ್ಮನು ಎಲ್ಲಕ್ಕೂ ಆತ್ಮನಾಗಿರುವದರಿಂದ ವೇದಾಂತವು ಮನುಷ್ಯಪ್ರಧಾನವಾಗಿದ್ದರೂ ಇದು ಪೂರ್ಣದರ್ಶನವೆಂದ ಹೇಳುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ.

---

# ೪೭. ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳಿಗೆ ಉಪಾಯ

( 4-9-62 )

ಆತ್ಮ, ಈಶ್ವರ- ಎಂಬಿವು ಗತಕಾಲದಲ್ಲಿದ್ದು ಕೈಬಿಟ್ಟ ಭಾವನೆಗಳೆಂದು ಕೆಲವರು ಪಾಶ್ಚಾತ್ಯರು ತಿಳಿದಿರುತ್ತಾರೆ. ಈ ಶಬ್ದಗಳನ್ನು ಅವರು ಈಗಲೂ ಭಾಷೆಯಲ್ಲಿ ಪ್ರಯೋಗಿಸುತ್ತಿದ್ದರೂ ಅವರ ವ್ಯವಹಾರದಲ್ಲಿ ಆ ಶಬ್ದಗಳಿಗೆ ಮೊದಲಿಗಿದ್ದ ಜೀವಕಳೆಯ ಅರ್ಥವು ಈಗಿರುವುದಿಲ್ಲ. ನಾಸ್ತಿಕರಾದವರೂ ಈಗ 'ಈಶ್ವರನ ಸಂಕಲ್ಪವಿದ್ದರೆ, ಹಾಗೆ ಮಾಡುತ್ತೇನೆ' (God willing I will do so), ಹೇಗೋ ಶರೀರವನ್ನೂ ಜೀವನನ್ನೂ ಕೂಡಿಸಿಟ್ಟುಕೊಂಡಿದ್ದೇನೆ' ( Some how I keep body and soul together ) ಎಂದು ಭಾಷೆಯಲ್ಲಿ ಆ ಮಾತುಗಳನ್ನು ಬಳಸುತ್ತಿರುತ್ತಾರೆ. ವೇದಾಂತದಲ್ಲಿ ಹಾಗಲ್ಲ. ನಮ್ಮ ನಿಜವಾದ ಆತ್ಮನು ಸ್ವಯಂಸಿದ್ಧನು, ಅವನೇ ಎಲ್ಲರಿಗೂ ಆತ್ಮನು. ಅವನೇ ಈಶ್ವರನು.

> ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।
> ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥
>
> ಗೀ. ೬-೩೧

ಸರ್ವಪ್ರಾಣಿಗಳಲ್ಲಿರುವ ಆತ್ಮನೇ ನಾನೆಂದು ಯಾವನು ನನ್ನನ್ನು ಭಜಿಸುತ್ತಿರುವನೋ ಆ ಯೋಗಿಯು ಹೇಗಿದ್ದರೂ ಬದುಕಿರುವಾಗಲೂ ಶರೀರವನ್ನು ಬಿಟ್ಟ ಮೇಲೂ ಪರಮಾತ್ಮನಲ್ಲಿಯೇ ಇರುತ್ತಾನೆ. 'ಏಷ ತ ಆತ್ಮಾಽನ್ತರ್ಯಾಮ್ಯಮೃತಃ' ॥ (ಬೃ. ೩-೭-೧) ಈ ನಿನ್ನ ಆತ್ಮನೇ ಅಮೃತನಾದ ಅಂತರ್ಯಾಮಿಯು-ಎಂಬ ಶ್ರುತಿಸ್ಮೃತಿಗಳು ಹೀಗೆಂದು ಸಾರುತ್ತಿವೆ.

ಮನುಷ್ಯನೆಂದರೆ ಸರ್ವಕ್ಕೂ ಆಧಾರವಾಗಿರುವ ಅನುಭವವೆಂದು ಹಿಂದೆ ಹೇಳಿದ್ದಾಗಿದೆ. ಆದರೆ 'ಅನುಭವ'ವೆಂಬ ಈ ಮನುಷ್ಯರೂಪವು ಯಾರಿಗೆ ಸ್ವತಂತ್ರವಾಗಿ ಕಾಣಬರುತ್ತದೆ ? 'ಗುಲಾಬಿಯ ಕೆಂಪು' ಎಂದು ವ್ಯವಹರಿಸಿದರೂ 'ಕೆಂಪು'- ಎಂಬುದು ಹೇಗೆ ಸ್ವತಂತ್ರವಾಗಿ ತಾನೇ ಬೇರೆಯಲ್ಲದ್ದರಿಂದ ಬರಿಯ ವಿಕಲ್ಪಮಾತ್ರವಾಗಿದೆಯೋ ಬೈಸಿಕಲ್ ಎಂಬ ಶಬ್ದವಿದ್ದರೂ ಅದರಲ್ಲಿರುವ ಹಾರೆಕೋಲಿನ ಕಡ್ಡಿಗಳಲ್ಲ, ಅವುಗಳ ಸುತ್ತಲೂ ಇರುವ ಹಳಿಯಲ್ಲ, ಘಂಟೆಯಲ್ಲ- ಎಂದು ಕಾಣುವದೆಲ್ಲವನ್ನೂ ಕಳೆದುಹಾಕಿದರೆ ಸ್ವತಂತ್ರವಾಗಿ ಬೈಸಿಕಲ್ ಎಂಬುದು ಬೇರೆಯಾಗಿಲ್ಲದ್ದರಿಂದ ಹೇಗೆ ವಿಕಲ್ಪಮಾತ್ರವಾಗಿದೆಯೋ ಹಾಗೆಯೇ ದೇಹ, ಇಂದ್ರಿಯಗಳು, ಪ್ರಾಣ, ಮನಸ್ಸು, ಬುದ್ಧಿ, ಅಹಂಕಾರ- ಎಲ್ಲವನ್ನೂ ಕಳೆದರೆ ಉಳಿಯುವದೇನು ? ತೋಳಿನಿಂದ ಕೂಲಿಯವನೂ ನಾಲಗೆ

ಯಿಂದ ಶಿಕ್ಷಕನೂ ಲಾಯರೂ ಜೀವಿಸುತ್ತಾರೆ ; ಆತ್ಮನಿಂದ ಯಾವ ಕೆಲಸವಾಗು ತ್ತಿದೆ ? ದೇಹಾದಿಗಳಿಂದ ಇಷ್ಟಪ್ರಾಪ್ತಿಯೂ ಅನಿಷ್ಟನಿವೃತ್ತಿಯೂ ಆಗುತ್ತಿರು ತ್ತದೆ ; ಆತ್ಮನಿಂದ ಆಗಬೇಕಾದದ್ದೇನಿದೆ ?– ಎಂದು ಪಾಶ್ಚಾತ್ಯವಿದ್ಯಾದೇವತೆಯ ಭಕ್ತರನೇಕರು ಕೇಳುತ್ತಿರುವರು.

ಯೂರೋಪಿನಲ್ಲಿ ಕ್ರೈಸ್ತಮತದಮೇಲೆ ಹಲವರು ಆಕ್ಷೇಪಣೆಗಳನ್ನು ಮಾಡು ತ್ತಿದಾರೆ. ಮುಖ್ಯವಾಗಿ ಈಗಿನ ನಮ್ಮ ಜೀವನದ ಸಮಸ್ಯೆಗಳಿಗೆ ಅದರಲ್ಲಿ ಉತ್ತರವಿಲ್ಲ ಎನ್ನುವದು ಅವರ ಒಂದು ದೊಡ್ಡ ಆರೋಪಣೆ. 'ಜಪಾನರೊಡನೆ ಪೈಪೋಟಿಯಿಂದ ನಡೆಯುವ ವಿಷಯದಲ್ಲಿ ಅನುಷ್ಠಾನಕ್ಕೆ ತರಬಹುದಾದ ಸೂಚನೆಗಳೇನಾದರೂ ಆ ಮತದ ಉಪದೇಶಗಳಲ್ಲಿವೆಯೆ, ಅಥವಾ ರಷಿಯನರ ನಾಸ್ತಿಕ್ಯವನ್ನೂ ಅವರ ಪ್ರಕಟನಾಶೈಲಿಯನ್ನೂ ಕುರಿತು ಅಥವಾ ಆ ದೇಶದವರ ನೀತಿಯನ್ನಾಗಲಿ ಧ್ಯೇಯವನ್ನಾಗಲಿ ಒಪ್ಪದವರು ಅವರು ಅನುಸರಿಸುವ ರಾಷ್ಟ್ರ ನೀತಿ, ಧನವಿನಿಮಯ– ಮುಂತಾದದ್ದನ್ನು ಕುರಿತ ವಿಷಯಕ್ಕೆ ಹೇಳತಕ್ಕದ್ದು ಏನಾದರೂ ಅದರಲ್ಲಿಯೆ ? ಜನರಿಗೆ ಕಷ್ಟಕಾಲದಲ್ಲಿ ಅನುಸರಿಸಬೇಕಾದ ಸೂಚನೆ ಯನ್ನೇನೂ ಕೊಡುವಹಾಗಿಲ್ಲದಿರುವದರಿಂದ ಕ್ರಿಸ್ತಿಯನ್‌ಮತದ ಮೂಡಿಗೆ ಯಲ್ಲಿದ್ದ ಬಾಣಗಳೆಲ್ಲವೂ ಮುಗಿದುಹೋಗಿವೆಯೆಂದೂ ಮಾನವರ ನೌಕೆಯು ನಡೆಯುವಪಕ್ಕೆ ಅದನ್ನು ಧ್ರುವತಾರೆಯಾಗಿ ಎಂದೆಂದಿಗೂ ಎಣಿಸುವದು ಸರಿಯಲ್ಲ ವೆಂದು ಜನರು ಎಣಿಸಿದರೆ ಆಶ್ಚರ್ಯವೇನು ?' ಎಂದು 'ಡಿಕ್ಸನ್' ಎಂಬಾತನು ಕೇಳಿರುತ್ತಾನೆ. ಆ ಮತದ ವಿಷಯದಲ್ಲಿ ಈ ಗ್ರಂಥಕರ್ತನು ಹೇಳಿರುವದನ್ನು ಇಲ್ಲಿ ಮನದಂದುಕೊಳ್ಳುವದು ಲಾಭದಾಯಕವಾಗಿರುತ್ತದೆ. "ನಿಜವೇನೆಂದರೆ : ಕ್ರಿಸ್ತಿಯನ್ ಮತವು ಬಹುಜನರು ಭಾವಿಸಿರುವಂತೆ ಯೂರೋಪಿನವರನ್ನು ಮತಾಂತರಗೊಳಿಸಲಿಲ್ಲ. ಇದಕ್ಕೆ ಬದಲು ಯೂರೋಪುಖಂಡವೇ ಕ್ರಿಸ್ತಿಯನ್ ಮತವನ್ನು ರೂಪಾಂತರಗೊಳಿಸಿಬಿಟ್ಟಿತು. ಅದೊಂದು ಪ್ರಾಚ್ಯದೇಶೀಯ, ತಪಃಪ್ರಧಾನವಾದ ಮತ ; ಪ್ರಾಪಂಚಿಕಜೀವನವನ್ನು ಬಿಟ್ಟು ಹಿಮ್ಮೆಟ್ಟುವ ನಿವೃತ್ತಿಧರ್ಮವನ್ನು ಉಪದೇಶಿಸುವ ಮತವೇ ಹೊರತು ಭಯಂಕರವಾದ ಕಲಹಗಳಲ್ಲಿಯೂ ಪೈಪೋಟಿಗಳಲ್ಲಿಯೂ ಭಾಗವನ್ನು ವಹಿಸಬೇಕೆನ್ನುವ ಮತ ವಲ್ಲ ; ಹಾಗೆಂದೇ ಜನರು ಹಲವು ಶತಮಾನಗಳಿಂದಲೂ ಆ ಮತವನ್ನು ಎಣಿಸಿದ್ದರು. ಆದರೆ ಪಾಶ್ಚಾತ್ಯಕುಲದವರು ಪ್ರಪಂಚಪರಿತ್ಯಾಗಕ್ಕೆ ಸಿದ್ಧರಾಗಿರ ಲಿಲ್ಲ ; ಅವರಲ್ಲಿ ಶಕ್ತಿವಿಶೇಷಗಳು ಪ್ರಬಲವಾಗಿದ್ದವು, ಅವರಲ್ಲಿದ್ದ ಮಾನುಷ ಸ್ವಭಾವವೂ ಅಜೇಯವಾಗಿತ್ತು. ಆದ್ದರಿಂದ ಕ್ರಿಸ್ತಿಯನ್‌ಮತವು ಒಂದು ದಾರಿ ಮಾಡಿಕೊಂಡಿತು. 'ಈ ಲೋಕವೇನೋ ನಮ್ಮ ನಿಜವಾದ ಆವಾಸವಲ್ಲ, ದೇವರೇ ನಮ್ಮ ಸ್ಥಾನ ; ಆದರೆ ಆತನ ಇಚ್ಛೆಯಂತೆ, ದುರೂಹವಾದ ಆ ಸಂಕಲ್ಪದಂತೆ

ನಾವು ಇಲ್ಲಿಗೆ ಬಂದಿರುವದರಿಂದ ಕ್ರಿಸ್ತಿಯನ್‌ತತ್ತ್ವಗಳನ್ನು ಈ ಪ್ರಪಂಚದ ಸಂಸ್ಕಾರಕ್ಕೆ ಅನ್ವಯಿಸೋಣ' ಎಂದುಕೊಂಡು ಯೂರೋಪುಖಂಡವು ಕ್ರಿಸ್ತಿಯನ್‌ಮತವನ್ನು ಪ್ರಪಂಚಸುಧಾರಕಧರ್ಮವಾಗಿ ಮಾರ್ಪಡಿಸಿಕೊಂಡಿತು." (Human Situatiom By W.M. Dixon p. 35-36) ಈ ಮಾತು ನಿಶ್ಚಯವಾಗಿಯೂ ಸತ್ಯವಾಗಿಬಿಟ್ಟಿದೆ. ನಮ್ಮ ದೇಶದ ಕ್ರಿಸ್ತಿಯನ್‌ಪಾದ್ರಿಗಳು ಆಸ್ಪತ್ರೆ, ಸ್ಕೂಲುಗಳು-ಮುಂತಾದ ಜನೋಪಕಾರಕಾರ್ಯಗಳಲ್ಲಿ ತೊಡಗಿರುವದನ್ನು ನೀವೆಲ್ಲರೂ ಕಂಡಿದ್ದೀರಿ. ಆದರೆ ಅವರಿಗೆ ವ್ಯಾವಹಾರಿಕವಾದ ರಾಜನೀತಿಯೇ ಮುಂತಾದವುಗಳಲ್ಲಿಯೇ ಆಸಕ್ತಿ ಹೆಚ್ಚು. ಪಾಶ್ಚಾತ್ಯದೇಶದವರು ನಾಮಮಾತ್ರಕ್ಕೆ ಕ್ರಿಸ್ತಿಯನ್‌ಮತದವರೆಂದುಕೊಂಡಿದ್ದರೂ ಅವರೆಲ್ಲರೂ ಬಲು ಮಟ್ಟಿಗೆ ದೇಹಾತ್ಮವಾದಿಗಳೇ ಆಗಿರುತ್ತಾರೆ. ಅವರು ನಮ್ಮ ದೇಶಕ್ಕೆ ವ್ಯಾಪಾರಕ್ಕೆಂದು ಬಂದು ದೇಶವನ್ನು ಯುಕ್ತಿಯಿಂದ ಸ್ವಾಧೀನಪಡಿಸಿಕೊಂಡರು ; ಯತ್ನವಿಲ್ಲದೆ ಬಿಟ್ಟುಹೋಗಬೇಕಾಯಿತು. ಈಗ ನಮಗೆ ಸಾಲವನ್ನು ಕೊಡುವದು, ತಮ್ಮ ಸೈನ್ಯಗಳ ಠಾಣ್ಯವನ್ನಿಟ್ಟುಕೊಳ್ಳುವದಕ್ಕೆ ನಮ್ಮ ದೇಶವನ್ನು ಬಳಸಿಕೊಳ್ಳುವದು- ಹೀಗೆ ನಮ್ಮಲ್ಲಿ ಸ್ನೇಹವನ್ನಿಟ್ಟುಕೊಂಡಿರುತ್ತಾರೆ. ಜಪಾನು, ಚೈನ, ಪಾಕಿಸ್ಥಾನ-ಮುಂತಾದ ದೇಶಗಳ ಮೇಲೆ ಅವರ ಪ್ರಭಾವ ಬಿದ್ದಿದೆ ; ಮುಂದೆ ನಮ್ಮ ದೇಶದ ಗತಿಯೇನೋ ! ಹೀಗಿದೆ ಕ್ರಿಸ್ತಿಯನ್‌ಮತದ ವಿಸ್ತರಣೆ !

ಈಗ ವೇದಾಂತದಮೇಲೆ ಇಂಥ ಆಕ್ಷೇಪವು ನಿಲ್ಲುತ್ತದೆಯೆ, ಇಲ್ಲವೆ ? ನೋಡೋಣ. ಆತ್ಮನೆಂದರೆ ಈಶ್ವರನು ಮಾನುಷಶರೀರವನ್ನು ಸೃಷ್ಟಿಸಿ ಅದರೊಳಕ್ಕೆ ಊದಿದ ಒಂದಾನೊಂದು ತತ್ತ್ವವೆಂದು ಕ್ರಿಸ್ತಿಯನ್ನರ ಕಲ್ಪನೆ ; ಉಪನಿಷತ್ತಿನಲ್ಲಿ ಈಶ್ವರನು ಜಗತ್ತನ್ನು ಸೃಷ್ಟಿಸಿ ಅದರೊಳಗೆ ತಾನೇ ಜೀವರೂಪದಿಂದ ಹೊಕ್ಕಿರುತ್ತಾನೆಂದೂ ನಾವೆಲ್ಲರೂ ಆ ಪರಮಾತ್ಮನೇ ಎಂದೂ ಹೇಳಿದೆ. ಜೀವರೂಪದಿಂದ ಶರೀರದಲ್ಲಿರುವಂತೆ ಕಂಡರೂ ಒಬ್ಬನೇ ಪರಮಾತ್ಮನು ಈಗಲೂ ಸರ್ವಭೂತಗಳಲ್ಲಿಯೂ ಸಾಕ್ಷಿರೂಪದಿಂದ ಇದ್ದುಕೊಂಡೇ ಇರುತ್ತಾನೆಂದೂ ಹೇಳಿದೆ. ಇಲ್ಲಿ ಪರಮೇಶ್ವರನನ್ನಾಗಲಿ ಜೀವನನ್ನಾಗಲಿ ಯಾವುದಾದರೊಂದು ಪ್ರಮಾಣದಿಂದ ಸಿದ್ಧಪಡಿಸಬೇಕಾದ ಅವಶ್ಯಕತೆಯೇನೂ ಇಲ್ಲ; ಅನುಭವಸ್ವರೂಪನಾದ ಸಾಕ್ಷಿಯೇ ಜೀವನ ಮತ್ತು ಪರಮೇಶ್ವರನ ನಿಜವಾದ ಸ್ವರೂಪವಾಗಿರುವದರಿಂದ ಸ್ವಯಂಸಿದ್ಧನಾಗಿರುವ ಆತ್ಮನನ್ನು ಅಥವಾ ಈಶ್ವರನನ್ನು ತಿಳಿಸುವ ಪ್ರತ್ಯಯವು 'ಗತಕಾಲಕ್ಕೆ ಸೇರಿದ್ದು' ಎನ್ನುವದಕ್ಕೆ ಬರುವಂತಿಲ್ಲ ; ಏಕೆಂದರೆ ಕಾಲಕ್ಕೂ ಈ ಆತ್ಮನು ಸಾಕ್ಷಿಯಾಗಿರುತ್ತಾನೆ. 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' (ಶ್ವೇ.)ಎಲ್ಲವನ್ನೂ ನೇರಾಗಿ ನೋಡಿ ಬೆಳಗುವ, ಚೈತನ್ಯಸ್ವರೂಪ

ಇನ್ನು ಸಂನ್ಯಾಸ, ಏಕಾಂತವಾಸದ ತಪಸ್ಸು– ಮುಂತಾದ ಸಾಧನಗಳ ವಿಚಾರ. ಇದು ನಿವೃತ್ತಿಧರ್ಮವೆಂಬುದು ನಿಜ. ಸಂಸಾರದಲ್ಲಿ ವಿರಕ್ತರಾಗಿರುವ ಮುಮುಕ್ಷುಗಳಿಗೆ ಪರಮಾರ್ಥವನ್ನು ಬೋಧಿಸುವದಕ್ಕೆಂದು ಅದನ್ನು ವೇದಾಂತದಲ್ಲಿ ಉಪದೇಶಿಸಿರುವದೂ ನಿಜ. ಆದರೆ ಈ ಸಂನ್ಯಾಸವು ನಮ್ಮನ್ನು ಪ್ರಾಪಂಚಿಕಜೀವನದಿಂದ ಹಿಮ್ಮೆಟ್ಟುವಂತೆ ಬೋಧಿಸುತ್ತಿಲ್ಲ ; 'ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನ್' (ಛಾಂ. ೩–೧೪–೧) ಈ ಪ್ರಪಂಚವೆಲ್ಲವೂ ಬ್ರಹ್ಮವೇ, ಏಕೆಂದರೆ ಅದರಿಂದಲೇ ಹುಟ್ಟಿ, ಅದರಲ್ಲಿಯೇ ಇದ್ದು ಜೀವಿಸುತ್ತಿದ್ದು, ಅದರಲ್ಲಿಯೇ ಲಯಿಸತಕ್ಕದ್ದಾಗಿದೆ ; ಪ್ರಪಂಚವೆಂಬುದರ ಪರಮಾರ್ಥವೇ ಇದು, 'ಬ್ರಹ್ಮೈವೇದಂ ವಿಶ್ವಮ್' || ಮುಂ. ೨–೨–೧೧; 'ಆತ್ಮೈವೇದಂ ಸರ್ವಮ್' ಛಾಂ. ೭–೨೫–೨ ಇದೆಲ್ಲವೂ ಬ್ರಹ್ಮವೇ, ಎಲ್ಲವೂ ಆತ್ಮನೇ ಎಂಬುದನ್ನು ಇಲ್ಲಿಯೇ ಈಗಲೇ ಅನುಭವದಲ್ಲಿ ಕಂಡುಕೊಳ್ಳುವ ಪ್ರಕಾರವನ್ನು ಬೋಧಿಸುತ್ತದೆ. ಅದನ್ನು ಅರಿತುಕೊಳ್ಳುವದಕ್ಕೆ ಉಪಾಯವಾಗಿ "ಮನಸಶ್ಚೇಂದ್ರಿಯಾಣಾಂ ಚ ಹ್ಯೈಕಾಗ್ರ್ಯಂ ಪರಮಂ ತಪಃ | ತಜ್ಜ್ಯಾಯಃ ಸರ್ವಧರ್ಮೇಭ್ಯಃ ಸ ಧರ್ಮಃ ಪರ ಉಚ್ಯತೇ ||" (ಮೋ. ಧ. ೨೫೦–೪) ಎಂದಂತೆ ಮನಸ್ಸನ್ನೂ ಇಂದ್ರಿಯಗಳನ್ನೂ ಏಕಾಗ್ರತೆಗೊಳಿಸಿಕೊಂಡು ತತ್ತ್ವವನ್ನು ಕಾಣುವದೆಂಬ ಪರಮತಪಸ್ಸನ್ನು ಇಲ್ಲಿ ಉಪದೇಶಿಸಿರುತ್ತದೆ.

ಆದರೆ 'ಪ್ರಾಚ್ಯದೇಶೀಯಧರ್ಮ'ವೆಂದು ತಿರಸ್ಕಾರದಿಂದ ಡಿಕ್ಸನ್ ತಾರ್ಕಿಕನು ಕರೆದಿರುವ ಈ ಧರ್ಮದಲ್ಲಿ ಪ್ರಪಂಚದ ಕಷ್ಟಸುಖಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಇಲ್ಲ. ಸಮಸ್ತವೇದಾಂತಾರ್ಥಸಂಗ್ರಹಭೂತವಾಗಿರುವ ಭಗವದ್ಗೀತೆಯನ್ನು ನೋಡಿದರೆ ಸಾಕು, ಈ ಮಿಥ್ಯಾಕಲ್ಪನೆಯು ಕೂಡಲೆ ಓಡಿಹೋಗುವದು. ವರ್ಣಾಶ್ರಮಧರ್ಮದ ವ್ಯವಸ್ಥೆಯು ಭಗವಂತನಿಂದಲೇ ಸ್ಪಷ್ಟವಾದದ್ದು; ಅವರವರು ಈ ಅನಿತ್ಯವಾದ ಅಸುಖವಾದ ಪ್ರಪಂಚದಲ್ಲಿಯೂ ಕರ್ಮವನ್ನು ಮಾಡುತ್ತಾ ಪರಮಾತ್ಮನನ್ನು ಭಜಿಸುತ್ತಿರಬೇಕು, ಕ್ಷತ್ರಿಯನಾಗಿದ್ದ ಅರ್ಜುನನು ಮಿಥ್ಯಾಕೃಪೆಗೆ ಪರವಶನಾಗಿ ಸ್ವಧರ್ಮವಾದ ಯುದ್ಧವನ್ನು ಮಾಡಲೊಲ್ಲನೆ 'ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ | ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ||' ( ಗೀ. ೧–೪೭ ) ಧನುರ್ಬಾಣಗಳನ್ನು ಕೈಬಿಟ್ಟು ರಥದಲ್ಲಿ ಸುಮ್ಮನೆ ಕುಳಿತಾಗ ಶ್ರೀಕೃಷ್ಣನು ಹೇಳಿದ್ದೇನು ?

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ |
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ||
ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ |
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರನ್ತಪ || ಗೀ. ೨–೧, ೩

'ಇಂಥ ವಿಷಮಕಾಲದಲ್ಲಿ ಎಲ್ಲಿಯ ಕಶ್ಮಲವು ನಿನಗೆ ಅಂಟಿಕೊಂಡಿತು? ಇದು ಆರ್ಯರಿಗೆ ತಕ್ಕದ್ದಲ್ಲ, ಸ್ವರ್ಗಪ್ರಾಪ್ತಿಯನ್ನು ತಪ್ಪಿಸತಕ್ಕದ್ದು, ಅಪಯಶಸ್ಸನ್ನು ಕೊಡತಕ್ಕದ್ದು. ಪಾರ್ಥನೆ, ಷಂಡನಾಗದಿರು, ಈ ನೀಚಹೃದಯದೌರ್ಬಲ್ಯವನ್ನು ಬಿಟ್ಟು ಏಳು!' ಹೀಗೆಂದಮೇಲೆ ಮತ್ತೂ ಅರ್ಜುನನು ಅದೇ ಸಲ್ಲದ ಕೃಪೆಯ ಮಾತನ್ನಾಡಲಾಗಿ ಅವನಿಗೆ ಸಮ್ಯಗ್ದರ್ಶನವನ್ನು ಬೋಧಿಸಿರುತ್ತಾನೆ. ಇದರಂತೆ ಬ್ರಹ್ಮವಿದ್ಯೆಯನ್ನು ಬೋಧಿಸುವದಕ್ಕೆ ಬಂದಿರುವ ತೈತ್ತಿರೀಯೋಪನಿಷತ್ತಿನಲ್ಲಿಯೂ ಆಚಾರ್ಯನು ಶಿಷ್ಯನಿಗೆ ವಿದ್ಯಾಭ್ಯಾಸವನ್ನು ಮುಗಿಸಿ ಮನೆಗೆ ಕಳುಹಿಸುವಾಗ ಮಾಡುವ ಉಪದೇಶದಲ್ಲಿ :

ಸತ್ಯಂ ವದ| ಧರ್ಮಂ ಚರ| ಸ್ವಾಧ್ಯಾಯಾನ್ಮಾ ಪ್ರಮದಃ | ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ | ಸತ್ಯಾನ್ನ ಪ್ರಮದಿತವ್ಯಮ್ | ಧರ್ಮಾನ್ನ ಪ್ರಮದಿತವ್ಯಮ್ | ಕುಶಲಾನ್ನ ಪ್ರಮದಿತವ್ಯಮ್ | ಭೂತ್ಯೈ ನ ಪ್ರಮದಿತವ್ಯಮ್ || ತೈ. ೧-೧೧.

ಎಂದುಮುಂತಾಗಿ ಹೇಳಿರುವದನ್ನು ಲಕ್ಷಿಸಬೇಕು. ಅಲ್ಲಿ ಸತ್ಯಧರ್ಮಗಳಿಗೆ ಅವಿರೋಧವಾಗಿ ಪ್ರಜಾತಂತುವನ್ನು ಮುಂದುವರಿಸಿಕೊಳ್ಳಬೇಕು, ಸತ್ಪ್ರಜೆಯನ್ನು ಪಡೆಯುವದಕ್ಕೆ ಪ್ರಯತ್ನಿಸಬೇಕು. ಕುಶಲವನ್ನು ಬಿಡದಂತೆ, ಆತ್ಮರಕ್ಷಣೆಗೆ ಬೇಕಾದ ಕರ್ತವ್ಯವನ್ನು ಬಿಡದೆ ಮಾಡುತ್ತಿರಬೇಕು, "ಭೂತಿ"ಯನ್ನು -ಮಂಗಲಯುಕ್ತವಾದ ಕರ್ಮವನ್ನು-ಬಿಡದೆ ಇರಬೇಕು-ಎಂದು ಬೋಧಿಸಿರುವದನ್ನು ನೋಡಿದರೆ ಐಹಿಕಯೋಗಕ್ಷೇಮದಿಂದ ಪರಾಙ್ಮುಖರಾಗಬೇಕೆಂಬ ಬೋಧೆಯು ವೇದಾಂತದ್ದಲ್ಲವೆಂಬುದು ಸ್ಫುಟವಾಗುವದು. ಯಾವನು ಈ ರೀತಿಯಲ್ಲಿ ಸಂಸಾರದ ಹೋರಾಟದಲ್ಲಿ ನುರಿತಿರುತ್ತಾನೋ, ಯಾವನು ಸಾರಾಸಾರವಿವೇಚನೆಯಿಂದ, 'ಈ ಮೂರುದಿನದ ಬಾಳಿಗಿಂತ ಹೆಚ್ಚಿನ ನಿತ್ಯಾನಂದ ಜೀವನವೊಂದಿದ್ದರೆ ಅದೇ ನನಗೆ ಬೇಕು' ಎಂದು ವೈರಾಗ್ಯಯುಕ್ತನಾಗಿ ಅದರ ಜ್ಞಾನಕ್ಕಾಗಿ ಗುರುವನ್ನು ಬಳಿಸಾರುವನೋ-ಅವನಿಗೇ ಮೇಲೆ ಹೇಳಿದ ನಿವೃತ್ತಿಧರ್ಮವನ್ನುಪದೇಶಿಸಿರುತ್ತದೆ. ಆದ್ದರಿಂದಲೇ ಶ್ರುತಿಯಲ್ಲಿ ಕರ್ಮೋಪಾಸನೆಗಳನ್ನು ತಿಳಿಸಿದ ಬಳಿಕವೇ 'ಬ್ರಹ್ಮವಿದಾಪ್ನೋತಿ ಪರಮ್' || ( ತೈ. ೨-೧ ) ಬ್ರಹ್ಮವನ್ನು ಅರಿತವನು ಪರಮಪುರುಷಾರ್ಥವನ್ನು ಹೊಂದುತ್ತಾನೆ ಎಂದು ಬೋಧಿಸಿರುವದು ; ಆದ್ದರಿಂದಲೇ ಭಗವಂತನು ಕರ್ಮಜ್ಞಾನಗಳ ಸಂಬಂಧವನ್ನು ತಿಳಿಸಿಕೊಟ್ಟರೇ ಇವನಿಗೆ ಸ್ವಕರ್ಮದಲ್ಲಿ ಆಸಕ್ತಿಯುಂಟಾದೀತೆಂದು ತಿಳಿದು "ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ" (ಗೀ. ೨-೧೧) ಶೋಕಿಸಬಾರದವರಿಗೆ ನೀನು ಶೋಕಿಸುತ್ತಿರುವೆ- ತಿಳಿದವನಂತೆ ಮಾತನ್ನು ಆಡುತ್ತಿರುವೆ-ಎಂದು ಪ್ರಾರಂಭಿಸಿ ಆತ್ಮಜ್ಞಾನವನ್ನು ಬೋಧಿಸಿರುವನು.

ವೇದಾಂತದಲ್ಲಿ ಕರ್ಮವನ್ನೆಲ್ಲ ಬಿಟ್ಟಿರುವ ಅಕರ್ಮಣ್ಯತೆಯನ್ನೇ ಹೊಗಳಿದೆ ಎಂದು ತಪ್ಪಾಗಿ ತಿಳಿದುಕೊಳ್ಳುವ ಮೂರ್ಖರೂ ಇದಾರೆ.

ನ ಕರ್ಮಣಾಮನಾರಮ್ಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ |
ನ ಚ ಸಂನ್ಯಾಸನಾದೇವ ಸಿದ್ಧಿಂ ಸಮಧಿಗಚ್ಛತಿ || ಗೀ. ೩-೪

ಕರ್ಮಗಳನ್ನು ಬಿಟ್ಟಮಾತ್ರದಿಂದ ನಿಷ್ಕ್ರಿಯಾತ್ಮಸ್ಥಿತಿ ಎಂಬ ಸಿದ್ಧಿಯು ಸಿಕ್ಕಲಾರದು. ಬರಿಯ ಸಂನ್ಯಾಸಾಶ್ರಯದಿಂದ ಯಾವನಿಗೂ ಯಾವ ಸಿದ್ಧಿಯೂ ಆಗಲಾರದು. ಕರ್ಮ, ಅಕರ್ಮ-ಎರಡನ್ನೂ ಮೀರಿರುವದೇ ತತ್ತ್ವವೆಂಬುದೇ ಪರಮಸಿದ್ಧಾಂತವಾದರೂ ಹೀಗೆಂಬುದನ್ನು ಕರ್ಮದಿಂದಲೇ ಅನುಭವಕ್ಕೆ ತಂದು ಕೊಳ್ಳಬೇಕಾಗಿದೆ. ರಾಜನಾದವನು ಸಾಮ, ದಾನ, ಭೇದ, ದಂಡ- ಇವುಗಳನ್ನು ಕ್ರಮವಾಗಿ ಉಪಯೋಗಿಸಬೇಕು, ಧರ್ಮವನ್ನು ಮೀರಬಾರದು-ಎಂಬ ನಮ್ಮ ಶಾಸ್ತ್ರಗಳ ಉಪದೇಶವನ್ನು ನೆನಪಿನಲ್ಲಿಟ್ಟರೆ ಪ್ರಕೃತದಲ್ಲಿ ನಾವು ಎಂದಿಗೂ ಇಹಪರಸುಖದಿಂದ ವಂಚಿತರಾಗಲಾರೆವು. ನಮ್ಮ ಸರಕಾರದವರು "ಪಂಚಶೀಲ" ಗಳನ್ನು ಅನುಸರಿಸಿಯೇ ರಾಜನೀತಿಯನ್ನು ಇಟ್ಟುಕೊಂಡಿರುತ್ತಾರೆ ಎಂಬುದು ಬಹುಜನರ ಸ್ತೋತ್ರಕ್ಕೆ ಕಾರಣವಾಗಿದೆ; ಇದಕ್ಕಾಗಿಯೇ ನಮ್ಮನ್ನು ಹೊಗಳು ವವರೂ ಕೆಲವರು ಇದ್ದಾರೆ. ಇದರ ದುರುಪಯೋಗವನ್ನು ಮಾಡಿಕೊಂಡು ನಮ್ಮ ಮೇಲೆ ಬೀಳುವವರೂ ಇರುತ್ತಾರೆ. ಈಗ ನಾವು ಹೇಗೆ ನಡೆದುಕೊಳ್ಳುವದು ಸರಿ ? ಧರ್ಮವನ್ನು ಬಿಡಬಾರದು. 'ಕುಶಲಾನ್ನ ಪ್ರಮದಿತವ್ಯಮ್, ಭೂತ್ಯೈ ನ ಪ್ರಮದಿತವ್ಯಮ್' ಆತ್ಮರಕ್ಷಣೆಯ ಕಾರ್ಯವನ್ನೂ ಮಂಗಲಕಾರ್ಯವನ್ನೂ ಬಿಡಬಾರದು ; ಇದರ ವಿಷಯಕ್ಕೆ ಎಂದಿಗೂ ಪ್ರಮಾದವಾಗದಂತೆ ನೋಡಿ ಕೊಳ್ಳಬೇಕು. ಗೋವಾ ವಿಷಯದಲ್ಲಿ ಸರಕಾರದವರು ತಾಳ್ಮೆಯಿಂದ ವರ್ತಿಸಿದರು ಸಾಮದಾನಗಳನ್ನು ಅನುಸರಿಸಿ ಅವುಗಳಿಗೆ ಪರರು ಮಣಿಯುವದಿಲ್ಲವೆಂದು ನಿಶ್ಚಯವಾದಮೇಲೆಯೇ ದಂಡೋಪಾಯವನ್ನು ಅನುಸರಿಸಲಾಯಿತು; ಇದನ್ನು ಎಲ್ಲರೂ ನ್ಯಾಯವೆಂದರು. ಚೀನದೇಶದ ವಿಷಯಕ್ಕೂ ಇದೇ ನ್ಯಾಯವನ್ನೇ ಅನುಸರಿಸಲಾಗುತ್ತಿದೆ ಧರ್ಮವೊಂದಿದ್ದರೆ ಸಾಕು, 'ಯತೋ ಧರ್ಮಸ್ತತೋ ಜಯಃ' ಎಲ್ಲಿ ಧರ್ಮವಿರುವದೋ ಅಲ್ಲಿ ಜಯವು ಕಟ್ಟಿಟ್ಟಬುತ್ತಿ. 'ನಾವೊಬ್ಬರು ಸತ್ಯಧರ್ಮಗಳನ್ನು ಅನುಸರಿಸಿದರೆ ಸಾಕೆ ?' ಎಂದು ಕೆಲವರು ಅಧೈರ್ಯದಿಂದ ಕೇಳುವದುಂಟು. ಆದರೆ ಧರ್ಮದಲ್ಲಿ ಅಷ್ಟು ಬಲವಿದೆ. ಸತ್ಯಧರ್ಮಗಳ ನಿಧಿ ಯಾದ ಶ್ರೀರಾಮಚಂದ್ರನು ಬಿಟ್ಟಬಾಣಗಳು ಶತ್ರುವನ್ನು ಹೊಡೆದು ಮತ್ತೆ ಬಂದು ಅವನ ಬತ್ತಳಿಕೆಯನ್ನೇ ಸೇರುತ್ತಿದ್ದವಂತೆ. ಪಾಂಡವರು ಧರ್ಮಿಷ್ಠರೇ ಆದರೂ ಅವರಲ್ಲಿ ಧರ್ಮರಾಯನು 'ಅಶ್ವತ್ಥಾಮೋ ಹತಃ ಕುಂಜರಃ'-ಎಂದು

ಸಂದಿಗ್ಧವಾದ ಅರ್ಥವನ್ನು ಕೊಡುವದಕ್ಕೆ ಅವಕಾಶವಿದ್ದ ವಾಕ್ಯವನ್ನು ಉಚ್ಚರಿಸಿದ್ದರಿಂದ ಅವನಿಗೂ ನರಕದರ್ಶನವಾಯಿತಂತೆ !

ಯಾರು ಅನುಸರಿಸಿದರೂ ಅಸತ್ಯವು ಅಸತ್ಯವೇ. ಅಧರ್ಮವು ಅಧರ್ಮವೇ; ಸತ್ಯಧರ್ಮಗಳಿಗೇ ಜಯ- ಎಂಬುದನ್ನು ನಾವು ಮರೆಯಬಾರದು. ಈಗ ಪಾಶ್ಚಾತ್ಯರು ಯಾವದನ್ನು ಮಾಡಿ ಅದರಿಂದ ದುಷ್ಫಲವಾಗುವದೆಂದು ಕೈಬಿಟ್ಟಿರುವರೋ ಅಂಥದ್ದನ್ನು ಕೂಡ ನಾವು ಅನುಸರಿಸುವದಕ್ಕೆ ಹೊರಟಿದೇವೆ. ಬುದ್ಧಿಬಲ, ವ್ಯವಹಾರಕುಶಲತೆ, ಶಾರೀರಬಲ-ಇವುಗಳೊಳಗೆ ಯಾರಲ್ಲಿ ಯಾವದು ಹೆಚ್ಚಾಗಿರುವದೋ, ಅವರು ಅದನ್ನು ಉಪಯೋಗಿಸಿಕೊಂಡು ಲೋಕಕ್ಕೆ ಉಪಕಾರವನ್ನೂ ಪರಮೇಶ್ವರನ ಆರಾಧನೆಯನ್ನೂ ಮಾಡಬಹುದು- ಎಂಬುದನ್ನು ವರ್ಣಾಶ್ರಮವಿಭಾಗದ ವ್ಯವಸ್ಥೆಯು ನಮಗೆ ಹೇಳಿಕೊಟ್ಟಿದೆ. ಮಿತಜೀವನದಿಂದ ದೊರೆಯುವ ಸುಖವು ವಿಲಾಸದಿಂದ ಮಾಡುವ ಜೀವನದಲ್ಲಿ ಎಂದಿಗೂ ದೊರೆಯದು- ಎಂಬ ಹಿರಿಯರ ನೀತಿಯನ್ನು ನಾವು ಕೈಬಿಡುತ್ತಿದೇವೆ. ಸ್ವಾಮಿ ವಿವೇಕಾನಂದರು "ನಿಮ್ಮವರು ಮನುಷ್ಯನು ಎಷ್ಟು ಹೆಚ್ಚಾಗಿ ಸಂಪಾದಿಸಬಹುದು ಎಂಬುದನ್ನು ತೋರಿಸುತ್ತಿದ್ದರೆ, ಎಷ್ಟು ಕಡಿಮೆಯ ಅಂತಸ್ತಿನಲ್ಲಿ ಸುಖಜೀವನವನ್ನು ನಡೆಯಿಸಬಹುದು ಎಂಬುದನ್ನು ನಮ್ಮವರು ತೋರಿಸಿಕೊಡುತ್ತಿದಾರೆ" ಎಂದು ಪಾಶ್ಚಾತ್ಯರಿಗೆ ಹೇಳಿದ ಮಾತನ್ನು ನಾವು ಈಗ ಅಸಡ್ಡೆ ಮಾಡುತ್ತಿದೇವೆ. ಮಿತವ್ಯಯದಿಂದ ವಿಲಾಸದ ಜೀವನವನ್ನೂ, ಧಾರ್ಮಿಕದಾಂಪತ್ಯಕ್ರಮದಿಂದ ಮಿತಸಂತಾನಕ್ರಮವನ್ನೂ, ಬ್ರಹ್ಮಚರ್ಯದಿಂದ ಅನಾರೋಗ್ಯ, ಅಲ್ಪಾಯುಷ್ಯ, ದುರ್ಗತಿಗಳನ್ನೂ ಗೆಲ್ಲುವದಕ್ಕೆ ಪ್ರಯತ್ನಿಸೋಣ ಶಾಸ್ತ್ರದೃಷ್ಟಿಯನ್ನವಲಂಬಿಸಿ ಇಹಪರಸುಖಗಳನ್ನು ಸಂಪಾದಿಸಿಕೊಳ್ಳೋಣ. ಕಷ್ಟಪಟ್ಟು ಕೃಷಿಕರು ಕೆಲಸಮಾಡಲಿ; ಆಗ ಪರದೇಶದಿಂದ ಧಾನ್ಯವನ್ನು ತರಿಸಿಕೊಳ್ಳುವ ಆವಶ್ಯಕತೆ ಎಲ್ಲಿಂದ ಬಂದೀತು ?

ವೇದಾಂತವೆಂಬುದು ಸೋಮಾರಿಗಳಿಗೆ ಹೊರತು ಮಿಕ್ಕವರೆಲ್ಲರಿಗೂ (ವ್ಯಕ್ತಿ, ಸಮಾಜ, ಸರಕಾರ-ಎಲ್ಲರಿಗೂ) ಮಾಡತಕ್ಕದ್ದೇನೆಂಬುದನ್ನು ತಿಳಿಸುತ್ತದೆ. ಅಭ್ಯುದಯ ನಿಃಶ್ರೇಯಸ-ಎಂಬ ಎರಡು ಫಲಗಳನ್ನು ಅಲ್ಲಿ ಹೇಳಿದೆ. ಭೋಗಿಗಳು ಹೇಗಿರಬೇಕು, ವಿರಕ್ತರು ಹೇಗಿರಬೇಕು?- ಎಂಬುದನ್ನು ತಿಳಿಸಿದೆ. ಬೇರೆಬೇರೆಯ ಯೋಗ್ಯತೆಯಿರುವವರಿಗೆ ಬೇರೆಬೇರೆಯ ಉಪದೇಶಗಳನ್ನು ಮಾಡಿದೆ. ಪ್ರತಿಯೊಬ್ಬರೂ ಅವರವರ ಕರ್ಮವನ್ನು ಮಾಡಬೇಕು, ಯಾವ ಕರ್ಮವೂ ನೀಚವಲ್ಲ; ಆದರೆ ಧರ್ಮವನ್ನು ಮಾತ್ರ ಯಾರೂ ಯಾವ ಕಾರಣದಿಂದಲೂ ಬಿಡಬಾರದು. ಧರ್ಮವು ನಿತ್ಯ, ಜೀವನು ನಿತ್ಯ ; ಆದ್ದರಿಂದ ಧರ್ಮವನ್ನು ಬಿಟ್ಟರೆ ಕೆಟ್ಟೆವು. ನಾವು ಈಗಿನ ಭೌತಿಕವಿಜ್ಞಾನವನ್ನು ಆವಶ್ಯ

ವಾಗಿ ಸಂಪಾದಿಸಿಕೊಳ್ಳಬೇಕು. ಆ ಜ್ಞಾನವನ್ನು ಧರ್ಮದೃಷ್ಟಿಯಿಂದ ಇಹ ಲೋಕದ ಸುಖಕ್ಕೆ ಅನುಕೂಲವಾಗುವಂತೆ ಉಪಯೋಗಿಸಿಕೊಳ್ಳಬೇಕು. ಇಷ್ಟೇ. ನಾವು ಧರ್ಮವನ್ನನುಸರಿಸಿ ನಡೆಯುತ್ತಾ ಮತ್ತೊಬ್ಬರಿಗೂ ಧರ್ಮದ ಮೇಲ್ಮೆಯನ್ನು ತೋರಿಸುತ್ತಾ ಬರಬೇಕು. ಇದರಿಂದ ಸಕಲ ಇಷ್ಟಾರ್ಥಗಳ ಪ್ರಾಪ್ತಿಯಾಗುತ್ತದೆ, ಸಕಲ ಅನಿಷ್ಟಾರ್ಥಗಳ ಪರಿಹಾರವೂ ಆಗುತ್ತದೆ.

ಪ್ರವೃತ್ತಿಧರ್ಮವನ್ನು ಸರಿಯಾಗಿ ಉಪಯೋಗಿಸಿಕೊಂಡರೆ ಅದು ಅಭ್ಯುದಯಕ್ಕೆ ಮಾತ್ರವೇ ಅಲ್ಲದೆ, ನಿವೃತ್ತಿಧರ್ಮವನ್ನು ಅನುಸರಿಸುವದಕ್ಕೂ ಸಾಧಕವಾಗುತ್ತದೆ. ನಿವೃತ್ತಿಧರ್ಮಪರರೆಂದರೆ ಪ್ರಪಂಚಕ್ಕೆ ಹೊರತಾದವರೆಂದರ್ಥವಲ್ಲ. ಅವರು ಪ್ರಪಂಚದ ಪರಮಾರ್ಥವನ್ನು ತಿಳಿದುಕೊಂಡು ಜೀವಿಸುವವರು. ಅಷ್ಟೆ. ಅವರು ತಮ್ಮ ಶ್ರೇಯಸ್ಸಿಗೇ ಅಲ್ಲದೆ, ಲೋಕದಲ್ಲಿ ಉಳಿದವರಿಗೂ ಸರಿಯಾದ ಜೀವನಕ್ರಮವನ್ನು ತಿಳಿಯಿಸಿಕೊಡುವದಕ್ಕೆ ಬದ್ಧಪರಿಕರರಾಗಿರುವ ಸ್ವಯಂಸೇವಕರಾಗಿರುತ್ತಾರೆ. ಅವರಿಂದ ನಮ್ಮೆಲ್ಲ- ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳಿಗೂ ಒತ್ತಾಸೆಯು ದೊರೆಯುತ್ತದೆ.

---

## ೪೮. ಸುಖದುಃಖಗಳ ತತ್ತ್ವ

(5—9—6)

ಇಷ್ಟಾನಿಷ್ಟಪ್ರಾಪ್ತಿಪರಿಹಾರಕ್ಕೆಂದು ಮನುಷ್ಯನು ಪ್ರಯತ್ನಿಸುತ್ತಿರುತ್ತಾನೆ. ಆದರೆ ಇಷ್ಟಪ್ರಾಪ್ತಿಯಿಂದ ಸುಖವೇ ಆಗುವದೆಂದಾಗಲಿ, ಅನಿಷ್ಟಪ್ರಾಪ್ತಿಯಿಂದ ದುಃಖವೇ ಆಗುವದೆಂದಾಗಲಿ ನಿಯಮವಿಲ್ಲ. ಶಾಸ್ತ್ರದೃಷ್ಟಿಯನ್ನವಲಂಬಿಸಿ ಪ್ರಯತ್ನಿಸುವಾಗ ಇಂಥಿಂಥ ಇಷ್ಟವು ಪ್ರಾಪ್ತವಾಗುವದಕ್ಕೆ ಇಂಥಿಂಥ ಉಪಾಯವನ್ನು ಅನುಸರಿಸಬೇಕು- ಎಂದಿಷ್ಟೇ ತಿಳಿಯಬರುತ್ತದೆಯೋ ಹೊರತು ಆ ಇಷ್ಟದಿಂದ ಅತ್ಯಂತಿಕವಾಗಿ ಸುಖವು ಬರುತ್ತದೆಯೆಂದೇನೂ ಗೊತ್ತಾಗುವದಿಲ್ಲ. ಲೋಕದಲ್ಲಿ ಸುಖದುಃಖಗಳು ಬೆರತೇ ಇರುತ್ತವೆ ; ಸುಖವಾದ ಬಳಿಕ ದುಃಖ, ದುಃಖವಾದ ಬಳಿಕ ಸುಖ- ಹೀಗೆ ಒಂದರಹಿಂದೊಂದು ಬರುತ್ತಿರುವದೇ ಸಂಸಾರದ ಸ್ವಭಾವ.

ಈ ಪ್ರಪಂಚವು ಸ್ವಭಾವದಿಂದಲೇ ಹೀಗೆ ಸುಖದುಃಖಮಿಶ್ರವಾಗಿದ್ದುಕೊಂಡಿರುವದೊ, ಅಥವಾ ಸುಖದುಃಖಗಳು ಈಶ್ವರಸೃಷ್ಟವಾಗಿರುವವೋ? ಈಶ್ವರನು ಇದನ್ನು ಸೃಷ್ಟಿಸಿದ್ದರೆ ಅವನು ಇಲ್ಲಿ ದುಃಖವನ್ನೇಕೆ ಸೃಷ್ಟಿಸಬೇಕು ? ಸರ್ವಶಕ್ತನಾದರೆ ಜೀವನವನ್ನೆಲ್ಲ ಸುಖಮಯವಾಗಿ ಸೃಷ್ಟಿಸುವದಕ್ಕೆ ಅವನಿಂದ ಆಗುತ್ತಿರಲಿಲ್ಲವೆ ? -ಎಂಬುದೊಂದು ಪ್ರಶ್ನೆಯನ್ನು ಕೆಲವರು ಎತ್ತುತ್ತಿರುತ್ತಾರೆ.

ನಮ್ಮ ಜೀವನವೆಲ್ಲ ದುಃಖಮಯವೇ ಎಂದು ಹೇಳುವವರ ಅಭಿಪ್ರಾಯವು ಅನುಭವವಿರುದ್ಧವೆಂದು ಹೇಳಬೇಕಾದದ್ದೇ ಇಲ್ಲ. ಸುಖವಿಲ್ಲದಿದ್ದರೆ ಇಲ್ಲಿ ಜೀವಿಸಿರಬೇಕೆಂದು ಜನರೇಕೆ ಪ್ರಯತ್ನಪಡುತ್ತಿದ್ದರು ? ಆದರೆ ದುಃಖವೇ ಇಲ್ಲ ವೆಂಬುದೂ ಅಷ್ಟೇ ತಪ್ಪುಭಾವನೆ ; ಏಕೆಂದರೆ ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕವಾದ ದುಃಖಗಳು ನಮಗೆ ಅನುಭವದಲ್ಲಿ ಕಾಣಬರುತ್ತಲೇ ಇರುತ್ತವೆ. ಹಸಿವು, ಬಾಯಾರಿಕೆ, ರೋಗ, ಮುಪ್ಪು, ಸಾವು– ಇವು ಯಾರಿಗೂ ತಪ್ಪಿದ್ದಲ್ಲ. ಇವುಗಳಲ್ಲದೆ ಸಾಂಕ್ರಾಮಿಕರೋಗಗಳು, ಕ್ಷಾಮಗಳು, ಯುದ್ಧಗಳು, ರಾಜಕೀಯಕೊಲೆಗಳು– ಇವುಗಳು ಆಗಿಂದಾಗ್ಗೆ ನಡೆದೇಇರುತ್ತವೆ. ಹುಲಿ, ಕರಡಿ, ಸಿಂಹ, ಹಾವು, ಚೇಳು– ಮುಂತಾದ ದುಷ್ಟಮೃಗಗಳು ಜನರ ಮೇಲೆ ಬಿದ್ದು ಅವರನ್ನು ಕೊಲ್ಲುವವು ; ಪ್ರಾಣಿಗಳು ಒಂದು ಮತ್ತೊಂದನ್ನು ಕೊಂದು ಜೀವಿಸುತ್ತಿವೆ. ನೆಲವು ಗುಡುಗುವದು, ಅತಿವೃಷ್ಟಿ, ಸಿಡಿಲುಬಡಿಯು ವದು, ನದಿಗಳೂ ಸಮುದ್ರವೂ ಉಕ್ಕೇರುವದು, ಸುಂಟರಗಾಳಿ ಎದ್ದು ಹಾವಳಿ ಯನ್ನು ಮಾಡುವದು, ಕಾಡುಗಿಚ್ಚು ಎದ್ದುಕೊಂಡು ಅಗಣಿತಪ್ರಾಣಿಗಳನ್ನು ಕೊಲ್ಲುವದು– ಇವಕ್ಕೇನೂ ಕಡಿಮೆಯಿಲ್ಲ. ಇವುಗಳಿಲ್ಲದಿರುವಾಗಲೂ ಕೆಲವು ಜನರು ಅಂಗವಿಕಲರಾಗಿ ಹುಟ್ಟುವರು ; ಕೆಲವರು ಪತ್ನೀಪುತ್ರಾದಿಗಳ ವಿಯೋಗ ದಿಂದ ನರಳುವರು, ಕಾರಣಾಂತರದಿಂದ ಬೆಲೆಯುಳ್ಳ ಮೈತ್ರಿಯು ತಪ್ಪಿಹೋಗುವದು ಭಾರಿಯ ವ್ಯಾಪಾರದಲ್ಲಿ ಧನನಾಶವಾಗುವದು, ಇಂಥ ದುಃಖಗಳು ಬಲವಾದಾಗ ವಿದ್ವತ್ತೆ, ಕೀರ್ತಿ, ಬಿರುದು, ಧನಸಂಪತ್ತಿ– ಮುಂತಾದವುಗಳಿಂದಾಗುವುದಾದ ಸುಖಕ್ಕೆ ಆತಂಕಬರುತ್ತದೆ. ಇನ್ನು ತಂದೆತಾಯಿಗಳು,ಮಕ್ಕಳು, ಅಣ್ಣತಮ್ಮಂದಿರು, ದೇಶವಿದೇಶದವರು, ಪ್ರಜೆಸರ್ಕಾರದವರು– ಮುಂತಾದವರು ಒಬ್ಬರಿಗೊಬ್ಬರು ಮಾಡುವ ಅನ್ಯಾಯದಿಂದಾಗುವ ದುಃಖ, ರಾಜರುಗಳೂ ರಾಷ್ಟ್ರಾಧಿಪತಿಗಳೂ ರಾಜನೀತಿಯುಸಲುವಾಗಿ ಕಡುವ ದುಃಖಗಳು– ಇವೂ ಇರುತ್ತವೆ. ಈ ದುಃಖಗಳು ಈಶ್ವರನಿಂದ ಏಕೆ ಸೃಷ್ಟನಾಗಬೇಕು ? ದುಃಖವನ್ನು ಸಹಿಸಲಾರದೆ ಪ್ರಾಣವನ್ನು ಬಿಡುವವರು ಕೆಲವರು, ಪ್ರಾಣ ಹೋದರೆ ಸಾಕೆಂದಿರುವವರೂ ಆತ್ಮಹತ್ಯೆಯನ್ನು ಮಾಡಿಕೊಳ್ಳಲಾರದೆ ನರಳುತ್ತಿರುವವರೂ ಕೆಲವರು– ಹೀಗೆ ಲೋಕದಲ್ಲಿ ದುಃಖದ ವೈಚಿತ್ರ್ಯವು ಎಷ್ಟಿಲ್ಲ ?

ಅಂತೂ ಪ್ರಪಂಚದಲ್ಲಿ ದುಃಖವಿರುವದು ನಿಶ್ಚಯ. ಈ ದುಃಖವನ್ನೇಕೆ ಈಶ್ವರನು ಸೃಷ್ಟಿಸಿದಾನೆ?–ಎಂಬ ಪ್ರಶ್ನೆಯು ದ್ವೈತಕ್ಕೆ ಸೇರಿದ್ದು. ಜೀವೇಶ್ವರ ರನ್ನು ವ್ಯವಹಾರದೃಷ್ಟಿಯಿಂದ ಒಪ್ಪಿ ಈ ಪ್ರಶ್ನೆಗೂ ವೇದಾಂತಿಗಳು ಉತ್ತರವನ್ನು ಹೇಳುವದುಂಟು. ಈಶ್ವರನು ಸುಖದುಃಖವೈಷಮ್ಯದಿಂದ ಕೂಡಿದ ಜಗತ್ತನ್ನು ಸ್ವತಃ ಸೃಷ್ಟಿಸಿರುವದಿಲ್ಲ ; ಆಯಾ ಜೀವರ ಕರ್ಮಾನುಸಾರವಾಗಿ ಹಾಗೆ ಸೃಷ್ಟಿ ಸಿರುತ್ತಾನೆ. ಜೀವರು ಇದರಿಂದ ನನಗೆ ಸುಖವಾಗುತ್ತದೆ ಎಂದು ಭ್ರಾಂತಿಯಿಂದ

ಮಾಡಬಾರದ ಕರ್ಮವನ್ನು ಮಾಡುತ್ತಾರೆ, ಅದರಿಂದ ತತ್ಕಾಲಕ್ಕೆ ಸುಖವೂ ಆಗಬಹುದು, ಪರಿಣಾಮದಲ್ಲಿ ದುಃಖವಂತೂ ನಿಶ್ಚಿತವಾಗಿ ಆಗುತ್ತದೆ. ಆದ್ದರಿಂದ ಅವರವರ ಸುಖದುಃಖಗಳಿಗೆ ಅವರವರ ಕರ್ಮವೇ ಕಾರಣ. 'ಸುಖಸ್ಯ ದುಃಖಸ್ಯ ನ ಕೋಽಪಿ ದಾತಾ ಪರೋ ದದಾತೀತಿ ಕುಬುದ್ಧಿರೇಷಾ' ಸುಖಕ್ಕೂ ದುಃಖಕ್ಕೂ ಮತ್ತೊಬ್ಬರು ಕಾರಣವೆಂದು ತಿಳಿಯುವದು ಕುಬುದ್ಧಿ. ಆಯಾ ಕರ್ಮಗಳಿಗೆ ಅನುಗುಣವಾಗಿ ಫಲವಾಗುವಂತೆ ನಿಯಮಿಸಿರುವವನು ಈಶ್ವರನು; ಆದರೆ ಹೀಗೆಯೇ ಜೀವರು ಕರ್ಮವನ್ನು ಮಾಡಬೇಕೆಂದೇನೂ ಈಶ್ವರನು ನಿಯಮಿಸಿಲ್ಲವಾದ್ದರಿಂದ ಅವನಿಗೆ ಈ ಕಾರಣದಿಂದ ವೈಷಮ್ಯವುಳ್ಳವನು– ಪಕ್ಷಪಾತದೃಷ್ಟಿಯವನು– ಎಂದಾಗಲಿ, ನೈರ್ಘೃಣ್ಯವುಳ್ಳವನು– ಮರುಕವಿಲ್ಲದವನು– ಎಂದಾಗಲಿ ದೋಷವನ್ನು ಹತ್ತಿಸುವದಕ್ಕೆ ಬರುವದಿಲ್ಲ. ಇದು ವ್ಯವಹಾರದೃಷ್ಟಿಯಿಂದ ಕೊಡುವ ಉತ್ತರ.

ಆದರೆ ಇದು ವೇದಾಂತಿಗಳ ಪರಮಸಿದ್ಧಾಂತವಲ್ಲ. ಏಕೆಂದರೆ ದ್ವೈತಮತಗಳಲ್ಲಿ ಹೇಳಿರುವಂತೆ ಜೀವನಿಗಿಂತ ಈಶ್ವರನು ಬೇರೆಯೆಂದಾಗಲಿ, ಅವನಿಗೆ ಬೇಕಾದ ಕ್ರಿಯಾಕಾರಕಫಲಗಳನ್ನು ಈಶ್ವರನು ಸೃಷ್ಟಿಸಿರುವನೆಂದಾಗಲಿ ಅವರು ಹೇಳುವದಿಲ್ಲ. 'ನ ಚೇಯಂ ಪರಮಾರ್ಥವಿಷಯಾ ಸೃಷ್ಟಿಶ್ರುತಿಃ, ಅವಿದ್ಯಾಕಲ್ಪಿತನಾಮರೂಪವ್ಯವಹಾರಗೋಚರತ್ವಾತ್, ಬ್ರಹ್ಮಾತ್ಮಭಾವಪ್ರತಿಪಾದನಪರತ್ವಾಚ್ಚ– ಇತ್ಯೇತದಪಿ ನೈವ ವಿಸ್ಮರ್ತವ್ಯಮ್ ||" (ಸೂ. ಭಾ. ೨-೧-೩೩) ಎಂದು ಶಂಕರಾಚಾರ್ಯರು ಬರೆದಿರುವದನ್ನು ನೆನಪಿಟ್ಟರೆ ಈ ಮೇಲೆ ಹೇಳಿರುವದು ನಿಜವಾಗಿಯೂ ಒಂದು ಕಾಲದಲ್ಲಿ ಸೃಷ್ಟಿಯಾಗಿರುವದೆಂಬ ಅಭಿಪ್ರಾಯದಿಂದಲ್ಲ; ಏಕೆಂದರೆ "ಸೃಷ್ಟವಾಗಿರುವ ನಾಮರೂಪಾತ್ಮಕವಾದ ಜಗತ್ತು ಅವಿದ್ಯಾಕಲ್ಪಿತವಾಗಿರುವ ವ್ಯವಹಾರಕ್ಕೆ ಸೇರಿದ್ದು; ಅದು ಪರಮಾರ್ಥವಲ್ಲ. ಪರಮಾತ್ಮನೇ ಈ ಜಗತ್ತನ್ನು ಸೃಷ್ಟಿಸಿರುತ್ತಾನೆ, ಎಂದರೆ ಅವನೇ ಜಗತ್ತಾಗಿ ತೋರುತ್ತಿರುತ್ತಾನೆ; ಈ ಜೀವಾತ್ಮರೆಲ್ಲರೂ ನಿಜವಾಗಿ ಪರಮಾತ್ಮಸ್ವರೂಪರೇ ಆಗಿರುತ್ತಾರೆ– ಎಂದು ಬ್ರಹ್ಮಾತ್ಮತ್ವವನ್ನು ತಿಳಿಸಿಕೊಡುವದಕ್ಕಾಗಿಯೇ ಸೃಷ್ಟಿಶ್ರುತಿಯು ಬಂದಿರುತ್ತದೆಯೆಂಬುದನ್ನು ಮರೆಯದೆ ಇರಬೇಕು" ಎಂದು ಆ ಆಚಾರ್ಯರು ಎಚ್ಚರಿಕೆ ಕೊಟ್ಟಿರುತ್ತಾರೆ.

ಹಾಗಾದರೆ ಈ ಕಾಣುತ್ತಿರುವ ಸುಖದುಃಖಭೋಗಗಳಿಗೇನು ಗತಿ ? –ಎಂದರೆ ಇದಕ್ಕೆ ಭಗವದ್ಗೀತೆಯಲ್ಲಿ ಉತ್ತರವಿದೆ :

ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್ |
ಕಾರಣಂ ಗುಣಸಙ್ಗೋಽಸ್ಯ ಸದಸದ್ಯೋನಿಜನ್ಮಸು ||

ಗೀ. ೧೩-೨೧

ಆತ್ಮನಿಗೆ ನಿಜವಾಗಿ ಸುಖವೂ ಇಲ್ಲ, ದುಃಖವೂ ಇಲ್ಲ ; ಅವನು ಅನಿತ್ಯವಾದ ಸುಖದುಃಖಗಳನ್ನು ಮೀರಿದ ನಿತ್ಯಾನಂದಸ್ವರೂಪನು. ಆದರೂ ಅವಿದ್ಯೆಯಿಂದ ತೋರುತ್ತಿರುವ ಪ್ರಕೃತಿಯಲ್ಲಿ ಅಭಿಮಾನವಿಟ್ಟುಕೊಂಡಿರುವದರಿಂದ, ಶರೀರೇಂದ್ರಿಯಮನಸ್ಸುಗಳ ಆಕಾರದಲ್ಲಿ ಪರಿಣಮಿಸಿರುವ ಪ್ರಕೃತಿಯೇ ನಾನು -ಎಂದು ಪಟ್ಟುಹಿಡಿದಿರುವದರಿಂದ ಆ ಪ್ರಕೃತಿಯ ಗುಣಗಳಾದ ಸುಖದುಃಖಮೋಹಗಳನ್ನು ಜನರು ಅನುಭವಿಸುತ್ತಿರುತ್ತಾರೆ. ಕನಸು ಇರುವವರೆಗೂ ಅಲ್ಲಿ ಆಗುವ ಸುಖದುಃಖಗಳು ನಿಜವಾಗಿರುವವೆಂದೇ ಜನರ ಗಟ್ಟಿಯಾದ ಭಾವನೆ ಇರುವದಲ್ಲವೆ? ಹಾಗೆಯೇ ಅವಿದ್ಯೆಯಿಂದ ಶರೀರಾದಿಗಳ ತಾದಾತ್ಮ್ಯವನ್ನು ಮಾಡಿಕೊಂಡಿರುವವರೆಗೂ ಸುಖದುಃಖಗಳು ಸತ್ಯವೆಂದೇ ತೋರುತ್ತಿರುವವು. ಪ್ರಕೃತಿಗುಣಗಳಾದ ಸತ್ತ್ವರಜಸ್ತಮಸ್ಸುಗಳಲ್ಲಿ ಸಂಗವಿರುವದೇ, ಹೊರಗಿನ ವಿಷಯಗಳಲ್ಲಿ ರಾಗದ್ವೇಷಗಳಿರುವದೇ, ಆಯಾ ಕಾಮವಾಸನೆಯಿಂದ ಆಯಾ ಕರ್ಮಫಲಭೋಗಕ್ಕೆ ತಕ್ಕ ಜನ್ಮಗಳನ್ನು ಪಡೆಯುವದಕ್ಕೆ ಕಾರಣವಾಗಿವೆ.

ಜನರಿಗೆ ಈ ಸುಖದುಃಖಮಯವಾಗಿರುವ ಸಂಸಾರದಲ್ಲಿಯೇ ಇದ್ದು ಜೀವಿಸಬೇಕೆಂಬ ಆಗ್ರಹವಿರುವದೇಕೆ ? -ಎಂದರೆ ಅವರಿಗೆ ಸ್ವಭಾವದಿಂದಲೇ ಆತ್ಮನು ಪ್ರಿಯನಾಗಿರುತ್ತಾನೆ. ಶ್ರುತಿಯು ಹೀಗೆಂದು ಇದನ್ನು ಅನುವಾದ ಮಾಡುತ್ತಿದೆ.

ತದೇತತ್ ಪ್ರೇಯಃ ಪುತ್ರಾತ್ ಪ್ರೇಯೋ ವಿತ್ತಾತ್ ಪ್ರೇಯೋಽನ್ಯಸ್ಮಾತ್ ಸರ್ವಸ್ಮಾತ್ ಅನ್ತರತರಂ ಯದಯಮಾತ್ಮಾ || ಬೃ. ೧-೪-೮.

'ಈ ಆತ್ಮತತ್ತ್ವವು ಮಗನಿಗಿಂತ ಪ್ರಿಯವಾದದ್ದು, ವಿತ್ತಕ್ಕಿಂತಲೂ ಪ್ರಿಯವಾದದ್ದು, ಮಿಕ್ಕ ಎಲ್ಲಕ್ಕಿಂತಲೂ ಪ್ರಿಯವಾದದ್ದು ; ಏಕೆಂದರೆ ಇದು ಎಲ್ಲಕ್ಕೂ ಒಳಗಿರುವ ನಮ್ಮ ಸ್ವರೂಪವಾಗಿರುತ್ತದೆ.' ಈ ಆನಂದವು ನಮ್ಮಲ್ಲಿದೆ ; ಆದ್ದರಿಂದ ನಮ್ಮ ಮೇಲೆ ನಮಗೆ ಬಹಳ ಪ್ರೇಮ. ಹೇಗಾದರೂ ಮಾಡಿ ಬದುಕಿರಬೇಕು, 'ಜೀವನ್ ಭದ್ರಾಣಿ ಪಶ್ಯತಿ' ಬದುಕಿದ್ದರೆ ಹೇಗಾದರೂ ಶುಭವಾದೀತು- ಎಂದೇ ಜನರು ಹಾರೈಸುತ್ತಾರೆ. ಅವರಿಗೆ ಸುಖವು ಬೇಕು, ನಿಜವಾದ ಸುಖವು ಯಾವದೆಂಬುದು ತಿಳಿಯದು. ಆದ್ದರಿಂದ 'ಈಗ ಕಾಣುವಷ್ಟು ಸುಖವನ್ನು ಹೇಗದರೂ ಉಳಿಸಿಕೊಳ್ಳಬೇಕು, ಹೇಗಾದರೂ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕು'- ಎಂದೂ ಹವಣಿಸುತ್ತಿರುತ್ತಾರೆ. ಈ ನದಿಗಳು ಮೇಲಕ್ಕೆ ಉಕ್ಕೇರುವದು ಕಂಡಿದ್ದರೂ ಜನರು ಅವುಗಳ ದಡದಲ್ಲಿಯೂ ಗುಡಿಸಲುಗಳನ್ನು ಕಟ್ಟಿಕೊಂಡು ಹೇಗೋ ಜೀವಿಸುವರು ; ಕಾಡುಗಳಲ್ಲಿ ಹುಲಿ, ಕರಡಿ-ಮುಂತಾದ ದುಷ್ಟಪ್ರಾಣಿಗಳಿದ್ದರೂ ಬಂದೂಕು- ಮುಂತಾದ ಆಯುಧಗಳ ಸಹಾಯದಿಂದ ಆ ಅಪಾಯದ ಸ್ಥಲಗಳಲ್ಲಾದರೂ ವಾಸಮಾಡಿಕೊಂಡಿರುತ್ತಾರೆ ; ಚಿನ್ನಬೆಳ್ಳಿಗಳ ಒಡವೆಗಳು

ಕಳ್ಳಕಾಕರಿಗೆ ಅವಕಾಶವನ್ನು ಕೊಡುತ್ತವೆ– ಎಂದು ತಿಳಿದಿದ್ದರೂ ಪೋಲೀಸರ ಸಹಾಯವನ್ನು ಪಡೆದುಕೊಂಡಾದರೂ ಅವುಗಳನ್ನು ಧರಿಸಿ ಸುಖಪಡಬೇಕೆಂದು ಬಯಸುವವರು. ಔಷಧಿಯನ್ನು ತೆಗೆದುಕೊಂಡಾದರೂ ರೋಗರುಜಿನಗಳನ್ನು ಪರಿಹರಿಸಿಕೊಂಡು ಜೀವಿಸಿರಬೇಕೆನ್ನುವವರು. ದುಃಖವೆಂಬುದು ವ್ಯವಹಾರ ದೃಷ್ಟಿಯಿಂದ ಪಾಪದ ಫಲ ; ಪಾಪವೆಂಬುದು ಪ್ರಕೃತಿಯಲ್ಲಿ ತಾದಾತ್ಮ್ಯವನ್ನು ಹೊಂದಿದ್ದರ ಫಲ.

ಕ್ಷಾಮಡಾಮರಗಳು, ರಾಜಕೀಯವಿಪ್ಲವಗಳು–ಮುಂತಾದವುಗಳು ಏತಕ್ಕೆ ಬರುತ್ತವೆ ?–ಎಂದರೆ ಪುಣ್ಯಪಾಪಗಳು ವ್ಯಕ್ತಿಗಳಿಗೆ ಅನ್ವಯಿಸುವಂತೆ ಸಮಾಜಕ್ಕೂ ಅನ್ವಯಿಸುವವು. ಜನರು ಕಾಮ, ವಿಲಾಸಜೀವನ, ದುರಾಶೆ–ಇವುಗಳಿಗೆ ಒಳಗಾಗಿ ಮಾಡಬಾರದ ಕರ್ಮಗಳನ್ನು ಮಾಡುತ್ತಾರೆ ; ಆದರಿಂದ ಇಡಿಯ ಸಮಾಜವೇ ದುಃಖಕ್ಕೆ ಒಳಗಾಗಬೇಕಾಗುತ್ತದೆ 'ಪುನರ್ದರಿದ್ರಃ ಪುನರೇವ ಪಾಪೀ' ಎಂಬಂತೆ ಮತ್ತೆಮತ್ತೆ ಪಾಪಗಳನ್ನು ಮಾಡಿ ಮತ್ತೆಮತ್ತೆ ದುಃಖಗಳನ್ನು ಅನುಭವಿಸುವದು 'ಪ್ರಕೃತಿಸ್ಥತ್ವ'ರೂಪವಾದ ಶರೀರಾದಿತಾದಾತ್ಮ್ಯವುಳ್ಳವರಿಗೆ ತಪ್ಪಿದ್ದಲ್ಲ. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವೇ ದುಃಖ. ಪುಣ್ಯಪಾಪಗಳನ್ನು ನಾವೇ ಆಹ್ವಾನಿಸಿಕೊಂಡಿರುತ್ತೇವೆ. ನಾವೇ ಅವುಗಳ ಫಲವಾಗಿ ಅನಿತ್ಯವಾದ ಸುಖದುಃಖಗಳನ್ನೂ ಅನುಭವಿಸುತ್ತಿರುತ್ತೇವೆ.

ಆದರೆ ಅಧ್ಯಾತ್ಮದೃಷ್ಟಿಯಿಂದ ನೋಡಿದರೆ ದುಃಖಗಳು ಎಚ್ಚರಿಕೆಯನ್ನು ಕೊಡುವದಕ್ಕೆ ಬರುತ್ತವೆ ಎಂದು ಹೇಳಬಹುದು. 'ಈ ಕ್ಷಣಿಕಸುಖಗಳಿಗೆ ಮರುಳಾಗಬೇಡಿ. ಸುಖದುಃಖಗಳೆರಡನ್ನೂ ಮೀರಿದ ಆನಂದವೊಂದಿದೆ, ಅದೇ ಪರಮಾತ್ಮನ ಸ್ವರೂಪ, ಅದೇ ನಿಮ್ಮಗಳ ಆತ್ಮ. ನೀವು ಅನುಭವಿಸುತ್ತಿರುವೆವೆನ್ನುವ ಲೌಕಿಕಸುಖವೂ ಆದರದೇ ಒಂದು ಅಂಶ. 'ಏತಸ್ಯೈವಾನನ್ದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವನ್ತಿ ||' ಎಂದು ಶ್ರುತಿಯಿದೆ. ದುಃಖಗಳು ಜನರಿಗೆ ಎಚ್ಚರಿಕೆಯನ್ನು ಕೊಡುತ್ತವೆ. ಈ ದೃಷ್ಟಿಯಿಂದ ಈಶ್ವರನು ಕರ್ಮಾನುಸಾರವಾಗಿ ದುಃಖವನ್ನು ಕೊಡುವದೂ, 'ಬೆಂಕಿಯನ್ನು ಮುಟ್ಟಬೇಡ, ಕೈ ಸುಡುತ್ತದೆ' ಎಂದು ಹೇಳುವ ತಂದೆತಾಯಿಗಳಂತೆ ಹಿತದೃಷ್ಟಿಯಿಂದಲೇ ; ಏಕೆಂದರೆ ನಿತ್ಯಾನಂದಸ್ವರೂಪನಾದ ಈಶ್ವರನೇ ನಮ್ಮ ಆತ್ಮನು ; ಆದ್ದರಿಂದ ಎಲ್ಲರೂ ವಿಷಯಗಳಿಂದಾಗುವ ದುಃಖವನ್ನು ಲಕ್ಷ್ಯದಲ್ಲಿಟ್ಟುಕೊಳ್ಳಲಿ– ಎಂಬ ಹಿತದೃಷ್ಟಿಯಿಂದ ಎನ್ನಬಹುದು. ಸುಖದುಃಖಗಳೆರಡೂ ಬಂದುಬಂದು, ನಮಗೆ ನಿತ್ಯಾನಂದದ ನೆನಪನ್ನು ಕೊಟ್ಟುಹೋಗುತ್ತಿವೆ. ಸುಖವು 'ನಾನು ನಿತ್ಯನಲ್ಲ, ಆ ನನ್ನಲ್ಲಿರುವ ಮೋಹವನ್ನು ಬಿಟ್ಟು ನಿತ್ಯಸುಖವನ್ನು ಅರಿತುಕೊ' ಎನ್ನುತ್ತದೆ ; ದುಃಖವು "ವಿಷಯಭೋಗದಿಂದಲೇ ನಿನಗೆ ಈ ಸಂಕಟವೊದಗುತ್ತಿದೆ, ನೀನು

ಈಗಲಾದರೂ ಹಿಂತಿರುಗು" ಎನ್ನುತ್ತದೆ. ಇದೇ ಸುಖದುಃಖಗಳ ವಿಷಯಕ್ಕೆ ನಾವು ಕಲಿತುಕೊಳ್ಳಬೇಕಾಗಿರುವದು.

ನಾವು ಮಾಡುವ ಕರ್ಮಗಳಿಂದಲೇ ನಮಗೆ ಸುಖದುಃಖಗಳು ತೋರುತ್ತಿರುವವು ; ಆದರೆ ಅದೇ ಕರ್ಮವನ್ನು ಪ್ರಕಾರಾಂತರದಿಂದ ಮಾಡಿದರೆ ಸುಖದುಃಖಗಳನ್ನು ಮೀರಿದ ಪರಮಾನಂದವನ್ನು ಪಡೆದುಕೊಳ್ಳಬಹುದು. ಆ ಪ್ರಕಾರವನ್ನು ಕರ್ಮಯೋಗವೆಂದು ಶಾಸ್ತ್ರದಲ್ಲಿ ಕರೆದಿರುತ್ತದೆ. ಪುಣ್ಯಕರ್ಮವನ್ನು ಮಾಡುವವರ ಸಂಗದಿಂದ ನಮಗೆ ಪುಣ್ಯವಾಸನೆಯೂ ಪಾಪಿಗಳ ಸಂಗದಿಂದ ಪಾಪಕರ್ಮವಾಸನೆಯೂ ಎದ್ದುಕೊಳ್ಳುತ್ತವೆ. ಇದರಿಂದಲೇ ಸುಖದುಃಖಗಳುಂಟಾಗುತ್ತಿವೆವದು. ಆದರೆ ಸತ್ಸಂಗದಿಂದ ವಿಷಯಗಳ ಸಂಗವನ್ನು ತೊರೆದು ಕರ್ಮಯೋಗವನ್ನು ಮಾಡಿ ಆನಂದಸ್ವರೂಪನಾದ ಆತ್ಮನನ್ನು ಪಡೆದುಕೊಳ್ಳುವ ಮಾರ್ಗವು ದೊರಕುತ್ತದೆ.

ಸಂಸಾರದಲ್ಲಿ ದುಃಖವುಂಟಾಗುತ್ತಿರುವದು ನಿಜ. ಇದನ್ನು ಮನಸ್ಸಿಗೆ ತಂದಕೊಂಡು ಸಂಸಾರವನ್ನು ಮೀರಿದ ಪರಮಾನಂದವನ್ನು ಪಡೆದುಕೊಳ್ಳಬೇಕೆಂಬ ಹಂಬಲನ್ನು ಉಂಟುಮಾಡಿಕೊಳ್ಳಬೇಕು. 'ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನವ್' ( ಗೀ. ೧೩-೮ ) ಇಲ್ಲಿ ಹುಟ್ಟುವದೆಂಬ ದುಃಖ, ಸಾಯುವದೆಂಬ ದುಃಖ, ಮುಪ್ಪೆಂಬ ದುಃಖ, ರೋಗವೆಂಬ ದುಃಖ- ಇಂಥ ದುಃಖನಿಮಿತ್ತಗಳು ಒಂದರಹಿಂದೊಂದ. ಬರುತ್ತಲೇ ಇರುವವು. ಹೀಗೆ ಸಂಸಾರವು ದುಃಖಮಯವಾಗಿರುತ್ತದೆ. ಈ ದುಃಖರೂಪವಾದ ದೋಷವು ಸಂಸಾರದಲ್ಲಿದೆ ಎಂಬುದನ್ನು ಮತ್ತೆ ಮತ್ತೆ ಅನುಶೀಲನೆಮಾಡುತ್ತಿರುವದು ಜ್ಞಾನಕ್ಕೆ ಕಾರಣವು, ಅಜವೂ ಅಜರವೂ ಅಮರವೂ ನಿರಾಮಯವೂ ಆಗಿರುವ ಪರಮಾತ್ಮತತ್ತ್ವವು ನಮ್ಮ ಆತ್ಮನಾಗಿದೆ ಎಂದು ಹೇಳುವ ಶಾಸ್ತ್ರಕ್ಕೆ ಕಿವಿಗೊಡುವಂತೆ ಮಾಡುವದಕ್ಕೆ ಸುಖಾನುಶೀಲನವು ಒಂದು ಪರಮಸಾಧನವಾಗಿರುತ್ತದೆ. ಹೀಗೆ ಸುಖದುಃಖಾನುಭವದಿಂದ ಅದರ ತತ್ತ್ವವನ್ನು ಮನಸ್ಸಿನಲ್ಲಿ ಹೊರಳಾಡಿಸುವದೆಂಬ ಜ್ಞಾನಸಾಧನವು ವ್ಯವಹಾರದಲ್ಲಿರುವದು ಮುಮುಕ್ಷುಗಳಿಗೊಂದು ವರವಾಗಿರುತ್ತದೆ.

---

# ೪೯. ಕರ್ಮನಿಯಮ

(6—9—62)

ಕರ್ಮಕ್ಕೆ ಅವಶ್ಯವಾಗಿ ಫಲವಾಗುತ್ತದೆ ಎಂಬ ನಿಯಮವನ್ನು ತಿಳಿದು ಕೊಳ್ಳುವದರಿಂದ ಜೀವನದಲ್ಲಿರುವ ವೈಷಮ್ಯಕ್ಕೂ, ಇಷ್ಟಾನಿಷ್ಟಪ್ರಾಪ್ತಿಪರಿಹಾರಕ್ಕೆ ಜನರು ಮಾಡುತ್ತಿರುವ ಪ್ರಯತ್ನಗಳ ವೈಚಿತ್ರ್ಯಕ್ಕೂ, ಸುಖದುಃಖಗಳು ಒಂದರ ಹಿಂದೊಂದು ಬಂದುಹೋಗುವದಕ್ಕೂ ಕಾರಣವು ದೊರಕಿದಂತೆ ಆಗುತ್ತದೆ. ಈಶ್ವರನಿಗೆ ವೈಷಮ್ಯನೈರ್ಘೃಣ್ಯವಿಲ್ಲವೆಂದಾಗುತ್ತದೆ. ಈ ಜನ್ಮದಲ್ಲಿ ನಾವೂ ನಾವು ನೋಡುತ್ತಿರುವ ಜೀವರುಗಳೂ ಒಬ್ಬರಿಗಿಂತ ಒಬ್ಬರು ಆಕಾರ, ಬೇರೆಬೇರೆಯ ಸ್ಥಿತಿಯಲ್ಲಿ ಹುಟ್ಟಿರುವದು, ಬೇರೆಬೇರೆಯ ಮನಃಪ್ರವೃತ್ತಿಯುವರಾಗಿರುವದು— ಇವಕ್ಕೆಲ್ಲ ಉಪಪತ್ತಿಯು ಸಿಕ್ಕಿದಂತಾಗುವದು. ಸಾತ್ತ್ವಿಕರಿಗೆ ಕಷ್ಟವೂ ಆಸುರ ಸಂಪತ್ತಿನವರಿಗೆ ವ್ಯವಹಾರದಲ್ಲಿ ಅಭಿವೃದ್ಧಿಯಾಗುವದೂ ಏಕೆಂಬುದು ತಿಳಿಯುವದು. ಕರ್ಮಬಂಧವನ್ನು ದಾಟುವವರೆಗೆ ಮಾಡಿದ ಕರ್ಮಕ್ಕೆ ಫಲವು ಆಗಿಯೇ ತೀರುವದು, ಮಾಡಿದ ಕರ್ಮಕ್ಕೆ ಫಲವನ್ನು ಅನುಭವಿಸಿದಲ್ಲದೆ— 'ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ' ಎಂಬಂತೆ— ಎಂದಿಗೂ ಕ್ಷಯವಾಗುವಂತಿಲ್ಲ ಎಂಬ ನಿಶ್ಚಯವು ವ್ಯವಹಾರದಲ್ಲಿ ಕರ್ಮದ ನಿಯಮವನ್ನು ತಿಳಿಸುವದಲ್ಲದೆ, ಮುಮುಕ್ಷುಗಳಿಗೆ ಕರ್ಮವನ್ನು ಮೀರುವದಕ್ಕೆ ಯತ್ನಿಸಬೇಕೆಂಬ ಬುದ್ಧಿಯನ್ನುಂಟುಮಾಡುವದಕ್ಕೆ ಕಾರಣವಾಗುತ್ತಿದೆ. ಒಂದೇ ಜನ್ಮವನ್ನು ಒಪ್ಪಿರುವ ಮತಗಳಿಗೆ ಇಲ್ಲಿ ಹೇಳಿದ ಯಾವ ಸಮಸ್ಯೆಗಳಿಗೂ ಪರಿಹಾರವು ಕಾಣುವದಿಲ್ಲ.

ದುಷ್ಟರಿಗೂ ತತ್ಕಾಲಕ್ಕೆ ಅಭಿವೃದ್ಧಿಯ ಸಾಮಗ್ರಿಗಳು ದೊರಕುವದರಿಂದ ಅವರು ಸುಖವಾಗಿದ್ದಾರಲ್ಲ !—ಎಂಬ ಆಕ್ಷೇಪವು ಎದ್ದುಕೊಳ್ಳುತ್ತದೆ. ಆದರೆ ವಿಷಯಗಳಲ್ಲಲ್ಲ, ಸುಖವಿರುವದು; ಅಂತಃಕರಣದಲ್ಲಿ. ಶ್ರೀಮಂತನ ಮನೆಯಲ್ಲಿ ಮೃಷ್ಟಾನ್ನಭೋಜನದ ಅಡಿಗೆಯು ಆಗಿದ್ದರೂ ಅವನಿಗೆ ಅಸಾಧಾರಣವಾದ ಉದರ ಶೂಲೆಯಿರಬಹುದು ; ಬಡವನ ಮನೆಯಲ್ಲಿ ಸಾಮಾನ್ಯವಾದ ಅಡಿಗೆಯಾಗಿದ್ದರೂ ಅವನ ಮನೆಯವರು ಸಂತೋಷದಿಂದ ಊಟದ ಸುಖವನ್ನು ಪಡೆಯುತ್ತಿರಬಹುದು. ಕಳ್ಳನು ಎತ್ತಿಕೊಂಡುಹೋದ ಒಡವೆಯು ಹೋಯಿತೆಂಬ ದುಃಖವು ಕಳೆದುಕೊಂಡವನಿಗೆ ಆದರೆ, ಕಳ್ಳನಿಗೂ ಎಲ್ಲಿ ಸಿಕ್ಕಿಬೀಳುವೆನೋ, ಯಾವಾಗ ಇದರ ಸಂಬಂಧದಿಂದ ನನಗೆ ಅಪಮಾನವೂ ಸರಕಾರದಲ್ಲಿ ದಂಡನೆಯೂ ಆಗುವದೋ — ಎಂಬ ಕೊರಗು ಹತ್ತಿಕೊಂಡಿರಬಹುದು. ಕೌರವನು ಪಾಂಡವರನ್ನು ಹನ್ನೆರಡುವರ್ಷಗಳು ವನವಾಸಕ್ಕೆ ಅಟ್ಟಿದ್ದರೂ ಅವನಿಗೆ ದ್ವೇಷಾಸೂಯಾದಿ

ಗಳಿಂದಾಗಿದ್ದ ಸುಖವು ಹೋಯಿತೆನ್ನುವದಕ್ಕೆ ಬರುವದಿಲ್ಲ ; ಪಾಂಡವರು ಅರಮನೆಯಿಲ್ಲದೆ ಪರ್ಣಶಾಲೆಯನ್ನು ಹಾಕಿಕೊಂಡು ಇದ್ದರೂ ಅವರಲ್ಲಿದ್ದ ಅಗ್ನಿಹೋತ್ರಿಬ್ರಾಹ್ಮಣರೂ ಆಗಾಗ್ಗೆ ಬರುತ್ತಿದ್ದ ಋಷಿಗಳೂ ತಮ್ಮ ಸಂಭಾಷಣೆ ಯಿಂದ ಅವರಿಗೆ ಉಂಟುಮಾಡುತ್ತಿದ್ದ ಸುಖವು ಅವರಿಗೆ ಉಂಟಾಗಲಿಲ್ಲಹೆಂದು ಯಾರೂ ಹೇಳಲಾರರು. ಮಾಡಬಾರದ ದುಷ್ಕೃತ್ಯಗಳನ್ನು ಮಾಡಿದವರಿಗೆ ಪಾಪಸಂಘಟನೆಯೇ ಅಲ್ಲದೆ, ತಮ್ಮ ಸಮಾನಸ್ಥಿತಿಯವರಲ್ಲಿಯೇ ಆಗುವ ಪೈಪೋಟಿ, ಒಳಜಗಳ, ಮೋಸ- ಮುಂತಾದವುಗಳ ದುಃಖರೂಪಫಲವು ಆಗುವ ದಿಲ್ಲವೆಂದು ಹೇಳಲಾದೀತೆ ? ಅಂತೂ ಕರ್ಮನಿಯಮಕ್ಕೇ ಬೆಲೆಯೇ ಹೊರತು, ಭೋಗಸಾಮಗ್ರಿಗಳ ರಾಶಿಗಲ್ಲ- ಎಂದಾಯಿತು.

ಪರಮಾತ್ಮನು ಹೀಗೆಲ್ಲ ಜನರಿಗೆ ಕರ್ಮಸಾಪೇಕ್ಷವಾಗಿ ಸುಖದುಃಖಗಳನ್ನು ಕೊಟ್ಟು, ಕೆಲವು ಜನ ಮುಮುಕ್ಷುಗಳಿಗೆ ಮಾತ್ರವೇ ನಿತ್ಯಾನಂದರೂಪವಾದ ಮೋಕ್ಷವನ್ನು ಕೊಡುವದೇತಕ್ಕೆ ? ಒಮ್ಮೆಗೇ ಎಲ್ಲರಿಗೂ ಮೋಕ್ಷವನ್ನೇಕೆ ಕೊಡು ವದಿಲ್ಲ ? ಅವನು ಸರ್ವಶಕ್ತನಲ್ಲವೆ ?- ಎಂದು ಯಾರಾದರೂ ಕೇಳಬಹುದು. ಅವನೇನೊ ಎಲ್ಲರಿಗೂ ನಿತ್ಯಾನಂದವನ್ನು ಕೊಟ್ಟೇಇರುತ್ತಾನೆ. ಯಾರು ಎಷ್ಟು ಹೀನಸ್ಥಿತಿಯಲ್ಲಿರಲಿ, ಅವರಿಗೆಲ್ಲ ನಿಜವಾಗಿ ತನ್ನ ಸಾಯುಜ್ಯವನ್ನೇ ಕೊಟ್ಟಿರು ತ್ತಾನೆ 'ಬ್ರಹ್ಮ ದಾಶಾ ಬ್ರಹ್ಮದಾಸಾ ಬ್ರಹ್ಮೈವೇಮೇ ಕಿತವಾಃ | ತ್ವಂ ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತ ವಾ ಕುಮಾರೀ | ತ್ವಂ ಜೀರ್ಣೋ ದಂಡೇನ ವಂಚಸಿ ತ್ವಂ ಜಾತೋ ಭವಸಿ ವಿಶ್ವತೋಮುಖಃ ' ಬೆಸ್ತರು, ಗರ್ಭದಾಸರು, ಜೂಜುಗಾರರು- ಎಲ್ಲರೂ ಬ್ರಹ್ಮವೇ. ಹೆಂಗಸರೂ ಪರಮಾತ್ಮನೇ, ಗಂಡಸರೂ ಪರಮಾತ್ಮನೇ ; ಗಂಡುಹುಡುಗರೂ ಹೆಣ್ಣುಹುಡುಗರೂ ಪರಮಾತ್ಮನೇ; ಊರು ಗೋಲನ್ನು ಹಿಡಿದು ನಡೆಯುತ್ತಿರುವ ಮುದುಕನೂ ಪರಮಾತ್ಮನೇ. ಆ ಪರ ಮಾತ್ಮನು ನಿತ್ಯಾನಂದಸ್ವರೂಪನು. ಅದನ್ನು ಅನುಭವಕ್ಕೆ ತಂದುಕೊಳ್ಳದೆ ಇರು ವವರೆಗೆ ವ್ಯವಹಾರದಲ್ಲಿ ಕರ್ಮದ ನಿಯಮವು ನಡೆಯುತ್ತಾ ಸುಖದುಃಖಗಳನ್ನು ಕೊಡುತ್ತಿರುವಂತೆ ತೋರುತ್ತಿರುವದು. ಅಷ್ಟೆ.

ಒಂದೊಂದೂ ಕರ್ಮದಿಂದಲೂ ಒಂದೊಂದು ಅನುಭವವುಂಟಾಗುತ್ತದೆ. ಹೊರಮುಖನಾದವನು ಯಾರೇ ಆಗಲಿ, ಅವನಿಗೆ ವಿಷಯಗಳಲ್ಲಿ ರಾಗದ್ವೇಷ ವುಂಟಾಗುವದು ನಿಶ್ಚಯ ; ಅವುಗಳಿಂದಾದ ಪ್ರವೃತ್ತಿಗೆ ತಕ್ಕ ಫಲವೂ ಆಗುತ್ತದೆ, ಆ ಫಲದ ಅನುಭವದಿಂದ ಒಂದೊಂದು ಸಂಸ್ಕಾರವೂ ಆಗುತ್ತದೆ. ಊರೂರಿಗೆ ಸಂಚರಿಸುತ್ತಾ ಪರಮಾತ್ಮನ ಚಿಂತನೆಯಲ್ಲಿಯೇ ಕಾಲವನ್ನು ಹಾಕುತ್ತಿದ್ದ ಒಬ್ಬ ಸಂನ್ಯಾಸಿ ಒಮ್ಮೆ ನಡೆಯುತ್ತಾ ದಾರಿಯಲ್ಲಿ ಒಂದು ಊರನ್ನು ಒಳಹೊಕ್ಕು ಹೋಗಬೇಕಾಯಿತು ಆಗ ಇನ್ನೂ ಬೆಳಗಿನ ಜಾವವಾಗಿತ್ತು. ಒಂದು ಮನೆಯ

ಬಾಗಿಲು ಅರೆದೆರೆದಿತ್ತು. 'ಎಲಾ, ಕದವನ್ನೇಕೆ ಮುಚ್ಚಿಲ್ಲ ? ಯಾರಾದರೂ ಕಳ್ಳರು ನುಗ್ಗಿದರೇನುಗತಿ ?' ಎಂದುಕೊಂಡು ಮನೆಯೊಳಕ್ಕೆ ಹೋಗಿ 'ಮನೆಯಲ್ಲಿ ಯಾರಪ್ಪ? ಬಾಗಿಲ ಕದವನ್ನೇಕೆ ಮುಚ್ಚಿಕೊಂಡಿಲ್ಲ?' ಎಂದು ಕೂಗಿದನು. ಆ ಮನೆಯಲ್ಲಿದ್ದ ಒಬ್ಬಳೇ ಸ್ತ್ರೀಯು ಸ್ನಾನಮಾಡುವದಕ್ಕೆ ಇಳಿದಿದ್ದಳು ; ಒಂದು ಚಾಪೆಯನ್ನು ಜಗಲಿಯಮೇಲೆ ಹಾಕಿ, 'ಸ್ವಾಮಿ, ಈಗ ಬಂದೆ, ದಯವಿಟ್ಟು ಕುಳ್ಳಿರಬೇಕು' ಎಂದು ಒಳಕ್ಕೆ ನಡೆದಳು. ಇಷ್ಟರಲ್ಲಿ ಎದುರುಮನೆಯಲ್ಲಿದ್ದ ಒಬ್ಬ ತರುಣನು 'ಈ ಭಿಕ್ಷುಕನೇಕೆ ಇಷ್ಟುಹೊತ್ತಿನಲ್ಲಿ ಮನೆಯ ಮುಂದೆ ಕುಳಿತಿದ್ದಾನೆ? ಆ ಹೆಂಗಸಿಗೆ ಏನು ಹೇಳಿದನೊ !' ಎಂದುಕೊಂಡು 'ಇಲ್ಲೇಕೆ ಕುಳಿತಿದ್ದೀಯೊ ?' ಎಂದು ಸಿಟ್ಟಿನಿಂದ ಕೇಳಲು ಇಬ್ಬರಿಗೂ ವಾಕ್ಕಲಹವಾಯಿತು. ಕೊನೆಗೆ ತರುಣನು ಸಂನ್ಯಾಸಿಗೆ ಬೆನ್ನಮೇಲೆ ಒಂದು ಗುದ್ದು ಹಾಕಿದನು. ಆಗ ಸಂನ್ಯಾಸಿಯು ಕೂಡಲೆ ಎಚ್ಚೆತ್ತುಕೊಂಡು 'ಇನ್ನೊಂದು ಗುದ್ದು ಹಾಕಯ್ಯ; ಗುರುವೆ, ಸರಿಯಾಗಿ ಬುದ್ಧಿಕಲಿಸಿದೆ. ದಾರಿಹಿಡಿದುಕೊಂಡು ಹೋಗದೆ ನಾನೇಕೆ ಹೀಗೆ ಹೆರವರ ಮನೆಯ ಬಾಗಿಲಕಡೆಗೆ ಬಂದೆನೋ !' ಎಂದು ಪಶ್ಚಾತ್ತಾಪದಿಂದ ಮುಂದಕ್ಕೆ ಸಾಗಿದನಂತೆ ! ಹೀಗಿದೆ, ಕರ್ಮದಿಂದಾಗುವ ಅನುಭವವಿಶೇಷ !

'ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್' (ಗೀ. ೬-೪೫) ಮೋಕ್ಷವು ದೊರಕುವದಕ್ಕೆ ಅನೇಕಜನ್ಮಗಳಲ್ಲಿ ಸಾಧನಮಾಡಿ ಸಿದ್ಧಿಯನ್ನು ಪಡೆದುಕೊಳ್ಳಬೇಕಾಗುತ್ತದೆ ಸತ್ಕರ್ಮವನ್ನು ಈಶ್ವರಾರ್ಪಿತವಾಗಿ ಮಾಡುವದಕ್ಕೆ, ಸತ್ಸಂಗವು ದೊರಕುವದಕ್ಕೆ, ಧ್ಯಾನಯೋಗವನ್ನು ಸಂಪಾದಿಸಿಕೊಳ್ಳುವದಕ್ಕೆ, ಈಶ್ವರಭಕ್ತಿಯನ್ನು ಪಡೆದುಕೊಳ್ಳುವದಕ್ಕೆ- ಇವಕ್ಕೆಲ್ಲ ಬಹಳಕಾಲವು ಬೇಕಾಗುತ್ತದೆ. ಈಶ್ವರನು ದಯಾಲುವಾದ್ದರಿಂದ ಅವರವರು ಮಾಡಿದ ಕರ್ಮದಂತೆ ಅವರವರಿಗೆ ಬೇಕಾದ ಫಲವನ್ನು ಕೊಡುತ್ತಾನೆ ; ಯಾರು ನಿಜವಾಗಿ ಮುಮುಕ್ಷುಗಳಾಗಿರುವರೋ ಅವರಿಗೆ ಮಾತ್ರ ಮೋಕ್ಷವನ್ನು ಕೊಡುತ್ತಾನೆ.

ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಮ್ |
ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ || ಗೀ. ೪-೧೧

ಯಾರಿಗೆ ಕರ್ಮದ ಫಲವು ಬೇಕೋ ಅವರಿಗೆ ಕರ್ಮಫಲವನ್ನೂ, ಯಾರು ನಿಷ್ಕಾಮಕರ್ಮದಿಂದ ಭಜಿಸುವರೋ ಅವರಿಗೆ ಚಿತ್ತಶುದ್ಧಿಯನ್ನೂ, ಯಾರು ತನ್ನ ಧ್ಯಾನವನ್ನೇ ಮಾಡುವರೋ ಅವರಿಗೆ ಜ್ಞಾನವನ್ನೂ, ಯಾರು ಜ್ಞಾನಿಗಳಾಗಿ ಈಶ್ವರಶರಣರಾಗಿರುವರೋ ಅವರಿಗೆ ಮೋಕ್ಷವನ್ನೂ ಕೊಡುತ್ತಾನೆ. ಹೇಗೇ ಆಗಲಿ ಎಲ್ಲರೂ ಒಂದಲ್ಲ ಒಂದುದಿನ ಪರಮಾತ್ಮನಲ್ಲಿಗೇ ಬರಬೇಕಾಗುತ್ತದೆ. ಇಲ್ಲಿ ಯಾರ ಪಕ್ಷಪಾತವೂ ಈಶ್ವರನಿಗಿಲ್ಲ.

ಕರ್ಮದ ನಿಯಮವನ್ನೂ ಜನ್ಮಾಂತರವಾದದ ಶಾಸ್ತ್ರೀಯತೆಯನ್ನೂ ಸಾಧನೆಗನುಗುಣವಾದ ಫಲವು ಬಂದೇಬರುತ್ತದೆ ಎಂಬುದನ್ನೂ ಅರಿಯದವರು "ಪ್ರಾರಬ್ಧಕರ್ಮವನ್ನು ಮೀರುವದಕ್ಕೆ ಆಗುವದಿಲ್ಲ, ಅದೃಷ್ಟವನ್ನು ಮೀರುವದು ಯಾರಿಂದಲೂ ಆಗದು' ಎಂದು ತಪ್ಪಾಗಿ ತಿಳಿದುಕೊಂಡಿರುತ್ತಾರೆ. ನಿಜವು ಹಾಗಿಲ್ಲ. ಪೂರ್ವಜನ್ಮದಲ್ಲಿ ಮಾಡಿದ ಕರ್ಮವೇ ಅದೃಷ್ಟವೆಂಬುದು ; ನಾವು ಅದಕ್ಕೆ ಪ್ರತೀಕಾರಮಾಡದಿದ್ದರೆ ಅದರ ಫಲವನ್ನು ಅನುಭವಿಸಲೇಬೇಕು. ಈಗ ಪ್ರಯತ್ನ ಮಾಡಿ ಹಿಂದಿನ ಒಳ್ಳೆಯ ಕರ್ಮದ ಫಲವನ್ನು ಉತ್ಕೃಷ್ಟಗೊಳಿಸಿಕೊಳ್ಳುವದಕ್ಕೂ ಹಿಂದಿನ ಕೆಟ್ಟಕರ್ಮದ ಫಲವು ರೂಪಾಂತರವಾಗುವಂತೆ ಮಾಡಿಕೊಳ್ಳುವದಕ್ಕೂ ಅವಶ್ಯವಾಗಿ ಆಗುತ್ತದೆ. ಇದನ್ನರಿತವನು ಸತ್ಕರ್ಮವನ್ನೇ ಮಾಡುತ್ತಾ ಅಂತಃಕರಣಕ್ಕೆ ಒಳ್ಳೆಯ ಸಂಸ್ಕಾರವನ್ನೇ ಮಾಡಿಕೊಳ್ಳುವದಕ್ಕೆ ಪ್ರಯತ್ನಿಸುತ್ತಾನೆ. ಸಾಧನಾನುಷ್ಠಾನವು ಕೆಲವರಿಗೆ ಹೆಚ್ಚು ಕಷ್ಟವಾಗಿ ತೋರುವದಕ್ಕೆ ಹಿಂದಿನ ಕರ್ಮದ ಸಂಸ್ಕಾರವು ಅಡ್ಡಿಯಾಗಿರುವದೇ ಕಾರಣ ; ಆದರೆ ಅದನ್ನು ತಿದ್ದಿಕೊಳ್ಳುವದಕ್ಕೆ ಆಗುವದೇ ಇಲ್ಲವೆಂದು ಹೇಳುವದಕ್ಕೆ ಆಗುವದಿಲ್ಲ ಪ್ರತಿಯೊಬ್ಬನೂ ತನ್ನತನ್ನ ಪುಣ್ಯಪಾಪಗಳಿಗೆ ತಾನೇ ಹೊಣೆ. ಇದಕ್ಕಾಗಿ ಈಶ್ವರನ ನಿಂದೆಯನ್ನು ಮಾಡುವದು ಸರಿಯಲ್ಲ ; ಯಾರಾದರೂ ಪಾಪಕರ್ಮದ ಫಲವಾಗಿ ಈಗ ದುಃಖವನ್ನನುಭವಿಸುತ್ತಿದ್ದರೆ ಅವರನ್ನು ನೋಡಿ ಕನಿಕರಪಡಬೇಕು, ಕೈಯಲ್ಲಾದ ಸಹಾಯವನ್ನು ಮಾಡಿ ಅವರನ್ನು ಸರಿಯಾದ ಮಾರ್ಗಕ್ಕೆ ಬಿಡಬೇಕು. ಅವರವರ ಕರ್ಮಕ್ಕನುಗುಣವಾಗಿ ಅವರವರು ಜನಿಸಿರುತ್ತಾರೆ. ಸ್ಥಾವರಪ್ರಾಣಿಗಳನ್ನು ಕೂಡ –ಗಿಡಮರಗಳು ಎಂದು ಕಡೆಗಣಿಸದೆ– ಅಹಿಂಸಾದೃಷ್ಟಿಯಿಂದಲೇ ನೋಡಬೇಕು. ಮನುಷ್ಯನು ತನ್ನ ಜೀವನಕ್ಕಾಗಿ ಮಾಡಲೇಬೇಕಾಗಿರುವ ಹಿಂಸೆಯನ್ನು ಅತ್ಯಲ್ಪವಾಗಿ ಮಾಡುವದಕ್ಕೆ ಪ್ರಯತ್ನಿಸಬೇಕು. 'ಸನ್ತೋಷಂ ಜನಯೇತ್ ಪ್ರಾಜ್ಞಸ್ತದೇವೇಶ್ವರಪೂಜನಮ್' ಎಲ್ಲರಿಗೂ ಸಂತೋಷವನ್ನುಂಟುಮಾಡುವದಕ್ಕೆ ಯತ್ನಿಸುವದೊಂದು ಈಶ್ವರಾರಾಧನೆ. ನಮಗಿಂತ ಮೇಲಿನ ಸ್ಥಿತಿಯಲ್ಲಿರುವವರನ್ನು ನೋಡಿ ಅಭಿನಂದನಮಾಡಬೇಕು. ಸಮಾನಸ್ಥಿತಿಯಲ್ಲಿರುವವರೊಂದಿಗೆ ಮೈತ್ರಿಯಿಂದಿರಬೇಕು, ಕೀಳುಸ್ಥಿತಿಯಲ್ಲಿರುವವರೊಂದಿಗೆ ಸಹಾನುಭೂತಿಯಿಂದ ನಡೆಯಬೇಕು. ನಮ್ಮ ಮಾತನ್ನು ಕೇಳದೆ ಇರುವವರಲ್ಲಿ ಉದಾಸೀನರಾಗಿರಬೇಕು. ದುಷ್ಕರ್ಮವನ್ನು ತ್ಯಜಿಸಿ ಸತ್ಕರ್ಮವನ್ನು ಮಾಡುತ್ತಾ ಸತ್ಸಂಗ, ಈಶ್ವರಭಕ್ತಿ– ಇವುಗಳನ್ನು ಸಂಪಾದಿಸಿಕೊಂಡು ಮುಂದುವರಿಯುವದಕ್ಕೆ ಪ್ರಯತ್ನಿಸುವವನೇ ಕರ್ಮದ ನಿಯಮವನ್ನು ಸರಿಯಾಗಿ ಅರಿತವನು.

---

# ೫೦. ನೀತಿಗೆ ಆಧಾರ

( ?-9-?2 )

ವೇದಾಂತವು ಸರ್ವವ್ಯವಹಾರಾತೀತವಾದ ಅದ್ವೈತವನ್ನೇ ಹೇಳುವದಕ್ಕೆ ಹೊರಟಿದ್ದರೂ ವ್ಯವಹಾರಕ್ಕೂ ಆ ಅದ್ವೈತವೇ ಆಧಾರವಾಗಿರುವದರಿಂದಲೂ ಅದ್ವೈತತತ್ತ್ವವನ್ನು ಅರಿತುಕೊಳ್ಳುವದಕ್ಕೆ ವ್ಯವಹಾರದಸಾಧನಗಳೇ ಉಪಾಯ ವಾಗಿರುವದರಿಂದಲೂ ಎಲ್ಲಾ ಸಾಧನಗಳಿಗೂ ಉಪಪತ್ತಿಯನ್ನು ಹೇಳುವದೂ ಇದರ ಒಂದು ಅಂಗವಾಗಿರುತ್ತದೆ. ತರ್ಕಪ್ರಧಾನವಾದ ಬುದ್ಧಿಗೂ ಸಹಜಾನು ಭವಗಳಿಗೂ ಸಂಕಲ್ಪಕ್ಕೂ ಹೊಂದಿಗೆಯಾದ ಉಪದೇಶಗಳಿದ್ದರಲ್ಲವೆ, ವೇದಾಂ ತವು ಜೀವಂತವಾದ ಪೂರ್ಣದರ್ಶನವೆನಿಸುವದು ? ಆದ್ದರಿಂದ ನೀತಿ, ಆಸ್ತಿಕ್ಯ- ಎಲ್ಲಕ್ಕೂ ಇಲ್ಲಿ ಆಧಾರವನ್ನು ತಿಳಿಯಿಸುವದಕ್ಕೆ ಬರುವಂತಿರಬೇಕು.

ನೀತಿಯ ಆವಶ್ಯಕತೆಯೇನು ? ಬಾಹ್ಯಪ್ರಕೃತಿಯಲ್ಲಿ ನೀತಿಯೇನೂ ಕಾಣಿಸುವದೇ ಇಲ್ಲ. ಅಲ್ಲಿ ಕಾಣುವ ಸ್ಥಾವರಜಂಗಮಪ್ರಾಣಿಗಳಲ್ಲಿ ಯಾವ ನೀತಿಯ ವ್ಯವಸ್ಥೆಯೂ ಇರುವದೇ ಇಲ್ಲ. ಗಿಡಮರಬಳ್ಳಿಗಳು ಮತ್ತೊಬ್ಬರಿಗೆ ಹಿಂಸೆಯಾಗದಂತೆ, ಪರೋಪಕಾರವಾಗಲಿ – ಎಂದು ಬೆಳೆಯುವವೆ, ಹಣ್ಣು ಬಿಡುವವೆ, ಹುಟ್ಟಿಸಾಯುವವೆ ? ದನಗಳು, ಎಮ್ಮೆ, ಕುರಿ, ಕೋಳಿ, ಹುಲಿ, ಸಿಂಹ, ಕರಡಿ, ಹಾವು, ಕ್ರಿಮಿ, ಕೀಟಗಳು, ಪಕ್ಷಿಗಳು– ಮುಂತಾದವುಗಳಲ್ಲಿ ಯಾವ ನೀತಿಯ ಅನುಸರಣೆಯೂ ಕಾಣುವದಿಲ್ಲ. ಅವುಗಳಲ್ಲಿ ಒಂದು ಮತ್ತೊಂದನ್ನು ತಿಂದೇ ಜೀವಿಸಬೇಕಾಗಿರುತ್ತದೆ. ಮನುಷ್ಯನಿಗೆ ಮಾತ್ರ ನೀತಿ ಏತಕ್ಕೆ ಬೇಕು ? ಮನುಷ್ಯನು ಸತ್ಯವನ್ನೇ ಏಕೆ ಹೇಳಬೇಕು, ಮತ್ತೊಬ್ಬರ ಸ್ವತ್ತನ್ನೇಕೆ ತೆಗೆದುಕೊಳ್ಳಬಾರದು ? ಹಿಂಸೆಯಿಂದ ಪ್ರಯೋಜನವಾದಾಗ ಅದನ್ನೇಕೆ ಅನುಸರಿಸಬಾರದು ? ಪರೋಪಕಾರಕ್ಕಾಗಿ ತಾನೇಕೆ ಕಷ್ಟಪಡಬೇಕು? 'ಒಳ್ಳೆಯ ಬುದ್ಧಿಯನ್ನು ಕೊಡೆಂದು ದೇವರನ್ನು ಬೇಡಿಕೊಳ್ಳಮ್ಮ' ಎಂದು ಹೇಳಿದಾಗ ಒಬ್ಬ ಹುಡುಗಿ 'ಅದೇಕಪ್ಪ, ನನಗೆ ಏನಾದರೂ ಚೇಷ್ಟೆಮಾಡಿದರೇ ಸಂತೋಷವಾಗುತ್ತದೆಯಲ್ಲ, ನಾನೇಕೆ ಹಾಗೆ ಬೇಡಿಕೊಳ್ಳಲಿ ?' ಎಂದು ಕೇಳಿದ ಳಂತೆ !

ನೀತಿತತ್ತ್ವಕ್ಕೆ ಆಧಾರವನ್ನು ತಿಳಿಸುವದು ತತ್ತ್ವಶಾಸ್ತ್ರಪ್ರವರ್ತಕರಿಂದಾ ಗಲಿ ಮತಗಳಿಂದಾಗಲಿ ಸಾಧ್ಯವಾಗಿಲ್ಲ. ನಾನು ಹೀಗೆ ಮಾಡಬೇಕು, ಹೀಗೆ ಮಾಡಬಾರದು– ಎಂದು ಮನಸ್ಸು ಹೇಳುತ್ತಿದೆ. ಈ ಕರ್ತವ್ಯಬುದ್ಧಿಯು ಸಾರ್ವತ್ರಿಕವಾಗಿರುತ್ತದೆ, ಅನಿವಾರ್ಯವಾಗಿರುತ್ತದೆ. ಬರಿಯ ತರ್ಕಪ್ರಧಾನ ವಾಗಿರುವ ತಿಳಿವಳಿಕೆಗಿಂತಲೂ ಕರ್ತವ್ಯತಾಬುದ್ಧಿಯ ಆಧಾರದಮೇಲೆ ನಿಂತಿರುವ

ಶ್ರದ್ಧಾಭಕ್ತಿಗಳೇ ಹೆಚ್ಚಿನವು– ಎಂದು ನೀತಿಪ್ರಧಾನನಾದವನು ನಿರ್ಣಯಿಸಿರು ತ್ತಾನೆ. ಆದರೆ ಕರ್ತವ್ಯತಾಬುದ್ಧಿಯು ಸಾರ್ವತ್ರಿಕವೆ, ಅನಿವಾರ್ಯವಾಗಿ ಅವಶ್ಯಕವೆ ?–ಎಂಬ ವಿಷಯಕ್ಕೆ ವಿಚಾರಕರಲ್ಲಿ ಐಕಮತ್ಯವಿಲ್ಲ. ಮತಗಳಲ್ಲಿ "ಹೀಗೆ ಮಾಡಬೇಕು, ಹೀಗೆ ಮಾಡಬಾರದು" ಇದು ಈಶ್ವರನ ಆಜ್ಞೆ ; ಇದ ರಂತೆ ನಡೆದರೆ ಸದ್ಗತಿಯಾಗುತ್ತದೆ, ಇದನ್ನು ಮೀರಿ ನಡೆದರೆ ನರಕಪಾತವಾಗು ತ್ತದೆ" ಎಂದು ಹೇಳಿರುವದು ಶ್ರದ್ಧಾವಂತರಾದವರಿಗೆ ಒಪ್ಪಾದರೂ ವಿಚಾರ ಪ್ರಧಾನರಾದ ಜನರು ಇದಕ್ಕೆ ಒಳಗಾಗುವಹಾಗಿಲ್ಲ. ಇದಕ್ಕೆ ಆಧಾರವೇನು ? ಇದು ಈಶ್ವರನ ಆಜ್ಞೆಯೆಂದು ಹೇಗೆ ಗೊತ್ತು ? ಧರ್ಮಗ್ರಂಥಗಳು ಈಶ್ವರ ವಚನವೆಂಬುದಾದರೂ ಹೇಗೆ ? ಎಂದುಮುಂತಾಗಿ ಆಕ್ಷೇಪವನ್ನು ಎತ್ತುವವರಿಗೆ ಮನಸ್ಸು ಒಪ್ಪುವಂತೆ ಮತಗಳು ಯುಕ್ತಿಗಳನ್ನು ತಂದು ತೋರಿಸಲಾರವು.

ನಮ್ಮ ಈಗಿನ ಸ್ಥಿತಿಗೆ ನೀತಿಯು ಅವಶ್ಯವಾಗಿದೆ ಎಂಬುದು ಅನುಭವ ದಲ್ಲಿದೆ. ಅಂಗಡಿಯಲ್ಲಿ ಕೊಂಡುಕೊಳ್ಳುವ ಸಾಮಾನುಗಳಿಗೆ ಮೊದಲು ಕೊಂಡ ವನು ದುಡ್ಡನ್ನು ಕೊಡಬೇಕೆ, ಅಥವಾ ಮಾರುವವನು ಸಾಮಾನನ್ನೇ ಮೊದಲು ಕೊಡಬೇಕೆ ? ಒಬ್ಬರನ್ನೊಬ್ಬರು ನಂಬಬೇಕು ; ಇಲ್ಲದಿದ್ದರೆ ವ್ಯವಹಾರವು ಸಾಗು ವದೇ ಇಲ್ಲ. ದಂಪತಿಗಳ ವ್ಯವಹಾರದಲ್ಲಿ ಗಂಡನು ತಂದ ಸಾಮಾನುಗಳನ್ನು ಹೆಂಡತಿ ಹಾಳುಮಾಡುತ್ತಿದ್ದರೆ, ಅಥವಾ ಗಂಡನು ಮನೆಗೆ ಸಾಮಾನನ್ನು ತಾರದೆ ಹೊರಗೇ ತನಗೆ ಬೇಕಾದ ಆಹಾರಾದಿಗಳನ್ನು ಒದಗಿಸಿಕೊಂಡು ಬರಿಯ ಕೈಯಲ್ಲಿ ಮನೆಗೆ ಬಂದರೆ, ಕುಟುಂಬದ ವ್ಯವಸ್ಥೆ ಇರಲಾರದು. ಹೀಗೆ ಮನುಷ್ಯಜೀವನ ದಲ್ಲಿ ನೀತಿಯ ಆವಶ್ಯಕತೆಯಿದೆ.

ನೀತಿಪ್ರಧಾನರಾಗಿರುವವರು 'ಮನುಷ್ಯನು ತನ್ನನ್ನು ತಾನೇ ಕಟ್ಟಿಗೆ ಒಳಪಡಿಸಿಕೊಳ್ಳಬೇಕು' ಎಂದು ಬಗೆಬಗೆಯಿಂದ ಉಪದೇಶಿಸುತ್ತಾರೆ. ಅವರಲ್ಲಿ ಕೆಲವರು ಅಭಿನಿವೇಶದಿಂದೊಡಗೂಡಿದ ನೀತಿಯೇ ಮತಧರ್ಮ, ಮತ್ತೊಂದು ಧರ್ಮವಿಲ್ಲ–ಎಂದುಕೂಡ ಹೇಳುವಷ್ಟು ನಾಸ್ತಿಕ್ಯಕ್ಕೆ ಇಳಿದಿರುತ್ತಾರೆ. ಕೆಲವರು 'ಸತ್ಯವೇ ದೇವರು' ಎನ್ನುತ್ತಾರೆ ; ದೇವರು ಸತ್ಯವೆಂಬುದು ನಿಜವಾದರೂ ಸತ್ಯ, ಅಹಿಂಸೆ–ಮುಂತಾದವುಗಳಿಗಿಂತ ಬೇರೆಯಾದ ದೇವರೇ ಇಲ್ಲವೆಂಬುದು ಎಂಥ ಕುರುಡುತನ ! ಜನರಿಗೆ ನೀತಿಯನ್ನು ಅನುಸರಿಸಿದರೆ ವ್ಯವಹಾರದಲ್ಲಿ ಕೆಲವು ವೇಳೆ ಕಷ್ಟವೊದಗಬಹುದು ; ನಡೆಯದಿದ್ದರೆ ಮನಸ್ಸು ಪಶ್ಚಾತ್ತಾಪಕ್ಕೆ ಕೆಡಹು ತ್ತದೆ. ನೀತಿಗೆ ಮತ್ತೆ ಯಾವದಾದರೂ ಆಧಾರವಿದೆಯೆ ?– ಎಂಬುದನ್ನು ತಿಳಿಸಿದ ಹೊರತು ಅದರ ಆವಶ್ಯಕತೆ ಅಷ್ಟಾಗಿ ತೋರುವದಿಲ್ಲ ; ನೀತಿಗೆಟ್ಟ ನಡತೆ ಯನ್ನೇ ಅನುಸರಿಸುತ್ತಾಬಂದವರಿಗೆ ಮನಸ್ಸೂ ಮೊಂಡಾಗಿಬಿಡುತ್ತದೆ. ಇದಕ್ಕೆ ಕೆಲವರು ಒಂದು ಸಮಾಧಾನವನ್ನು ಹೇಳಿಕೊಂಡು ತೃಪ್ತರಾಗುವದುಂಟು.

'ಆಪದ್ಧರ್ಮವಾಗಿ ಸುಳ್ಳುಹೇಳಬಹುದು. ಹಿಂಸೆಯನ್ನು ಮಾಡಬಹುದು' ಇತ್ಯಾದಿ. ಆದರೆ ಒಂದಿಷ್ಟು ಅವಕಾಶವು ಸಿಕ್ಕಿದರೂ ಮನುಷ್ಯನ ದುರ್ಬಲವಾದ ಮನಸ್ಸು, ಅದನ್ನೇ ದುರುಪಯೋಗಮಾಡಿಕೊಳ್ಳುತ್ತದೆ. 'ಆಪದ್ಧರ್ಮವೆಂದು ಹಾಗೆ ಮಾಡಿದೆ' ಎಂಬ ಕುಂಟುಯುಕ್ತಿಯಿಂದ ತಮ್ಮ ನಡತೆಯೇ ಸರಿಯೆನ್ನು ವವರು ಎಷ್ಟುಮಂದಿಯಿಲ್ಲ !

ಮತನೀತಿಗಳೆರಡಕ್ಕೂ ಆಧಾರವನ್ನು ಒದಗಿಸುವದಕ್ಕೆ ವೇದಾಂತವು ಸಿದ್ಧ ವಾಗಿದೆ. 'ನಮ್ಮೆಲ್ಲರ ಆತ್ಮನೂ ಒಬ್ಬನೇ ಪರಮಾತ್ಮನು ; ಆ ಪರಮಾತ್ಮನೇ ನಾನು' ಎಂಬ ತಿಳುವಳಿಕೆಯನ್ನು ಸಂಪಾದಿಸಿಕೊಳ್ಳುವದಕ್ಕೆ ಅಡ್ಡಿಯಾದದ್ದೆಲ್ಲ ಅನೀತಿ, ಅದಕ್ಕೆ ಅನುಗುಣವಾದದ್ದೆಲ್ಲ ನೀತಿ. ಈಗ ನಾವು ಒಂದೊಂದು ಅವಿದ್ಯಾಕಲ್ಪಿತವಾದ ಆತ್ಮನನ್ನೇ 'ನಾನು' ಎಂದುಕೊಳ್ಳುತ್ತಿರುವೆವು. ಆದ್ದ ರಿಂದಲೇ ಅದನ್ನು ಪರಿತೃಪ್ತಿಗೊಳಿಸುವದಕ್ಕಾಗಿ ಮಾಡಬಾರದ್ದನ್ನೆಲ್ಲ ಮಾಡು ತ್ತಿರುವೆವು. ನಮ್ಮೆಲ್ಲರ ಆತ್ಮನೂ ಒಬ್ಬನೇ ಎಂಬ ಜ್ಞಾನವು ಯಾವನಿಗೆ ಇರುವದೋ ಅವನು ಎಂದಿಗೂ ಅನೀತಿಗೆ ಬೀಳುವಂತಿಲ್ಲ.

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥ ಗೀ. ೧೩–೨೮

'ಸರ್ವಭೂತಗಳಲ್ಲಿಯೂ ಒಂದೇ ರೂಪದಿಂದ ಪರಮೇಶ್ವರನೇ ಆತ್ಮನಾಗಿ ಇರು ತ್ತಾನೆ' ಎಂದು ಯಾವನು ಕಾಣುತ್ತಿರುವನೋ ಅವನು ತನ್ನನ್ನುತಾನೇ ಕೊಂದು ಕೊಳ್ಳುವದಿಲ್ಲ. ಆದರಿಂದ ಅವನು ಸದ್ಗತಿಯನ್ನು ಹೊಂದುವನು–ಎಂಬ ಭಗವ ದುಕ್ತಿಯು ಪ್ರಸನ್ನಗಂಭೀರವಾದದ್ದು. ಮನುಷ್ಯನಿಗೆ ಯಾವ ಶರೀರಭಾಗವು ಯಾವದಾದರೂ ಕಾರಣದಿಂದ ಸತ್ತಿರುವದೋ ಆ ಭಾಗದ ಸುಖದುಃಖಗಳು ಅವನಿಗೆ ಹತ್ತುವದಿಲ್ಲ. ಬೈರಾಗಿಗಳು ಕೆಲವರು ತೋಳನ್ನು ಬಹುಕಾಲ ಎತ್ತಿಟ್ಟು ಕೊಂಡು ಅದರಲ್ಲಿ ರಕ್ತಸಂಚಾರವೇ ಆಗದಂತೆ ಮಾಡಿಕೊಂಡಿರುವದನ್ನೂ ಆ ಭಾಗವು ಕಲ್ಲಿನಂತೆ ಆಗಿರುವದನ್ನೂ ನಿಮ್ಮಲ್ಲಿ ಕೆಲವರು ನೋಡಿರಬಹುದು. ಹೀಗೆಯೇ ನಮ್ಮ ಆತ್ಮನೇ ನಿಜವಾಗಿ ಎಲ್ಲಾ ಪ್ರಾಣಿಗಳ ಆತ್ಮನಾಗಿದ್ದರೂ ನಮಗೆ ಆದರ ಅರಿವಿಲ್ಲದೆ ಒಂದೇಒಂದು ದೇಹೇಂದ್ರಿಯಸಂಘಾತದಲ್ಲಿ ನಾನೆಂಬ ಅಭಿಮಾನವು ವಾಸನೆಯಿಂದ ಬಲವಾಗಿದ್ದುಕೊಂಡುಬಿಟ್ಟಿರುವದರಿಂದ ಇವರು ಬೇರೆಯವರು, ಅವರಲ್ಲಿ 'ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧು' ಗಳೆಂಬ ವಿಶೇಷವಿದೆ– ಎಂದು ಕಾಣುತ್ತಿರುವದರಿಂದ ಅವರ ದೇಹೇಂದ್ರಿಯಗಳ ಅಭಿಮಾನವು ನಮಗೆ ಇಲ್ಲದಾಗಿದೆ. ಅವರ ವಿಷಯದಲ್ಲಿ ನಮಗೆ ಆಗುವ ಅಂತಃಕರಣಭಾವಗಳು ಒಬ್ಬೊಬ್ಬರಲ್ಲಿ ಒಂದೊಂದು ಬಗೆಯಾಗಿರುವದರಿಂದ–

ಕನಸಿನಲ್ಲಿ ತಾನೊಬ್ಬನೇ ಇದ್ದರೂ ತನಗಿಂತ ಅನ್ಯರಾದ ಜನರೂ ಪ್ರಾಣಿಗಳೂ ವಸ್ತುಗಳೂ ಬೇರೆಯಿರುವವೆಂಬ ಭಾವನೆಯಿಂದ ಅವುಗಳಲ್ಲಿ ರಾಗದ್ವೇಷಾದಾ ಸೀನ್ಯಗಳುಂಟಾಗಿರುವಂತೆ, ನಾವು ನಿಜವಾಗಿ ನಮ್ಮನ್ನು ನಾವೇ ರಾಗದ್ವೇಷಾದಿ ಗಳಿಂದ ಕಾಣುತ್ತಾ ನಮ್ಮನ್ನು ನಾವೇ ಕೊಲ್ಲುತ್ತಿರುವೆವು ಆದ್ದರಿಂದಲೇ ಶ್ರುತಿಯು ಹೀಗೆನ್ನುತ್ತಿದೆ :

> ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ |
> ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ || ಈ. ೩

ಯಾರಿಗೆ ತಮ್ಮ ಪರಮಾರ್ಥವಾದ ಆತ್ಮನ ಅರಿವಿಲ್ಲವೋ ಅವರು ಆತ್ಮಹತ್ಯೆ ಯನ್ನು ಮಾಡಿಕೊಂಡಿರುವದರಿಂದ ಈ ತಮ್ಮ ಶರೀರವನ್ನು ಬಿಟ್ಟು ತೆರಳಿದ ಬಳಿಕ ಅಂಧಃತಮಸ್ಸಿನಿಂದ ಕೂಡಿರುವ ಅಸುರರ ಲೋಕಕ್ಕೆ ಹೋಗುವರು– ಎಂಬುದು ಶ್ರುತಿಯ ಅಕ್ಷರಾರ್ಥ. ಸತ್ತಬಳಿಕ ಅವರವರು ಮನೋವಾಸನೆ ಯಂತೆಯೂ ಕರ್ಮಕ್ಕೆ ತಕ್ಕಂತೆಯೂ ಅವರಿಗೆ ಅಜ್ಞಾನಮಯವಾದ ಜನ್ಮವು ಬರುವದು ಸ್ವಾಭಾವಿಕವೇ ಆಗಿದೆ. ಆದರೆ ಈಗಲೇ ಅವರಿಗೆ ಆತ್ಮಸ್ವರೂಪದ ಅಜ್ಞಾನದ ಫಲವಾಗಿ ಒಂದೇ ಶರೀರೇಂದ್ರಿಯಸಂಘಾತದಲ್ಲಿ ಅಭಿಮಾನವುಂಟಾಗಿ ಬಿಟ್ಟಿರುವದರಿಂದ, ಅವರು ನಿಜವಾಗಿ ಆತ್ಮಹತ್ಯೆಯನ್ನು ಮಾಡಿಕೊಂಡಿರವರು. ಆತ್ಮಹತ್ಯೆಯೆಂದರೇನು ? ತನ್ನನ್ನುತಾನೇ ಕೊಂದುಕೊಳ್ಳುವದು. ಯಾರು ನಿಜವನ್ನು ಅರಿಯರೋ ಅವರಿಗೆ ಅವರ ಆತ್ಮನು ಹತನಾಗಿಯೇ ಇರುತ್ತಾನೆ. ನಾವು ಯಾವಯಾವ ಶರೀರೇಂದ್ರಿಯಸಂಘಾತವನ್ನು 'ನಾನು' ಎಂದು ತಪ್ಪು ತಿಳುವಳಿಕೆಯಿಂದ ಭಾವಿಸಿಕೊಂಡಿರುವೆವೋ ಅದನ್ನುಪಯೋಗಿಸಿಕೊಂಡು ಧರ್ಮಾ ಧರ್ಮಗಳನ್ನು ಮಾಡುತ್ತಾ ಪುಣ್ಯಪಾಪಗಳ ಫಲವಾಗಿ ಸದಸದ್ಯೋನಿಗಳಲ್ಲಿ ಹುಟ್ಟಿ ಹೊಸಹೊಸ ದೇಹವನ್ನು ಧಾರಣೆಮಾಡಿ ಅದೇ ನಮ್ಮ ಆತ್ಮನೆಂದು ಕೊಳ್ಳುತ್ತಿರುವೆವು. ಮತ್ತೆ ಆ ಆತ್ಮನೆಂದು ಭಾವಿಸಿಕೊಂಡ ದೇಹನಿಮಿತ್ತ ದಿಂದಲೂ ಮಾಡಬಾರದ್ದನ್ನು ಮಾಡಿ ಆ ಆತ್ಮನನ್ನು ಕೊಂದುಕೊಳ್ಳುತ್ತಿರು ವೆವು. ಹೀಗೆ ಶರೀರಾಭಿಮಾನಿಗಳು ಆತ್ಮಹತ್ಯೆಗಳ ಸಾಲನ್ನೇ ಅನುಸರಿ ಸುತ್ತಾ ಅದರ ಫಲವಾಗಿ ಜನನಮರಣಪ್ರಬಂಧಕ್ಕೆ ಗುರಿಯಾಗುತ್ತಿರುವರು. ಪರಮಾರ್ಥಾತ್ಮನಂತೂ ಎಂದೆಂದಿಗೂ ಹತನಾಗಿಯೇ ಇರುತ್ತಾನೆ ; ಏಕೆಂದರೆ ಅವನು ಇದ್ದರೂ ಇಲ್ಲದಂತೆ ಆಗಿಬಿಟ್ಟಿರುತ್ತಾನೆ. ಜ್ಞಾನಿಗಳ ದೃಷ್ಟಿಯಿಂದ ಹೀಗೆ ಪುಣ್ಯವುಕೂಡ ಶರೀರಾಂತರಕ್ಕೆ ಕಾರಣವಾಗಿರುವದರಿಂದ ಪಾಪವೇ ಆಗಿರುತ್ತದೆ; ಇನ್ನು ಪಾಪಭೂಯಿಷ್ಠವಾದ ವರ್ತನೆಯಲ್ಲಿಯೇ ಇರುವವರ ವಿಷಯವಾಗಿ ಹೇಳುವದೇನು ?

ಯಾವನಿಗೆ 'ನನ್ನ ಆತ್ಮನೇ ಎಲ್ಲರ ಆತ್ಮನು' ಎಂಬ ತಿಳಿವಳಿಕೆಯಿರುವದೋ, ಅಥವಾ ತಿಳಿವಳಿಕೆಯಿಲ್ಲದಿದ್ದರೂ ಶಾಸ್ತ್ರಾಚಾರ್ಯರ ಬೋಧೆಯಲ್ಲಿ ಉಂಟಾದ ಶ್ರದ್ಧೆಯಿಂದ ಎಲ್ಲರಲ್ಲಿಯೂ ಒಬ್ಬನೇ ಆತ್ಮನಿರುವನೆಂಬ ಭಾವನೆಯುಂಟಾಗಿರುವದೋ ಆವನಿಗೆ ಮತ್ತೊಬ್ಬರನ್ನು ಯಾವ ಬಗೆಯಿಂದಲೂ ಹಿಂಸೆಮಾಡುವ ಬುದ್ಧಿಯುಂಟಾಗುವಹಾಗಿಲ್ಲ ; 'ನ ಹಿನಸ್ತ್ಯಾತ್ಮನಾತ್ಮಾನಮ್' ಹಾಗೆ ಮಾಡುವದು ತನಗೆತಾನೇ ಹಿಂಸೆಮಾಡಿಕೊಂಡಂತೆ ಎಂಬ ತಿಳಿವಳಿಕೆಯುಂಟಾಗಿ ಬಿಟ್ಟಿರುವದರಿಂದ ಸರ್ವಾತ್ಮಭಾವನೆಯಿರುವವನು ಅನೀತಿಯ ಹಾದಿಯನ್ನು ತುಳಿಯುವ ಸಂಭವವೇ ಇಲ್ಲ.

ತಂದೆತಾಯಿಗಳು ತಮ್ಮ ಮಕ್ಕಳಿಗಾಗಿ ತಾವು ಕಷ್ಟಪಡುತ್ತಿರುವದೇಕೆ ? ಅವರಲ್ಲಿ ನನ್ನವರೆಂಬ ಭಾವವು ಇರುವದರಿಂದ. ದೊಡ್ಡ ಕುಟುಂಬದ ಯಜಮಾನನು ಹೆಂಡತಿ, ಮಕ್ಕಳು, ನೆಂಟರು, ಇಷ್ಟರು, ಆಳುಕಾಳುಗಳು, ದನಕರುಗಳು– ಎಲ್ಲರಲ್ಲಿಯೂ ಆತ್ಮಭಾವನೆಯಿಂದಲೇ ವರ್ತಿಸುತ್ತಿರುವದರಿಂದ ಅವನಿಗೆ ಅವರೆಲ್ಲರೂ ಸಂತೋಷದಿಂದ ಇರಬೇಕೆಂಬುದೇ ಗುರಿಯಾಗಿರುತ್ತದೆ. ನೀತಿಯನ್ನು ಬೋಧಿಸುವವರು ಕೆಲವರು 'ಈಗ ನಾನು ಮತ್ತೊಬ್ಬರಿಗೆ ಉಪಕಾರವನ್ನು ಮಾಡಿದರೆ, ನನಗೂ ಕಷ್ಟಕಾಲದಲ್ಲಿ ಮತ್ತೊಬ್ಬರ ಸಹಾಯವಾದೀತು' ಎಂದು ಹೇಳುತ್ತಿರುವದುಂಟು. ಆದರೆ ಇಂದು ಬಾಯಾರಿಕೆಯಿಂದ ಬಳಲುತ್ತಿರುವವನಿಗೆ ನಾನು ನೀರನ್ನು ಕೊಟ್ಟರೆ, ಮುಂದೆ ನಾನು ನೀರಡಿಕೆಯಿಂದ ಸಂಕಟಪಡುತ್ತಿರುವಾಗ ಆ ಉಪಕಾರವನ್ನು ಹೊಂದಿದವನು ಎಲ್ಲಿರುತ್ತಾನೆ ? 'ನಮ್ಮ ಆತ್ಮನು ಎಲ್ಲರಿಗೂ ಆತ್ಮನಾಗಿರುವದರಿಂದ ನಾನು ಮತ್ತೊಬ್ಬರಿಗೆ ಮಾಡುವ ಉಪಕಾರವು ನಿಜವಾಗಿ ನನಗೆನಾನೇ ಒಳ್ಳೆಯದನ್ನು ಮಾಡಿಕೊಂಡಂತೆ –ಎಂಬ ವೇದಾಂತಬೋಧೆಯನ್ನು ಮನದಂದರೆ ಸ್ವಾರ್ಥತ್ಯಾಗವೆಂಬುದು ತನ್ನ ನಿಜವಾದ ಆತ್ಮನನ್ನು ಅರಿತುಕೊಳ್ಳುವದಕ್ಕೆ ಮಾಡುವ ಒಂದಾನೊಂದು ಸಾಧನವೆಂಬುದು ಮನವರಿಕೆಯಾದೀತು. ಧರ್ಮರಾಯನು ಕಾಡಿಗೆ ಹೋಗಿದ್ದಾಗ ಅವನನ್ನು ಸಾವಿರಾರು ಅಗ್ನಿಹೋತ್ರಿಗಳಾದ ಬ್ರಾಹ್ಮಣರು ಹಿಂಬಾಲಿಸಿದರು. "ನಾನು ಹೇಗಾದರೂ ಗೆಡ್ಡೆಗೆಣಸುಗಳಿಂದ ಹೊಟ್ಟೆಯನ್ನು ಹೊರೆದುಕೊಂಡೇನು. ಇಂಥ ಸಾತ್ತ್ವಿಕರಾದ ಬ್ರಾಹ್ಮಣರು ಆಹಾರವಿಲ್ಲದೆ ಇರುವದನ್ನು ಹೇಗೆ ನೋಡಿಕೊಂಡಿರಲಿ ?" ಎಂದು ಧರ್ಮರಾಯನು ಅನುತಾಪದಿಂದ ಧೌಮ್ಯರಲ್ಲಿ ಆಲೋಚನೆ ಮಾಡಿಕೊಂಡನು. ಅವರು ಸೂರ್ಯಭಗವಂತನನ್ನು ಕುರಿತು ತಪಸ್ಸುಮಾಡಿವಂತೆ ಉಪದೇಶಿಸಿದರು. ಆಗ ಸೂರ್ಯನು ಅವನಿಗೆ ಅಕ್ಷಯಪಾತ್ರೆಯನ್ನು ಅನುಗ್ರಹಿಸಿದನು - ಎಂಬ ಕಥೆಯಿಂದ ನಾವು ತಿಳಿದುಕೊಳ್ಳಬೇಕಾದದ್ದೇನಿದೆ ? ದಾನ, ಧರ್ಮ, ನೀತಿ– ಇವುಗಳಿಂದ ಮತ್ತೊಬ್ಬರಿಗೆ ನಾವು ಉಪಕಾರಮಾಡು

ವಾಗ ಒಂದು ಬಗೆಯ ವಿಲಕ್ಷಣಾನಂದವುಂಟಾಗುವದು ; ಆಗ ನಿಜವಾಗಿ ನಮ್ಮ ವಿಶಾಲಾತ್ಮನ ಅರಿವನ್ನು ಮಾಡಿಕೊಳ್ಳುತ್ತಿರುವೆವು. ಕಲಿಯುಗದಲ್ಲಿ ದಾನವೊಂದೇ ಎಲ್ಲರಿಗೂ ಉಳಿದಿರುವ ಸಾಧನ—ಎಂದು ಭಾರತದಲ್ಲಿ ಹೇಳಿರುವದರ ರಹಸ್ಯವೇ ಇದು. ನಮ್ಮಲ್ಲಿ ಏನಾದರೂ ಇದ್ದೇ ಅದನ್ನು ದಾನಮಾಡಿದರೇ ದಾನವನ್ನು ಮಾಡಿದಂತೆ ಆಯಿತೆಂದು ತಿಳಿಯಬೇಕಾದದ್ದಿಲ್ಲ. ಯಾರೊಬ್ಬರಿಗೆ ಒಂದಿಷ್ಟು ಸಹಾಯಮಾಡಿದರೂ ದಾನವಾಗುವದು. ಭೂಮಿ, ದನಕರು, ಧನ ಕನಕಾದಿಗಳು— ಇವುಗಳಿಲ್ಲದಿದ್ದರೂ ಶರೀರಶ್ರಮದಿಂದಲೇ ಪರೋಪಕಾರವನ್ನು ಮಾಡಿ ಈ ತ್ಯಾಗದ ಫಲವನ್ನು ಕಂಡುಕೊಳ್ಳಬಹುದು.

ಅದ್ವೈತಜ್ಞಾನವೇ ನೀತಿ, ನೀತಿಯ ಅನುಸರಣೆಯೇ ಅದ್ವೈತ ಎಂದು ತಿಳಿಯಬೇಕು. ಜ್ಞಾನವು ಯಾರಿಗೆ ಉಂಟಾಗಿರುವದೋ ಅವರು ಅನೀತಿಯಿಂದ ವರ್ತಿಸುವದು ಸಾಧ್ಯವಿಲ್ಲ ; ಪರಮಜ್ಞಾನಿಗಳಾದವರು ಸರ್ವಭೂತಗಳ ಹಿತದಲ್ಲಿಯೂ ರತರಾಗಿರುತ್ತಾರೆಂದು ಗೀತೆಯಲ್ಲಿ ಹೇಳಿರುವವರ ಅಭಿಪ್ರಾಯವೇ ಇದು. ಮನೆಗೆ ಬೆಂಕಿಬಿದ್ದಾಗ, ಯಾವನಾದರೂ ನೀರಿನಲ್ಲಿ ಮುಳುಗಿ ಕಣ್ಣು ಕಣ್ಣು ಬಿಡುತ್ತಿರುವಾಗ, ಕಷ್ಟಪಡುತ್ತಿರುವವರನ್ನು ಧೈರ್ಯದಿಂದ ನುಗ್ಗಿ ಬದುಕಿಸಿದವರನ್ನು ಜನರು ಹೇಗೆ ಕೊಂಡಾಡುತ್ತಾರೆ! ಅವರ ಧೈರ್ಯಕ್ಕೆ ಸ್ವಾರ್ಥತ್ಯಾಗವೆ, ಅಲ್ಲವೆ, ಆಧಾರ ? ಆತ್ಮನು ಎಲ್ಲೆಲ್ಲಿಯೂ ಇರುತ್ತಾನೆಂಬುದನ್ನು ಮನವರಿಕೆಮಾಡುವದಕ್ಕೆ ನೀತಿಯೇ ಸಾಧಕವಾಗುತ್ತದೆ. "ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್" ನಿತ್ಯನಾದ ನಮ್ಮ ಆತ್ಮನು ಯಾರು ? ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವ ಎಲ್ಲರ ಆತ್ಮನೇ. ಅವನನ್ನು ಸಂಕುಚಿತಬುದ್ಧಿಯಿಂದ ಕುಗ್ಗಿಸಬಾರದು. ದೇಹದಲ್ಲಿ ಯಾವ ಭಾಗಕ್ಕೂ ಹಿಂಸೆಯಾದರೂ ನಮಗೇ ಆಯಿತೆಂದು ಹೇಗೆ ಭಾವಿಸುವೆವೋ, ಹಾಗೆಯೇ ವಿಶಾಲ ಹೃದಯರಾದವರು ಯಾರೊಬ್ಬರಿಗೆ ತೊಂದರೆಯಾದರೂ ಸಹಿಸಲಾರದೆ ಇರುತ್ತಾರೆ ಜ್ಞಾನವೆಂದರೆ ಪುಸ್ತಕಜ್ಞಾನವಲ್ಲ; ನಿಜವಾದ ಜ್ಞಾನಿಯಾದವನಿಗೆ ಸಾರ್ವತ್ರಿಕಪ್ರೇಮವಿಲ್ಲದೆ ಜ್ಞಾನವು ಇರುವದು ಸಾಧ್ಯವೇ ಇಲ್ಲ. 'ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ' ಎಂದು ಮುಂತಾಗಿ ಹೇಳಿರುವ ಸರ್ವಭೂತಪ್ರೇಮವೇ ಜ್ಞಾನದ ಲಕ್ಷಣ. ಆ ಗುಣಗಳು ಯಾವನಲ್ಲಿ ನಿತ್ಯವಾಗಿ ಸ್ವಭಾವಕ್ಕೆ ಸೇರಿಕೊಂಡಿರುವವೋ, ಅವನೇ ಜ್ಞಾನನಿಷ್ಠನು. ಸರ್ವಭೂತಗಳೆಂದರೆ ಹುಲಿಕರಡಿಗಳಲ್ಲಿಯೂ ಪ್ರೇಮವೆ?—ಎಂದು ನೀವು ಕೇಳಬಹುದು. ಅಲ್ಪಬುದ್ಧಿಯ ಜನರಿಗೆ ಸಂಕುಚಿತವಾದ ನೀತಿಯೂ ಇದೆ. ಆತ್ಮರಕ್ಷಣೆಗಾಗಿ ದುಷ್ಟಮೃಗಗಳನ್ನು ಕೊಲ್ಲುವದು ಅಧರ್ಮವಲ್ಲ—ಎಂದು ಅವರಿಗಾಗಿಯೇ ಧರ್ಮಶಾಸ್ತ್ರವು ಹೇಳುತ್ತಿರುವದು. ಆದರೆ ಅಪರಿಚ್ಛಿನ್ನಸತ್ತ್ವದ ಜ್ಞಾನವು ಬಂದಿರುವ

ಮಹಾತ್ಮರಿಗೆ ಹುಲಿಕರಡಿಗಳಲ್ಲಿಯೂ ತನ್ನ ಆತ್ಮನೇ ಇರುತ್ತಾನೆಂಬ ಭಾವನೆ ಯಿರುತ್ತದೆ. ಅವರು ಅವನ್ನೂ ದ್ವೇಷಿಸುವಂತಿಲ್ಲ; ಬಹುಶಃ ಅಂಥವರನ್ನು ಆ ದುಷ್ಟಪ್ರಾಣಿಗಳೂ ಏನೂಮಾಡದೆ ಇರುವವನ್ನಬೇಕು. ಅವು ಏನೇಮಾಡಲಿ, ಆ ಸಾಧುಗಳು ಮಾತ್ರ ಮನಸ್ಸಿನಲ್ಲಿ ಯಾವ ಏರುಪೇರನ್ನೂ ಹೊಂದುವಂತಿಲ್ಲ; ಅವರು ಪ್ರೇಮದ ಕೊನೆಯ ಮಜಲನ್ನು ಮುಟ್ಟಿಬಿಟ್ಟಿರುತ್ತಾರೆ. ಒಂದು ಹಾವು ತಮ್ಮ ಬಳಿಗೆ ಬಂದುಹೋದಾಗ ಒಬ್ಬ ಸಾಧುಗಳು 'ಪರಮಪ್ರಿಯನಾದ ಭಗವಂತನ ದೂತನೊಬ್ಬನು ಬಂದಿದ್ದನು' – ಎಂದರಂತೆ.

ಹೀಗೆ ವೇದಾಂತಜ್ಞಾನವು ಶಾಸ್ತ್ರದೃಷ್ಟಿಯನ್ನು ಅವಲಂಬಿಸಿ ನೀತಿಗೆ ಅಡಿಗಟ್ಟನ್ನು ಹಾಕಿಕೊಡುತ್ತದೆ. ವೇದಾಂತವು ತತ್ತ್ವಜ್ಞಾನಕ್ಕಾಗಿ ನೀತಿಯನ್ನು ಹೇಳುತ್ತದೆ; ವಿಸ್ತೃತಾತ್ಮನಲ್ಲಿ ನಿಲ್ಲುವದಕ್ಕೆ ಪ್ರಯತ್ನಿಸುವದೇ ಮಾನವನ ಕರ್ತವ್ಯವೆಂದು ಅದು ಬೋಧಿಸುತ್ತದೆ. ಈ ದೃಷ್ಟಿಯಿಂದ ವೇದಾಂತದ ತಿಳಿವಳಿಕೆ ಯನ್ನು ಯಥಾಯೋಗ್ಯವಾಗಿ ಜನರಲ್ಲಿ ಹರಡುವದರಿಂದ ವ್ಯವಹಾರಕ್ಕೂ ಪ್ರಯೋ ಜನವುಂಟೆಂದು ಸಿದ್ಧವಾಗುತ್ತದೆ.

---

## ೫೧. ಸಾಧನಾನಂದ

### (8—9—62)

ಪರಮಪುರುಷಾರ್ಥವನ್ನೂ ಅದರ ಪ್ರಾಪ್ತಿಗೆ ಮಾಡಬೇಕಾಗಿರುವ ಸಾಧನ ಗಳನ್ನೂ ಎಲ್ಲಾ ಮತಗಳಲ್ಲಿಯೂ ಹೇಳಿರುತ್ತದೆ. ಆದರೆ ಅವುಗಳ ಬೋಧನೆ ಯಂತೆ ಪರಮೇಶ್ವರಪ್ರಾಪ್ತಿಯು ಸತ್ತಬಳಿಕ ಆಗುವ ಅದೃಷ್ಟಫಲವಾಗಿರುತ್ತದೆ. ಪರಮೇಶ್ವರನ ಸ್ವರೂಪವೂ ಅದೃಷ್ಟವಾಗಿದ್ದು ಅವನ ಪ್ರಾಪ್ತಿಯೂ ಅದೃಷ್ಟ ವಾಗಿರುವಾಗ ಆ ಪ್ರಾಪ್ತಿಗಾಗಿ ಮಾಡುವ ಸಾಧನಗಳಲ್ಲಿ ಶ್ರದ್ಧಾದರಗಳುಂಟಾ ಗುವದು ಕಷ್ಟ. ಎಲ್ಲಾ ಮತಗಳಲ್ಲಿಯೂ ಪರೋಪಕಾರವನ್ನು ಮಾಡಬೇಕೆಂದು ಉಪದೇಶಿಸಿರುತ್ತದೆ; ಆದರೆ ಅವುಗಳಲ್ಲಿ ಆ ಸಾಧನೆದಿಂದಾಗುವ ದೃಷ್ಟಫಲವನ್ನು ತೋರಿಸದೆಇರುವದರಿಂದ ಪರೋಪಕಾರವೆಂಬುದು ರಾಜಸವಾಗಿ ದಂಭಾಹಂಕಾರ, ವೈಪೋಟಿ– ಮುಂತಾದವುಗಳಿಗೂ ಅವಕಾಶವನ್ನು ಕೊಡುವ ಸಂಭವವಿದೆ; ಸಾತ್ತ್ವಿಕಸಾಧನಕ್ಕೆ ಅವಕಾಶವು ಕಡಿಮೆಯಾಗಿರುತ್ತದೆ.

ವೇದಾಂತಕ್ಕೂ ಮತಗಳಿಗೂ ಈ ವಿಷಯದಲ್ಲಿ ವಿರೋಧವಿಲ್ಲ. ಮತಗಳು ಬೋಧಿಸುವ ಪರೋಪಕಾರವನ್ನು 'ಇಷ್ಟಾಪೂರ್ತದತ್ತ'ಗಳೆಂಬ ಹೆಸರಿನಿಂದ ಇಲ್ಲಿಯೂ ಬೋಧಿಸಿರುತ್ತದೆ. ಆದರೆ ಪ ರೋ ಪ ಕಾ ರ ವ ನ್ನು ಮಾಡುವದು

ವಿಶಾಲಾತ್ಮಬುದ್ಧಿಗೆ ಕಾರಣವೆಂಬುದಕ್ಕೆ ಉಪಪತ್ತಿಯು ವೇದಾಂತದಲ್ಲಿ ಮಾತ್ರವೇ ಇದೆ. ಇದರಿಂದ ಸಾಧನಾನುಷ್ಠಾನದಿಂದಲೇ ಒಂದು ಬಗೆಯ ಆನಂದವನ್ನು ಸಾಧಕನು ಸಂಪಾದಿಸಿಕೊಳ್ಳುವದಕ್ಕೆ ಹೆಚ್ಚು ಅವಕಾಶವಿರುತ್ತದೆ.

ಪ್ರಾರ್ಥನೆ ಎಂಬುದು ಎಲ್ಲಾ ಮತಗಳಲ್ಲಿಯೂ ಉಪದಿಷ್ಟವಾಗಿರುವ ಒಂದು ಸಾಧನ. ಪ್ರಾರ್ಥನೆಯು ಮಾನವನಿಗೆ ಈಶ್ವರನು ಕೊಟ್ಟಿರುವ ಒಂದಾನೊಂದು ವರರೂಪವಾದ ಸಾಧನವೆನ್ನಬಹುದು. ಮನುಷ್ಯನಿಗೆ ತಾನು ಬೇಡುವ ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳನ್ನು ನೆರವೇರಿಸಿಕೊಡುವ ಪರಮೇಶ್ವರನೊಬ್ಬನಿದಾನೆ ಎಂಬ ನಂಬಿಕೆಯಿರುವದು ಅವನ ಸುದೈವ. ಮತಗಳ ಅನುಯಾಯಿಗಳಲ್ಲಿ ಬಹಳ ಜನರು ಭಗವಂತನ ಪ್ರಾರ್ಥನೆಯಿಂದ ತಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳಬಹುದೆಂದು ನಂಬಿರುತ್ತಾರೆ. ತಮ್ಮ ಪ್ರಾರ್ಥನೆಯಿಂದ ಎಷ್ಟೋ ವೇಳೆಗಳಲ್ಲಿ ಯಾವ ಫಲವೂ ಆಗದೆ ಇರಬಹುದು; ಆದರೂ ಜನರು ಫಲವು ಆದೀತೆಂಬ ತಮ್ಮ ನಂಬಿಕೆಯನ್ನು ಬಿಡುವದಿಲ್ಲ. ದೇವರ ಮನಸ್ಸಿಗೆ ಬಂದರೆ ಫಲವಾಗುವದೇನೂ ದೊಡ್ಡದಲ್ಲ– ಎಂದುಕೊಂಡೇ ಇರುತ್ತಾರೆ. ಈ ನಂಬಿಕೆಗೆ ಏನು ಆಧಾರ? ಇದಕ್ಕೆ ಯಾವ ಉಪಪತ್ತಿಯನ್ನು ಹೇಳಬಹುದು? ಮನುಷ್ಯನಿಗೆ ಸ್ವಾರ್ಥವು ನೆರವೇರಬೇಕೆಂಬ ಅನಿವಾರ್ಯವಾದ ಒಂದು ಪ್ರತೀಕ್ಷೆಯು ಸ್ವಭಾವದಿಂದ ಇದೆ– ಎನ್ನೋಣವೆ? ಅದಕ್ಕಾದರೂ ಉಪಪತ್ತಿಯೇನಿದೆ? ಹೇಗೇ ಆಗಲಿ, ನಮ್ಮಲ್ಲಿ ಈಶ್ವರನು ದಯಾಯುಕ್ತನಾಗಿಯೇ ಇರುತ್ತಾನೆ; ನಮ್ಮ ಸಾಧನಗಳು ನೆರವೇರದೆ ಇರುವದಕ್ಕೆ ನಮ್ಮ ಸಾಧನದ ನ್ಯೂನತೆಯೋ, ಅಥವಾ ನಮಗೆ ಬೇರೊಂದು ವಿಧದಿಂದ ಇಷ್ಟಾರ್ಥಪ್ರಾಪ್ತಿಯಾಗಬೇಕೆಂಬ ಈಶ್ವರೇಚ್ಛೆಯೋ ಕಾರಣವಾಗಿರಬೇಕು– ಎಂಬ ನಂಬಿಕೆಯು ಪ್ರಾರ್ಥನೆಯ ಮನೋಭಾವದಲ್ಲಡಗಿದೆ ಎನ್ನಬಹುದು. ನಾಸ್ತಿಕರಾದ ತಾರ್ಕಿಕರು 'ದೇವರು ಹೊಗಳಿಸಿಕೊಂಡು, ಬೇಡಿಸಿಕೊಂಡು, ಕಾಡಿಸಿಕೊಂಡು ಏಕೆ ಜನರ ಇಷ್ಟಾರ್ಥವನ್ನು ನೆರವೇರಿಸಬೇಕು? ಅವನು ಸರ್ವಶಕ್ತನಾಗಿದ್ದರೆ ಹಾಗೆಯೇ ಜನರಿಗೆ ಬೇಕಾದದ್ದನ್ನು ಕೊಡಬಾರದೇಕೆ?'– ಎಂದು ಕುತ್ಸಿತತರ್ಕವನ್ನು ಒಡ್ಡುವದುಂಟು. ಮತಬೋಧಕರಿಗೆ ಇದೊಂದು ದಾಟಲಾಗದ ಅಡಚಣೆಯಾಗಿರಬಹುದು. ಆದರೆ ವೇದಾಂತದಲ್ಲಿ ಇದಕ್ಕೆ ಉತ್ತರವಿದೆ. ಭಗವಂತನು ನಮ್ಮ ಆತ್ಮನೇ ಆಗಿರುತ್ತಾನೆ. ಅವನು ಆಪ್ತಕಾಮನೂ ಆಗಿರುತ್ತಾನೆ. ನಾವು ಮಾತ್ರ ಈ ತತ್ತ್ವವನ್ನು ಅರಿಯದೆಕೊಳ್ಳದೆ ವಿಷಯಗಳಿಂದಲೇ ನಮಗೆ ಸುಖವು ಬರಬೇಕೆಂಬ ಆಗ್ರಹವನ್ನು ತೊಟ್ಟಿದ್ದೇವೆ. ಸುಖದುಃಖಗಳು ಏಕೆ ಬರುತ್ತವೆ? ಪರಮಾತ್ಮನನ್ನು ಮರೆತು ಬಹಿರ್ಮುಖರಾಗಿರುವದೇ ಅದಕ್ಕೆ ಕಾರಣ. ವಿಷಯಗಳಿಂದ ಆಗುವ ಸುಖವೆಂಬುದೂ ಅವುಗಳ ಪ್ರಾಪ್ತಿಯನ್ನು ನೆಪವಾಗಿ ಮಾಡಿ

ಕೊಂಡ ನಮ್ಮಲ್ಲಿಯೇ ಅಭಿವ್ಯಕ್ತವಾಗುವ ಆನಂದಾಂಶವಾಗಿರುತ್ತದೆ. ಈ ಗುಟ್ಟನ್ನು ಅರಿತು ಪರಮಾತ್ಮನಕಡೆಗೆ ತಿರುಗುವದೇ ಸುಖಪ್ರಾಪ್ತಿಗೆ ಹಾದಿ ಈಶ್ವರನು ತನ್ನನ್ನು ಬೇಡಿದರೆ ಸುಖವನ್ನು ಕೊಡುತ್ತೇನೆಂದು ಸ್ವಾರ್ಥದ ವ್ರತ ವನ್ನು ಹಿಡಿದಿಲ್ಲ. ಎಲ್ಲರಿಗೂ ಪ್ರಿಯನಾಗಿರುವ ಆನಂದರೂಪನಾದ ಆತ್ಮನೇ; ಪರಮೇಶ್ವರನು. ಆದ್ದರಿಂದ ಭಗವಂತನ ಸ್ಮರಣೆಮಾಡಿಕೊಳ್ಳುವದೇ ಆನಂದಕ್ಕೆ ದಾರಿ, ಪ್ರಾರ್ಥನೆಯೆಂಬುದು ಭಗವಂತನಕಡೆಗೆ ತಿರುಗುವದಕ್ಕೆ ಒಂದು ಹಾದಿ.

ಸ್ತೋತ್ರಗಳನ್ನು ಹೇಳಿಕೊಡುವ ಸಾಧನವನ್ನು ಮತಗಳಲ್ಲೆಲ್ಲ ಹೇಳಿರು ತ್ತದೆ. ಪರಮಾತ್ಮನು "ಜನರು ತನ್ನನ್ನು ಹೊಗಳಲಿ" ಎಂಬ ನಿರೀಕ್ಷಣೆಯ ನ್ನೇನೂ ಇಟ್ಟುಕೊಂಡಿಲ್ಲ. ಪ್ರಾರ್ಥನೆ, ಸ್ತೋತ್ರ– ಎರಡೂ ಪರಮಾತ್ಮನ ಸ್ಮರಣೆಗೆ ಉಪಾಯಗಳು ಅಷ್ಟೆ. ಪ್ರಾರ್ಥನೆಯಲ್ಲಿ ನಮಗೆ ಬೇಕಾದ ಇಷ್ಟಾರ್ಥದ ಕಡೆಗೆ ಲಕ್ಷ್ಯವು ಹೆಚ್ಚಾಗಿರುತ್ತದೆ; ಸ್ತೋತ್ರದಲ್ಲಿ ಈಶ್ವರನ ಗುಣಗಳ ನೆನಪೇ ಹೆಚ್ಚಾಗಿರುತ್ತದೆ. ಸ್ತೋತ್ರವನ್ನು ಬಾಯಿಯಿಂದಲೂ ಹೇಳಿಕೊಂಡು ಮನಸ್ಸಿ ನಿಂದಲೂ ಭಗವಚ್ಚಿಂತನೆಯನ್ನು ಮಾಡುವದರಿಂದ ಆವರಲ್ಲಿ ಸರ್ವಭಾವದಿಂದಲೂ ಆತ್ಮನ ಸ್ಮರಣೆಯೇ ಉಂಟಾಗುತ್ತದೆ. ವಿಷಯಚಿಂತನೆಯು ದೂರಾದಂತೆಲ್ಲ ಮನಸ್ಸಿಗೆ ಹೆಚ್ಚಿನ ಆನಂದವಾಗುತ್ತದೆ. ಹಲವು ಬೀಳುಮಾತುಗಳನ್ನು ಬಳಸುವ ಅಭ್ಯಾಸವನ್ನು ಬಿಡಬೇಕೆಂಬ ಶ್ರುತಿಯ ಉಪದೇಶವು ಸ್ತೋತ್ರಪಾಠದಿಂದ ಹೆಚ್ಚಾಗಿ ಸಫಲವಾಗುತ್ತದೆ. ಸ್ತೋತ್ರಗಳ ಅಭಿಪ್ರಾಯವನ್ನು ಮೇಲುಕು ಹಾಕುತ್ತಾ ಪಠಿಸಿದರೆ ಇದರ ಪೂರ್ಣಫಲವು ದೊರಕುವದು.

ಪಾರಾಯಣವೆಂಬುದು ಮತ್ತೊಂದು ಸಾಧನ. ಭಗವಂತನ ಚಿಂತನೆ ಯಲ್ಲಿಯೇ ಮುಳುಗಿ ಆತನ ಅನುಗ್ರಹದಿಂದ ದೊಡ್ಡವರು ಬರೆದಿರುವ ಪ್ರಾಸಾ ದಿಕ ಗ್ರಂಥಗಳನ್ನು ಮನಮುಟ್ಟಿ ಓದಿ ಭಗವಂತನ ಅವತಾರಗಳು, ಅವುಗಳ ಮೂಲಕ ಆತನು ತೋರಿಸಿರುವ ಲೀಲೆಗಳ ಸ್ಮರಣೆ– ಇವುಗಳಿಂದ ಚಿತ್ತಶುದ್ಧಿ ಯಾಗುವಂತೆ ಮಾಡಿಕೊಳ್ಳುವದಕ್ಕೆ ಇದೊಂದು ಉತ್ತಮಸಾಧನ. ಭಗವಂತನ ಸ್ವರೂಪವನ್ನೂ ಆತನು ಭಕ್ತರನ್ನು ಅನುಗ್ರಹಿಸಿದ ಪರಿಯನ್ನೂ ದುಷ್ಟರನ್ನು ವಿನಾಶಗೊಳಿಸಿದಾಗಲೂ ಆತನು ತೋರಿಸಿದ ಲೀಲೆಗಳನ್ನೂ ಕೇಳಿದರೆ ಅವು ಸ್ಮರಣೀಯವಾಗಿಯೇ ಇರುತ್ತವೆ. ಸದ್ಗ್ರಂಥಗಳ ಪಾರಾಯಣದಿಂದ ಭಗ ವಂತನ ಚಿಂತನೆಯೂ ಆತನು ಈಗಲೇ ನಮ್ಮೆದುರಿಗೆ ಇರುವಂತೆ ಮಾಡಿ ಕೊಳ್ಳುವ ಭಾವನೆಯೂ ಉಂಟಾಗಿ ಬಾಹ್ಯಪ್ರಪಂಚವನ್ನೆಲ್ಲ ಮರೆಯಿಸಿ ಒಂದಾ ನೊಂದು ಆನಂದದ ಲೋಕವನ್ನೇ ಮನಸ್ಸಿನಲ್ಲಿ ಸೃಷ್ಟಿಮಾಡಿಕೊಡುವವು. ಭಗ ವಂತನು ಆನಂದಮಯನು. ಈಗಲೂ ಆತನ ಆಶ್ರಯದಲ್ಲಿಯೇ ನಾವು ಇರು ತ್ತೇವೆ, ಆತನೇ ನಮಗೆ ಕೊನೆಯ ಪ್ರಾಪ್ತಿಸ್ಥಾನ–ಎಂಬುದನ್ನು ಆರ್ಥಾನು

ಸಂಧಾನಪೂರ್ವಕವಾದ ಪಾರಾಯಣವು ನಮಗೆ ಮನಗಾಣಿಸುವದು. ಅರ್ಥ ಜ್ಞಾನವಿಲ್ಲದೆಯೂ ಕೇವಲ ಶ್ರದ್ಧಾಭಕ್ತಿಗಳಿಂದ ರಾಮಾಯಣಾದಿಗಳನ್ನು ಪಾರಾಯಣಮಾಡಿ ಆನಂದಿಸುವ ಮಹನೀಯರನ್ನು ನಾವು ಅಲ್ಲಲ್ಲಿ ಕಾಣ ಬಹುದು. ಶ್ರೀರಾಮನು ವಿಶ್ವಾಮಿತ್ರನಿಂದ ಅಹಲ್ಯೆಯ ಕಥೆಯನ್ನು ಕೇಳಿ ತಪಸ್ಸಿನಿಂದ ಪವಿತ್ರಳಾಗಿದ್ದ ಆಕೆಯ ಬಳಿಗೆ ಹೋಗಿ 'ರಾಮೋಽಹಮ್' ಎಂದು ನಮಸ್ಕರಿಸಿದನೆಂದು ಹೇಳುವ ಭಾಗವನ್ನು ಓದುವಾಗ ಸಂಸ್ಕೃತಭಾಷೆಯ ಜ್ಞಾನವು ಹೆಚ್ಚಾಗಿಲ್ಲದವರುಕೂಡ ಕಥೆಯನ್ನು ನೆನಪಿಗೆ ತಂದುಕೊಂಡು ಆನಂದಿ ಸುವದಿಲ್ಲವೆ? ಋಷಿವಾಕ್ಯವನ್ನು ಓದುವದೂ, ಪರಮಾತ್ಮನನ್ನು ಸ್ಮರಿಸುವದೂ, ಆತನಿಗೆ ನಮ್ಮದೆಲ್ಲವನ್ನೂ ಅರ್ಪಿಸುವದಕ್ಕೆ ಒಂದು ದೊಡ್ಡ ಸಾಧನವಲ್ಲವೆ ?

ಜಪ. ಕ್ರಿಸ್ತಿಯನ್ನರು, ಮಹಮ್ಮದೀಯರು–ಮುಂತಾದ ಅವೈದಿಕಮತ ಗಳಲ್ಲಿಯೂ ಜಪದ ಅನುಷ್ಠಾನವಿದೆ. ದನಗಳು ಹುಲ್ಲನ್ನು ತಿಂದು ಮೆಲುಕುಹಾಕಿ ದಂತೆಲ್ಲ ಅವಕ್ಕೆ ಅದರ ಸವಿಯು ಹೆಚ್ಚುಹೆಚ್ಚಾಗಿ ತೋರುವಂತೆ, ಭಗವಂತನ ನಾಮವನ್ನು ಜಪಿಸುವ ಅಭ್ಯಾಸವು ಬಲವಾದಂತೆಲ್ಲ ಸಾಧಕನಿಗೆ ಭಗವ- ತ್ಸ್ಮರಣೆಯ ಸವಿಯು ಹೆಚ್ಚುಹೆಚ್ಚಾಗಿ ತೋರುವದಕ್ಕೆ ಆರಂಭಿಸುತ್ತದೆ. ನಾವು ಜಪದ ಪುರಶ್ಚರಣದಿಂದ ಸಿದ್ಧರಾಗಿರುವ ಮಹನೀಯರಿಂದ ಮಂತ್ರಗ್ರಹಣವನ್ನು ಮಾಡುವದೇ ಒಂದು ಸಂಸ್ಕಾರ. ಆದರಿಂದ ಹೃದಯದ ಲ್ಲಿಯೇ ಮಂತ್ರವು ಮೂಡಿಕೊಂಡುಬಿಡುತ್ತದೆ. ಮಂತ್ರವೆಂಬ ಶಬ್ದಕ್ಕೆ ಮನನಮಾಡಿದವರನ್ನು ಸಂಸಾರದ ಕೋಟಲೆಯಿಂದ ರಕ್ಷಿಸುವದು-ಎಂಬರ್ಥವಿದೆ. ಮಂತ್ರವನ್ನು ಜಪಿಸಿ ದಂತೆಲ್ಲ ಸಾಧಕನೂ ಮಂತ್ರಮಯನಾಗುತ್ತಾನೆ. ನಿರಂತರವಿಷಯಸ್ಮರಣೆಯಿಂದ ಅಥವಾ ವಿಷಯಗಳ ಮಾತುಗಳ ಜಪದಿಂದ ಹೇಗೆ ಜನರು ವಿಷಯಾತ್ಮರಾಗಿಬಿಡು ತ್ತಾರೋ ಹಾಗೆಯೇ ಇಲ್ಲಿಯೂ ತಿಳಿಯಬೇಕು. 'ಆಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ' (ಛಾಂ. ೭–೨೬–೨) ಎಂದು ಶ್ರುತಿ ಹೇಳುತ್ತದೆ ರಾಗದ್ವೇಷಮೋಹಗಳ ಕಲಂಕವಿಲ್ಲದೆ ವಿಷಯಸೇವನೆಯನ್ನು ಮಾಡುವದರಿಂದ ಆಹಾರಶುದ್ಧಿಯಾಗುವದು ; ಆಹಾರಶುದ್ಧಿಯಿಂದ ಸತ್ತ್ವಶುದ್ಧಿಯಾಗುವದು, ಅಂತಃಕರಣವು ನಿರ್ಮಲವಾಗುವದು ; ಸತ್ತ್ವಶುದ್ಧಿಯಿಂದ ಎಡೆಬಿಡದಿರುವ ಪರಮಾತ್ಮಸ್ಮರಣೆಯು ಅಳವಡುವದು ಎಂದು ಆ ಶ್ರುತಿಯ ಅರ್ಥ. ರಾಗ ದ್ವೇಷಾದಿಗಳಿಂದ ಬಿಡುಗಡೆಯಾಗುವದಕ್ಕೆ ಭಗವನ್ನಾಮದ ಜಪವು ಅತ್ಯಂತ ಸುಲಭವಾದ ಉಪಾಯವು ; ಭಗವಂತನ ನಿರಂತರಸ್ಮರಣೆಗೂ ಅದು ಒಂದು ಸುಲಭವಾದ ಉಪಾಯವೇ ಸರಿ.

ವಿಷಯಸ್ಮರಣೆಯಿಂದ ಈಗ ನಾವು ಮೋಹಪರವಶರಾಗುತ್ತೇವೆ. ಮನಸ್ಸನ್ನು ಅದರಿಂದ ವಿಮೋಚನೆಮಾಡಿ ಆತ್ಮಸ್ಮರಣೆಯೇ ಬರುವಂತೆ ಮಾಡಿ ಕೊಳ್ಳುವದೇ ಸಾಧನೆಯ ತತ್ತ್ವ. ಮೊದಲು ನಾಮದ ಬಾಹ್ಯಜಪವನ್ನು

ಮಾಡಬೇಕು, ನಮಗೂ ಅರಿವಿಲ್ಲದೆ ಆ ಜಪವು ನಾಲಗೆಯಮೇಲೆ ನಿರಂತರವಾಗಿ ನಲಿದಾಡುವುದಕ್ಕೆ ಆರಂಭಿಸಿದಮೇಲೆ ಅದನ್ನು ನಮ್ಮ ಪ್ರಾಣಾಪಾನಗಳ ವ್ಯಾಪಾರಕ್ಕೆ ಹೊಂದಿಸಿಕೊಳ್ಳಬೇಕು ; ಪ್ರಾಣವು ವ್ಯಾಪಾರಮಾಡುವಾಗ ಒಂದು ಸಲ, ಅಪಾನವು ವ್ಯಾಪಾರಮಾಡುವಾಗ ಒಂದುಸಲ– ಹೀಗೆ ಜಪವನ್ನು ಮನಸ್ಸಿನಲ್ಲಿಯೇ ಉಚ್ಚರಿಸುತ್ತಾ ಪ್ರಾಣಾಪಾನವೃತ್ತಿಗಳೆರಡೂ ಜಪವೇ ಎಂಬ ಭಾವನೆಯು ನೆಲೆನಿಂತುಕೊಳ್ಳುವವರೆಗೂ ಅಭ್ಯಾಸಮಾಡಬೇಕು. ಆ ಅಭ್ಯಾಸವು ಅಳವಟ್ಟ ಬಳಿಕ ಮನೋವೃತ್ತಿಗಳಿಗೂ ಅದನ್ನು ಹೊಂದಿಸುವ ಅಭ್ಯಾಸವನ್ನು ಮಾಡಬೇಕು. ಮನಸ್ಸಿನ ವೃತ್ತಿಯು ಎದ್ದುಕೊಂಡರೆ ಕೂಡಲೆ ನಾಮಸ್ಮರಣೆಯನ್ನು ಮಾಡಿಕೊಂಡು ಇದು ಭಗವಂತನ ನಾಮವೇ ಎಂದು ಭಾವಿಸಿಕೊಳ್ಳಬೇಕು. ವೃತ್ತಿಯು ಎದ್ದರೆ, ವೃತ್ತಿಯು ಮರೆಯಾದರೆ, ಯಾವಾಗಲೂ ಅವೆರಡರಲ್ಲಿಯೂ ನಾಮದೃಷ್ಟಿಯನ್ನೇ ಮಾಡಿಕೊಳ್ಳುತ್ತಾ ಇದ್ದರೆ ನಾಮಾತ್ಮಕವೃತ್ತಿಯಲ್ಲದೆ ಮತ್ತೆ ಯಾವ ವೃತ್ತಿಯೂ ಏಳದೆ ಇರುವಂತೆ ಆಗುತ್ತದೆ. ಕೊನೆಗೆ ವೃತ್ತಿಗಳ ಏಳುಬೀಳುಗಳೆರಡಕ್ಕೂ ಸಾಕ್ಷಿಯಾಗಿರುವ ಚೈತನ್ಯವೇ ಭಗವನ್ನಾಮವು, ನಾಮಕ್ಕೂ ನಾಮಿಗೂ ಯಾವ ಭೇದವೂ ಇಲ್ಲ– ಎಂಬ ಭಾವನೆಯನ್ನು ಎಬ್ಬಿಸಿಕೊಳ್ಳಬೇಕು. ಹೀಗೆ ಮಾಡುತ್ತಾಹೋದರೆ ಭಗವಂತನ ಅನುಗ್ರಹದಿಂದ ಭಗವಂತನ ಚಿಂತನೆಯಲ್ಲಿಯೇ ಮುಳುಗಿ ಭಗವನ್ಮಯನಾಗುವನು. 'ಇದು ನಾಮಮಾತ್ರವಲ್ಲವೆ ?'– ಎಂದು ಮಾತ್ರ ತಿರಸ್ಕಾರಮಾಡಬಾರದು. ಶ್ರದ್ಧೆಯೇ ಇಲ್ಲಿ ಮುಖ್ಯ. ಅಮೂಲ್ಯವಾದ ರತ್ನವನ್ನು ಹೇಗೆ ಭದ್ರವಾದ ಭರಣಿಯಲ್ಲಿಟ್ಟು ಅದನ್ನು ಮತ್ತೊಂದು ಭದ್ರವಾದ ಪೆಟ್ಟಿಗೆಯಲ್ಲಿಟ್ಟುಕೊಂಡು ಕಾಪಾಡಿಕೊಳ್ಳುವೆವೋ ಹಾಗೆ ನಾಮವನ್ನು ನಮ್ಮ ಅಂತರ್ಹೃದಯದಲ್ಲಿಟ್ಟುಕೊಂಡು ಕಾಪಾಡಿಕೊಳ್ಳಬೇಕು. ಹೀಗಾದರೆ ನಾಮವು ಪರಮಪುರುಷಾರ್ಥಪ್ರಾಪ್ತಿಯಾಗುವವರೆಗೂ ನಮ್ಮನ್ನು ಕೈಬಿಡುವದಿಲ್ಲ.

**ಧ್ಯಾನ** ಪರಮಾತ್ಮನ ಚಿಂತನೆಯು ಪ್ರತ್ಯಯಾಂತರದ ವ್ಯವಧಾನವಿಲ್ಲದೆ ಧಾರಾಕಾರವಾಗಿ ಸಾಗಿದರೆ 'ಧ್ಯಾನ'ವೆನಿಸುತ್ತದೆ. ಮತಗಳಲ್ಲಿ ಧ್ಯಾನವನ್ನು ಹೇಳಿರುತ್ತದೆ. ವ್ರತಪೂಜಾದಿಗಳಲ್ಲಿಯೂ ಧ್ಯಾನವನ್ನು ಮೊದಲು ಮಾಡಿಕೊಳ್ಳಬೇಕೆಂದು ಹೇಳಿರುತ್ತಾರೆ ; ಆದರೆ ಅದರ ಗುಟ್ಟು ನಮಗೆ ಗೊತ್ತಿಲ್ಲದ್ದರಿಂದ ಧ್ಯಾನಶ್ಲೋಕವನ್ನು ಹೇಳಿ ಮಂತ್ರಾಕ್ಷತೆಯನ್ನು ದೇವರ ಬಿಂಬದಮೇಲೆ ಹಾಕಿಬಿಡುತ್ತೇವೆ. ಪರಮಾತ್ಮನು ಎಂದರೆ ನಮ್ಮ ನಿಜವಾದ ಆತ್ಮನು. ಆತ್ಮನೇ ಸಗುಣರೂಪದಿಂದಲೂ ನಿರ್ಗುಣರೂಪದಿಂದಲೂ ನಮ್ಮನ್ನು ಅನುಗ್ರಹಿಸುತ್ತಿರುತ್ತಾನೆ ; ಆತನೇ ಸರ್ವಜಗದ್ರೂಪದಲ್ಲಿಯೂ ಇರುತ್ತಾನೆಂದು ಒಂದುಸಲ ಹೇಳಿದ್ದಾಗಿದೆ. ಹೀಗಿದ್ದರೂ ಸರ್ವಾಂತರನಾಗಿರುವ ಆತನ ಪರಮಾರ್ಥಸ್ವರೂಪದಲ್ಲಿಯೇ ಮನಸ್ಸಿಡುವದಕ್ಕೆ ಮಾಡುವ ಪ್ರಯತ್ನವಿಶೇಷವನ್ನು ಧ್ಯಾನವೆಂದು ಕರೆಯು

ತ್ತಾರೆ. ಸಗುಣಸಾಕಾರರೂಪವಾದರೆ ಅದನ್ನು ಭಾವನಾಬಲದಿಂದ ಹೃದಯದಲ್ಲಿ ನೆಲೆನಿಲ್ಲಿಸಿಕೊಂಡು ತನ್ಮಾತ್ರದಲ್ಲಿ ಮನಸ್ಸು ನಿಲ್ಲುವವರೆಗೂ ಅಭ್ಯಾಸಮಾಡಬೇಕು. ನಿರ್ಗುಣಚಿಂತನವನ್ನು ಮಾಡುವವರು 'ಆತ್ಮನ್ಯೇವ ಮನಃ ಕೃತ್ವಾ ನ ಕಿಞ್ಚಿದಪಿ ಚಿನ್ತಯೇತ್' (ಗೀ. ೬–೨೫) ಎಂಬ ಉಪದೇಶವನ್ನು ಮನದಂದುಕೊಂಡು ಗುರೂಪದೇಶದಿಂದ ಮನಸ್ಸಿನ ವಿಕ್ಷೇಪಾದಿಗಳನ್ನು ಕಳೆದುಕೊಂಡು ವೈರಾಗ್ಯ ಮತ್ತು ಅಭ್ಯಾಸ– ಇವುಗಳ ಅನುಸರಣೆಯಿಂದ ಮನಸ್ಸನ್ನು ವಶಗೊಳಿಸಿಕೊಂಡು ಅದನ್ನು ಆತ್ಮನಲ್ಲಿಯೇ ಲಯಗೊಳಿಸಿಕೊಳ್ಳಬೇಕು. ಎಲ್ಲಾ ಅಧ್ಯಾತ್ಮಸಾಧನಗಳೂ ಮನಸ್ಸನ್ನು ಪ್ರತ್ಯಙ್ಮುಖವಾಗಿ ಮಾಡಿ ಆತ್ಮನಲ್ಲಿ ನಿಲ್ಲಿಸಿಕೊಳ್ಳುವ ಉದ್ದೇಶದಿಂದಲೇ ಉಪದಿಷ್ಟವಾಗಿರುತ್ತವೆ. ಧ್ಯಾನದಿಂದ ಸಮಸ್ತಪಾಪಗಳ ಪರಿಹಾರವಾಗುತ್ತದೆ.

> ಅತಿಪಾತಕಯುಕ್ತೋಽಪಿ ಧ್ಯಾಯನ್ನಿಮಿಷಮಚ್ಯುತಮ್ |
> ಭೂಯಸ್ತಪಸ್ವೀ ಭವತಿ ಪಙ್ಕ್ತಿಪಾವನಪಾವನಃ ||

ಎಂಥ ಅತಿಪಾತಕವನ್ನು ಮಾಡಿದ್ದರೂ ನಿಮಿಷಮಾತ್ರದಷ್ಟುಕಾಲ ಪರಮಾತ್ಮನನ್ನು ಧ್ಯಾನಮಾಡಿದರೂ ಹೆಚ್ಚಿನ ತಪಸ್ಸನ್ನು ಮಾಡಿದವನಾಗುವನು, ಪಙ್ಕ್ತಿಪಾವನರೆನಿಸಿಕೊಂಡವರನ್ನು ಪವಿತ್ರಗೊಳಿಸುವಷ್ಟು ಶುದ್ಧನಾಗುವನು– ಎಂದು ಪುರಾಣವಚನವಿದೆ. ಯಾವನು ಮುಹೂರ್ತಮಾತ್ರದವರೆಗೆ ಪರಮಾತ್ಮನಲ್ಲಿ ಮನಸ್ಸಿಟ್ಟುಕೊಂಡಿರುವನೋ ಅವನಿಗೆ ಸಮಸ್ತತೀರ್ಥಗಳಲ್ಲಿಯೂ ಸ್ನಾನಮಾಡಿದ ಪುಣ್ಯವೂ ಸರ್ವಭೂಮಿಯನ್ನೂ ದಾನಮಾಡಿದ ಫಲವೂ ಬರುವದು– ಎಂದು ಮುಂತಾಗಿ ಧ್ಯಾನದ ಮಹಿಮೆಯನ್ನು ಬಲ್ಲವರು ಕೊಂಡಾಡಿರುತ್ತಾರೆ. ಮನಸ್ಸು ಪರಮಾತ್ಮನ ಧ್ಯಾನದ ಬಲದಿಂದ ಪರಮಾತ್ಮನಲ್ಲಿಯೇ ಒಂದಾಗಿ ಆತ್ಮನೊಬ್ಬನೇ ಸತ್ಯವೆಂಬ ಜ್ಞಾನವನ್ನು ಪಡೆದು ಕಡೆಗೆ ಅವನಲ್ಲಿಯೇ ಒಂದಾಗುವದು.

ಸರ್ವಪಾಪಗಳಿಗೂ ಮೂಲವು ದೇಹಾತ್ಮಬುದ್ಧಿ. ಮನುಷ್ಯನು ತನಗೂ ಅರಿವಿಲ್ಲದೆ ಕುರಿಯನ್ನು ಕೊಬ್ಬಿಸಿ ಮಾರಿಗೆ ಬಲಿಯಾಗಿ ಕೊಡುವಂತೆ ದೇಹವನ್ನು ಪಾಪದಿಂದ ಪುಷ್ಟಿಗೊಳಿಸಿಕೊಂಡು ಕೊನೆಗೆ ಮೃತ್ಯುವಶನಾಗುವನು ; ಪ್ರಯತ್ನಪೂರ್ವಕವಾಗಿ ಮನಸ್ಸನ್ನು ಒಳಗಡೆಗೆ ತಿರುಗಿಸಿಕೊಂಡು ಆತ್ಮನಲ್ಲಿಯೇ ಇಟ್ಟು 'ನಿಷ್ಪನ್ನಂ ಬ್ರಹ್ಮ ತತ್ತದಾ' ಎಂದಿರುವಂತೆ ಪರಮಾತ್ಮನಲ್ಲಿಯೇ ಒಂದುಗೂಡಿಸಿಕೊಂಡರೆ ಕೃತಕೃತ್ಯನಾಗುವನು. ಇಂಥ ಸ್ಥಿತಿಯು ಬಾರದೆಇದ್ದರೂ ಸಾಧನೆಯ ಆನಂದವನ್ನು ಪಡೆದುಕೊಂಡರೂ ವ್ಯವಹಾರದ ಕ್ಷಣಿಕಸುಖದ ತುಚ್ಛತನವು ಗೊತ್ತಾಗುವದು. ಸಾಧನವು ಮೊದಮೊದಲು ಕಷ್ಟವಾಗಿ ತೋರಿದರೂ ಅವು ಅಳವಟ್ಟಂತೆಲ್ಲ ಸುಖಪ್ರದವಾಗುವದು. ಸಿದ್ಧನೇ ಆದರಂತೂ ಅವನು ತಾನು ಕೃತಕೃತ್ಯನು, ಮಿಕ್ಕವರನ್ನೂ ಸಂಸಾರದುಃಖದಿಂದ ಪಾರುಮಾಡು

ತ್ತಾನೆ. ಅವನ ದರ್ಶನ, ಅವನೊಡನೆ ಸಂಭಾಷಣೆ, ಅವನನ್ನು ನಮಸ್ಕರಿಸು ವದು- ಮುಂತಾದವುಗಳು ಸಂಸಾರಿಗಳ ತಾಪತ್ರಯವನ್ನು ಪರಿಹರಿಸುತ್ತ ಭಗವಂತನಿಗೂ ಇಂಥ ಭಕ್ತರಿಗೂ ಯಾವ ಭೇದವೂ ಇಲ್ಲ. ಆದ್ದರಿಂದ ಅಂಥವರ ಸಂಗವನ್ನು ಪಡೆದು ಸಾಧನಾನಂದವನ್ನು ಕಂಡುಕೊಳ್ಳಬೇಕು

---

# ೫೨. ಏಕತ್ವವೂ ನಾನಾತ್ವವೂ

(9—9—62)

ವೇದಾಂತವು ಮನುಷ್ಯನ ಇಡಿಯ ಜೀವನಕ್ಕೆ ಸಂಬಂಧಿಸಿರುವದರಿಂದ ಜೀವಂತದರ್ಶನವಾಗಿದೆ ಎಂಬುದನ್ನು ಬಗೆಬಗೆಯಿಂದ ತಿಳಿಸಿದ್ದಾಗಿದೆ. ತರ್ಕ ಪ್ರಧಾನವಾದ ದರ್ಶನಗಳೂ, ನಮ್ಮ ದೇಶದಲ್ಲಿದ್ದು ಈಗ ಅದರ್ಶನವಾಗಿರುವ ದರ್ಶನಗಳೂ, ಜೀವಂತವಲ್ಲವೆನ್ನುವದಕ್ಕೆ ಕಾರಣವನ್ನು ಕೊಟ್ಟಿದ್ದಾಯಿತು. ಮತಗಳು ಹಿಂತೆ ಕೆಲವುಕಾಲ ಜನರಿಗೆ ಸಹಾಯಮಾಡಿದ್ದರೂ ಈಗ್ಗೆ ಕುಂಟು ಕುದುರೆಯಂತೆ ನಡೆಯುತ್ತಿವೆ ಎಂಬುದನ್ನು ತಿಳಿಸಿದ್ದಾಯಿತು. ವೇದಾಂತವು ಎಲ್ಲಾ ದರ್ಶನಗಳಲ್ಲಿಯೂ ಮತಗಳಲ್ಲಿಯೂ ಇರುವ ಸರ್ವಸಮ್ಮತಾಂಶಗಳನ್ನು ಆದರಿಸಿ ಅವಕ್ಕೆ ಜೀವಕಳೆಯನ್ನು ಕೊಡುವದಕ್ಕೆ ಶಕ್ತವಾಗಿದೆ ಎಂಬುದನ್ನೂ ತಿಳಿಸಿದ್ದಾಯಿತು. ಈ ವೇದಾಂತವು ಹೆಸರಿಗೆ ತಕ್ಕಂತೆ ವೇದದಿಂದ ಹುಟ್ಟಿದ ದರ್ಶನವಾದರೂ ವೇದವನ್ನು ಅಧ್ಯಯನಮಾಡದೆ ಇರುವವರಿಗಾಗಲಿ, ವೇದಾಧಿ ಕಾರವಿಲ್ಲದವರಿಗಾಗಲಿ ಹೊಂದುವದಲ್ಲ- ಎನ್ನುವಹಾಗಿಲ್ಲ. ಏಕೆಂದರೆ ಅನು ಭವಾನುಸಾರವಾದ ವಿಚಾರಕ್ರಮದಿಂದ ಎಲ್ಲರೂ ಇದನ್ನು ಉಪಯೋಗಿಸಿಕೊಂಡು ಪುರುಷಾರ್ಥವನ್ನು ಪಡೆದುಕೊಳ್ಳುವದಕ್ಕೆ ಅವಕಾಶವಿದೆ.

ಇಲ್ಲಿ ಒಂದು ಸಂಶಯ. ಸಾಧನವೆಂಬುದು ದ್ವೈತವನ್ನವಲಂಬಿಸಿದೆ ; ಇದನ್ನು ಮಾಡಿ ಇದನ್ನು ಪಡೆಯಬೇಕು ಎಂಬುದೇ ಸಾಧನೋಪದೇಶ. ಆದರೆ ವೇದಾಂತವೆಂಬುದು ಏಕತ್ವದರ್ಶನವು. ಇದಕ್ಕೆ ಸಾಧನದ ಆವಶ್ಯಕತೆಯೇನು? ಸ್ವಾಭಾವಿಕಬುದ್ಧಿಗೆ ನಾನಾತ್ವವೇ ಸರಿಯೆಂದು ತೋರುತ್ತದೆ ; ಆದರೆ ಅನೇಕ ದರ್ಶನಕಾರರು ಏಕತ್ವವನ್ನು ಹೇಳುತ್ತಾರೆ, ವೇದಾಂತವಂತೂ ಕಟ್ಟುನಿಟ್ಟಾಗಿ ಏಕತ್ವವೇ ಪರಮಾರ್ಥವೆನ್ನುತ್ತಿದೆ. ಇವುಗಳಲ್ಲಿ ಯಾವದು ಪರಮಾರ್ಥ, ಏಕೆ? ಈ ಶಂಕೆಗೆ ಆಗಲೆ ಉತ್ತರವನ್ನು ಹೇಳಿಯೇ ಇದೆಯಾದರೂ ಕಬ್ಬಿಣದ ಕಂಬ ವನ್ನು ಭದ್ರವಾಗಿ ನಿಲ್ಲಿಸುವಂತೆ ಏಕತ್ವವಾದವೇ ಸಿದ್ಧಾಂತವೆಂಬುದನ್ನು ನಿಶ್ಚ ಯಿಸಿಕೊಡುವದಕ್ಕೂ ಈ ಸಿದ್ಧಾಂತದಲ್ಲಿ ಸಾಧನಕ್ಕೆ ಯಾವ ಸ್ಥಾನವಿದೆ ಎಂಬು ದನ್ನು ತಿಳಿಸುವದಕ್ಕೂ ಮತ್ತೆ ಶಂಕೆಯನ್ನು ಎಬ್ಬಿಸಿದೆ.

ಏಕತ್ವವಾದಕ್ಕೆ ಹೆಚ್ಚು ಸಂಭಾವನಾಯುಕ್ತಿಯಿದೆಯೊ, ನಾನಾತ್ವವಾದಕ್ಕಿದೆಯೊ ?– ಎಂದರೆ ತಟ್ಟನೆ ಉತ್ತರವನ್ನು ಹೇಳುವದಕ್ಕೆ ಆಗುವದಿಲ್ಲ. ಇಂದ್ರಿಯಗಳಿಂದ ನೋಡುವಾಗ ಪ್ರಪಂಚವು ನಾನಾರೂಪವಾಗಿಯೇ ಇರುತ್ತದೆ. ಹೊಸಹೊಸದಾಗಿ ರೂಪಾಂತರವನ್ನು ಹೊಂದುತ್ತಿರುತ್ತದೆ. ಆದ್ದರಿಂದ ನಾನಾತ್ವವೇ ಸ್ವಾಭಾವಿಕ, ಅದೇ ಪರಮಾರ್ಥವೆನ್ನುವದು ಯುಕ್ತ– ಎನಿಸುತ್ತದೆ ಆದರೆ ವಿಚಾರಕನ ಬುದ್ಧಿಯು ಇಷ್ಟೊಂದು ವೈಚಿತ್ರ್ಯವಿರುವ ಪ್ರಪಂಚವನ್ನು ಇದ್ದದ್ದು ಇದ್ದಂತೆ ಗ್ರಹಿಸಲಾರದೆ 'ಇದೆಲ್ಲ ಯಾವದೋ ಒಂದೇಒಂದು ಪದಾರ್ಥದಿಂದ ಉಂಟಾಗಿದೆ ಎಂಬುದು ನಿಜವಾದರೆ, ನಾನಾತ್ವದ ತತ್ತ್ವವನ್ನು ಅರಿತುಕೊಳ್ಳುವದು ಎಷ್ಟು ಸುಲಭವಾದೀತು !' ಎಂದುಕೊಳ್ಳುತ್ತದೆ. ಈ ಏಕತ್ವಭಾವನೆಯ ಸೌಲಭ್ಯದಿಂದ ಆಕೃಷ್ಟರಾಗಿ ಅನೇಕ ವಿಚಾರದಕ್ಷರು ಇದನ್ನೇ ಅಪ್ಪಿಕೊಂಡಿರುತ್ತಾರೆ. ಈಶ್ವರನೇ ಮೂಲತತ್ತ್ವವೆಂದು ಮತಸ್ಥಾಪಕರು, ಶಕ್ತಿಯೇ ಮೂಲತತ್ತ್ವವೆಂದು ಭೌತಿಕವಿಜ್ಞಾನವಾದಿಗಳು, ಸ್ವತಂತ್ರವಾದ ನಿರಪೇಕ್ಷತತ್ತ್ವ (Absolute) ಎಂದು ತತ್ತ್ವವಿಚಾರಕರು –ಹೀಗೆ ಆ ಮೂಲತತ್ತ್ವಕ್ಕೆ ಬೇರೆಬೇರೆಯ ಹೆಸರನ್ನು ಕೊಟ್ಟಿರುತ್ತಾರೆ.

ಇನ್ನು ನಾನಾತ್ವವಾದಿಗಳಿಗೇನೂ ಕಡಿಮೆಯಿಲ್ಲ. ಅವರು ದ್ವೈತಕ್ಕೆ ಇರುವ ಆಧಾರವು ಏಕತ್ವಕ್ಕೆ ಒಂದಿಷ್ಟೂ ಇಲ್ಲ ಎಂದೇ ನಿಶ್ಚಯಿಸಿಕೊಂಡಿರುತ್ತಾರೆ. ಮೂಲತತ್ತ್ವವು ಯಾರಿಗೂ ಗೋಚರಿಸುವಂತಿಲ್ಲ ; 'ಗೋಚರಿಸುತ್ತಿರುವದೆಲ್ಲ ಬರಿಯ ತೋರಿಕೆ, ಅದು ಪರಮಾರ್ಥವಲ್ಲ' ಎಂಬ ವಾದವನ್ನು ಹೇಗೆ ಒಪ್ಪುವದಕ್ಕಾದೀತು ? ಪ್ರಪಂಚವು ಒಂದೇ ಆಗಿದ್ದರೆ, ಅದು ಅನೇಕವಾದದ್ದು ಹೇಗೆ ? –ಎಂದು ದ್ವೈತಿಗಳು ಆಕ್ಷೇಪಿಸುವರು. 'ಒಂದುಬಗೆಯ ವಾಯುವೇ ಮೊದಲು ಇತ್ತು ; ಅದರಿಂದಲೇ ಈ ವಿಚಿತ್ರಪ್ರಪಂಚವು ಕ್ರಮಕ್ರಮವಾಗಿ ಆಯಿತು' ಎಂಬ ವಿಜ್ಞಾನವಾದಿಗಳ ಮತವಾಗಲಿ 'ದೇಶಕಾಲ (Space-Time)ವೆಂಬ ಮೂಲವಸ್ತುವೇ ಬಗೆಬಗೆಯ ರೂಪವನ್ನು ಹೊಂದಿದೆ' ಎಂಬುವರ ವಿಚಾರಪ್ರಣಾಳಿಯಾಗಲಿ ಸಾಮಾನ್ಯಜನರ ಮನಸ್ಸಿಗೆ ಎಂದಿಗೂ ತೃಪ್ತಿಯನ್ನು ಕೊಡಲಾರದು. ಆದ್ದರಿಂದ ನಾನಾತ್ವವು ಮೊದಲಿನಿಂದಲೂ ಹೀಗೆಯೇ ಇದ್ದುಕೊಂಡಿದೆಯೆನ್ನುವದೇ ಯುಕ್ತ ಎಂದು ಅವರ ಅಭಿಪ್ರಾಯ.

ಪಾಶ್ಚಾತ್ತ್ಯವಿಚಾರಕರ ತರ್ಕಪ್ರಧಾನವಾದ ದರ್ಶನಗಳು 'ಇತಿಹಾಸ'ಕ್ಕೆ ಸೇರಿದವು ; 'ಹೀಗಿತ್ತು' ಜನರ ವಿಚಾರ ಎಂದು ಮಾತ್ರ ನಾವು ಹೇಳಬಹುದು. ಬರ್ಕ್ಲಿ ಎಂಬಾತನು ಎಲ್ಲವೂ ಭಾವಗಳು (Ideas) ಮಾತ್ರವೇ, ಭಾವಗಳಿಗಿಂತ ವ್ಯತಿರಿಕ್ತವಾದ ವಸ್ತು (Matter) ಎಂಬುದೇ ಇಲ್ಲ ಎಂದನು ; ಕ್ಯಾಂಟ್ ಎಂಬಾತನು ಮನಸ್ಸಿನಲ್ಲಿ ಕಾಲ, ದೇಶ, ಕಾರ್ಯಕಾರಣಭಾವ– ಮುಂತಾದ

ಭಾವಗಳಿರುತ್ತವೆ ; ಇವುಗಳ ಮೂಲಕವೇ ನಾವು ಹೊರಗಿನ ಜಗತ್ತನ್ನು ಅರಿಯ ಬೇಕಾಗಿದೆ. ಆದ್ದರಿಂದ ಈ ಭಾವಗಳಿಗೆ ಸಂಬಂಧಪಡದೆ ಇರುವ ವಸ್ತುಮಾತ್ರ ವೆಂಬಿವು (Thing -in-themselves) ಹೇಗೆ ಇವೆಯೋ ಹೇಳಲಾಗುವದಿಲ್ಲ ಎಂದನು. ಹೆಗೆಲ್ ಎಂಬಾತನು– ವಿರುದ್ಧಭಾವಗಳು ಒಂದಕ್ಕೊಂದು ಸೇರಿದರೆ ಮತ್ತೊಂದು ಭಾವವುಂಟಾಗುವದು ; ಉದಾಹರಣೆಗೆ ಒಂದು ಮರದ ಪರಿಚ್ಛೇದಕ ವಿಶೇಷಣಗಳನ್ನೆಲ್ಲ ತೆಗೆದುಹಾಕಿದರೆ ವೃಕ್ಷತ್ವವೆಂಬುದುಕೂಡ ಉಳಿಯದೆ ಇರವು (Being) ಎಂಬುದು ಮಾತ್ರ ಉಳಿಯುವದು ; ಯಾವ ಅಸಾಧಾರಣಧರ್ಮವೂ ಇಲ್ಲದ ಇರವಿಗೂ ಶೂನ್ಯಕ್ಕೂ (Nothing) ಯಾವ ವೈಲಕ್ಷಣ್ಯವೂ ಇಲ್ಲವೆಂಬು ದನ್ನು ಮನೆದಂದರೆ ಇರವೆಂಬುದೇ ಇಲ್ಲದ್ದಾಗುವದು ; ಇವೆರಡು ಭಾಗಗಳನ್ನೂ ಕೂಡಿಸಿದರೆ ' ಇರವು ಇಲ್ಲದ್ದಾಯಿತು ' ಎಂದಾಗುವದರಿಂದ ' ಆಗುವದು ' (Becoming) ಎಂಬ ಭಾವವು ವ್ಯಕ್ತವಾಗುವದು. ಹೀಗೆಯೇ ವಿರುದ್ಧ ಭಾವಗಳ ಸಂಮಿಲನದಿಂದ ಮುಂದುಮುಂದಕ್ಕೆ ವಿಚಾರವನ್ನು ತಳ್ಳಿದರೆ ಸ್ವತಂತ್ರ ಭಾವ (Absolute Idea) ಎಂಬುದು ಏರ್ಪಡುವದು –ಎಂದನು. ಇಂಥ ತತ್ತ್ವವಿಚಾರಗಳಿಂದ ಏಕತ್ವವೂ ಸಿದ್ಧವಾಗುವದಿಲ್ಲ, ನಾನಾತ್ವವೂ ಸಿದ್ಧವಾಗು ವದಿಲ್ಲ. ತರ್ಕಕೌಶಲವು ಹೆಚ್ಚಬಹುದು ; ಆದರೆ ಅವುಗಳಿಂದ ಯಾವ ಪುರು ಷಾರ್ಥವೂ ದೊರಕುವಂತಿಲ್ಲ.

ಪಾಶ್ಚಾತ್ಯರಲ್ಲಿ ಕೆಲವರು ಏಕತ್ವ, ನಾನಾತ್ವ– ಎರಡನ್ನೂ ಸೇರಿಸಿಕೊಂಡಿರುವ ತತ್ತ್ವವಿಚಾರಕರೂ ಉಂಟು. ಅದನ್ನು ಆಕ್ಷೇಪಿಸಿದವರೂ ಇದ್ದಾರೆ. 'ಪ್ರಪಂಚ ದಲ್ಲಿ ಏಕತ್ವ, ನಾನಾತ್ವ– ಈ ಎರಡನ್ನೂ ಕಾಣಬಲ್ಲಾತನನ್ನು ನನಗೆ ತೋರಿಸಿರಿ, ಅವನೊಬ್ಬ ದೇವತೆಯೋ ಎಂಬಂತೆ ನಾನು ಅವನ ಅನುಯಾಯಿಯಾಗುವೆನು' ಎಂದು ಪ್ಲೇಟೊ ಹೇಳಿದನಂತೆ. ಹಾಗಾದರೆ ನಮ್ಮಲ್ಲಿ ದ್ವೈತಾದ್ವೈತಮತ ವನ್ನು ಹೇಳಿದ ಭರ್ತೃಪ್ರಪಂಚರೇ ಮೊದಲಾದವರು ಇಂಥ ದೇವತೆಗಳೇ ಆಗಿದ್ದರೆನ್ನಬೇಕಾಗುತ್ತದೆ ; ಏಕೆಂದರೆ ಅವರ ಮತವು ಹೀಗಿತ್ತು :

> ಅನೇಕಾತ್ಮಕಂ ಬ್ರಹ್ಮ, ಯಥಾ ವೃಕ್ಷೋ ಅನೇಕಶಾಖಃ, ಏವಮನೇಕಶಕ್ತಿಪ್ರವೃತ್ತಿಯುಕ್ತಂ ಬ್ರಹ್ಮ । ಅತ ಏಕತ್ವಂ ನಾನಾತ್ವಂ ಚ ಉಭಯಮಪಿ ಸತ್ಯಮೇವ ! ಯಥಾ ವೃಕ್ಷ ಇತ್ಯೇಕತ್ವಮ್, ಶಾಖಾ ಇತಿ ಚ ನಾನಾತ್ವಮ್ । ಯಥಾ ಚ ಸಮುದ್ರಾತ್ಮನಾ ಏಕತ್ವಮ್ ; ಫೇನತರಙ್ಗಾದ್ಯಾತ್ಮನಾ ನಾನಾ ತ್ವಮ್ ; ಯಥಾ ಚ ಮೃದಾತ್ಮನಾ ಏಕತ್ವಮ್, ಘಟಶರಾವಾ ದ್ಯಾತ್ಮನಾ ನಾನಾತ್ವಮ್ ॥

ಮರವೆಂಬ ರೂಪದಿಂದ ಏಕತ್ವವೂ ಕೊಂಬೆಗಳೆಂಬ ರೂಪದಿಂದ ನಾನಾತ್ವ ವೂ ಸತ್ಯವೇ. ಮರವು ಕೊಂಬೆಗಳ ರೂಪದಿಂದ ಅನೇಕವಾಗಿರುವಂತೆ ಬ್ರಹ್ಮವೂ

ಅನೇಕಾತ್ಮಕವಾಗಿರಬಹುದಾಗಿದೆ. ಸಮುದ್ರವು ಒಂದೇ ಆದರೂ ನೊರೆ, ತೆರೆ-–ಮುಂತಾದ ರೂಪದಿಂದ ಬೇರೆಬೇರೆಯಾಗಿಲ್ಲವೆ ? ಮಣ್ಣು ಆ ರೂಪದಿಂದ ಒಂದೇ ಆದರೂ ಗಡಿಗೆ, ಶ್ರಾವೆ- ಮುಂತಾದ ರೂಪದಿಂದ ಬೇರೆಬೇರೆಯಾಗಿಲ್ಲವೆ ? ಹೀಗೆಯೇ ಪರಮಾರ್ಥವು ಒಂದೂ ಆಗಿ ನಾನಾರೂಪವಾಗಿಯೂ ಇರಬಹುದಾಗಿದೆ –ಎಂಬಿದು ''ವರ ವಾದವಾಗಿತ್ತು.

ತರ್ಕಶರಣರ ಮಾತಂತಿರಲಿ. ಈವರೆಗೆ ನಾವು ವರ್ಣಿಸಿರುವ ಅನುಭವಾನುಸಾರಿಯಾದ ಅದ್ವೈತವೇದಾಂತದಲ್ಲಿ ನಾನಾತ್ವಕ್ಕೆ ಬೆಲೆಯೇನು ? ಬೀಜದಿಂದ ಮರವಾಗುವಂತೆ ಏಕತ್ವದಿಂದ ನಾನಾತ್ವವು ಏತಕ್ಕೆ ಉಂಟಾಗಿರಬಾರದು ? ಪರಮಾರ್ಥವು ಒಂದೇ ಇದ್ದು ನಾನಾರೂಪವಾಗಿ ಪರಿಣಮಿಸಿದೆ ಎಂದು ತಿಳಿದರೆ ಏನು ತಪ್ಪು ? –ಎಂದು ಯಾರಾದರೂ ಕೇಳಬಹುದು. ಆದರೆ ಬೀಜವು ವೃಕ್ಷವಾದರೆ ಬೀಜವೇ ಇಲ್ಲವಾಗುವಂತೆ ಪರಮಾರ್ಥವು ದ್ವೈತಪ್ರಪಂಚವಾಗಿ ಪರಿಣಮಿಸಿದರೆ ತಾನೇ ಇಲ್ಲವಾಗಬೇಕಾಗುವದು. ವಿಕಾರವಾಗುವದಕ್ಕೆ ಕಾಲವು ಬೇಕು ; ಆಗ ಏಕತ್ವವೊಂದೇ ವೊದಲಿತ್ತು ಎನ್ನುವದಕ್ಕೆ ಆಗುವದಿಲ್ಲ.

ಏಕತ್ವನಾನಾತ್ವವಾದದಲ್ಲಿ ಒಂದು ಒಳಜಗಳವನ್ನೂ ಸೇರಿಸಿಕೊಳ್ಳಬಹುದು. ನಾನಾತ್ವವನ್ನು ಕಾಣುವದಕ್ಕೆ ಮನಸ್ಸು ಬೇಕಷ್ಟೆ ? ವೊದಲು ಎಲ್ಲವೂ ಭೌತಿಕವಸ್ತುವಾಗಿದ್ದು ಕ್ರಮಕ್ರಮವಾಗಿ ಮನಸ್ಸಾಯಿತೊ, ಎಲ್ಲವೂ ಮನಸ್ಸಾಗಿದ್ದು ಆದರಿಂದಲೇ ಭೌತಿಕವಾಯಿತೊ ? ಭೌತಿಕವಿಜ್ಞಾನದ ಪ್ರಕಾರ ಮನಸ್ಸುಕೂಡ ಭೌತಿಕವೇ, ಚೇತನವಸ್ತುಗಳು ಅಚೇತನದ ವಿಕಾರವೇ ! ಇದು ಸಾಮಾನ್ಯ ಜನರಿಗೆಕೂಡ ಒಗ್ಗುವದಿಲ್ಲ ; ಅಚೇತನವಾದ ಕಲ್ಲುಮಣ್ಣು ಮುಂತಾದವುಗಳಿಂದ ಏನುಮಾಡಿದರೆತಾನೆ ಚೇತನವು ಹೊರಕ್ಕೆ ಬಂದೀತು ? ಭೌತಿಕವಸ್ತುವೆಂದು ಕಲ್ಪಿಸುವದಕ್ಕೇ ವೊದಲು ಮನಸ್ಸುಬೇಕು–ಎಂದು ವಿಜ್ಞಾನವಾದಿಗಳು ಹೇಳಿದರೆ, ಇದ್ದ ವಸ್ತುವನ್ನಲ್ಲವೆ, ಮನಸ್ಸು ತಿಳಿಯುವದು?–ಎಂದು ಪ್ರತಿವಾದಿಗಳು ತರ್ಕಿಸುವರು. ಈ ಯುಕ್ತಿಪ್ರತ್ಯುಕ್ತಿಗಳಲ್ಲಿ ಇಬ್ಬರಿಗೂ ಸಂಮತವಾಗುವಂತೆ ಹೇಗೆ ನಾವು ಏಕತ್ವವಾದವನ್ನಾಗಲಿ ನಾನಾತ್ವವಾದವನ್ನಾಗಲಿ ಪ್ರತಿಪಾದಿಸುವದಾದೀತು ?

ಅದ್ವೈತವೇದಾಂತದಲ್ಲಿ ಇಂಥ ಪುರುಷಮತಿಯ ಕಲ್ಪನೆಗಳಿಗೆಲ್ಲ ಅವಕಾಶವಿಲ್ಲ. ಅದಕ್ಕೆ ಅನುಭವವೊಂದೇ ಪ್ರಧಾನದಾದ ಆಧಾರ. ನಮಗೆ ದ್ವೈತವು ತೋರುವದು ಎಚ್ಚರದವಸ್ಥೆಯಲ್ಲಿ ಮಾತ್ರ ; ಅಲ್ಲಿಯೇ ಮನಸ್ಸು ಗ್ರಾಹಕವಾಗಿಯೂ ಬಾಹ್ಯಪ್ರಪಂಚವು ಗ್ರಾಹ್ಯವಾಗಿಯೂ ತೋರುವದು. ಕನಸಿನಲ್ಲಿ ಈ ಎರಡೂ ಹೋಗಿ ಮಿಥ್ಯಾಮನಸ್ಸು, ಮಿಥ್ಯಾಬಾಹ್ಯಪ್ರಪಂಚ- ಎಂಬ ಪ್ರಾತಿಭಾಸಿಕ ಪ್ರಪಂಚವುಮಾತ್ರ ಕಾಣಿಸಿಕೊಳ್ಳುತ್ತದೆ. ಆದರ್ಶನವೃತ್ತಿಯಾದ ಸುಷುಪ್ತಿಯಲ್ಲಿ ಗ್ರಾಹ್ಯವೂ ಇಲ್ಲ, ಗ್ರಾಹಕವೂ ಇಲ್ಲ. ಸುಷುಪ್ತಿಯಲ್ಲಿಮಾತ್ರ ನಾವು ಒಬ್ಬರೇ ಇರುತ್ತೇವೆ, ನಮಗಿಂತ ವ್ಯತಿರಿಕ್ತವಾದ ನಾನಾರೂಪವಾದ ಪ್ರಪಂಚವು ಇರುವದೇ

ಇಲ್ಲ. ಕಪ್ಪೆಯಚಿಪ್ಪಿನಲ್ಲಿ ತೋರಿದ ಬೆಳ್ಳಿಯು ನಿಜವಾಗಿ ಕಪ್ಪೆಯಚಿಪ್ಪೇ ಎಂದಾಗ ಅದು ಎಲ್ಲಿಗೆ ಹೋಯಿತು ?– ಎಂದು ಯಾರೂ ಕೇಳುವದಿಲ್ಲಿವಷ್ಟೆ ? ಇದರಂತೆ, ಎಚ್ಚರದಲ್ಲಿ ತೋರುತ್ತಿದ್ದ ಪ್ರಪಂಚವು ಸುಷುಪ್ತಿಯಲ್ಲಿ ಎಲ್ಲಿ ಹೋಯಿತು ? –ಎಂದು ಕೇಳುವ ಪ್ರಶ್ನೆಯೂ ಸರಿಯಲ್ಲ. ವೇದಾಂತಿಗಳು ಶುಕ್ತಿ ರಜತ, ರಜ್ಜುಸರ್ಪ, ಅವಸ್ಥಾತ್ರಯ– ಎಂಬ ಅನುಭವಸಂವಾದವಾದ ಮಾತನ್ನು ಹೇಳಿದರೂ ನಾನಾತ್ವವಾದಿಗಳು ಸಿಟ್ಟಿಗೇಳುತ್ತಾರೆ. ಆದರೆ ತೋರಿಕೆಯ ರಜತಾದಿ ಗಳಂತೆ ತೋರಿಕೆಯ ಪ್ರಪಂಚವು ಆತ್ಮನಲ್ಲಿ ಸ್ವಲ್ಪವೂ ತೋರದೆ ಆತ್ಮನೊಬ್ಬನೇ ಇರುತ್ತಾನೆಂಬುದು ಸಾರ್ವತ್ರಿಕಾನುಭವಕ್ಕೆ ಸೇರಿದ್ದು. ನಾನಾತ್ವವಾದಿಗಳ ಸುಷುಪ್ತಿಯಲ್ಲಿಯೂ ದ್ವೈತವು ಕಾಣಿಸುತ್ತಿರುವದಿಲ್ಲ. ಹೀಗಿರುವದರಿಂದ ಏಕತ್ವವೇ ಸಿದ್ಧಾಂತವೆಂದು ಅನುಭವಾನುಸಾರಿಗಳೆಲ್ಲರೂ ಒಪ್ಪಬೇಕು.

---

## ೫೩. ವೇದಾಂತಸಂಮತವಾದ ಏಕತ್ವವಾದ

(10–9–62)

ನಾನಾತ್ವವು ಪರಮಾರ್ಥವೆನ್ನಬೇಕೊ, ಏಕತ್ವವೇ ಪರಮಾರ್ಥವೆನ್ನಬೇಕೊ? –ಎಂಬುದನ್ನು ತರ್ಕದೃಷ್ಟಿಯಿಂದ ನೋಡಿದರೆ, ಏಕತ್ವದಲ್ಲಿ ಲಾಘವವಿದೆ. ಆದರೆ ನಾನಾತ್ವವು ತೋರುತ್ತಿರುತ್ತದೆ. ಇಲ್ಲಿ ಹೇಗೆ ನಿರ್ಣಯಿಸಬೇಕು ? ಏಕವಸ್ತು ವಿನಲ್ಲಿ ನಾನಾತ್ವವೂ ಮೊದಲೇ ಸೇರಿಕೊಂಡು ಇದ್ದರೆ ಅದು ಏಕವೆನ್ನುವದಕ್ಕೇ ಬರುವದಿಲ್ಲ ; ಅದರೊಳಗೆ ನಾನಾತ್ವವು ಇರಲೇಇಲ್ಲವೆಂದರೆ ಅಂಥ ಏಕತ್ವದಿಂದ ನಾನಾರೂಪವಾದ ಪ್ರಪಂಚವು ಬಂದದ್ದು ಹೇಗೆ ? –ಎಂಬ ಆಕ್ಷೇಪವು ಉಳಿದು ಕೊಳ್ಳುತ್ತದೆ.

ನಾನಾತ್ವವೆಂಬ ಭಾವನೆಯಲ್ಲಿ ಸಂಖ್ಯೆಯ ಭಾವನೆಯೂ ಸೇರಿರುತ್ತದೆ. ಆದರೆ ಸಂಖ್ಯೆಯೆಂಬುದು ದೇಶದಲ್ಲಿರುವ ವಸ್ತುಗಳಿಗೆ ಅಥವಾ ಕಾಲದಲ್ಲಾಗುವ ಘಟನೆಗಳಿಗೆ ಮಾತ್ರ ಸಲ್ಲುತ್ತದೆ. ಆದ್ದರಿಂದ ಏಕತತ್ತ್ವದಿಂದ ನಾನಾತ್ಮಕ ಪ್ರಪಂಚವಾಯಿತು ಎಂದರೆ ಕಾಲದೇಶದಲ್ಲಿರುವ ಅನೇಕ ವಸ್ತುಗಳು ಆದವು ಎಂದಂತೆ ಆಗುತ್ತದೆ. ಆದ್ದರಿಂದ ನಾನಾತ್ವವಾಗಿ ಪರಿಣಮಿಸುವ ಏಕವಸ್ತುವಿ ಗಿಂತ ಹೊರಚ್ಚಾಗಿ ಕಾಲದೇಶಗಳಿವೆ ಎಂದಾಗುತ್ತದೆ, ಆಗ ಮೊದಲು 'ಒಂದೇ ಒಂದು ವಸ್ತುವಿತ್ತು' ಎಂಬುದು ಉಪಚಾರಕ್ಕೆ ಹೇಳಿದ ಮಾತಾಗುತ್ತದೆ; ಏಕೆಂದರೆ ಅದರ ಜೊತೆಗೆ ದೇಶಕಾಲಗಳು ಬೇರೆ ಇದ್ದವು ಎಂದು ಒಪ್ಪಿರುತ್ತೇವೆ. ಕಾರ್ಯ ಕ್ಕಿಂತ ನಿಯತವಾಗಿ ಪೂರ್ವಕಾಲದಲ್ಲಿರುವದಲ್ಲವೆ, ಕಾರಣ ? ಹೀಗೆ ನೋಡಿದರೆ

ಏಕವಸ್ತು ನಾನಾರೂಪವಾಗಿ ಪರಿಣಮಿಸಿದೆ ಎಂಬ ಮಾತು ತರ್ಕಬದ್ಧವೆಂದು ಹೇಳುವದಕ್ಕೆ ಆಗುವದೇ ಇಲ್ಲ.

ವೇದಾಂತವು ಏಕತ್ವವನ್ನು ತರ್ಕದಿಂದ ಸಿದ್ಧಾಂತಮಾಡಿ ನಮ್ಮ ಮುಂದೆ ಇಟ್ಟಿರುವದಿಲ್ಲ. ಅನುಭವಾನುಸಾರವಾಗಿ ಕಂಡ ಏಕತ್ವವನ್ನೇ ಅದು ನಮಗೆ ತೋರಿಸುತ್ತಿದೆ. ಮೊದಲು ಒಂದಾಗಿದ್ದದ್ದು ಆ ಬಳಿಕ ಒಡೆದುಕೊಂಡು ಅನೇಕವಾಗಿ ತೋರಿಕೊಂಡಿತೊ, ಅಥವಾ ತಾನೇ ನಾನಾರೂಪವಾಗಿ ಪರಿಣಮಿಸಿತೊ, ಹೇಗೆ ? ಮೊದಲು ಒಂದೇ ತತ್ತ್ವವಿದ್ದಾಗ ಅದರ ಜೊತೆಗೆ ಕಾಲವೂ ಇದ್ದಿತೊ? –ಇವೇ ಮುಂತಾದ ಪ್ರಶ್ನೆಗಳಿಗೆ ವೇದಾಂತವು ತರ್ಕದಿಂದ ಯಾವ ಉತ್ತರವನ್ನೂ ಕಲ್ಪಿಸುವದಿಲ್ಲ ಅನುಭವವನ್ನೇ ಆಧಾರವಾಗಿಟ್ಟುಕೊಂಡೇ ಹೇಳುತ್ತಿದೆ.

ಅವಸ್ಥಾತ್ರಯದ ಅನುಭವವು ಎಲ್ಲರಿಗೂ ಇದೆ. ನಾನಾತ್ವವಿರುವಲ್ಲಿ ಕಾಲವಿರಬೇಕೊ, ಬೇಡವೊ ? –ಎಂದರೆ ಸ್ವಪ್ನವನ್ನು ನೋಡಿರಿ. ಅಲ್ಲಿ ನಾನಾತ್ವವಿರುವಂತೆ ಕಾಣುತ್ತದೆ, ಕಾಲವೂ ಇರುವಂತೆ ಕಾಣುತ್ತದೆ. ಕನಸಿನಲ್ಲಿ ಒಂದು ಹಸುವು ಕರುವನ್ನು ಹಾಕಿತು ಎಂದು ಇಟ್ಟುಕೊಳ್ಳಿ ; ಆಗ ಹಸು ಮೊದಲಿತ್ತು, ಕರು ಆಮೇಲೆ ಹುಟ್ಟಿತು– ಎಂದೇ ಕಲ್ಪಿಸಿಕೊಳ್ಳುತ್ತೇವೆ. ಆದರೆ ನಿಜವಾಗಿ ಅಲ್ಲಿ ಹಸುವೂ ಇರಲಿಲ್ಲ, ಅದು ಕರುವನ್ನು ಹಾಕಲೂಇಲ್ಲ ; ಹಸು ಪೂರ್ವಕಾಲದಲ್ಲಿಯೂ, ಕರು ಅದರ ಬಳಿಕದ ಕಾಲದಲ್ಲಿಯೂ ಇದ್ದಂತೆ ತೋರಿದವು. ಅಷ್ಟೆ. ಆದ್ದರಿಂದ ಆಗ ಕಾಲವೂ ನಿಜವಾಗಿರಲಿಲ್ಲ ; ಇರುವಂತೆ ತೋರಿತು. ಅಷ್ಟೆ. ಶ್ರುತಿಯು ಸ್ವಪ್ನವನ್ನು ಹೇಗೆ ವರ್ಣಿಸುತ್ತದೆ, ನೋಡಿರಿ ;

"ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವನ್ತಿ ಅಥ ರಥಾನ್ ರಥಯೋಗಾನ್ ಪಥಃ ಸೃಜತೇ ನ ತತ್ರಾನಂದಾ ಮುದಃ ಪ್ರಮುದೋ ಭವನ್ತ್ಯಥ ಆನಂದಾನ್ ಮುದಃ ಪ್ರಮುದಃ ಸೃಜತೇ ನ ತತ್ರ ವೇಶಾನ್ತಾಃ ಪುಷ್ಕರಿಣ್ಯಃ ಸ್ರವನ್ತ್ಯೋ ಭವನ್ತ್ಯಥ ವೇಶಾನ್ತಾನ್ ಪುಷ್ಕರಿಣೀಃ ಸ್ರವನ್ತೀಃ ಸೃಜತೇ ||

ಬೃ. ೪-೩-೧೦.

ಉತೇವ ಸ್ತ್ರೀಭಿಃ ಸಹ ಮೋದಮಾನೋ ಜಕ್ಷದುತೇವಾಪಿ ಭಯಾನಿ ಪಶ್ಯನ್|| ಬೃ. ೪–೩–೧೩.

ಅಲ್ಲಿ ಗಾಡಿಗಳಿರುವದಿಲ್ಲ. ಅವಕ್ಕೆ ಕಟ್ಟುವ ಕುದುರೆಗಳಿರುವದಿಲ್ಲ ; ಆದರೂ ಅವುಗಳನ್ನು ಹುಟ್ಟಿಹಾಕಿಕೊಳ್ಳುತ್ತಾನೆ. ಅಲ್ಲಿ ಆನಂದಗಳಿಲ್ಲ, ಮೋದಪ್ರಮೋದಗಳಿಲ್ಲ, ಆದರೂ ಅವನ್ನು ಹುಟ್ಟಿಹಾಕಿಕೊಳ್ಳುತ್ತಾನೆ. ಕುಂಟೆಗಳಿರುವದಿಲ್ಲ, ಮೆಟ್ಟಿಲಭಾವಿಗಳಿರುವದಿಲ್ಲ, ಹರಿಯುವ ನದಿಗಳಿರುವದಿಗ ; ಅವುಗಳನ್ನು ಹುಟ್ಟಿಹಾಕಿಕೊಳ್ಳುತ್ತಾನೆ. ಸ್ತ್ರೀಯರೊಡನೆ ವಿನೋದದಿಂದಿರುವಂತೆ, ನಗುತ್ತಿರುವವನಂತೆ, ಅಂಜಿಕೆಯಾಗುವ ಪ್ರಾಣಿಗಳನ್ನು ಕಾಣುವಂತೆ ಕಲ್ಪಿಸಿಕೊಳ್ಳುತ್ತಾನೆ.

ಕನಸಿನಲ್ಲಿ ರಾಗದ್ವೇಷಾದಿಗಳು, ಪ್ರವೃತ್ತಿನಿವೃತ್ತಿಗಳು, ಅವುಗಳ ಫಲಗಳು– ಎಲ್ಲವೂ ಎಚ್ಚರದಲ್ಲಿರುವಂತೆಯೇ ಕಾಣುತ್ತಿರುವವು. ಆದರೆ ಅವು ಯಾವವೂ ನಿಜವಲ್ಲವೆಂದು ನಮಗೆಲ್ಲರಿಗೂ ಗೊತ್ತು. ಇದರಿಂದ ಏನು ಸಿದ್ಧವಾಯಿತು ?

ನಾನಾತ್ವವು ಇದ್ದಂತೆ ತೋರುವದೇನೂ ಏಕತ್ವಕ್ಕೆ ವಿರುದ್ಧವಲ್ಲ. 'ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ' ಎಲ್ಲಿ ಮತ್ತೊಂದು ಇರುವಂತೆ ಇರುವದೋ ಅಲ್ಲಿ ಒಬ್ಬನು ಇನ್ನೊಬ್ಬನನ್ನು ಕಾಣುವನು–ಎಂದು ಶ್ರುತಿಯು ದ್ವೈತವನ್ನು 'ಇವ'(ಅಂತೆ) ಎಂಬ ಶಬ್ದದಿಂದಲೇ ವರ್ಣಿಸುತ್ತದೆ. ಇನ್ನು ಏಕತ್ವವೆಂದರೇನು ? ಒಂದೇ ಆಗಿರುವದು ಎಂದು ಅರ್ಥವನ್ನು ಮಾಡಬಾರದು; ಏಕೆಂದರೆ ಸಂಖ್ಯೆಗೆ ಕಾಲವು ಬೇಕು ಅಥವಾ ದೇಶವು ಬೇಕು. ಕಾಲದೇಶಗಳೇ ಇಲ್ಲದ ಸುಷುಪ್ತಿಯಲ್ಲಿ 'ನಾನೊಬ್ಬನೇ ಇದ್ದೆನು' ಎಂದು ನಮ್ಮೆಲ್ಲರಿಗೂ ಅನುಭವದಲ್ಲಿದೆ. ಆದ್ದರಿಂದ ಆತ್ಮನು ಏಕನು ಎಂದು ಹೇಳುವ ವೇದಾಂತಿಗಳಿಗೂ ಮಿಕ್ಕ ತಾರ್ಕಿಕರಿಗೂ ಏಕತ್ವವೆಂಬ ಭಾವನೆಯ ವಿಷಯಕ್ಕೆ ಮತವೈಲಕ್ಷಣ್ಯವಿದೆ. ಆತ್ಮನು ದೇಶಕಾಲಗಳಲ್ಲಿಲ್ಲವಾದ್ದರಿಂದ ಅವನಿಗೆ 'ಒಂದು' ಎಂಬ ಸಂಖ್ಯೆಯು ಅಂಟಿರುವದಿಲ್ಲ. 'ನ ತ್ವೈಕಂ ತದನ್ಯತ್ ದ್ವಿತೀಯಂ ಕುತಃ ಸ್ಯಾತ್' ಆತ್ಮತತ್ತ್ವವು ಒಂದೇ ಅಲ್ಲ, ಇನ್ನು ಅದಕ್ಕೆ ಎರಡನೆಯದು ಎಲ್ಲಿಂದ ಬರಬೇಕು? ಸುಷುಪ್ತಿಯಲ್ಲಿ 'ನಾನೊಬ್ಬನೇ ಇದ್ದೆನು' ಎಂಬಲ್ಲಿ 'ನಾನು' ಎಂದು ಹೇಳಿರುವ ವಸ್ತುವೂ ದ್ವೈತಿಗಳು ಒಪ್ಪಿರುವ ನಾನಲ್ಲ ; ಏಕೆಂದರೆ ಎಚ್ಚರದಲ್ಲಿಯೂ ಕನಸಿನಲ್ಲಿಯೂ ದ್ವೈತದ ತೋರಿಕೆಯಿರುವಾಗ 'ನಾನು' ಎಂದು ಎಲ್ಲರೂ ವ್ಯವಹರಿಸುವ 'ನಾನು', 'ನೀನು', 'ಅವನು' ಎಂಬುದಕ್ಕೆ ಪ್ರತಿದ್ವಂದ್ವಿಯಾಗಿರುತ್ತದೆ ; ಆದರೆ ಸುಷುಪ್ತಿಯಲ್ಲಿ ಅನುಭವಕ್ಕೆ ಬರುವ ನಾನು ಎಂಬುದಕ್ಕೆ ಮತ್ತೊಂದರ ಅಪೇಕ್ಷೆಯಿಂದ 'ನಾನು' ಎಂಬ ಹೆಸರು ಬರುವಹಾಗಿಲ್ಲ. ಅಲ್ಲಿ ನಾನು, ನೀನು –ಎಂಬ ವಿಭಾಗವೇ ಇರುವದಿಲ್ಲ. ಅಲ್ಲಿ ನಮ್ಮ ಅನುಭವದ ಬಲದಿಂದಲೇ ನಾವು ಸುಷುಪ್ತಿಯನ್ನು 'ಅರಿತೆವು' –ಎನ್ನುತ್ತೇವೆ. ಆದರೆ ಆ ಅರಿವು 'ಆಗ ಅರಿತಿದ್ದೆನು, ಈಗ ಮರೆತಿದ್ದೇನೆ' –ಎಂಬಂಥ ಅರಿವಲ್ಲ ; ಅರಿವುಮರವೆಗಳ ವಿಭಾಗವಿಲ್ಲದ ಬರಿಯರಿವು ಅದು. ಇನ್ನೂ ಒಂದು ವಿಷಯ : ಒಂದು ಕಲ್ಲಿಗೆ ಯಾವ ಮಾತನ್ನೂ ಕೇಳುವ ಅಥವಾ ಯಾವ ವಸ್ತುವನ್ನೂ ನೋಡುವ ಚೈತನ್ಯಸ್ವರೂಪವಿರುವದಿಲ್ಲ ; ಹಾಗೆ ಕೇಳವದಕ್ಕೂ ನೋಡುವದಕ್ಕೂ ಬೇಕಾದ ಇಂದ್ರಿಯಗಳಿರುವದಿಲ್ಲ ; ಕೇಳುವ ಅಥವಾ ನೋಡುವ ಶಕ್ತಿಯೂ ಅದಕ್ಕೆ ಇರುವದಿಲ್ಲ. ಆದರೆ ಸುಷುಪ್ತಿಯಲ್ಲಿರುವ 'ನಾನು' ಎಂಬೀ ವಸ್ತುವಿಗೆ ಅರಿಯುವ ಶಕ್ತಿಯಿದೆ ; ಏಕೆಂದರೆ ಅದು ಸುಷುಪ್ತಿಯನ್ನು ಅರಿಯುತ್ತಿರುತ್ತದೆ. ಆದರೆ ಅರಿವಿಗೆ ವಿಷಯವಾದ ಹೊರಗಿನ ವಸ್ತುವಿಲ್ಲ, ಅದಕ್ಕೆ ಬೇಕಾದ ಕರಣಗಳಿಲ್ಲ, ಕರ್ತೃತ್ವವೂ ಇರುವದಿಲ್ಲ. ಹೀಗೆ ತ್ರಿಪುಟಿ

ಯಿಲ್ಲದೆ 'ಇನೆ', 'ಇಲ್ಲ'– ಎಂಬ ವಿಶೇಷರೂಪವನ್ನು ಬಿಟ್ಟಿರುವ ನಿರ್ವಿಶೇಷವಾದ ನಿರ್ವಿಕಲ್ಪಕಾನುಭವವದು.

ವೇದಾಂತವು ಒಪ್ಪಿರುವ ಏಕವೆಂಬುದು ಚಿನ್ಮಾತ್ರವಾಗಿದೆ, ಚಿದ್ಘನವಾಗಿದೆ –ಅದರಲ್ಲಿ ಅಚಿತ್ತಾದದ್ದರ ಬೆರಕೆ ಒಂದಿಷ್ಟೂ ಇಲ್ಲ; ಅಖಂಡವಾಗಿದೆ, ಅದರಲ್ಲಿ ಯಾವ ವಿಭಾಗವಾಗಲಿ ವಿಭಾಗಗಳಿಗೆ ಸಂಬಂಧವಾಗಲಿ ಇರುವದಿಲ್ಲ; ಅದು ಅಪರಿಚ್ಛಿನ್ನವಾಗಿದೆ, ದೇಶಕಾಲವಸ್ತುಗಳಿಂದ "ಲ್ಲಿಗೆ ಮುಗಿಯಿತು ಎಂಬ ಅಳತೆ ಅದಕ್ಕೆ ಇಲ್ಲ. 'ಇಂಥ ಏಕನಾದ ನಾನು ಸುಷುಪ್ತಿಯಲ್ಲಿದ್ದೆನು' ಎಂಬ ಈಗಿನ ಅನುಭವವೇ ಈಗಲೂ ಆ ನಾನು ಅಚ್ಚಳಿಯದೆ ಹಾಗೆಯೇ ಇದ್ದುಕೊಂಡಿದೆ ಎಂಬುದನ್ನು ತಿಳಿಸಿಕೊಡುತ್ತದೆ.

ಎಚ್ಚರಕನಸುಗಳಲ್ಲಿಯೂ ಈ ಅನುಭವವೊಂದೇ ಇರುತ್ತದೆ ಏಕೆಂದರೆ ಎಚ್ಚರಕ್ಕೂ ಕನಸಿಗೂ ಯಾವ ಹೆಚ್ಚುಕಡಿಮೆಯೂ ಇಲ್ಲ ; ಎಚ್ಚರವೆಂದರೆ ಯಾವದು, ಕನಸೆಂದರೆ ಯಾವದು ?– ಎಂಬುದನ್ನು ಗೊತ್ತುಮಾಡುವದಕ್ಕೆ ಬಾರದಷ್ಟು ಒಂದೇ ರೂಪದಲ್ಲಿವೆ, ಆ ಎರಡೂ ಅವಸ್ಥೆಗಳು ! ಲವಕುಶರಂತೆ ಯಾರುಯಾರೆಂಬುದು ಗೊತ್ತಾಗುವಂತಿಲ್ಲ ಎಂದರ್ಥವಲ್ಲ ; ಏಕೆಂದರೆ ಅವೆರಡೂ ಲವಕುಶರಂತೆ ಒಟ್ಟಿಗೆ ಇರುವದಿಲ್ಲ. ಯಾವದೊಂದರ ಅನುಭವವುಂಟಾದರೂ 'ಇದು ಎಚ್ಚರ' ಎಂದೇ ಆಗುತ್ತದೆ. ಇದೇ ಎಚ್ಚರಕ್ಕೆ ಹೆಗ್ಗುರುತು, ಕನಸಿಗಿಂತ ಇಲ್ಲಿ ಇದಕ್ಕೆ ವೈಲಕ್ಷಣ್ಯವಿದೆ– ಎಂದು ತೋರಿಸುವದಕ್ಕೆ ಯಾರಿಂದಲೂ ಆಗುವಂತಿಲ್ಲ. ಇಷ್ಟೇ ಅಲ್ಲ, ಎಚ್ಚರಕನಸುಗಳು ಎರಡು ಎನ್ನುವದೇ ನೊದಲು ಸರಿಯಲ್ಲ ; ಏಕೆಂದರೆ ಎಚ್ಚರ, ಕನಸು– 'ಎರಡು' ಎಂದು ಎಣಿಸುವದಕ್ಕೆ ಕಾಲವೇ ಇಲ್ಲ. ಎಚ್ಚರವು ಹೊರಗಿನ ಅರಿವು, ಎಲ್ಲರಿಗೂ ಸಮಾನವಾದ ಪ್ರಪಂಚವು ಅಲ್ಲಿ ಕಾಣುತ್ತದೆ ; ಕನಸಿನಲ್ಲಿ ಹಾಗಲ್ಲ, ಅದರಲ್ಲಿ ನಮ್ಮ ಒಳಗೇ ನಮ್ಮನಮ್ಮ ಅನುಭವದ ಪ್ರಪಂಚವು ಮಾತ್ರ ಕಾಣಿಸುತ್ತದೆ–ಎಂಬುದೂ ಸರಿಯಲ್ಲ ; ಏಕೆಂದರೆ 'ಹೊರಗೆ, ಒಳಗೆ' ಎಂಬ ವಿಭಾಗವೂ ಎಚ್ಚರದಲ್ಲಿರುವಂತೆಯೇ ಕನಸಿನಲ್ಲಿಯೂ ಅನುಭವದಲ್ಲಿರುತ್ತದೆ. ಆ ಎರಡೂ ಒಂದಾದಮೇಲೆ ಒಂದು ಆಗುವದೂ ಇಲ್ಲ ; ಏಕೆಂದರೆ 'ಆಮೇಲೆ' ಎಂಬುದಕ್ಕೆ ಒಂದೇ ಕಾಲವು ಎರಡಕ್ಕೂ ಆಧಾರವಾಗಿರಬೇಕು ; ಆದರೆ ಈ ಎರಡವಸ್ಥೆಗಳಲ್ಲಿಯೂ– ಅಥವಾ ಎರಡೇಕೆ ? ಎಷ್ಟು ಕನಸುಗಳಾದರೆ ಅಷ್ಟರಲ್ಲಿಯೂ– ಅದಕ್ಕೆ ಅಸಾಧಾರವಾದ ಬೇರೆಬೇರೆಯ ಕಾಲವೇ ಇರುತ್ತದೆ ! ಆಯಾ ಅವಸ್ಥೆಯ ಒಳಗೇ ದೇಶಕಾಲಗಳು ತೋರುತ್ತವೆಯೇ ಹೊರತು, ಕಾಲದಲ್ಲಿ ಅವಸ್ಥೆಗಳೇನೂ ತೋರುತ್ತಿಲ್ಲ. ಆದ್ದರಿಂದ ನಾನಾತ್ವವೆಂಬುದು ಎಲ್ಲೆಲ್ಲಿ ಕಂಡರೂ ಬರಿಯ ತೋರಿಕೆಯಾಗಿರುತ್ತದೆ ; ಕನ್ನಡಿಯಲ್ಲಿ ಕೆಸರಿನ ಪ್ರತಿಬಿಂಬವು ತೋರಿದರೂ ಹೇಗೆ ಕನ್ನಡಿಗೆ ಕೆಸರು ನಿಜವಾಗಿ ಅಂಟಿ

ಕೊಂಡಿಲ್ಲವೋ ಹಾಗೆ ಆತ್ಮನಿಗೆ ಎಚ್ಚರದ ಅಥವಾ ಕನಸಿನ ಪ್ರಪಂಚವು ಅಂಟಿಕೊಂಡಿರುವದೇ ಇಲ್ಲ ಆದ್ದರಿಂದ ಸುಷುಪ್ತಿಯಲ್ಲಿರುವಂತೆಯೇ ಎಚ್ಚರ ಕನಸುಗಳೆಂಬ ಅವಸ್ಥೆಗಳಲ್ಲಿಯೂ ಆದೇ ನಿರ್ವಿಕಲ್ಪಾನುಭವಸ್ವರೂಪನಾದ ಆತ್ಮನೊಬ್ಬನೇ ಇರುತ್ತಾನೆ.

ಈ ಆತ್ಮತತ್ತ್ವವನ್ನು ಏಕವೆಂದಾಗಲಿ ನಾನಾ ಎಂದಾಗಲಿ ಕರೆಯುವದು ಸಲ್ಲದು. ಏಕೆಂದರೆ ಇಲ್ಲಿ ಸಂಖ್ಯೆಯಿಲ್ಲ, ಯಾವ ಗುಣವೂ ಇಲ್ಲ, ಯಾವ ವಿಕಾರವೂ ಇಲ್ಲ. ಈ ನಾನು ಸುಷುಪ್ತಿಯನ್ನು ಹೇಗೆ ನಿರ್ವಿಕಲ್ಪಾನುಭವದಿಂದಲೇ ಅನುಭವಿಸುತ್ತಿರುವದೋ ಹಾಗೆಯೇ ಎಚ್ಚರಕನಸುಗಳನ್ನೂ ಅನುಭವಿಸುತ್ತಿರುವದು ; ಮೂರು ಅವಸ್ಥೆಗಳಿಗೂ ಹಾಗೆಯೇ ಸಾಕ್ಷಿಯಾಗಿರುವದರಿಂದ ಮೂರವಸ್ಥೆಗಳ ಸೋಂಕೂ ಇಲ್ಲದೆ ಇರುವದು, ಅಥವಾ ಈ ಅವಸ್ಥೆಗಳೆಲ್ಲವೂ ಅನುಭವವ್ಯಾಪ್ತವಾಗಿಯೇ ಇರುವದರಿಂದ ನಿರ್ವಿಕಲ್ಪವಾದ ಅನುಭವಕ್ಕಿಂತ ಬೇರೆಯಾಗಿಲ್ಲವೇಇಲ್ಲ. ಅನುಭವಸ್ವರೂಪವಾದ ಆತ್ಮನಲ್ಲಿ ಯಾವ ವಿಶೇಷವಾದ ಜ್ಞಾನದ ಅಥವಾ ಅಜ್ಞಾನದ ಸೋಂಕೂ ಒಂದಿಷ್ಟೂ ಇರುವದಿಲ್ಲ. ಆದ್ದರಿಂದ ಆತ್ಮನು– ಅಪರಂಜಿಚಿನ್ನದ ಗಟ್ಟಿಯಲ್ಲಿ ಮತ್ತೊಂದು ಲೋಹದ ಕಿಲುಬು ಒಂದಿಷ್ಟೂ ಇಲ್ಲದಿರುವಂತೆ– ಅಖಂಡಸದ್ಘನ, ಅಖಂಡಚಿದ್ಘನ ; ಇಲ್ಲಿ ಚಿತ್ತಿಗಿಂತ ಬೇರೆಯಾದ ಸತ್ತೆಯಿಲ್ಲ, ಸತ್ತಿಗಿಂತ ಬೇರೆಯಾದ ಚಿತ್ತಿಲ್ಲ. ಬೆಂಕಿಯೇ ಬೆಳಕೂ ಬಿಸಿಯೂ ಆಗಿರುವಂತೆ ಅಖಂಡಾನುಭವರೂಪನಾದ ಆತ್ಮನೇ ಸದ್ಘನ ಚಿದ್ಘನನೆನಿಸಿಕೊಳ್ಳುತ್ತಿರುವನು. ಇವನೂ ಆನಂದಘನನೂ ಆಗಿರುತ್ತಾನೆ. ಆನಂದವೆಂದರೆ ಯಾವ ಎಡರೂ ಇಲ್ಲದ ಕಡಿವಡೆಯದ ನಿತ್ಯತೃಪ್ತಿ, ನಿತ್ಯಸಮೃದ್ಧಿ; ಇದು ಯಾವದಾದರೊಂದು ಪ್ರಿಯವಾದ ವಿಷಯವನ್ನು ಅನುಭವಿಸುವ ವಿಶೇಷ ಸುಖದಂತೆ ಇರುವದಲ್ಲ.

ಈ ಆತ್ಮನು ಈಗಲೇ ಇಲ್ಲಿಯೇ ಇದ್ದಾನೆಯೆ? ಹಾಗೆನ್ನಬಾರದು. ಏಕೆಂದರೆ 'ಈಗ' ಎಂಬ ಕಾಲವಾಗಲಿ, 'ಇಲ್ಲಿ' ಎಂಬ ದೇಶವಾಗಲಿ ಇವನಿಗೆ ಆಧಾರವಲ್ಲ. ದೇಶಕಾಲಗಳು ಇವನಲ್ಲಿಯೇ ಇವೆ, ಅಥವಾ ಇರುವಂತೆ ತೋರುತ್ತಿವೆ. ಇವನು 'ಸ್ವೇ ಮಹಿಮ್ನಿ ಯದಿ ವಾ ನ ಮಹಿಮ್ನೀತಿ' (ಛಾಂ. ೭–೨೪–೧)ಎಂದಂತೆ ತನ್ನ ಮಹಿಮೆಯಲ್ಲಿ ತಾನಿರುತ್ತಾನೆ, ಅಥವಾ ಯಾವ ಮಹಿಮೆಯಲ್ಲಿಯೂ ಇಲ್ಲ, ತಾನೇತಾನಾಗಿರುತ್ತಾನೆ. ಈ ಆತ್ಮನಿಗೆ ಯಾವ ಅನಾತ್ಮದ ಸಂಬಂಧವೂ ಇಲ್ಲ ; ಆತ್ಮ, ಅನಾತ್ಮ– ಎಂಬ ವಿಂಗಡದ ಮಾತೇ ಅರ್ಥಶೂನ್ಯವಾದದ್ದು. ಅನಾತ್ಮವು ಅಧ್ಯಾಸರೂಪಸಂಬಂಧದಿಂದ ಆತ್ಮನಿಗೆ ಸೇರಿಕೊಂಡಿದೆ ಎಂಬುದೂ ತತ್ತ್ವವನ್ನು ತಿಳಿಯಿಸುವದಕ್ಕೆ ಒಂದು ಉಪಾಯಮಾತ್ರ. ಅನಾತ್ಮವೆಂಬುದು ಆತ್ಮನಲ್ಲ, ಆತ್ಮನಿಗಿಂತ ಬೇರೆಯೂ ಅಲ್ಲ, 'ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯಃ'

ಇದು ಈ ಎರಡು ಮಾತುಗಳಿಂದಲೂ ಹೀಗೆಂದು ಹೇಳುವದಕ್ಕೆ ಆಗುವಂತಿಲ್ಲ; ಅದು ಅಜ್ಞಾನಿಗಳಿಗೆ ತೋರುವದು ನಿಜ, ಆದರೆ 'ಏನದು?' -ಎಂದು ನಿರುಕಿಸಿ ನೋಡುವದಕ್ಕೆ ಹೊರಟರೆ ಇರುವದೇಇಲ್ಲ. ಅನಾತ್ಮದ ಸಂಬಂಧದಿಂದ ಆತ್ಮನಿಗೆ ಹಾನಿಯಿಲ್ಲ, ವೃದ್ಧಿಯೂ ಇಲ್ಲ. ಆತ್ಮನಲ್ಲಿಯೇ ಯಾವಾಗಲೂ ಓತಪ್ರೋತವಾಗಿ ರುವ ಈ ಅನಾತ್ಮವೆಂಬುದು ನಿಜವಾದ ಆತ್ಮನಲ್ಲದೆ ಬೇರೆಯೇನಾದೀತು ? ಆದ್ದ ರಿಂದಲೇ 'ಆತ್ಮೈವೇದಂ ಸರ್ವಮ್' (ಛಾಂ. ೭-೨೫-೧) ಎಂದು ಶ್ರುತಿಯು ಸಾರುತ್ತಿದೆ. ಅನಾತ್ಮವು ಇರುವೆಡೆಯಿಲ್ಲ, ಆತ್ಮನು ಇಲ್ಲದೆಡೆಯಿಲ್ಲ. ಆತ್ಮೋಪ ದೇಶವನ್ನು ಹೇಗೆ ಮಾಡಬೇಕು ? ಶ್ರುತಿಯನ್ನು ಕೇಳಿ :

"ಅಥಾತ ಆತ್ಮಾದೇಶ ಏವಾತ್ಮೈವಾಧಸ್ತಾದಾತ್ಮೋಪರಿಷ್ಟಾದಾತ್ಮಾ ಪುರಸ್ತಾ ದಾತ್ಮಾ ದಕ್ಷಿಣತ ಆತ್ಮೋತ್ತರತ ಆತ್ಮೈವೇದಂ ಸರ್ವಮ್ || ಛಾಂ. ೮-೨೫-೨.

' ಆತ್ಮನೇ ಕೆಳಗಡೆ, ಆತ್ಮನೇ ಮೇಲುಗಡೆ, ಆತ್ಮನೇ ಹಿಂದುಗಡೆ, ಆತ್ಮನೇ ಮುಂದುಗಡೆ, ಆತ್ಮನೇ ಬಲಗಡೆ, ಆತ್ಮನೇ ಎಡಗಡೆ, ಹೆಚ್ಚೇನು ? ಆತ್ಮನೇ ಇದೆಲ್ಲವೂ.'

ಈಗ ನಾವು ಎಲ್ಲಿಗೆ ಬಂದು ಮುಟ್ಟಿದೆವು ? ವೇದಾಂತವು ಜೀವಂತದರ್ಶನ ವೆಂದು ಹೇಳುವದಕ್ಕೆ ಹೊರಟು ವೇದಾಂತಕ್ಕೆ ಕೆಲಸವೇ ಇಲ್ಲವೆಂದಾಯಿತಲ್ಲ ! ಶಾಸ್ತ್ರವನ್ನು ಯಾರಿಗೂ ಹೇಳಬೇಕಾದದ್ದೇ ಇಲ್ಲ, ಏಕೆಂದರೆ ಅದನ್ನು ಕೇಳುವದಕ್ಕೆ ಯಾರೊಬ್ಬರೂ ಇಲ್ಲಿವೇಇಲ್ಲ. ರೋಗವೂ ಇಲ್ಲ, ರೋಗಿಯೂ ಇಲ್ಲ- ಎಂದಾಗ ವೈದ್ಯಶಾಸ್ತ್ರಕ್ಕೆ ಸ್ಥಲವೆಲ್ಲಿ ? ನಾನಾತ್ವಕ್ಕೆ ಸೊನ್ನೆಯನ್ನೇ ಹಾಕಿದಮೇಲೆ ಶಾಸ್ತ್ರದ ಶ್ರವಣಮನನನಿದಿಧ್ಯಾಸನಗಳ ಮಾತೆಲ್ಲಿದೆ ? -ಹೀಗೆಂದು ಕೆಲವರು ಆಕ್ಷೇಪಿಸ ಬಹುದು. ಇದು ಸರಿಯಲ್ಲ. ಇದಕ್ಕೆ ಉತ್ತರವನ್ನು ಆಗಲೇ ಹೇಳಿಯೇ ಇದೇವೆ.

ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ ತದಿತರ ಇತರಂ ಜಿಘ್ರತಿ ತದಿತರ ಇತರಂ ರಸಯತೇ ತದಿತರ ಇತರಂ ಸ್ಪೃಶತಿ ತದಿತರ ಇತರಂ ವಿಜಾನಾತಿ ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ ತತ್ ಕೇನ ಕಂ ಜಿಘ್ರೇತ್ ತತ್ ಕೇನ ಕಂ ರಸಯೇತ್ ತತ್ ಕೇನ ಕಮಭಿವದೇತ್ ತತ್ ಕೇನ ಕಂ ಶೃಣುಯಾತ್ ತತ್ ಕೇನ ಕಂ ಮನ್ವೀತ ತತ್ ಕೇನ ಕಂ ಸ್ಪೃಶೇತ್ ತತ್ ಕೇನ ಕಂ ವಿಜಾನೀಯಾತ್ ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ || ಬೃ. ೪-೫-೧೫.

ದ್ವೈತವು ತೋರುತ್ತಿರುವದು ನಿಜ, ಅದು ಪರಮಾರ್ಥವಾಗಿಲ್ಲ- ಎಂಬಿದೇ ಅದ್ವೈತದ ಪರಮಾರ್ಥಸಿದ್ಧಾಂತ, ಇದನ್ನು ಅರಿತುಕೊಂಡು ಆತ್ಮಾನುಭವದಲ್ಲಿರು ವವರಿಗೆ ಶಾಸ್ತ್ರಶ್ರವಣವು ಬೇಕೇಇಲ್ಲ ; ಆಗ ಶಾಸ್ತ್ರವು ವ್ಯರ್ಥವಾಯಿತು!-ಎಂದು

ಆಕ್ಷೇಪಿಸುವದಕ್ಕೆ ಸ್ಥಲವೆಲ್ಲಿ ? ಎಲ್ಲವನ್ನೂ ಅರಿಯುತ್ತಿರುವ ಆತ್ಮನನ್ನು ಯಾರಿಂದ ಹೇಗೆ ಅರಿತುಕೊಳ್ಳಬೇಕು ? ಅವನನ್ನು ಅರಿತುಕೊಳ್ಳಬೇಕಾದ ಅವಶ್ಯಕತೆಯಾದರೂ ಏನಿದೆ ? ಆದ್ದರಿಂದ ವೇದಾಂತದ ಪರಮಸಿದ್ಧಾಂತವು ಅನುಭವಕ್ಕೆ ಬಂದಿರುವಾಗ ಯಾವ ಆಕ್ಷೇಪಸಮಾಧಾನಗಳೂ ಇರುವದಿಲ್ಲ.

ಆದರೆ ಎಲ್ಲಿ ದ್ವೈತವಿರುವಂತೆ ಕಾಣುವದೋ ಅಲ್ಲಿ ಒಬ್ಬನು ಮತ್ತೊಬ್ಬನನ್ನು ಕಾಣುತ್ತಾನೆ, ಕೇಳುತ್ತಾನೆ, ಹೇಳುತ್ತಾನೆ. ಆದ್ದರಿಂದ ಅಲ್ಲಿ ಶಾಸ್ತ್ರೋಪದೇಶವೇ ಮುಂತಾದದ್ದೂ ಸಾರ್ಥಕವಾಗಿರುತ್ತದೆ. ಅದ್ವೈತವು ತಿಳಿದಮೇಲೂ ದ್ವೈತದ ಆಭಾಸವು ತೋರುತ್ತಿದ್ದರೂ ಅದೆಲ್ಲವೂ ಅದ್ವೈತವೇ ಎಂಬ ನಿಶ್ಚಯವಾಗಿಬಿಟ್ಟಿರುವದರಿಂದ ಯಾವ ಬಾಧಕವೂ ಇಲ್ಲ. ಹೀಗೆ ದ್ವೈತದಶೆಯಲ್ಲಿ ಸಾಧನ, ಅದ್ವೈತದಶೆಯಲ್ಲಿ ಅನಂದಾನುಭವ. ಒಬ್ಬನ ಮನೆಯ ನಡುಮನೆಯಲ್ಲಿ ಅನೇಕ ನಿಲುಗನ್ನಡಿಗಳಿದ್ದರೆ ಅವುಗಳಲ್ಲಿ ಅನೇಕ ಪ್ರತಿಬಿಂಬಗಳು ಕಾಣಿಸಿದ ಮಾತ್ರದಿಂದ ಹೇಗೆ ಮನೆಗೆ ಅನೇಕಜನರು ಯಜಮಾನರೆಂದಾಗುವದಿಲ್ಲವೋ ಹಾಗೆ ಜ್ಞಾನಬಾಧಿತವಾಗಿ ತೋರುವ ದ್ವೈತವು ಅದ್ವೈತಕ್ಕೆ ಎಂದಿಗೂ ಬಾಧಕವಾಗುವದಿಲ್ಲ. ವಿಶ್ವಾಸವಿರುವ ಸಾಧಕರೂ ಶ್ರದ್ಧೆಯಿಂದ 'ಎಲ್ಲೆಲ್ಲಿಯೂ ಒಬ್ಬ ಪರಮಾತ್ಮನ ಲೀಲೆಯೇ ಕಾಣಿಸುತ್ತಿದೆ' ಎಂದು ಆನಂದಿಸುವದಕ್ಕೆ ಅವಕಾಶವುಂಟು. ಹೀಗೆ ಏಕತ್ವಸಿದ್ಧಾಂತವು ಅನುಭವಾನುಸಾರಿ, ಸರ್ವಸಂಸಾರಭಯವಿನಾಶಕಾರಿ, ಪರಮಾನಂದದಾಯಕ.

ನಾನಾತ್ವವೇ ಸತ್ಯವೆಂಬವನಿಗೋ ಎಂದರೆ 'ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ' (ಕಾ. ೨-೧-೧೧) ಯಾವನು ಪರಮಾರ್ಥವು ಏಕವೇ ಆಗಿದ್ದರೂ ಅಲ್ಲಿ ನಾನಾತ್ವವಿರುವಂತೆ ಕಾಣುವನೋ ಅವನು ಕನಸಿನಲ್ಲಿ ನಾನಾತ್ವವನ್ನು ಕಂಡು ಅನರ್ಥವನ್ನು ಪಡೆಯುವವನಂತೆ- ಸಾವಿನ ಮೇಲೆ ಸಾವನ್ನು ಪಡೆಯುತ್ತಿರುವನು. ಏಕೆಂದರೆ ಜ್ಞಾನವುಂಟಾಗುವವರೆಗೂ ಅವಿದ್ಯಾಕಾಮಕರ್ಮಗಳು ತಮ್ಮ ಫಲವನ್ನು ಕೊಡುವದು ತಪ್ಪಿದ್ದಲ್ಲ.

ವೇದಾಂತಸಂಮತವಾದ ಏಕತ್ವವಾದವು ತರ್ಕದಮೇಲೆ ನಿಂತಿರುವದಿಲ್ಲ. ಏಕರಸವಾಗಿರುವ ಪರಮಾತ್ಮನೇ ನಾನು ಎಂಬ ಅನುಭವವು ಅಧಿಕಾರಿಗಳಾದವರೆಲ್ಲರಿಗೂ ಬರುವದು ಶಕ್ಯವಿದೆ; ಅದಕ್ಕೆ ದ್ವೈತಾಭಾಸದಿಂದ ಯಾವ ಬಾಧಕವೂ ಇಲ್ಲ ಎಂಬುದೇ ಇಲ್ಲಿ ಸಿದ್ಧಾಂತ.

---

# ೫೪. ಉಪಸಂಹಾರ

(11—9—62)

ವೇದಾಂತದರ್ಶನವು ಈಗಲೂ ಜೀವಂತವಾಗಿರುವದೇಕೆಂದರೆ, ಅದು ಬರಿಯ ತರ್ಕದಮೇಲೆಯೇ ನಿಂತಿರದೆ ಜಗತ್ತಿಗೂ ಜೀವರಿಗೂ ಆತ್ಮನಾಗಿರುವ ಪರಬ್ರಹ್ಮತತ್ತ್ವವನ್ನು ಕುರಿತದ್ದಾಗಿರುವದರಿಂದ. ಎಲ್ಲಿಯವರೆಗೆ ಪರಮಾತ್ಮ ನಿರುತ್ತಾನೋ ಅಲ್ಲಿಯವರೆಗೆ ಈ ದರ್ಶನವು ಅರ್ಥವತ್ತಾಗಿರುತ್ತದೆ ಎಂಬುದು ಸ್ವಾಭಾವಿಕ. ಪರಮಾತ್ಮನು ಕಾಲದೇಶಗಳನ್ನು ಮೀರಿರುವ ನಿತ್ಯಸತ್ಯವಾಗಿರು ತ್ತಾನೆ.ಆದ್ದರಿಂದ ಅವನನ್ನು ಕುರಿತ ದರ್ಶನಕ್ಕು ನಿತ್ಯವಾಗಿ ಜೀವವಿರಬೇಕೆಂಬುದು ನಿರೀಕ್ಷಿಸತಕ್ಕದ್ದೇ ಆಗಿದೆ. ನಮ್ಮ ದೇಶದಲ್ಲಿಯೂ ಪಾಶ್ಚಾತ್ತ್ಯದೇಶಗಳಲ್ಲಿಯೂ ತತ್ತ್ವವಿಚಾರಕ್ಕೆ ಹೊರಟಿದ್ದ ದರ್ಶನಗಳು ಹಿಂದೆಯೂ ಅನೇಕವಿದ್ದವು; ಮುಂದೆ ಯೂ ಎಷ್ಟೋ ಬರಬಹುದು. ಯಾವ ದರ್ಶನವೇ ಆಗಲಿ ಎಷ್ಟರಮಟ್ಟಿಗೆ ಅನು ಭವಾನುಸಾರಿಯಾದ ತರ್ಕಕ್ಕೆ ಕಟ್ಟುಬಿದ್ದಿರುವದೋ ಅಷ್ಟರಮಟ್ಟಿಗೆ ಜೀವಂತ ವೆನಿಸಿಕೊಳ್ಳುವದಕ್ಕೆ ಅರ್ಹವಾಗಿಯೇ ಇರುತ್ತದೆ. ವೇದಾಂತವು 'ಅಪ್ರತಿಷಿದ್ಧ ಮನುಮತಂ ಭವತಿ' ನಾವು ತಿರಸ್ಕರಿಸದೆ ಇದ್ದದ್ದನ್ನು ಒಪ್ಪಿದಂತೆ- ಎಂಬ ನ್ಯಾಯವನ್ನು ಅನುಸರಿಸುತ್ತದೆ. ಸಾಂಖ್ಯನ್ಯಾಯವೈಶೇಷಿಕಬೌದ್ಧಾದಿದರ್ಶನ ಗಳಲ್ಲಿ ಈ ಅರ್ಥದಿಂದ ಜೀವಂತವೆನಿಸಿಕೊಳ್ಳುವದಕ್ಕೆ ಯೋಗ್ಯವಾದ ಅಭಿಪ್ರಾಯ ಗಳನ್ನು ವೇದಾಂತಿಗಳು ಅಂಗೀಕರಿಸಿ ತಮ್ಮ ವಿಚಾರಕ್ರಮದಲ್ಲಿ ಸೇರಿಸಿಕೊಂಡೇ ಬಿಟ್ಟಿರುತ್ತಾರೆ. ಹೀಗೆಯೇ ಪಾಶ್ಚಾತ್ತ್ಯದರ್ಶನಗಳಲ್ಲಿರುವದರ ಸಾರಾಂಶವನ್ನೂ ಗ್ರಹಿಸುವದಕ್ಕೆ ಅಡ್ಡಿಯಿಲ್ಲ. ಈ ದೃಷ್ಟಿಯಿಂದ ಮುಂದೆ ಹುಟ್ಟಬಹುದಾದ ದರ್ಶನಗಳಿಗೂ ವೇದಾಂತದಲ್ಲಿ ಸ್ಥಾನವಿದ್ದೇ ಇರುತ್ತದೆ.

ವೇದಾಂತಕ್ಕೂ ಮತಾಂತರಗಳಿಗೂ ವಿರೋಧವಿಲ್ಲ. ಯಾವ ಮತವು ಆದು ವೈದಿಕವಾಗಿರಲಿ, ಅವೈದಿಕವಾಗಿಯೇ ಇರಲಿ- ತತ್ತ್ವಜ್ಞಾನಕ್ಕಾಗಲಿ ಪುರುಷಾರ್ಥಲಾಭಕ್ಕಾಗಲಿ ಮನುಷ್ಯನಿಗೆ ಲಾಭದಾಯಕವಾಗಿದೆಯೋ ಅದರ ಸಾರವನ್ನು ಗ್ರಹಿಸುವದಕ್ಕೆ ಈ ದರ್ಶನವು ಸಿದ್ಧವಾಗಿರುತ್ತದೆ. ಈಶ್ವರ, ಜೀವ, ಪುಣ್ಯಪಾಪಗಳು, ಸ್ವರ್ಗನರಕ- ಮುಂತಾದ ವಿಷಯಗಳಲ್ಲಿ ತಮ್ಮ ಅಭಿಪ್ರಾಯ ಗಳನ್ನು ಇತರ ಮತಗಳು ತಮ್ಮತಮ್ಮ ಧರ್ಮಗ್ರಂಥಗಳ ಅಥವಾ ಆಯಾ ಮತದ ಪ್ರವರ್ತಕರ ಪ್ರಾಮಾಣ್ಯದಿಂದ ಬೋಧಿಸಿರುತ್ತವೆ. ವೇದಾಂತವು ಇಂಥ ಅಭಿ ಪ್ರಾಯಗಳಿಗೆ ಯುಕ್ತ್ಯನುಭವಗಳ ಆಧಾರವನ್ನು ತೋರಿಸುತ್ತಿರುವದರಿಂದ ಈ ದರ್ಶನದ ನೆರವನ್ನು ಬೇರೆಬೇರೆಯ ಮತಗಳು ಪಡೆದುಕೊಂಡರೆ ಅವುಗಳ ಉಪ ದೇಶದ ತಳಹದಿ ಭದ್ರವಾಗುವದೆಂಬುದಕ್ಕೆ ಸಂದೇಹವಿಲ್ಲ. ಹಾಗೆ ಮಾಡಿದರೆ

ಬೇರೆಬೇರೆ ದೇಶಗಳವರಿಗೆ ಬೇರೆಬೇರೆ ಮತಗಳ ಬೋಧನೆಗಳೂ ಈಗಲೂ ಕಾರ್ಯ ಕಾರಿಯಾಗಿ ಉಳಿದುಕೊಳ್ಳುವ ಸಂಭವವು ಹೆಚ್ಚಾಗುವದು. ಪರಮಾರ್ಥ ತತ್ತ್ವವು ಯಾವದೊಂದು ಮತಕ್ಕೂ ಮೀಸಲಾಗಲಾರದೆಂಬುದನ್ನು ಅರಿಯದೆ ಒಂದು ಮತದವರು ಮತ್ತೊಂದು ಮತದವರನ್ನು ಹಳಿಯುತ್ತಾ ರಾಗದ್ವೇಷಾದಿ ಗಳಿಗೆ ಅವಕಾಶವನ್ನು ಕಲ್ಪಿಸುತ್ತಿರುವದರಿಂದ ವಿಚಾರಪ್ರಧಾನರಾದ ಈಗಿನವ ರಿಗೆ ಮತಗಳಲ್ಲಿ ಶ್ರದ್ಧೆಯು ಸಡಿಲವಾಗುತ್ತಾ ಬಂದಿರುತ್ತದೆ. ವೇದಾಂತವಿಚಾರ ಸರಣಿಯನ್ನನುಸರಿಸಿ ತಮ್ಮತಮ್ಮ ಬೋಧನೆಗಳನ್ನು ಯುಕ್ತ್ಯನುಭವಗಳಿಗೂ ಹೊಂದಿಸಿ ಆಯಾ ಅಧಿಕಾರಿಗಳಿಗೆ ತಕ್ಕಂತೆ ಪ್ರಚಾರಮಾಡಿದರೆ ಮತಗಳಿಗೆ ಇನ್ನೂ ಹೆಚ್ಚಿನ ಜೀವಕಳೆಯು ಬರುವದರಲ್ಲಿ ಸಂಶಯವಿಲ್ಲ.

ವಿಜ್ಞಾನಶಾಸ್ತ್ರವು ಪರಾಗ್ದೃಷ್ಟಿಯನ್ನವಲಂಬಿಸಿ ಬಾಹ್ಯದೃಶ್ಯಗಳನ್ನು ಮಾತ್ರವೇ ವಿಚಾರಿಸುತ್ತಾ ಬಂದಿರುತ್ತದೆ ಅದರ ವಿಚಾರಕ್ರಮವೂ ತತ್ತ್ವನಿರ್ಧಾ ರಣೆಯಲ್ಲಿರುವ ಪಕ್ಷಪಾತವೂ ಅದಕ್ಕೆ ಹೆಚ್ಚಿನ ಗೌರವಸ್ಥಾನವನ್ನು ಕೊಟ್ಟಿರುತ್ತದೆ. ವೇದಾಂತದ ವಿಚಾರಕ್ರಮದ ದೃಷ್ಟಿಕೋನವು ವಿಜ್ಞಾನಶಾಸ್ತ್ರಕ್ಕೆ ಸಿಕ್ಕಿದ್ದರೆ ಅದು ಇನ್ನೂ ಹೆಚ್ಚು ಜೀವಂತವಾಗುತ್ತಿತ್ತು. ಹುಡುಗರು ಪಟಾಕಿಯನ್ನು ಹಾರಿಸಿ ಅದರ ಸದ್ದಿಗೆ ಮರುಳಾಗುವಂತೆ, ಈಗಿನ ವಿಜ್ಞಾನಶಾಸ್ತ್ರದ ಭಕ್ತರು ತಾವು ಮಾಡಿರುವ ಕೆಲವು ಶೋಧನೆಗಳಿಂದಲೇ ತೃಪ್ತರಾಗಿ ಇನ್ನು ಮೇಲೆಯೂ ಈ ಕ್ರಮ ದಲ್ಲಿಯೇ ಮುಂದುವರಿದರೆ ಇಡಿಯ ಜಗತ್ತೇ ತಮ್ಮ ವಶವಾದೀತೆಂಬ ಭ್ರಮೆಗೆ ಪಕ್ಕಾಗಿರುವರು. ವೇದಾಂತವೂ ವಿಜ್ಞಾನಶಾಸ್ತ್ರದಂತೆಯೇ ಅಥವಾ ಅದಕ್ಕಿಂತಲೂ ಹೆಚ್ಚಿನ ಪ್ರಮಾಣದಿಂದ ಯುಕ್ತ್ಯನುಭವಗಳನ್ನು ಅನುಸರಿಸುತ್ತಿದೆ ಎಂಬುದನ್ನು ಮನದಂದರೆ ವಿಜ್ಞಾನಶಾಸ್ತ್ರಜ್ಞರು ಕೇವಲ ಬಾಹ್ಯಪ್ರಪಂಚದ ಪರೀಕ್ಷಣದಿಂದಲೇ ತೃಪ್ತರಾಗದೆ ಆಧ್ಯಾತ್ಮಪ್ರಪಂಚವನ್ನೂ ಶಾಸ್ತ್ರೀಯಕ್ರಮದಿಂದ ವಿಚಾರಮಾಡು ವದಕ್ಕೆ ಹೊರಡಬಹುದಾಗುವದು. ಆಗ ವೇದಾಂತವೆಂಬುದು ಯಾವದೋ ಒಂದು ಮತದವರಿಗೆ ಮೀಸಲಾಗಿರುವ ವಿಚಾರಕ್ರಮವೆಂಬ ತಪ್ಪುತಿಳಿವಳಿಕೆಯು ಹೋಗಿ ವಿಜ್ಞಾನಶಾಸ್ತ್ರದ ವಿಚಾರಕ್ಷೇತ್ರವನ್ನು ವಿಶಾಲಪಡಿಸಿಕೊಂಡಂತಾದೀತು. ಈಗಿನಂತೆ ಕಾಮಕ್ರೋಧಾದಿಗಳಿಗೆ ಪರವಶರಾದವರಿಗೆ ಅಪಾಯಕರವಾದ ಕೆಲವು ಆಯುಧಗಳನ್ನು ಸಜ್ಜುಗೊಳಿಸುವದಕ್ಕೆ ಬದಲು ಮಾನವಜಗತ್ತೆಲ್ಲವನ್ನೂ ಸುಖ ಶಾಂತಿಗಳಲ್ಲಿ ನೆಲೆನಿಲ್ಲಿಸುವದೇ ವಿಜ್ಞಾನಶಾಸ್ತ್ರದ ಹೆಗ್ಗುರಿ ಎಂದು ತನ್ನ ಲಕ್ಷ್ಯ ವನ್ನು ಬೇರೆಯಾಗಿ ಗೊತ್ತುಪಡಿಸಿಕೊಳ್ಳಬೇಕಾದೀತು. ಆದರಿಂದ ಇಡಿಯ ಜಗತ್ತಿಗೇ ಕಲ್ಯಾಣವಾದೀತು.

ಮಾನವನ ಮನಸ್ಸು ಪರಮಾತ್ಮನ ಕಡೆಗೆ ತಿರುಗುವಂತೆ ಮಾಡುವದೇ ಶಾಸ್ತ್ರಕಾರರ ಮುಖ್ಯೋದ್ದೇಶವಾಗಿರಬೇಕು. ಪರಮಾತ್ಮನು ಆನಂದಮಯ

ನಾಗಿರುತ್ತಾನೆ. ಪರಮಾತ್ಮತತ್ತ್ವವನ್ನು ಕಂಡುಕೊಂಡರೆ ನಾವೂ ಆನಂದವನ್ನು ಅನುಭವಿಸಿ ಇತರರಿಗೂ ಉಣಬಡಿಸುವದಕ್ಕೆ ಅವಕಾಶವಿದೆ. ಸ್ವಾರ್ಥದಿಂದ ಅಸುರರಾಗಿ ಅಂಧಂತಮಸ್ಸಿಗೆ ಹೋಗಿ, ಮೃಷ್ಟಾನ್ನವು ಸಿದ್ಧವಾಗಿದ್ದರೂ ಉಪವಾಸ ದಿಂದ ನರಳುತ್ತಿರುವವರಂತೆ, ನಾವೂ ದುಃಖಪಡುತ್ತಾ ಮತ್ತೊಬ್ಬರಿಗೂ ದುಃಖ ವನ್ನು ತರುವದರಲ್ಲಿಯೇ ಏಕೆ ತೃಪ್ತರಾಗಿರಬೇಕು ? ವೇದಾಂತೋಪದೇಶಗಳು ಉಪನಿಷತ್ತುಗಳಲ್ಲಿ ಮಾತ್ರವೇ ಅಲ್ಲ, ಇತಿಹಾಸಪುರಾಣಗಳಲ್ಲಿಯೂ ತುಂಬಿರು ತ್ತವೆ ; ಸರಿಯಾಗಿ ಅವುಗಳನ್ನು ಅರಿಸಿಕೊಂಡು ನಾವೂ ತತ್ತ್ವವನ್ನು ಮನಗಂಡು ಇತರರಿಗೂ ಬೋಧಿಸ ನಂತಾಗಬೇಕು.

ಈಗ್ಗ ವೇದಾಂತದ ದುರುಪಯೋಗವೇ ಬಹಳವಾಗಿ ನಡೆದಿರುತ್ತದೆ. ಕೆಲವರು ವ್ಯಾಖ್ಯಾನವೇದಾಂತವನ್ನು ಅವಲಂಬಿಸಿರುತ್ತಾರೆ. 'ಈ ವ್ಯಾಖ್ಯಾನ ದಲ್ಲಿ ಹೀಗಿದೆ, ಆ ವ್ಯಾಖ್ಯಾನಕಾರರ ಮತದಂತೆ ಹೀಗೆ ಸಿದ್ಧಾಂತವಾಗುತ್ತದೆ' ಎನ್ನುತ್ತಾ ಎಲ್ಲವನ್ನು ಅಭ್ಯಾಸಮಾತ್ರವಾಗಿ ಮಾಡಿ ವೇದಾಂತವು ನಿಷ್ಪ್ರಯೋ ಜಕವಾದ ವಾಗ್ವಿಜೃಂಭಣೆಮಾತ್ರವೇ ಎಂಬ ಅಭಿಪ್ರಾಯವನ್ನು ಈ ಗುಂಪಿನವರು ಜನರಲ್ಲಿ ಉಂಟುಮಾಡುತ್ತಿದ್ದಾರೆ. ಮತ್ತೆ ಕೆಲವರು ಅನುಭವವೇದಾಂತಿಗಳು. 'ನಮಗೆ ಗ್ರಂಥಪರಿಚಯವೇನೂ ಬೇಡ ; ಅನುಭವವೊಂದೇ ಸಾಕು' ಎಂದು ಕೊಚ್ಚಿಕೊಳ್ಳುತ್ತಾ, ಮತ್ತೆಮತ್ತೆ ಭವವನ್ನು ಅನುಭವಿಸುವ ಮಾರ್ಗದಲ್ಲಿಯೇ ತಾವೂ ಇದ್ದು, ಆ ದುಃಖಾನುಭವಕ್ಕೇ ಉಳಿದವರನ್ನೂ ತಳ್ಳುತ್ತಿರುವವರು ಈ ಗುಂಪಿನವರು ಅನುಭವಸ್ವರೂಪನಾದ ಪರಮಾತ್ಮನನ್ನು ಕೈಬಿಟ್ಟು ತತ್ತ್ವವಿಮುಖ ರಾಗಿ ಕಣ್ಣುಮುಚ್ಚಿಕೊಂಡು ಜಪಧ್ಯಾನವನ್ನು ಮಾಡುತ್ತಾ 'ನಮ್ಮ ಗತಿ ಹೀಗಾ ಯಿತು'–ಎಂಬುದನ್ನು ಪ್ರಕಟಿಸುವವರ ತೋರುತ್ತಿರುವರು, ಈ 'ಅನುಭವ ಗಳು!' ಇನ್ನು ಕೆಲವರು ತರ್ಕಪ್ರಧಾನರು. ಅವರಿಗೆ ಪ್ರತಿವಾದಿಯ ವಾಕ್ಯದಲ್ಲಿ ಕಾಣುವ ಅಥವಾ ಕಾಣದಿರುವ ಹೇತ್ವಾಭಾಸ'ಗಳನ್ನು ತೋರಿಸುವದರಲ್ಲಿಯೇ ಆನಂದ. 'ಆತ್ಮಾಶ್ರಯ', ಅನ್ಯೋನ್ಯಾಶ್ರಯ', 'ಚಕ್ರಿಕಾಪತ್ತಿ', 'ಸಿದ್ಧಸಾಧನ' ಎಂದು ಮುಂತಾದ ಶಬ್ದಗಳ ಆಡಂಬರದಿಂದಲೇ ತೃಪ್ತರಾಗಿ ವಾದದಲ್ಲಿ ಜಯ ಪತ್ರಿಕೆಯನ್ನು ಗಳಿಸುವ ಹವಣಿಕೆ, ಅವರದು. ಅವರಿಗೆ ಪರಮಾತ್ಮನ ಆಶ್ರಯ ಕ್ಕಿಂತಲೂ ಆತ್ಮಾಶ್ರಯಾದಿದೋಷಗಳ ಆಶ್ರಯವೇ ಮೆಚ್ಚು ! ಚಿದಾಭಾಸದಿಂದ ಕೂಡಿದ ಅಂತಃಕರಣಾದಿಗಳ ಮೂಲವಾದ ಚಿದ್ಘನಸ್ವರೂಪಕ್ಕಿಂತ 'ಹೇತ್ವಾಭಾಸ' ಗಳದೇ ಮಾತು ! ತಮ್ಮ ತರ್ಕಬಲದಿಂದ ದ್ವೈತವನ್ನಾದರೂ ಅದ್ವೈತವನ್ನಾ ದರೂ ಹೇಗಾದರೂ ಮಾಡಿ ಸಾಧಿಸುವದಕ್ಕೆ ಸಿದ್ಧರು, ಅವರು ! 'ಮದ್ಭಕ್ತಿ ವಿಮುಖಾನಾಂ ಹಿ ಶಾಸ್ತ್ರಗರ್ತೇಷು ಮುಹ್ಯತಾಮ್ । ನ ಜ್ಞಾನಂ ನ ಚ ಮುಕ್ತಿಃ ಸ್ಯಾತ್ ತೇಷಾಂ ಜನ್ಮಶತೈರಪಿ ॥' ಶಾಸ್ತ್ರದ ಗುಂಡಿಗಳೊಳಗೆ

ಬಿದ್ದು ತೊಳಲುತ್ತಾ ಪರಮಾತ್ಮವಿಮುಖರಾಗಿರುವ ಇಂಥ ಮಹಾಶಯರಿಗೆ ಮನಸ್ಸಿನಲ್ಲಿ ನಿಜವಾದ ಜ್ಞಾನವು ಎಂದಿಗೆ ಉದಯಿಸಬೇಕು ? ಇನ್ನು ಕೆಲವರು ಯೋಗಸಮಾಧಿಯ ವೇದಾಂತಿಗಳು. ಸಮಾಧಿಯಿಲ್ಲದೆ ಬರಿಯ ವೇದಾಂತದ ಮಾತುಗಳಿಂದ ಎಂದಿಗೆ ಬ್ರಹ್ಮಪ್ರಾಪ್ತಿಯಾದೀತು ?–ಎಂದು ಜಿಜ್ಞಾಸುಜನರನ್ನು ಹೆದರಿಸಿ ಬದುಕಿರುವಾಗಲೇ ಅವರಿಗೆ ಸಮಾಧಿಯನ್ನೇರ್ಪಡಿಸಿರುತ್ತಿರುವವರು, ಇವರು ! 'ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾ ಯೇಽಸ್ಯಹೃದಿ ಶ್ರಿತಾಃ| ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮಸಮಶ್ನುತೇ ||' (ಕಾ. ೭–೩–೧೪) ಅವಿದ್ಯಾಕಾಮಗಳಿಂದ ಸಂಪೂರ್ಣವಾಗಿ ಬಿಡುಗಡೆಯಾದಾಗ ಇಲ್ಲಿಯೇ ಬ್ರಹ್ಮ ಪ್ರಾಪ್ತಿಯಾಗುವದೆಂದು ಶ್ರುತಿ ಹೇಳುತ್ತಿದೆ ; 'ತತ್ತ್ವಮಸಿ' ಅದೇ ನೀನಾಗಿರುವೆ ಎಂದು ಈಗಲೇ, ನಾವಿರುವಂತೆಯೇ ನಾವೆಲ್ಲರೂ ಬ್ರಹ್ಮಸ್ವರೂಪರಾಗಿರುವೆವೆಂದೇ ಉಪದೇಶಿಸುತ್ತದೆ. 'ಸಮಾಧಿಯಲ್ಲಿ ಬ್ರಹ್ಮವನ್ನು ಪಡೆದುಕೊಳ್ಳುವೆ' –ಎಂದೇನೂ ಹೇಳಿಲ್ಲ. ಹೀಗಿದ್ದರೂ ಇವರು 'ಸಮಾಧಿಯನ್ನು ಮಾಡುವಾಗ ನೆಲದಿಂದ ನಾಲ್ಕು ಮೊಳ ಏಳುತ್ತೇವೆ !' ಎಂದುಮುಂತಾಗಿ ತಮ್ಮ ಖ್ಯಾತಿಯನ್ನು ಪ್ರಕಟಿಸಿಕೊಳ್ಳು ತ್ತಾರೆ ! ಹಕ್ಕಿಗಳೇನು ಆಕಾಶಗಲ್ಲಿ ಹಾರಾಡುತ್ತಿರುವದಿಲ್ಲವೆ ?

ಇದೆಲ್ಲ ಅಲ್ಲ, ಜೀವಂತವೇದಾಂತ. ಬದುಕಿದ್ದರೂ ಸತ್ತಂತಿರುವ ನಾವೂ ವೇದಾಂತದ ತಿಳಿವಳಿಕೆಯಿಂದ ನಿಜವಾಗಿ ಜೀವಂತರಾಗಬೇಕು, ಮಿಕ್ಕವರನ್ನೂ ಜೀವಂತವಾಗಿಸಬೇಕು. ನಾವೆಲ್ಲರೂ ವ್ಯಾಕೃತಪ್ರಪಂಚದಲ್ಲಿರುತ್ತೇವೆ ; ಪರ ಮಾತ್ಮನು ಸೃಷ್ಟಿಯಲ್ಲಿ ಜೀವರೂಪದಿಂದ ಹೊಕ್ಕು ನಾಮರೂಪಗಳ ವ್ಯಾಕರಣ ವನ್ನು ಮಾಡಿರುತ್ತಾನೆ. ಎಲ್ಲೆಲ್ಲಿಯೂ ವ್ಯಾಪಿಸಿರುವ ಬ್ರಹ್ಮವೊಂದರಲ್ಲಿಯೇ ನಾನಾತ್ವವು ಕಾಣುತ್ತಿದೆ. ಏಕತ್ವವನ್ನು ಕಂಡುಕೊಳ್ಳುವದೇ ಗುರಿಯಾಗಿರಬೇಕು. ಇದೇ ಮನುಷ್ಯನ ಪರಮಕರ್ತವ್ಯ. ಅದಕ್ಕಾಗಿ ವೇದೋಕ್ತವಾದ ಪ್ರವೃತ್ತಿ ನಿವೃತ್ತಿಧರ್ಮಗಳನ್ನು ಕ್ರಮಕ್ರಮವಾಗಿ ಅವಲಂಬಿಸಬೇಕು. ಬಹು ಜನರು ಧರ್ಮಪರಾಙ್ಮುಖರಾಗಿ ಅಸುರಸಂಪತ್ತನ್ನೇ ಅವಲಂಬಿಸಿ ಕಾಮರಾಗಬಲಾನ್ವಿತ ರಾಗಿ ತಾವೂ ಕೆಟ್ಟು, ಇತರರನ್ನೂ ಹಾಳುಮಾಡುವ ದುರ್ಮಾರ್ಗದಲ್ಲಿ ನಡೆಯು ತ್ತಿದ್ದಾರೆ. ಅಂಥವರಿಗೆ ಕರ್ಮ, ಉಪಾಸನೆ, ಭಕ್ತಿ, ಜ್ಞಾನ, ವೈರಾಗ್ಯ– ಮುಂತಾದ ಸಾಧನಗಳನ್ನು ವೇದಾಂತದಲ್ಲಿ ಬೋಧಿಸಿರುತ್ತದೆ ; ಅಹಂಕಾರ ವನ್ನು ಮಟ್ಟುಮಾಡಿಕೊಂಡು ದೈವಸಂಪತ್ತನ್ನು ಬೆಳೆಯಿಸಿಕೊಂಡು ಕೃತಾರ್ಥ ರಾಗಬೇಕೆಂಬ ಮಾರ್ಗವನ್ನು ಬೋಧಿಸುತ್ತದೆ. ಅಹಂಭಾವವಿಲ್ಲದೆ ಇರುವ ಜ್ಞಾನಿಯಾಗುವದೇ ಜೀವನದ ಹೆಗ್ಗುರಿಯಾಗಿರಬೇಕು.

ಮನುಷ್ಯನ ಹುಟ್ಟಿರುವದು ಸ್ವಾರ್ಥದಿಂದ ಜೀವಿಸಿ ತಾನೂ ದುಃಖಪಟ್ಟು ಮತ್ತೊಬ್ಬರನ್ನೂ ಗೋಳುಗುಟ್ಟಿಸುವದಕ್ಕಲ್ಲ ; ಮನುಷ್ಯತ್ವದಿಂದ ದೇವತ್ವಕ್ಕೆ

ಏರುವದು, ದೇವತ್ವದಿಂದಲೂ ಮೇಲಕ್ಕೇರಿ ಪರಬ್ರಹ್ಮಸ್ವರೂಪವನ್ನೇ ಪಡೆದು ಕೊಳ್ಳುವದು– ಹೀಗೆ ಸಾಧನಕ್ರಮದಿಂದ ಪರಮಪುರುಷಾರ್ಥವನ್ನು ಪಡೆಯು ವದಕ್ಕೆ. 'ವೇದಾಂತಕ್ಕೆ ಸ್ವಾರ್ಥತ್ಯಾಗವನ್ನು ಮಾಡಬೇಕಾಗುತ್ತದೆ, ಅದ್ದರಿಂದ ಅದರಿಂದ ಮನುಷ್ಯನು ಹೇಡಿಯಾಗಬಹುದು'– ಎಂದು ಭಾವಿಸಬಾರದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ– ಎಲ್ಲರಿಗೂ ಅವರವರ ಧರ್ಮದಲ್ಲಿ ಆಸಕ್ತಿಯನ್ನೂ, ಜೀವನದಲ್ಲಿ ಉತ್ಸಾಹವನ್ನೂ, ವ್ಯವಹಾರದಲ್ಲಿ ಧೈರ್ಯವನ್ನೂ ಕೊಡುವದು ವೇದಾಂತ. ವೇದಾಂತಕ್ಕೆ ಆಧಾರವಾಗಿರುವದು ಧರ್ಮ, ಭಕ್ತಿ, ವೈರಾಗ್ಯ–ಮುಂತಾದ ರೂಪದ ನಿವೃತ್ತಿಧರ್ಮವೇ ಆದರೂ ಅವುಗಳನ್ನು ಗುರಿ ಯಲ್ಲಿಟ್ಟವರಿಗೆ ವ್ಯವಹಾರದಲ್ಲಿ ದಕ್ಷತೆಗೇನೂ ಕಡಿಮೆಯಾಗಲಾರದು. 'ವೇದಾನ್ತ ಗೋ ಬ್ರಾಹ್ಮಣಃ ಸ್ಯಾತ್ ಕ್ಷತ್ರಿಯೋ ವಿಜಯೀ ಭವೇತ್ | ವೈಶ್ಯೋ ಧನ ಸಮೃದ್ಧಃ ಸ್ಯಾತ್ ಶೂದ್ರಃ ಸುಖಮವಾಪ್ನುಯಾತ್ ' ಎಂದು ಪರಮಾತ್ಮನ ನಾಮದ ಸ್ಮರಣೆಗೂ ಎಂಥ ಉತ್ಕೃಷ್ಟಫಲವನ್ನು ಹೇಳಿದೆ ! ಗೀತೋಕ್ತಯೋಗ ವನ್ನ 'ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ' (ಗೀ. ೪–೨) ಎಂದು ರಾಜರಿಗೇ ಹೇಳಿದೇನೆ ಎಂದು ಭಗವಂತನು ಹೇಳಿದಾನೆ. "ಇಮಮ ಧ್ಯಾಯದ್ವಯೇನೋಕ್ತಂ ಯೋಗಂ ವಿವಸ್ವತೇ ಆದಿತ್ಯಾಯ ಸರ್ಗಾದೌ ಪ್ರೋಕ್ತ ವಾನಹಂ ಜಗತ್ ಪರಿಪಾಲಯಿತ್ಕಣಾಂ ಕ್ಷತ್ರಿಯಾಣಾಂ ಬಲಾಧಾನಾಯ ; ತೇನ ಯೋಗಬಲೇನ ಯುಕ್ತಾಃ ಸಮರ್ಥಾ ಭವನ್ತಿ ಬ್ರಹ್ಮ ಪರಿರಕ್ಷಿತುಮ್ | ಬ್ರಹ್ಮಕ್ಷತ್ರೇ ಪರಿಪಾಲಿತೇ ಜಗತ್ ಪರಿಪಾಲಯಿತುಮಲಮ್ ||" ಎಂದು ಶಂಕರಾ ಚಾರ್ಯರು ಬರೆದಿರುತ್ತಾರೆ. ಭಗವಂತನು ಈ ವೇದಾಂತದರ್ಶನವನ್ನು ಕ್ಷತ್ರಿಯ ರಿಗೆ ಜಗತ್ತನ್ನು ಕಾಪಾಡುವ ಬಲವು ಬರಲೆಂದೇ ಬೋಧಿಸಿದನು. ಅದರ ಬಲ ದಿಂದ ಅವರು ಬ್ರಾಹ್ಮಣ್ಯವನ್ನು ಕಾಪಾಡುತ್ತಾರೆ; ಬ್ರಹ್ಮಕ್ಷತ್ರಗಳೆರಡೂ ಉಳಿದರೆ ಜಗತ್ತನ್ನೇ ಕಾಪಾಡಬಲ್ಲಿವು–ಎಂಬಿದು ಆಚಾರ್ಯರ ಅಭಿಪ್ರಾಯ. ಕರ್ತವ್ಯದಲ್ಲಿ ನಂಬಿಕೆ, ಕುಟುಂಬಭರಣದಲ್ಲಿ ಆಸಕ್ತಿ, ಸಮಾಜಸೇವೆಯಲ್ಲಿ ಆದರ, ದೇಶದ ರಕ್ಷಣೆಯಲ್ಲಿ ಉತ್ಸಾಹ– ಇವುಗಳೆಲ್ಲವೂ ವೇದಾಂತದ ಜ್ಞಾನದಿಂದ ಉಂಟಾಗು ವವು. ಹೀಗೆ ಈ ದರ್ಶನವು ಸರ್ವಥಾ ಜೀವಂತವೆನ್ನುವದಕ್ಕೆ ತಕ್ಕದ್ದಾಗಿರುತ್ತದೆ.

# ೫೫. ಮಂಗಲ

(12—9—62)

ಪರಮಾರ್ಥತತ್ತ್ವವೆಂಬುದು ಪರಮಮಂಗಲವಾಗಿದೆ. ಸ್ಮೃತಿವಾಕ್ಯಗಳು ಹೀಗಿವೆ :

ಅಶುಭಾನಿ ನಿರಾಚಷ್ಟೇ ತನೋತಿ ಶುಭಸಂತತಿಮ್ ।
ಸ್ಮೃತಿಮಾತ್ರೇಣ ಯತ್ಪುಂಸಾಂ ಬ್ರಹ್ಮ ತನ್ಮಙ್ಗಲಂ ಪರಮ್ ॥
ಅತಿಕಲ್ಯಾಣರೂಪತ್ವಾನ್ನಿತ್ಯಕಲ್ಯಾಣಸಂಶ್ರಯಾತ್ ।
ಸ್ಮರ್ತೄಣಾಂ ವರದತ್ವಾಚ್ಚ ಬ್ರಹ್ಮ ತನ್ಮಙ್ಗಲಂ ವಿದುಃ ॥

ಪರಮಾತ್ಮನೊಬ್ಬನೇ ಪರಮಾರ್ಥಮಂಗಲವು ; ಅದಕ್ಕಿಂತ ವ್ಯತಿರಿಕ್ತವಾದದ್ದೆಲ್ಲ ಅವಿದ್ಯೆಯಿಂದ ಕಲ್ಪಿತವಾಗಿರುವ ಅಮಂಗಲವು. ಆದ್ದರಿಂದ ಪರಮಾರ್ಥವನ್ನು ಸ್ಮರಿಸಿದಮಾತ್ರದಿಂದ ಅಮಂಗಲದ ನಿರಾಕರಣೆ, ಮಂಗಲವು ಸಂತತವಾಗಿರುವದು– ಇವು ಒದಗುವವು. ಪರಮಾತ್ಮನೇ ಮಂಗಲರೂಪನು, ನಮಗೆ ಆಗುವ ಕಲ್ಯಾಣಗಳೆಲ್ಲವೂ ಆತನನ್ನೇ ಆಶ್ರಯಿಸಿಕೊಂಡಿರುವವು. ಸ್ಮರಣೆಮಾಡಿದ್ದರಿಂದ ನಮ್ಮ ಇಷ್ಟಾರ್ಥಗಳೆಲ್ಲವೂ ಕೈಗೂಡುವವು. ಆದ್ದರಿಂದ ಮಂಗಲಸ್ವರೂಪವನ್ನು ತಿಳಿಸುವ ವೇದಾಂತವಿಚಾರಕ್ಕೆ ಹೊರಡುವದು ಮಂಗಲದ ಹಾದಿಯಲ್ಲಿ ಹೆಜ್ಜೆಯನ್ನಿಟ್ಟಂತೆ.

ಜ್ಞಾನಿಗಳು ಪರಮಾತ್ಮನ ಸ್ವರೂಪರೇ ಆಗಿರುತ್ತಾರೆ. ಆದ್ದರಿಂದ ಅವರ ದರ್ಶನಮಾತ್ರದಿಂದ ಅಮಂಗಲವು ನಾಶವಾಗುತ್ತದೆ. ಭಗವದ್ಗೀತೆಯಲ್ಲಿ ಸ್ಥಿತಪ್ರಜ್ಞ, ಯುಕ್ತ, ಭಕ್ತ, ತ್ರಿಗುಣಾತೀತ– ಈ ಹೆಸರುಗಳಿಂದ ಜ್ಞಾನಿಗಳ ಲಕ್ಷಣವನ್ನು ಹೇಳಿರುವದನ್ನು ಮನಸ್ಸಿಗೆ ತಂದುಕೊಂಡರೂ ಸಾಕು, ಮಂಗಲಭಾವನೆಯು ನಮ್ಮಲ್ಲಿ ತುಂಬಿಕೊಳ್ಳುತ್ತದೆ. ಜ್ಞಾನಿಗಳ ದೃಷ್ಟಿಯಿಂದ ನೋಡಿದಾಗಲಂತೂ ಜಗತ್ತೇ ಮಂಗಲಮಯವಾಗಿರುತ್ತದೆ.

ಮಂಗಲಸ್ವರೂಪನಾದ ಪರಮಾತ್ಮನ ಬೆಳಕಿನಿಂದಲೇ ನಾವು ಎಲ್ಲವನ್ನೂ ನೋಡುತ್ತಿರುವೆವು : ಎಲ್ಲಾ ವ್ಯವಹಾರಗಳನ್ನೂ ಮಾಡುತ್ತಿರುವೆವು. ಅವನು ನಮ್ಮ ಹೃದಯದಲ್ಲಿಯೇ ಇರುತ್ತಾನೆ. ಶಾಸ್ತ್ರಾಚಾರ್ಯರ ಉಪದೇಶದಿಂದ ಹೃದಯವೆಂಬ ಕಿಟಕಿಯನ್ನು ತೆರೆದು ನಮ್ಮಲ್ಲಿಯೇ ನೋಡಿಕೊಳ್ಳಬೇಕು. ಪುಣ್ಯವಶದಿಂದ ಪರಮಾತ್ಮನ ಅನುಗ್ರಹವಾದಹೊರತು ಆಚಾರ್ಯರುಕೂಡ ದೊರಕುವದಿಲ್ಲ. ಈಗ್ಗೆ ನಮಗೆ ಗುರುವಿನ ಅನುಗ್ರಹವಿಲ್ಲದ್ದರಿಂದ ಅಜ್ಞಾನದ ಕಣ್ಣುಪರೆ

ಹೋಗಿಲ್ಲ, ಜ್ಞಾನಚಕ್ಷುಸ್ಸು ತೆರೆದಿಲ್ಲ. ಪರಮಾತ್ಮನು ನಮ್ಮ ಆತ್ಮನೇ ಆಗಿರುವದರಿಂದ ಪ್ರಿಯತಮನಾಗಿರುತ್ತಾನೆ. ಗುರ್ವನುಗ್ರಹದಿಂದ ಅಹಂಕಾರವು ಕಡಿಮೆಯಾದಂತೆಲ್ಲ ಸೌಂದರ್ಯೋಪಾಸನೆ ನಮಗೆ ವಶವಾಗುತ್ತದೆ; ಪರಮಾತ್ಮನ ಬೆಳಕು ಏತರಮೇಲೆ ಬೀಳುವದೋ ಅದೇ ಸುಂದರವಾಗಿ ತೋರುತ್ತದೆ. ಈಗ ನಮಗೆ ಹುಟ್ಟು ಕುರುಡಾದ ಅಜ್ಞಾನವು ಮುಸುಕಿರುವದರಿಂದ ಪರಮಾತ್ಮನನ್ನು ಕಾಣಲಾರದೆಇದೇವೆ ? ಭಕ್ತರ ದರ್ಶನವಿಲ್ಲ, ಜ್ಞಾನಿಗಳ ಉಪದೇಶವಿಲ್ಲ. ಸೌಂದರ್ಯವೆಂದರೇನೆಂಬುದು ನಮಗೆ ತಿಳಿಯದು. ಯಾವ ವಸ್ತುವಿನ ದರ್ಶನದಿಂದ ನಮಗೆ ಆನಂದವಾಗುವದೋ ಅದೇ ಸುಂದರವಾದದ್ದು. ಚಿತ್ರ, ಗಾನ, ಕಾವ್ಯ, ಶಿಲ್ಪ– ಮುಂತಾದವುಗಳಿಂದ ನಮಗೆ ತಿಳಿವಿಲ್ಲದೆ ಆಗುವ ಆನಂದವು ಬೇರೆ. ಆದರೆ ಮೂಲವು ನಮಗೆ ನಿಜವಾಗಿ ತಿಳಿಯದು. ವಸ್ತುವಿನಲ್ಲಿ ಸೌಂದರ್ಯವನ್ನು ಕಾಣುವದಕ್ಕೆ ಬೇಕಾದ ಪರಮಾತ್ಮನ ಆನಂದದ ಸಂಪರ್ಕವು ಆದಾಗ ಜಗತ್ತೆಲ್ಲವೂ ಸೌಂದರ್ಯಮಯವಾಗುವದು. ಜಗತ್ತೆಲ್ಲವೂ ಪರಮಾತ್ಮನೇ ಎಂದು ಕಂಡಾಗ ಆಗುವ ಆನಂದವು ನಮ್ಮೆಲ್ಲರಿಗೂ ಇಲ್ಲ; ಉಪ್ಪಿಲ್ಲದೆ ಅಡಿಗೆಯ ರುಚಿ ತೋರದೆ ಇರುವಂತೆ ನಮಗೆ ಜಗತ್ತನ್ನು ನೋಡಿ ಆನಂದಿಸುವ ಶಕ್ತಿಯಿಲ್ಲವಾಗಿದೆ. ರೋಗದಿಂದ ಅರೋಚಕವಾಗಿರುವಾತನಿಗೆ ಸಪ್ಪೆಯ ಔಷಧಿಯನ್ನು ಕೊಟ್ಟು ಪಥ್ಯದಲ್ಲಿರಿಸಿದ ಬಳಿಕ ನಾಲಗೆಗೆ ರುಚಿಯನ್ನು ಕಾಣುವ ಶಕ್ತಿ ಬರುವಂತೆ, ಮೊದಲು ಅಂತಃಕರಣಕ್ಕೆ ವೈರಾಗ್ಯವೆಂಬ ಸಪ್ಪೆಯ ಔಷಧಿಯನ್ನು ಕೊಡಬೇಕು. ಬಳಿಕ ಅದನ್ನು ಸಾಧುಸಂಪರ್ಕದ ಪಥ್ಯದಲ್ಲಿರಿಸಬೇಕು.

ಕುಟುಂಬದ ಸುಖ, ಸಮಾಜದ ಪ್ರೇಮ, ದೇಶಭಕ್ತಿ– ಇವುಗಳು ಯಾವವನ್ನೂ ಕೃತ್ರಿಮರೀತಿಯಿಂದ ಪಡೆದುಕೊಳ್ಳುವದಕ್ಕೆ ಬರುವದಿಲ್ಲ. ಧರ್ಮದಿಂದಾದ ವಿವಾಹ, ಪ್ರಜಾಸಂತಾನ, ಧನಾರ್ಜನೆ, ಸ್ವಧರ್ಮಾಚರಣೆ– ಇವುಗಳು ಕುಟುಂಬಸುಖವನ್ನು ಕೊಟ್ಟಾವು. ಒಂದಾನೊಂದು ಸಮಾನಸಂಸ್ಕೃತಿಯ ಮೂಲಕ ಸುಸಂಘಟಿತವಾದರೆ ಉತ್ತಮಸಮಾಜವಾದೀತು, ದೇಶದಲ್ಲೆಲ್ಲ ಈಶ್ವರನ ಕ್ಷೇತ್ರಗಳನ್ನು ಕಾಣುವಂತಾದರೆ ದೇಶಭಕ್ತಿಯು ಉಕ್ಕೀತು. ಹೇಗೋ ಸ್ತ್ರೀಪುರುಷರಿಬ್ಬರು ಒಂದಾದರೆ ಎಂದಿಗೂ ಕುಟುಂಬವೆನಿಸಲಾರದು, ಒಟ್ಟಿಗೆ ಜನರು ಗುಂಪುಸೇರಿದಮಾತ್ರದಿಂದ ಸಮಾಜವಾಗಲಾರದು, ಸುಮ್ಮನೆ ಭೌಗೋಲಿಕವಾದ ಒಂದು ಭಾಗದಲ್ಲಿರುವವರಿಗೆ ದೇಶಭಕ್ತಿಯು ಉಕ್ಕಲಾರದು. ಪ್ರೀತಿಯೇ ಕುಟುಂಬಾದಿಗಳನ್ನು ಬೆಸಗೆಹಾಕುವ ಸಾಧನ. ಭೀತಿಯಿಂದ ಜನರನ್ನು ಒಗ್ಗಟ್ಟು ಮಾಡುವದಾಗಲಾರದು. ವೇದಾಂತಜ್ಞಾನವು, ಅಥವಾ ಆ ಜ್ಞಾನದ ಧ್ಯೇಯವು, ಈ ಕುಟುಂಬಾದಿಗಳ ನಿಜವಾದ ಸುಖವನ್ನು ಕೊಡುವದಕ್ಕೆ ನೆರವಾಗುತ್ತದೆ.

ವಿದ್ಯಾಭ್ಯಾಸದ ಮರ್ಮವೇನು ? 'ಸಾ ವಿದ್ಯಾ ಯಾ ವಿಮುಕ್ತಯೇ' ಯಾವದು ಸಂಸಾರಬಂಧದಿಂದ ಬಿಡುಗಡೆಮಾಡೀತೋ ಅದೇ ವಿದ್ಯೆ. ಓದುವದು ಬರೆಯುವದು, ಗಣಿತ-ಇವುಗಳನ್ನು ತಿಳಿಸುವದು, ಜನರ ಮತ್ತು ರಾಜರ ಇತಿಹಾಸವನ್ನು ತಿಳಿಸುವದು. ಇಷ್ಟೇ ಆದರೆ ವಿದ್ಯೆಯಲ್ಲ. ಶಿಷ್ಯನಿಗೂ ಉಪಾಧ್ಯಾಯರಿಗೂ ಇಬ್ಬರಿಗೂ ಗೊತ್ತಿಲ್ಲದ ವಿದ್ಯೆಯ ಅಭ್ಯಾಸವನ್ನು ಮಾಡುವದು ತಾನೆ ಹೇಗೆ ? ಬ್ರಹ್ಮವಿದ್ಯೆಯೇ 'ಸರ್ವವಿದ್ಯಾಪ್ರತಿಷ್ಠಾ' ಎಲ್ಲಾ ವಿದ್ಯೆಗಳಿಗೂ ಕೊನೆಯ ಗುರಿ. ಈಗ ಅದರ ಗಂಧವೇ ಇಲ್ಲದ್ದರಿಂದ ವಿದ್ಯೆಗಾಗಿ ಆಸ್ತಿಯನ್ನೆಲ್ಲ ಕಳೆದು "ಭವತಿ, ಭಿಕ್ಷಾಂ ದೇಹಿ" ಎಂದು ಜೋಳಿಗೆಯೆತ್ತುವ ವಿದ್ಯೆಯನ್ನು ಕಲಿತುಕೊಳ್ಳುತ್ತೇವೆ! ವೇದಾಂತವಿದ್ಯೆಯನ್ನು ತಿಳಿದ ಮಹನೀಯರು ಲೌಕಿಕ ವಿದ್ಯೆಗಳಿಗೆ ಈ ಪರಮವಿದ್ಯೆಯ ಮೆರುಗನ್ನು ಕೊಟ್ಟು ಬೋಧಿಸಿದರೆ, ಇಹದಲ್ಲಿ ಶ್ರಮಜೀವನ, ಪರಸ್ಪರಸಹಾಯದ ಸುಖ, ಧರ್ಮದ ಮೇಲ್ಮೆ, ಧರ್ಮದಿಂದ ಬರುವ ಅರ್ಥಕಾಮಗಳ ಸವಿ, ಪರಲೋಕದಲ್ಲಿ ಶ್ರದ್ಧೆ, ಪರಮಪುರುಷಾರ್ಥದ ಬಯಕೆ-ಎಲ್ಲವೂ ಕ್ರಮಕ್ರಮವಾಗಿ ದೊರೆತೀತು.

ರಾಜಧರ್ಮವೆಂಬುದು ಜನರ ಕಣ್ಣಿಗೆ ಮಣ್ಣು ಎರಚಿ, ಅಧಿಕಾರಕ್ಕೆ ಬಂದ ಕೆಲವರು ಮಾಡುವ ಮೋಸದ ವಿದ್ಯೆಯಾಗಿಬಿಟ್ಟಿದೆ. ದೇಶಗಳೊಳಗೆ ಒಬ್ಬರ ಭೀತಿ ಮತ್ತೊಬ್ಬರಿಗೆ ಆಗಿಬಿಟ್ಟಿದೆ. ಮತಗಳಿಂದ ಆಗಿದ್ದ ಪುಣ್ಯಪಾಪಗಳ ನಂಬಿಕೆಯನ್ನು ವಿಜ್ಞಾನದ ಬೆರಗುಮಾಡುವ ಶೋಧನೆಗಳಿಂದ ಕಳೆದುಹಾಕಿ ರಾಜರುಗಳನ್ನು ಮೂಲೆಗೆ ಒತ್ತಿ, "ಚುನಾವಣೆ" ಎಂಬ ಕಣ್ಣಾಮುಚ್ಚಾಲೆಯ ಆಟದಿಂದ ಪ್ರಜೆಗಳಲ್ಲಿ ಕ್ಷೋಭೆಯನ್ನುಟುಮಾಡುವ ಗಾರುಡಿವಿದ್ಯೆಯೇ ಈಗ ರಾಜಕಾರಣವೆನಿಸಿಕೊಂಡಿದೆ. ಪ್ರವೃತ್ತಿನಿವೃತ್ತಿಧರ್ಮಗಳ ಮರ್ಮವನ್ನು ಅರಿತು ಲೋಕದಲ್ಲೆಲ್ಲ ಸಾತ್ತ್ವಿಕವರ್ತನೆಯನ್ನು ಹರಡಿ ಜನರನ್ನು ಸನ್ಮಾರ್ಗಕ್ಕೆ ತರುವದಕ್ಕೆ ಉಪಾಯವಾಗಿ ರಾಷ್ಟ್ರಗಳನ್ನು ಆಳುವ ಅಧಿಕಾರಿಗಳು ಅವತರಿಸುವವರೆಗೆ ಈ ರಾಜಧರ್ಮವು ಜಗತ್ತಿನ ಪ್ರಲಯಕ್ಕೇ ಕಾರಣವಾಗಿರುವದು. ರಾಜಧರ್ಮ, ಪರಮೇಶ್ವರನಲ್ಲಿ ಭಕ್ತಿ, ಪರಮಾತ್ಮವಿದ್ಯೆಯಲ್ಲಿ ಹಂಬಲು-ಇವುಗಳನ್ನು ಜನರು ಗುರಿಯಾಗಿಟ್ಟುಕೊಳ್ಳುವಂತೆಯೂ ಅಧರ್ಮದಿಂದ ಯಾರೂ ವರ್ತಿಸದಂತೆಯೂ ಮಾಡುವದಕ್ಕೆ ಬೇಕಾದ ಸಾಮ,ದಾನ,ಭೇದ,ದಂಡ-ಎಂಬ ಉಪಾಯಚತುಷ್ಟಯವನ್ನು ಯಥಾಯೋಗ್ಯವಾಗಿ ಉಪಯೋಗಿಸಬಲ್ಲ ಆಳ್ವಿಕೆಯು ಎಲ್ಲಿರುವದೋ ಅದೇ ಉತ್ತಮವಾದ ಸರಕಾರವೆನಿಸೀತು. ರಾಜಾಧಿಕಾರ, ಪ್ರಜಾಸತ್ತಾಧಿಕಾರ, ಸೋಷಲಿಸ್ಟ್‌ಪದ್ಧತಿ, ಕಮ್ಯೂನಿಸ್ಟ್‌ಪದ್ಧತಿ, ಸರ್ವಾಧಿಕಾರಪದ್ಧತಿ- ಎಂದು ಹೊಸಹೊಸ ಹೆಸರಿಟ್ಟು ಕಾನೂನುಗಳ ರಚನೆ, ಕಂದಾಯಗಳ ವಸೂಲಿ- ಇಷ್ಟು ಮಾತ್ರದಿಂದ ಹೊಟ್ಟೆಗಿಲ್ಲದೆ, ಬಟ್ಟೆಗಿಲ್ಲದೆ, ನೀರಿಲ್ಲದೆ, ನೆಳಲಿಲ್ಲದೆ ಇರುವಂತೆ ಜನ

ರನ್ನು ಗೋಳುಗುಟ್ಟಿಸುವ ಅಧರ್ಮಭೂಯಿಷ್ಠವಾದ ಕ್ರಮಗಳೊಳಗೆ ಯಾವ ಬಗೆಯ ಆಡಳಿತವು ಬಂದರೇನು, ಯಾವದು ಹೋದರೇನು ?

ವೇದಾಂತದರ್ಶನವು ಜೀವಂತವಾಗಿದೆ ಎಂದು ತಿಳಿಸುವದಕ್ಕೆ ಬಗೆಬಗೆಯ ದೃಷ್ಟಿಕೋನಗಳಿಂದ ಅದನ್ನು ಪರೀಕ್ಷಿಸಿದ್ದಾಯಿತು. ಪರಮಾತ್ಮನು ಇಡಿಯ ಬ್ರಹ್ಮಾಂಡಕ್ಕೇ ಆತ್ಮನಾಗಿರುತ್ತಾನೆ. ಅವನನ್ನು ನಾವು ಅರಿತಿದ್ದರೂ ಅರಿಯದಿದ್ದರೂ ಅವನು ಈ ಜಗತ್ತಿಗೆಲ್ಲ ಆತ್ಮನೇ. ನಮಗೂ ಆತ್ಮನೇ. ಅವನನ್ನು ಅರಿಯುವದೇ ಮನುಷ್ಯಜೀವನಕ್ಕೆ ಗುರಿ. ಆತನು 'ಶಿವಃ ಶಿವಾನಾಮಶಿವೋ ಶಿವಾನಾಮ್' ಎಂಬಂತೆ ಮಂಗಲಕರವಾದ ದೃಷ್ಟಿಯನ್ನು ಅವಲಂಬಿಸಿರುವವರಿಗೆ ಅವನು ಶಿವನಾಗಿರುತ್ತಾನೆ ಶಿವದೃಷ್ಟಿಯನ್ನು ತಿಳಿಸಿಕೊಡುವದೇ ವೇದಾಂತದ ಗುರಿ. ಅದು ಅತ್ಯಂತವಾಗಿ ಏನೂ ಅರಿಯದವರಿಂದ ಹಿಡಿದು ಮುಮುಕ್ಷುಗಳವರೆಗೂ ಅವರವರ ಅಧಿಕಾರಕ್ಕೆ ತಕ್ಕಂತೆ ಕರ್ತವ್ಯವನ್ನು ಉಪದೇಶಿಸುತ್ತದೆ. ಮನುಷ್ಯನ ಪೂರ್ಣಜೀವನವನ್ನು ಮಂಗಲಮಯವಾಗಿ ಮಾಡುವದಕ್ಕೆ ತಕ್ಕ ಸಾಧನಗಳನ್ನು ಅದು ಉಪದೇಶಿಸುತ್ತಿದೆ. ವ್ಯಕ್ತಿಜೀವನ, ಕುಟುಂಬಜೀವನ, ಸಮಾಜಜೀವನ, ರಾಷ್ಟ್ರಜೀವನ, ಭೂಮಂಡಲದ ಜನರ ಜೀವನ– ಇವೆಲ್ಲವೂ ಮಂಗಲಮಯವಾಗುವದೂ ಸಾಧ್ಯವಿದೆ. ಅದಕ್ಕೆ ಎಲ್ಲರನ್ನೂ ಪ್ರೀತಿಯಿಂದ ಒಂದುಗೂಡಿಸುವ ವೇದಾಂತವಿದ್ಯೆಯು ಧ್ಯೇಯವಾಗಿರಬೇಕು. ನಿಜವಾಗಿ ಇಡಿಯ ಬ್ರಹ್ಮಾಂಡವೆಲ್ಲವೂ ಪರಮಾತ್ಮನ ವಿಭೂತಿಯಾಗಿರುವದರಿಂದ ಮಂಗಲಮಯವಾಗಿದೆ ಎಂಬ ತಿಳಿವಳಿಕೆಯು ಬರುವದಕ್ಕೆ ದಾರಿಯನ್ನು ತೋರಿಸುವ ಶಕ್ತಿಯು ವೇದಾಂತವಿದ್ಯೆಗೆ ಇದೆ. ಇಂಥ ಮಂಗಲದರ್ಶನದ ಮರ್ಮವು ಜನರಿಗೆ ಎಷ್ಟು ತಿಳಿದರೆ ಲೋಕಕ್ಕೆ ಅಷ್ಟು ಒಳ್ಳೆಯದು. ಈ ದರ್ಶನದ ಮಹಿಮೆಯನ್ನು ಬಹುಜನರು ಅರಿತು ಬಹುಜನರ ಹಿತಕ್ಕೆ ಪ್ರಯತ್ನಿಸುವಂತೆ ಮಂಗಲಸ್ವರೂಪಿಯಾದ ಆ ಪರಮಾತ್ಮನು ಅನುಗ್ರಹಿಸಲಿ !

ಸರ್ವೇ ಜನಾಃ ಸುಖಿನೋ ಭವನ್ತು, ಸರ್ವೇಷಾಂ ಸಮಸ್ತಸುಮಂಗಲಾನಿ ಭವನ್ತು

**ಓಂ ತತ್ ಸತ್**

---

